

ಆಳುವ ಮಹಾಸ್ವಾಮಿಯವರಾದ

**ಶ್ರೀಮನ್ಮಹಾರಾಜ ಶ್ರೀಮನ್ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್,** ಜಿ.ಸಿ.ಎಸ್.ಐ., ಜಿ.ಬಿ.ಇ., ಅವರು.

ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರೂ,
ಆದರ್ಶಪ್ರಭುಗಳವರೂ ರಾಜರ್ಷಿಗಳೂ ಆದ
ಶ್ರೀಮನ್ನಾಲ್ವಡಿ

## ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್,

ಜಿ. ಸಿ. ಎಸ್. ಐ., ಜಿ. ಬಿ. ಇ.

ಮಹಾಸ್ವಾಮಿಯವರ ಮಹಾಸನ್ನಿಧಾನದಲ್ಲಿ

ಗ್ರಂಥಕರ್ತನು ಭಕ್ತಿನಮ್ರನಾಗಿ ಅತ್ಯಂತ ಪ್ರೀತಿ ವಿಶ್ವಾಸಗಳಿಂದ
ಸಮರ್ಪಿಸಿದ

ಮೊಸಲು ಕಾಣಿಕೆ

# ಧನ್ಯೋಕ್ತಿ

---

**ಆಳುವ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ಶ್ರೀಮನ್ನಾಲ್ವಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಎಸ್. ಐ., ಜಿ. ಬಿ. ಇ.,—ಅವರ ಮಹಾಸನ್ನಿಧಾನಕ್ಕೆ** ಈ ಗ್ರಂಥವನ್ನು ಮಿಾಸಲು ಕಾಣಿಕೆಯಾಗಿ ಸಮರ್ಪಿಸಲು ಮಹಾಸ್ವಾಮಿಯವರು ನನಗೆ ಅನುಮತಿಯನ್ನು ದಯಪಾಲಿಸಿ ನನ್ನಲ್ಲಿ ಕೃಪೆ ತೋರಿದ್ದಾರೆ. ಸನಾತನ ಧರ್ಮಾವಲಂಬಿಗಳಾಗಿ ತಮ್ಮ ಶೀಲ ಸಂಪತ್ತಿಯಿಂದ ರಾಜರ್ಷಿಗಳೆನಿಸಿರುವುದರಲ್ಲಾಗಲಿ, ಇತರ ಧರ್ಮಗಳ ಬೆಳಕುಗಳನ್ನೆಲ್ಲ ಮನಗಂಡು ಅನ್ಯಧರ್ಮಿಯರಲ್ಲಿ ಸಹಾನುಭೂತಿಯಿಂದ ವರ್ತಿಸುವ ಸಾತ್ವಿಕತೆಯಲ್ಲಾಗಲಿ, ಭಾರತೀಯ ಸಂಸ್ಕೃತಿಯ ಮೂರ್ತಸ್ವರೂಪರಂತಿರುವುದರ ಜೊತೆಗೆ ಪಾಶ್ಚಿಮಾತ್ಯ ಸಂಸ್ಕೃತಿಯ ಸಲ್ಲಕ್ಷಣಗಳಲ್ಲಿ ಆದರವನ್ನು ತೋರುವುದರಲ್ಲಾಗಲಿ, ಸಂಗೀತ ಸಾಹಿತ್ಯಗಳೆರಡರಲ್ಲೂ ಅಸೀಮ ಪ್ರೌಢಿಮೆಯಿಂದ ಕೂಡಿ ಪ್ರೋತ್ಸಾಹವನ್ನೀಯುವುದರಲ್ಲಾಗಲಿ, ಉಜ್ಜ್ವಲ ದೇಶಾಭಿಮಾನದಿಂದ ಕೂಡಿ ಪ್ರಜಾವತ್ಸಲರಾಗಿ ರಾಜ್ಯಭಾರ ಮಾಡುವುದರಲ್ಲಾಗಲಿ, ಮಹಾಸ್ವಾಮಿಯವರಿಗೆ ಸಮಾನರೆನಿಸಿರುವ ಪ್ರಭುಗಳು ಮತ್ತೊಬ್ಬರೂ ಇಲ್ಲವೆಂಬ ಕೀರ್ತಿಯು ಸ್ವದೇಶ ವಿದೇಶಗಳಲ್ಲೆಲ್ಲ ಹರಡಿದೆ. ಮಾದರಿ ಸಂಸ್ಥಾನದ ಮಹಾಪ್ರಭುಗಳ ಪ್ರಜಾವರ್ಗಕ್ಕೆ ಸೇರಿರುವುದೇ ಒಂದು ಪೂರ್ವ ಪುಣ್ಯ ಫಲವೆಂದು ಭಾವಿಸಿರುವವರಲ್ಲಿ ನಾನೂ ಒಬ್ಬನು. ಈ ಭಾವನೆಯು ಬಹುಕಾಲದಿಂದ ರೂಢಮೂಲವಾಗಿದೆ. ಈ ಗ್ರಂಥವನ್ನು ಮಿಾಸಲು ಕಾಣಿಕೆಯಾಗಿ ಒಪ್ಪಿಸಬಹುದೆಂದು ಅನುಮತಿಯನ್ನು ದಯಪಾಲಿಸಿ, ಬಹುಕಾಲದ ನನ್ನ ಆಶೆಯು ಈಡೇರುವಂತೆ ಮಹಾಸ್ವಾಮಿಯವರು ಕೃಪೆಮಾಡಿದ್ದಾರೆ. ಈ ಅನುಗ್ರಹದಿಂದ ನಾನು ಧನ್ಯನಾದೆನೆಂದು ಭಾವಿಸಿ, ಮಹಾಪ್ರಭುಗಳವರ ದಿವ್ಯಸನ್ನಿಧಿಯಲ್ಲಿ ಭಕ್ತಿ ನಮ್ರನಾಗಿ ಹೃತ್ಪೂರ್ವಕವಾದ ಪ್ರೀತಿ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ.

**ಸಿ. ಕೆ. ವೆಂಕಟರಾಮಯ್ಯ.**

# ಮುನ್ನುಡಿ

ಭಾಸಮಹಾಕವಿಯು ರಚಿಸಿದ ರೂಪಕಗಳೆಂದು ೧೯೧೦ ನೆಯ ಇಸವಿಯಿಂದೀಚೆಗೆ ಪ್ರಕಟವಾದ ಹದಿಮೂರು ರೂಪಕಗಳನ್ನು ನಾನು ಈಗ್ಗೆ ಸುಮಾರು ಹದಿನೆಂಟು ವರ್ಷಗಳಿಂದಲೂ ವ್ಯಾಸಂಗಮಾಡುತ್ತಿದ್ದೇನೆ. ಎಷ್ಟು ಸಲ ಓದಿದರೂ ತೃಪ್ತಿಯಾಗದಷ್ಟು ನವ್ಯತೆಯೂ ಸ್ವಾರಸ್ಯವೂ ಅವುಗಳಲ್ಲಿವೆ. ಆ ರೂಪಕಗಳನ್ನು ಬರೆದವನು ಭಾಸನೆ, ಅಥವಾ ಅಲ್ಲವೆ ಎಂಬ ವಿಚಾರದಲ್ಲಿ ಯಾರೂ ನಿರ್ಧರವಾಗಿ ಏನನ್ನೂ ಹೇಳುವಂತಿಲ್ಲ. ಅವನು ಭಾಸನೇ ಆಗಿರಲಿ ಅಥವಾ ಮತ್ತಾವನೇ ಆಗಿರಲಿ, ಆ ರೂಪಕಗಳೇನೊ ಸಂಸ್ಕೃತ ಸಾಹಿತ್ಯ ಭಂಡಾರದ ಅತ್ಯುತ್ತಮ ಜೀವರತ್ನಗಳ ಗುಂಪಿಗೆ ಸೇರಿ ಶಾಶ್ವತವಾಗಿರುತ್ತವೆ. ಆ ಮಹಾಕವಿಗೆ ನನ್ನ ಸೇವೆಯಾಗಿ ಈ ಗ್ರಂಥವನ್ನು ರಚಿಸಿದ್ದೇನೆ.

ಈ ಗ್ರಂಥವನ್ನು ಬರೆಯಬೇಕೆಂದು ನನ್ನ ಮನಸ್ಸಿನಲ್ಲಿ ಮೊಟ್ಟ ಮೊದಲು ಆಶೆಯು ಹುಟ್ಟಿದುದು, ಈಗ್ಗೆ ಸುಮಾರು ಒಂಬತ್ತು ವರ್ಷಗಳ ಹಿಂದೆ ಬೆಂಗಳೂರಿನ "ಮಿಥಿಕ್ ಸೊಸೈಟಿ" ಎಂಬ ಸಂಘದ ಆಶ್ರಯದಲ್ಲಿ ಮಾಡಿದ ಭಾಷಣದ ಸಂಬಂಧವಾಗಿ ದೊರೆತ ಪ್ರೋತ್ಸಾಹದ ದೆಸೆಯಿಂದ. ಆ ಪ್ರೋತ್ಸಾಹದಿಂದಲೂ, ಮೈಸೂರು ವಿಶ್ವವಿದ್ಯಾನಿಲಯದವರು ೧೯೨೮ ನೆಯ ಇಸವಿಯಲ್ಲಿ ಭಾಸಮಹಾಕವಿಯ ವಿಷಯವಾಗಿ ಎರಡು ಉಪನ್ಯಾಸಗಳನ್ನು ಮಾಡಲು ನನ್ನನ್ನು ಆಹ್ವಾನಿಸಿ ಉಪಕರಿಸಿದುದರಿಂದಲೂ ಆ ಆಶೆಯು ಮತ್ತಷ್ಟು ವೃದ್ಧಿಹೊಂದಿತು. ೧೯೩೨ ನೆಯ ಇಸವಿಯ ಕೊನೆಯ ವೇಳೆಗೆ ನಾನು ಗ್ರಂಥವನ್ನು ಬರೆದು ಪೂರೈಸಿದೆನು. ಅದರ ೨೨೦ ಪುಟಗಳು "ರಂಗಭೂಮಿ" ಪತ್ರಿಕೆಯಲ್ಲಿ ಪ್ರಕಟವಾದುವು. ಇದರ ಮತ್ತೆ ಕೆಲವು ಪುಟಗಳು ಅದೇ ಪತ್ರಿಕೆಯಲ್ಲಿ ಪ್ರಕಟವಾಗುತ್ತಿರುವಲ್ಲಿ, ನನ್ನ ವಿದ್ಯಾಗುರುಗಳಾದ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿ, ಎಂ.ಎ., ಅವರು ಬರೆದ "ಭಾಸಕವಿ" ಎಂಬ ಶ್ಲಾಘ್ಯವಾದ

ಗ್ರಂಥವು ಪ್ರಕಟವಾಯಿತು. ಒಬ್ಬ ಕವಿಯ ಕಾವ್ಯಗಳ ವಿಚಾರವಾಗಿ ಹುಟ್ಟಿದ ಬೇರೆಬೇರೆ ಗ್ರಂಥಗಳಲ್ಲಿ ಕೆಲವು ವಿಷಯಗಳು ಸಮಾನವಾಗಿರುವುದು ಸಹಜವಾದ ಅಂಶ; ಆದಾಗ್ಗೂ, ಅವುಗಳಲ್ಲಿ ಬೇರೆಬೇರೆ ವಿಷಯಗಳೂ ಇದ್ದು ಅವುಗಳು ಪರಸ್ಪರವಾಗಿ ಪೂರಕಗಳೆನಿಸಿ ಕವಿಯ ಮೇಲ್ಮೆಯನ್ನು ಮೆರೆಯುವುವೆಂಬುದೂ ಎಲ್ಲರಿಗೂ ತಿಳಿದ ಅಂಶವೇ. ಈ ಗ್ರಂಥವನ್ನು ಪ್ರಕಟಿಸುವುದು ಯುಕ್ತವೆಂದು ನಾನು ಭಾವಿಸಿದುದೂ ಆ ಅಂಶಗಳನ್ನು ಮನಗಂಡುದರಿಂದಲೇ. ಭಾಸ ಮಹಾಕವಿಯ ವಿಷಯವನ್ನು ಪ್ರಸ್ತಾವಿಸಿ ವಿಚಾರಮಾಡಿರುವ ನಮ್ಮ ದೇಶದ ಮತ್ತು ಪಾಶ್ಚಿಮಾತ್ಯ ದೇಶಗಳ ವಿದ್ವಾಂಸರೆಲ್ಲರ ಗ್ರಂಥಗಳಿಂದಲೂ ಲೇಖನಗಳಿಂದಲೂ ಸಹ ನಾನು ಉಪಕೃತನಾಗಿರುವ ಅಂಶವನ್ನು ಕೃತಜ್ಞತೆಯಿಂದ ಸೂಚಿಸುತ್ತೇನೆ. ಹಲವು ಸಂದರ್ಭಗಳಲ್ಲಿ ನಾನು ಭಿನ್ನಾಭಿಪ್ರಾಯವನ್ನು ಸೂಚಿಸಿರುವುದು ನಿಜವಾದರೂ, ಅವರಲ್ಲಿ ನನಗಿರುವ ಗೌರವ ಕೃತಜ್ಞತೆಗಳು ಲೇಶಮಾತ್ರವೂ ಕಡಿಮೆಯಾಗಿಲ್ಲವೆಂಬ ಅಂಶವನ್ನೂ ಅರಿಕೆಮಾಡಲಿಚ್ಛಿಸುವೆನು. ನನ್ನನ್ನು ಪ್ರೋತ್ಸಾಹಿಸಿ ಉತ್ಸಾಹವನ್ನುಂಟುಮಾಡಿದ ಹಿರಿಯರಿಗೂ ಮಿತ್ರರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಚಾರುದತ್ತ ರೂಪಕದ ಮೂರನೆಯ ಅಂಕದಲ್ಲಿ ವಿದೂಷಕನು ಮಾತನಾಡುವ ಒಂದು ಸನ್ನಿವೇಶದಲ್ಲಿ ಮೊದಲನೆಯ ಮುದ್ರಣದಲ್ಲಿದ್ದುದು ಎರಡನೆಯ ಮುದ್ರಣದಲ್ಲಿ ಸ್ವಲ್ಪಮಟ್ಟಿಗೆ ಮಾರ್ಪಟ್ಟಿದೆ. ತಕ್ಕಷ್ಟು ಆಧಾರವಿಲ್ಲದೆ ಮಹಾಮಹೋಪಾಧ್ಯಾಯ ಡಾಕ್ಟರ್ ಟಿ. ಗಣಪತಿಶಾಸ್ತ್ರಿಗಳು ಆ ರೀತಿ ಮಾತುಗಳನ್ನು ಮಾರ್ಪಡಿಸಿರಲಾರರೆಂಬ ನಂಬಿಕೆಯಿಂದ, ಆ ರೂಪಕದ ವಿಮರ್ಶೆಯಲ್ಲಿಯ ಅಂಶಗಳನ್ನು ಸೂಚಿಸಿದ್ದೇನೆ.

ಕವಿಯ ವಿಷಯವಾಗಿ ಭಕ್ತಿಯಿಂದ ಕೂಡಿ—ಕವಿಹೃದಯವನ್ನರಿತುಕೊಳ್ಳಲು ನನ್ನಿಂದ ಸಾಧ್ಯವಾದ ಮಟ್ಟಿಗೂ ಪ್ರಯತ್ನಮಾಡಿ—ಈ ವಿಮರ್ಶಾಗ್ರಂಥವನ್ನು ಬರೆದಿದ್ದೇನೆ. ನನ್ನ ಪ್ರಯತ್ನವು ಎಷ್ಟುಮಟ್ಟಿಗೆ ಸಫಲವಾಗಿದೆಯೆಂಬುದು ಸಹೃದಯರಾದ ವಾಚಕರು ತೀರ್ಮಾನಿಸಬೇಕಾದ ಅಂಶ. ಕಥಾಸಾರಾಂಶವನ್ನು ಕೊಟ್ಟಿರುವ ಭಾಗವು ಹದಿ

ಮೂರು ರೂಪಕಗಳಿಂದಲೂ ಸೇರಿ ಒಟ್ಟು ೨೦ ಪುಟಗಳು ಮಾತ್ರ. ಉಳಿದ ೫೧೪ ಪುಟಗಳೂ ವಿಮರ್ಶೆಗೆ ಸೇರಿದ ಭಾಗ. ನಾನು ಸಮರ್ಪಿಸಿರುವ ಈ ಸೇವೆಯಿಂದ ಸಂತೋಷಪಡುವುದು ಕನ್ನಡಿಗರ ಚಿತ್ತ; ನನ್ನ ಭಾಗ್ಯ. ಕನ್ನಡಿಗರಾದ ನನ್ನ ದೇಶಬಾಂಧವರಿಗೆ ಇದರಿಂದ ಅಲ್ಪಸ್ವಲ್ಪ ಸಂತೋಷವಾದರೂ ನನ್ನ ಶ್ರಮಕ್ಕೆ ಪೂರ್ಣಫಲವಾಯಿತೆಂದು ಭಾವಿಸುವೆನು.

**ಬೆಂಗಳೂರು,**
ತಾರೀಖು ೮-೨-೧೯೩೭

**ಸಿ. ಕೆ. ವೆಂಕಟರಾಮಯ್ಯ.**

# ವಿಷಯಾನುಕ್ರಮಣಿಕೆ

---o---

# ಶುದ್ಧಾಶುದ್ಧ ಪತ್ರಿಕೆ.

| ಪುಟಸಂಖ್ಯೆ | ಪಂಙ್ತಿ | ಅಶುದ್ಧ | ಶುದ್ಧ |
|---|---|---|---|
| ೪೧ | ೨೪ | ಮುಖಮವೀಕ್ಷಣೀಯಂ | ಮುಖಮೀಕ್ಷಿತವ್ಯಂ |
| ೬೨ | ೧ | ಆರಾಧಿಕ | ಆರಾಧಿತ |
| ೯೨ | ೨೩ | ಭಾತೃರಾಜ್ಯಾಪಹಾರಿಣಾಮ್ | ಭ್ರಾತೃರಾಜ್ಯಾಪಹಾರಿಣಾಮ್ |
| ೧೦೫ | ೨೫ | ಭಾತೃಸ್ನೇಹಪರವಶನಾದ | ಭ್ರಾತೃಸ್ನೇಹಪರವಶನಾದ |
| ೧೦೬ | ೫ | ಭಾತೃಸ್ನೇಹದ | ಭ್ರಾತೃಸ್ನೇಹದ |
| ೧೧೨ | ೧೯ | ಶುಧ್ಯತೇ | ಶುದ್ಧ್ಯತೇ |
| ೧೨೦ | ೨೦ | ಸುಖದಿಂದನು | ಸುಖದಿಂದಿದ್ದನು |
| ೧೨೨ | ೮ | ಹೇಳಿದಿರುವುದಕ್ಕಾಗಿ | ಹೇಳದಿರುವುದಕ್ಕಾಗಿ |
| ೧೨೪ | ೧೧ | ಮನಸ್ನು | ಮನಸ್ಸು |
| ೧೪೫ | ೧೨ | ನಂಬಲಾರ | ನಂಬಲಾರೆ |
| ೧೯೦ | ೯ | ಆವಳ | ಅವಳ |
| ೨೦೬ | ೧೦ | ರೋಮಾಂಚಿತಮದುದು | ರೋಮಾಂಚಿತವಾದುದು |
| ೨೧೨ | ೯ | ಸಹಪಙ್ತಿಗೆ | ಸಹಪಙ್ಕ್ತಿಗೆ |
| ೨೭೯ | ೭ | ಹೋಗವಷ್ಟು | ಹೋಗುವಷ್ಟು |
| ೨೮೬ | ೧೩ | ಪಾರಿತೋಷಕಾದಿಗಳಿಂದ | ಪಾರಿತೋಷಿಕಾದಿಗಳಿಂದ |
| ೩೭೪ | ೨೫ | ಜ್ಞಾತಿರ್ಹತಶ್ಬಾಯಂ | ಜ್ಞಾತಿರ್ಹತಶ್ಚಾಯಂ |
| ೩೮೬ | ೨೬ | Speedv | Speedy |
| ೫೩೧ | ೧೭ | ಅತಿಥಿ ಸತ್ಕಾರ | ಅಥಿತಿ ಸತ್ಕಾರ |
| ೫೩೧ | ೧೯ | ಆಭಿವರ್ಧಮಾನ | ಅಭಿವರ್ಧಮಾನ |

# ಮೊದಲನೆಯ ತರಂಗ

———o———

## ಕವಿಯ ವಿಚಾರ



ಪೀಠಿಕಾರೂಪದ ವಾಕ್ಯಗಳು

ಭಾಸಕೃತವಾದ ಶ್ಲೋಕಗಳ ವಿಚಾರ

ತಿರುವಾಂಕೂರಿನಲ್ಲಿ ಸಿಕ್ಕಿದ ಹದಿಮೂರು ರೂಪಕಗಳು

ರೂಪಕ ಕರ್ತೃತ್ವ ವಿಚಾರ

ಕವಿಯ ಕಾಲ ವಿಚಾರ

ಕವಿಯು ಯಾವ ದೇಶದವನೆಂಬ ವಿಚಾರ

# ಭಾಸ ಮಹಾ ಕವಿ

## ಮೊದಲನೆಯ ತರಂಗ

### ಕವಿಯ ವಿಚಾರ

ಭಾಸ ಮಹಾಕವಿಯು ಭಾರತವರ್ಷದ ಕವಿಪುಂಗವರಲ್ಲೊಬ್ಬನು. ಅವನ ಖ್ಯಾತಿಯನ್ನು ಕಾಳಿದಾಸನೇ ಮುಂತಾದ ಅನೇಕ ಕವಿಗಳು ಕೊಂಡಾಡಿದ್ದಾರೆ. ಮಾಳವಿಕಾಗ್ನಿಮಿತ್ರ ನಾಟಕದ ಪ್ರಸ್ತಾವನೆಯಲ್ಲಿ 'ಪ್ರಥಿತ ಯಶಸಾಂ ಭಾಸ ಸೌಮಿಲ್ಲ ಕವಿಪುತ್ರಾದೀನಾಂ ಗ್ರಂಥಾನತಿಕ್ರಮ್ಯ ವರ್ತಮಾನಕವೇಃ ಕಾಲಿದಾಸಸ್ಯ ಕ್ರಿಯಾಯಾಂ ಕಥಂ ಬಹುಮಾನಃ' ಎಂದು ಹೇಳಿದೆ. 'ಸುಪ್ರಸಿದ್ಧರಾದ ಭಾಸ, ಸೌಮಿಲ್ಲ, ಕವಿಪುತ್ರ ಮುಂತಾದವರ ಗ್ರಂಥಗಳಿರುವಲ್ಲಿ ಅವರು ಬರೆದಿರುವ ರೂಪಕಗಳನ್ನೆಲ್ಲ ಬಿಟ್ಟು ಈಗಿನ ಕವಿಯಾದ ಕಾಳಿದಾಸನ ನಾಟಕಕ್ಕೆ ಹೇಗೆತಾನೆ ಗೌರವವು ದೊರೆಯುವುದು?' ಎಂಬುದು ಇದರ ತಾತ್ಪರ್ಯವಾಗಿದೆ. ಭಾಸನ ಹೆಸರು ಪ್ರಖ್ಯಾತವಾಗಿದ್ದುದೂ, ಅವನು ರಚಿಸಿದ ರೂಪಕಗಳನ್ನು ರಂಗಸ್ಥಳದಲ್ಲಿ ಆಗಿನವರು ವಿಶೇಷವಾಗಿ ಅಭಿನಯಿಸುತ್ತಿದ್ದುದೂ, ಇದರಿಂದ ಸ್ಪಷ್ಟವಾಗುತ್ತವೆ. 'ಸೂತ್ರಧಾರ ಕೃತಾರಂಭೈರ್ನಾಟಕೈರ್ಬಹುಭೂಮಿಕೈಃ। ಸಪತಾಕೈರ್ಯಶೋ ಲೇಭೇ ಭಾಸೋ ದೇವಕುಲೈರಿವ ॥' ಎಂದು ಬಾಣನು ತನ್ನ ಹರ್ಷಚರಿತ್ರೆಯ ಪ್ರಾರಂಭದಲ್ಲಿ ಹೇಳಿದ್ದಾನೆ. ಬಹು ಭೂಮಿಕೆಗಳಿಂದಲೂ,ಪತಾಕೆಗಳಿಂದಲೂ ಕೂಡಿ ಸೂತ್ರಧಾರನಿಂದಲೇ ಪ್ರಾರಂಭಿಸಲ್ಪಡುವ ನಾಟಕಗಳನ್ನು ಬರೆದು, ಭಾಸಕವಿಯು, ಅನೇಕ ಅಂತಸ್ತುಗಳಿಂದಲೂ ಧ್ವಜಗಳಿಂದಲೂ ಶೋಭಾಯಮಾನವಾದ ಭವ್ಯಮಂದಿರಗಳನ್ನು ನಿರ್ಮಿಸಿದ ಶಿಲ್ಪಿಗಳಂತೆ ಯಶಸ್ಸನ್ನು ಪಡೆದನು— ಎಂಬುದು ಇದರ ತಾತ್ಪರ್ಯವು. ಸರಸ್ವತಿಯ ಪ್ರಸಾದಕ್ಕೆ ಪಾತ್ರರಾದ ಕವಿಗಳೆಂಬುದಾಗಿ ರಾಜಶೇಖರಕವಿಯು ಕೆಲವು ಕವಿಗಳನ್ನು ಹೊಗಳಿ ಒಂದು ಶ್ಲೋಕವನ್ನು ಬರೆದಿದ್ದಾನೆ. 'ಭಾಸೋ ರಾಮಿಲ ಸೋಮಿಲೌ ವರರುಚಿಃ

ಶ್ರೀಸಾಹಸಾಙ್ಕಃ ಕವಿ । ವರ್ಮೇಣ್ಠೋಭಾರವಿ ಕಾಲಿದಾಸ ತರಲಾಃ ಸ್ಕನ್ಧಃ ಸುಬನ್ಧುಶ್ಚ ಯಃ॥ ದಣ್ಡೀ ಬಾಣ ದಿವಾಕರೌ ಗಣಪತಿಃ ಕಾಂತಶ್ಚರತ್ನಾಕರಃ। ಸಿದ್ಧಾ ಯಸ್ಯ ಸರಸ್ವತೀ ಭಗವತೀ ಕೇ ತಸ್ಯ ಸರ್ವೇಽಪಿ ತೇ ॥' ಎಂಬುದೇ ಆ ಶ್ಲೋಕವು.

ಸರಸ್ವತೀ ಕಣ್ಠಾಭರಣವೆಂಬ ಗ್ರಂಥದಲ್ಲಿ ' ಭಾಸಯತ್ಯಪಿ ಭಾಸಾದ್ಯಾ ಕವಿವರ್ಗೇ ಜಗತ್ತ್ರಯೀಮ್ ।' ಎಂಬುದಾಗಿ ಭಾಸ ಮಹಾಕವಿಯ ಪ್ರಸ್ತಾವವಿದೆ. ಮುರಾರಿ ಕವಿಯು ತನ್ನ ಪ್ರಸನ್ನರಾಘವನಾಟಕದ ಪ್ರಸ್ತಾವನೆಯಲ್ಲಿ, " ಯಸ್ಯಾಶ್ಚೋರಶ್ಚಿಕುರ ನಿಕರಃ ಕರ್ಣಪೂರೋ ಮಯೂರೋ। ಭಾಸೋ ಹಾಸಃ ಕವಿಕುಲಗುರುಃ ಕಾಲಿದಾಸೋ ವಿಲಾಸಃ ॥ ಹರ್ಷೋ ಹರ್ಷೋ ಹೃದಯವಸತಿಃ ಪಂಚಬಾಣಸ್ತು ಬಾಣಃ । ತೇಷಾಂ ನೈಷಾಕಥಯ ಕವಿತಾ ಕಾಮಿನೀ ಕೌತುಕಾಯ ॥' ಎಂದು ಬರೆದಿದ್ದಾನೆ. ಅವನು ಕವಿತೆಯನ್ನು ಕಾಮಿನಿಯಾಗಿ ಭಾವಿಸಿ, ನಾನಾಕವಿಗಳಿಗೂ ಆ ಕವಿತಾಮಾನಿನಿಯ ದೇಹದಲ್ಲಿ ಸ್ಥಾನಗಳನ್ನು ಕಲ್ಪಿಸಿದ್ದಾನೆ. ' ಯಾವ ಕವಿತಾಮಾನಿನಿಗೆ ಚೋರಕವಿಯು ಮುಂಗುರುಳುಗಳ ನಿಕರವಾಗಿದ್ದಾನೋ, ಮಯೂರಕವಿಯು ಕರ್ಣಪೂರವಾಗಿದ್ದಾನೋ, ಭಾಸಕವಿಯು ಬೆಳುನಗೆಯಾಗಿದ್ದಾನೋ, ಕವಿಕುಲಗುರುವಾದ ಕಾಳಿದಾಸನು ವಿಲಾಸವಾಗಿದ್ದಾನೋ, ಹರ್ಷಕವಿಯು ಹರ್ಷವಾಗಿದ್ದಾನೋ ಮತ್ತು ಬಾಣಕವಿಯು ಪಂಚಬಾಣಸ್ಥಾನವನ್ನವಲಂಬಿಸಿದ್ದಾನೋ,ಅಂತಹ ಈ ಕವಿತಾಮಾನಿನಿಯು ಯಾರಿಗೆತಾನೆ ಆಶ್ಚರ್ಯವನ್ನುಂಟುಮಾಡಳು,ಹೇಳು ' ಎಂಬುದು ಆ ಶ್ಲೋಕದ ತಾತ್ಪರ್ಯವಾಗಿದೆ.

ಭಾಸಕವಿಯು ರಚಿಸಿರುವ ಕೃತಿಯ ಶ್ರೇಷ್ಠತೆಯನ್ನು ಸೂಚಿಸುವ ಮನೋಹರವಾದೊಂದು ಕಲ್ಪನೆಯುಂಟು. ಆತನ ಗ್ರಂಥಗಳು ಉತ್ತಮವಾದುವುಗಳೇ-ಎಂಬ ಅಂಶವನ್ನು ನಿರ್ಧರಿಸುವುದಕ್ಕಾಗಿ ಅಗ್ನಿಪರೀಕ್ಷೆಯು ನಡೆಯಿತೆಂಬುದೇ ಆ ಕಲ್ಪನೆ. ಮೂವರು ಕವಿಗಳು ಈ ವಿಚಾರವನ್ನು ಪ್ರಸ್ತಾವಿಸಿದ್ದಾರೆ. ಆದರೆ ಅವರು ಹೇಳಿರುವುದನ್ನು ಸೂಚಿಸುವುದಕ್ಕೆ ಮೊದಲು, ಒಂದು ವಿಚಾರವನ್ನು ಗಮನಿಸಬೇಕಾಗಿದೆ. ಒಟ್ಟಿನಮೇಲೆ ಅವರ ಹೇಳಿಕೆಯ ರೀತಿಯನ್ನೂ ಆದರಲ್ಲಿ ಅಡಗಿರುವ ಧ್ವನಿಯನ್ನೂ ನೋಡಿ

ದರೆ, ಭಾಸನ ಕೃತಿಗಳಿಗೆ ನಡೆದ ಪರೀಕ್ಷೆಯೆಂದರೆ ಗ್ರಂಥಗಳನ್ನು ಬೆಂಕಿಯೊಳಕ್ಕೆಸೆದ ಅಗ್ನಿಪರೀಕ್ಷೆಯಲ್ಲವೆಂದೂ, ಕಟುಭಾಷಿಗಳೆನಿಸಿದ ವಿಮರ್ಶಕರವಾದ ಪ್ರತಿವಾದ ರೂಪದ ಅಗ್ನಿಪರೀಕ್ಷೆಯೆಂದೂ ಅವರು ಸೂಚಿಸಿರಬಹುದೇ ಎಂಬ ಅನುಮಾನವು ತೋರಿಬರುತ್ತದೆ. ಮೇಲೆ ಉದಾಹರಿಸಿರುವ ಶ್ಲೋಕದಲ್ಲಿ ಮುರಾರಿ ಕವಿಯು ಕವಿತಾಮಾನಿನಿಯೆಂಬ ಕಲ್ಪನೆಯನ್ನು ಹೂಡಿರುವ ಮಾತ್ರಕ್ಕೇ, ಕವಿತೆಯೆಂಬೊಬ್ಬ ಹೆಂಗುಸೇ ವಾಸ್ತವಿಕವಾಗಿ ರಾಜಿಸುತ್ತಿರುವಳೆಂದೂ, ಅವನು ಹೇಳಿರುವ ಕವಿಗಳು ಅವಳ ಅಂಗಗಳೆಂದೂ, ಅರ್ಥಮಾಡುವುದಾದರೆ ಹೇಗೆ ಆಭಾಸವಾಗುವುದೋ ಹಾಗೆಯೇ ಭಾಸನ ಕೃತಿಯ ಶ್ರೇಷ್ಠತೆಯು ಅವನ ಗ್ರಂಥಗಳನ್ನು ವಾಸ್ತವವಾಗಿ ಅನಲನಿಗೆ ಆಹುತಿಯಾಗಿ ಅರ್ಪಿಸಿದ ಅಗ್ನಿಪರೀಕ್ಷೆಯಿಂದ ನಿರ್ಧರವಾಯಿತೆಂಬುದೂ ಅಷ್ಟೇಮಟ್ಟಿಗೆ ಆಭಾಸವಾಗುತ್ತದೆ. ಆದಕಾರಣ, ರಾಜಶೇಖರ, ವಾಕ್ಪತಿರಾಜ ಮತ್ತು ಜಯಾನಕ, ಈ ಮೂರುಮಂದಿ ಕವಿಗಳೂ,ತಮ್ಮ ಕಲ್ಪನಾಸಾಮರ್ಥ್ಯದ ಧೋರಣೆಯಿಂದ ಅಲಂಕಾರಯುಕ್ತವಾಣಿಯಲ್ಲಿ ಈ ರೀತಿ ಅವನ ಕೃತಿಯ ಶ್ರೇಷ್ಠತೆಯನ್ನು ಸೂಚಿಸಿದ್ದಾರೆಂದು ತೋರುತ್ತದೆ. ಆದರೆ ಹೀಗೆಯೇ ಸರಿಯೆಂದು ನಿಷ್ಕೃಷ್ಟವಾಗಿ ಹೇಳುವಂತಿಲ್ಲ. ಆ ಶ್ಲೋಕಗಳನ್ನು ಓದಿದವರು ತಮತಮಗೆ ತೋರಿದ ರೀತಿಯಲ್ಲಿ ಭಾವಿಸಿಕೊಳ್ಳಲು ಯಾವ ಅಭ್ಯಂತರವೂ ಇಲ್ಲ.

ಈ ಮೂರು ಶ್ಲೋಕಗಳಲ್ಲಿ ಮೊದಲು ರಾಜಶೇಖರ ಕವಿಯ ಶ್ಲೋಕವನ್ನು ವಿಚಾರಮಾಡುವ. 'ಭಾಸ ನಾಟಕ ಚಕ್ರೇಪಿ ಛೇಕೈಃ ಕ್ಷಿಪ್ತೇ ಪರೀಕ್ಷಿತುಮ್। ಸ್ವಪ್ನವಾಸವದತ್ತಸ್ಯ ದಾಹಕೋಽಭೂನ್ನ ಪಾವಕಃ॥' ಎಂಬುದೇ ಆ ಶ್ಲೋಕವು. ಅದು 'ಸೂಕ್ತಿಮುಕ್ತಾವಲಿ' ಎಂಬ ಗ್ರಂಥದಲ್ಲಿ ಉದಾಹರಿಸಲ್ಪಟ್ಟಿದೆ. ಭಾಸನು ರಚಿಸಿದ ನಾಟಕಗಳನ್ನು ಪರೀಕ್ಷೆಗಾಗಿ ಅಗ್ನಿಗೆ ಒಪ್ಪಿಸಲು, ಪಾವಕನು ಸ್ವಪ್ನವಾಸವದತ್ತ ನಾಟಕವನ್ನು ದಹಿಸಲಾರದವನಾದನೆಂದು ಈ ಶ್ಲೋಕಕ್ಕೆ ತಾತ್ಪರ್ಯವಾಗುತ್ತದೆ. ಭಾಸಕವಿಯು ಬರೆದ ನಾಟಕಗಳಲ್ಲೆಲ್ಲ ಸ್ವಪ್ನವಾಸವದತ್ತ ನಾಟಕವೇ ಸರ್ವೋತ್ತಮವಾದುದೆಂಬ ಅಂಶವನ್ನು ಕವಿಯು ಈರೀತಿಯಲ್ಲಿ ಸೂಚಿಸಿದ್ದಾನೆಂದು ಹೇಳಬೇಕಾಗುತ್ತದೆ. ಹವ್ಯವಾಹನನಾದ ಅಗ್ನಿದೇವನ ಸಹಾಯದಿಂದ ನಡೆದ ಪವಾಡಕೃತ್ಯವನ್ನೇ ಕವಿಯು ಇಲ್ಲಿ ಸೂಚಿಸಿದ್ದಾನೆಂದು ಅಭಿಪ್ರಾಯಪಡುವಷ್ಟುಮಟ್ಟಿನ ವಾತಾ

ವರಣವೇ ಇಲ್ಲಿ ಕಲ್ಪಿತವಾಗಿಲ್ಲದಿರುವ ಕಾರಣ, ಹಾಗೆ ಹೇಳಬೇಕಾಗಿದೆ. ವಾಕ್ಪತಿರಾಜನೆಂಬ ಕವಿಯು ಪ್ರಾಕೃತಭಾಷೆಯಲ್ಲಿ 'ಭಾಸಮ್ಮಿ ಜಲಣಮಿತ್ತೇ ಕನ್ತೀದೇವೇ ಅ ಜಸ್ಸರಹುಆರೇ। ಸೋಬನ್ಧವೇ ಅ ಬನ್ಧಮ್ಮಿ ಹರಿಯನ್ದೇ ಅ ಆಣನ್ದೋ॥' ಎಂದು ಹೇಳಿದ್ದಾನೆ. ಜ್ವಲನ ಮಿತ್ರನಾದ ಭಾಸನ ನಾಟಕಗಳೂ, ಕಾಳಿದಾಸನ ಕೃತಿಗಳೂ, ಸುಬಂಧು ಹರಿಚಂದ್ರರ ಕವನಗಳೂ ತನಗೆ ಆನಂದದಾಯಕವಾದುವುಗಳೆಂಬುದು ಅವನು ಈ ಶ್ಲೋಕದಲ್ಲಿ ಸೂಚಿಸಿರುವ ಆಶಯವಾಗಿದೆ. ಭಾಸನಿಗೆ ಜ್ವಲನ ಮಿತ್ರನೆಂಬ ವಿಶೇಷಣವನ್ನು ಅವನು ಸೇರಿಸಿರುವುದಕ್ಕೆ ಎರಡು ಕಾರಣಗಳನ್ನು ಕಲ್ಪಿಸುವುದು ಸಾಧ್ಯವುಂಟು. ಭಾಸನ ಗ್ರಂಥಗಳ ವಿಷಯಕವಾದ ಅಗ್ನಿಪರೀಕ್ಷೆಯನ್ನು ಕುರಿತು ಅವನು ಸೂಚಿಸಿರಬಹುದು; ಅಥವಾ ಭಾಸನ ಗ್ರಂಥಗಳಲ್ಲಿ ಯಜ್ಞಗಳು, ಕಾಡುಕಿಚ್ಚು, ಮನೆಗಳು ಹೊತ್ತಿ ಉರಿಯುವುದು, ಮುಂತಾದ ಅಗ್ನಿಜ್ವಾಲೆಗೆ ಸಂಬಂಧಪಟ್ಟ ಘಟನೆಗಳು ವಿಶೇಷ ಹೆಚ್ಚಾಗಿ ಕಂಡುಬರುವುದನ್ನು ಪರೋಕ್ಷವಾಗಿ ಸೂಚಿಸುವುದಕ್ಕಾಗಿ ಅವನು ಜ್ವಲನ ಮಿತ್ರನೆಂಬ ವಿಶೇಷಣವನ್ನು ಪಯೋಗಿಸಿರಬಹುದು.

ಇನ್ನು, ಜಯಾನಕ ಕವಿಯು ಬರೆದಿರುವ 'ಸತ್ಕಾವ್ಯ ಸಂಹಾರವಿಧೌ ಖಲಾನಾಂ ದೀಪ್ತಾನಿ ವಹ್ನೇರಪಿ ಮಾನಸಾನಿ। ಭಾಸಸ್ಯ ಕಾವ್ಯಂ ಖಲು ವಿಷ್ಣುಧರ್ಮಾನ್ ಸೋಽಪ್ಯಾನನಾತ್ ಪಾರತವನ್ಮಮೋಚ॥' ಎಂಬ ಶ್ಲೋಕ ವಿಚಾರ. ಇದು ಜಯಾನಕ ಕವಿಯು ರಚಿಸಿರುವ ಪೃಥ್ವೀರಾಜ ಚರಿತ ಕಾವ್ಯದ ಮೊದಲನೆಯ ಸರ್ಗದ ಮೂರನೆಯ ಶ್ಲೋಕವು. ದೋಷಾರೋಪಣೆಯಿಂದ ಸತ್ಕಾವ್ಯವು ಶೋಭಿಸದಂತೆ ಮಾಡುವುದರಲ್ಲಿ ದುಷ್ಟರು ಅಗ್ನಿಪರೀಕ್ಷೆಯನ್ನು ಕೂಡ ಮಾಡುತ್ತಾರೆಂಬುದೂ, ಕಾವ್ಯದಲ್ಲಿ ಶ್ರೇಷ್ಠತೆಯಿದ್ದರೆ ಭಾಸನ ಕಾವ್ಯವು ಅಗ್ನಿಮುಖದಿಂದ ಪಾರಾದಂತೆ ಆಗಬೇಕೆಂಬುದೂ ಈ ಶ್ಲೋಕದ ಒಟ್ಟು ತಾತ್ಪರ್ಯವು. ಈ ಶ್ಲೋಕದಲ್ಲಿ ಕಂಡುಬರುವ ಪದಪ್ರಯೋಗದ ರೀತಿಯನ್ನು ನೋಡಿದರೇನೊ, ಗ್ರಂಥಗಳನ್ನು ಬೆಂಕಿಗೆ ಆಹುತಿಯಾಗಿ ಒಪ್ಪಿಸುವ ವಿಚಾರವು ಕವಿಯ ಹೃದಯದಲ್ಲಿರಲಿಲ್ಲವೆಂದು ತೋರುತ್ತದೆ. ಆದರೂ ಕವಿಯ ಕಾಲಾನಂತರ ಸುಮಾರು ಮೂರು ಶತಮಾನಗಳ ಮೇಲೆ (ಕ್ರಿಸ್ತಶಕ ಹದಿನೈದನೆಯ ಶತಮಾನದಲ್ಲಿ) ಆ ಗ್ರಂಥಕ್ಕೆ

ವ್ಯಾಖ್ಯಾನವನ್ನು ಬರೆದ ಜೋನರಾಜನೇನೊ ಭಾಸನ ಮತ್ತು ವ್ಯಾಸರ ಗ್ರಂಥಗಳು ಅಗ್ನಿಜ್ವಾಲೆಯ ಪರೀಕ್ಷೆಯಲ್ಲಿ ಸುಟ್ಟುಹೋಗದೆ ಉಳಿದುವೆಂದು ಸೂಚಿಸಿದ್ದಾನೆ. ವ್ಯಾಖ್ಯಾನಕಾರನು ವ್ಯಾಸರನ್ನು ತಂದು ಸೇರಿಸಿದುದೇಕೋ ತಿಳಿಯದು. ದೊಡ್ಡ ದೊಡ್ಡ ವ್ಯಾಖ್ಯಾನಕಾರರೂ ಒಂದೊಂದು ಸಲ ಅಸಂಗತ ವಾದ ಸಂಗತಿಗಳನ್ನು ಸಮರ್ಥಿಸಲುದ್ಯುಕ್ತರಾಗಿ ಎಡವಿ ಬೀಳುವುದುಂಟು. 'ಪುರಾಣಮಿತ್ಯೇವ ನ ಸಾಧು ಸರ್ವಂ' ಎಂಬ ಕಾಳಿದಾಸನ ವಚನವನ್ನು ಈ ವಿಷಯಕ್ಕೂ ಅನ್ವಯಿಸಿ ಪ್ರಮಾಣವಾಗಿಟ್ಟುಕೊಂಡು, 'ಹಿಂದಿನ ವ್ಯಾಖ್ಯಾನ ಕಾರನಾದ ಮಾತ್ರಕ್ಕೇ ಅವನು ಹೇಳಿದುದೆಲ್ಲವೂ ಸಾಧುವಲ್ಲ' ಎಂದು ಭಾವಿಸಿ ಅದರಂತೆ ನಡೆಯಬೇಕಾಗಲೂ ಬಹುದು. ಅಂತು, ಭಾಸನ ಗ್ರಂಥಗಳ ಅಗ್ನಿಪರೀಕ್ಷೆಯ ವಿಷಯದಲ್ಲಿ ವಾಚ್ಯಾರ್ಥವನ್ನೇ ಪ್ರಧಾನವಾಗಿ ಟ್ಟುಕೊಂಡು ಅದನ್ನು ಅಕ್ಷರಶಃ ನಂಬಬೇಕೆನ್ನುವುದಾದರೆ, ರಸಾಭಾಸವಾಗಿ ಬಹಳ ಕಷ್ಟಕ್ಕಿಡುವುದು. ಈ ವಿಷಯವು ಹಾಗಿರಲಿ. ಜೋನರಾಜನ ವ್ಯಾಖ್ಯಾನದಿಂದ ಮತ್ತೊಂದು ವಿಚಾರವು ಹೊರಪಡುವುದು. ಅವನು 'ಭಾಸಮುನೇಃ' ಎಂದು ಬರೆದು ಭಾಸನನ್ನು ಮುನಿಯೆಂದು ಕರೆದಿದ್ದಾನೆ. ಭಾಸನಿಗೆ ಮುನಿಯೆಂಬ ಹೆಸರು ಬಂದಿರುವುದನ್ನು ನೋಡಿದರೆ, ಕವಿತ್ವ ದಲ್ಲಿ ಅವನು ಪ್ರಖ್ಯಾತನಾಗಿದ್ದಂತೆಯೇ ಶೀಲಶುದ್ಧಿಯಲ್ಲೂ ಅಗ್ಗಳಿಯ ನಾಗಿದ್ದನೆಂದು ಹೇಳಬೇಕಾಗುವುದು.

ಭಾಸಕವಿಯ ವಿಚಾರವಾಗಿ ಮೇಲೆ ಹೇಳಿದವುಗಳಿಗಿಂತ ಹೆಚ್ಚಿನ ವಿವರಗಳಾವುವೂ ಗೊತ್ತಾಗಿಲ್ಲ. ಅವನು ಯಾವಕಾಲದಲ್ಲಿದ್ದವನು, ಅವನ ವಂಶವು ಯಾವುದು, ಅವನು ರಾಜಾಶ್ರಯವನ್ನೇನಾದರೂ ಪಡೆದಿದ್ದನೆ, ಅಥವಾ ಅವನು ಸ್ವಂತವಾಗಿ ಶ್ರಮಿಸಿ ಜೀವನವನ್ನು ಸಂಪಾದಿಸಿಕೊಳ್ಳ ಬೇಕಾಗಿದ್ದಿತೆ, ಅವನು ಗ್ರಂಥರಚನೆ ಮಾಡಿದ ಸನ್ನಿವೇಶಗಳಾವುವು, ಎಂಬಿವೇ ಮುಂತಾದ ಸಂಗತಿಗಳಾವುವೂ ತಿಳಿದಿಲ್ಲ. ಯಾಸ್ಕಾಚಾರ್ಯರು, ಪಾಣಿನ್ಯಾಚಾರ್ಯರು, ಮುಂತಾದವರಂತೆಯೇ ಭಾಸಕವಿಯ ವಿಚಾರ ದಲ್ಲೂ ಜೀವನ ಚರಿತ್ರೆಗೆ ಸಾಧಕವಾದ ಅಂಶಗಳಾವುವೂ ದೊರೆತಿಲ್ಲ. ಅಷ್ಟೇ ಅಲ್ಲ. ಭಾಸವಿರಚಿತವೆಂದು ಸ್ಪಷ್ಟವಾಗಿ ಕವಿಯೇ ಹೇಳಿಕೊಂಡಿರುವ ಗ್ರಂಥವೂ ಯಾವುದೂ ಸಿಕ್ಕಿಲ್ಲ.

ಆದಾಗ್ಗೂ ಭಾಸಕೃತವೆಂದು ಪ್ರಖ್ಯಾತವಾಗಿರುವ ಕೆಲವು ಶ್ಲೋಕಗಳು ಸದುಕ್ತಿ ಕರ್ಣಾಮೃತ, ಸುಭಾಷಿತಾವಲಿ, ಸೂಕ್ತಿಮುಕ್ತಾವಲಿ, ಶಾರ್ಙ್ಗಧರ ಪದ್ಧತಿ, ಎಂಬೀ ಗ್ರಂಥಗಳಲ್ಲಿವೆ. ಈ ಗ್ರಂಥಗಳ ಸಂಪಾದಕರೆಲ್ಲರೂ ಭಾಸ ಕೃತವೆಂದು ಒಪ್ಪಿರುವ ಶ್ಲೋಕಗಳು ಹತ್ತು ಮಾತ್ರವೇ. ಉಳಿದ ಶ್ಲೋಕ ಗಳು ಭಾಸಕೃತವೇ ಎಂಬ ವಿಚಾರದಲ್ಲಿ ಅವರವರಲ್ಲೇ ಮತಭೇದವಿದೆ. ಒಬ್ಬರು ಭಾಸಕೃತವೆನ್ನುವ ಶ್ಲೋಕವನ್ನು ಮತ್ತೊಬ್ಬರು ಅನ್ಯ ಕವಿಕೃತ ವೆಂದು ಅಭಿಪ್ರಾಯಪಟ್ಟಿರುತ್ತಾರೆ. ಆದಾಗ್ಗೂ, ಅವರೆಲ್ಲರೂ ಭಾಸಕೃತವೆಂದು ಒಪ್ಪಿರುವ ಶ್ಲೋಕಗಳನ್ನು ಭಾಸನೇ ರಚಿಸಿದುವುಗಳೆಂದು ನಿರ್ವಿವಾದವಾಗಿ ಒಪ್ಪಬಹುದೆಂದು ತೋರುತ್ತದೆ. ಅವುಗಳನ್ನು ನೋಡಿದರೆ, ಪ್ರತಿಭಾ ಸಂಪನ್ನನಾದ ಸತ್ಕವಿಯೇ ಅವುಗಳನ್ನು ರಚಿಸಿರಬೇಕೆಂದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಅವುಗಳಲ್ಲಿ ಕೆಲವು ಶ್ಲೋಕಗಳಂತು, ವಿಶೇಷ ಮನೋ ಹರವಾಗಿವೆ. ಆದಕಾರಣ, ಅವು ಭಾಸರಚಿತವೆಂದೇ ಹೇಳಬಹುದು. ಆ ಹತ್ತು ಶ್ಲೋಕಗಳಲ್ಲಿ ಅತ್ಯುತ್ತಮವಾಗಿರತಕ್ಕವುಗಳನ್ನು ಇಲ್ಲಿ ಸೂಚಿಸ ಬಹುದಾಗಿದೆ.

**ಭಾಸಕೃತವಾದ ಶ್ಲೋಕಗಳು:**—ಪತಿವ್ರತೆಯಾದ ಸಾಧ್ವಿಯ ಗುಣಗಳನ್ನು ಕುರಿತು ಅವಳ ಪತಿಯು ಹೇಳಿರುವಂತೆ ಭಾಸನು ಬರೆದಿರುವ ಶ್ಲೋಕವು ರಮಣೀಯವಾಗಿದೆ. 'ದುಃಖಾರ್ತೇ ಮಯಿ ದುಃಖಿತಾ ಭವತಿ ಯಾ ಹೃಷ್ಟೇ ಪ್ರಹೃಷ್ಟಾ ತಥಾ। ದೀನೇ ದೈನ್ಯಮುಪೈತಿ ರೋಷಪರುಷೇ ಪಥ್ಯಂ ವಚೋ ಭಾಷತೇ॥ ಕಾಲಂ ವೇತ್ತಿ ಕಥಾಃ ಕರೋತಿ ನಿಪುಣಾ ಮತ್ಸಂ ಸ್ತವೇ ರಜ್ಯತಿ। ಭಾರ್ಯಾ ಮಂತ್ರಿವರಸ್ಸಖಾ ಪರಿಜನಸ್ಸೈಕಾ ಬಹುತ್ವಂ ಗತಾ॥' ಎಂಬುದೇ ಆ ಶ್ಲೋಕವು. ಅದರ ಅರ್ಥವೇನೆಂದರೆ:—'ನಾನು ದುಃಖಾರ್ತನಾದರೆ ಅವಳೂ ದುಃಖಿಸುವಳು. ನಾನು ಹರ್ಷಿಸಿದರೆ ಅವಳೂ ಹರ್ಷಿಸುವಳು. ನಾನು ದೈನ್ಯವನ್ನವಲಂಬಿಸಿದರೆ ಅವಳೂ ದೈನ್ಯವನ್ನವ ಲಂಬಿಸುವಳು. ನಾನು ಕುಪಿತನಾಗಿ ಕಟುವಾಗಿ ಮಾತನಾಡಿದರೆ ಅವಳು ಶಾಂತಿಯಿಂದ ಪಥ್ಯವಚನಗಳನ್ನು ಹೇಳುವಳು. ಅವಳಿಗೆ ಸಮಯ ಪರಿ ಜ್ಞಾನವು ಚೆನ್ನಾಗಿದೆ. ಅವಳು ಸೊಗಸಾದ ಕಥೆಗಳನ್ನು ಹೇಳುವಳು. (ಅಥವಾ ಸ್ವಾರಸ್ಯವಾಗಿ ಮಾತನಾಡುವಳು.) ನಿಪುಣೆಯಾದ ಅವಳು ನಾನು

ಹೊಗಳಿದರೆ ಆನಂದಪಡುವಳು. ಅವಳು ಒಬ್ಬಳೇ ಆಗಿದ್ದರೂ ಬಹುತ್ವ ವನ್ನು ಹೊಂದಿದ್ದಾಳೆ. (ಬಹುಜನರಂತಿದ್ದಾಳೆ): ನನ್ನ ಪತ್ನಿಯೂ ಅವಳೆ! ನನಗೆ ಆಪ್ತಳಾದ ಸಚಿವಳೂ ಅವಳೆ! ನನ್ನ ಸಖಿಯೂ ಅವಳೆ! ನನ್ನನ್ನು ಉಪಚರಿಸಿ ನೋಡಿಕೊಳ್ಳುವ ಪರಿಜನವೂ ಅವಳೆ!' ಈ ಶ್ಲೋಕವನ್ನು ನೋಡಿದರೆ ಅಜಮಹಾರಾಜನು ಮೃತಳಾದ ನನ್ನ ಪತ್ನಿಯನ್ನು ಕುರಿತು ಪ್ರಲಾಪಿಸುವಂತೆ ಕಾಳಿದಾಸ ಮಹಾಕವಿಯು ಬರೆದಿರುವ 'ಗೃಹಿಣೀ ಸಚಿವೋ ಮಿಥಸ್ಸಖೀ ಪ್ರಿಯಶಿಷ್ಯಾ ಲಲಿತೇ ಕಲಾವಿಧೌ। ಕರುಣಾವಿಮುಖೇನ ಮೃತ್ಯುನಾ ಹರತಾ ತ್ವಾಂ ವದ ಕಿಂ ನ ಮೇ ಹೃತಂ॥' (ನೀನು ಗೃಹಿಣಿ ಯಾಗಿದ್ದೆ, ಸಚಿವಳಾಗಿದ್ದೆ, ಏಕಾಂತ ಸಮಯದಲ್ಲಿ ಸಖಿಯಾಗಿದ್ದೆ, ಲಲಿತ ವಾದ ಕಲಾವಿಧಿಯಲ್ಲಿ ಪ್ರಿಯ ಶಿಷ್ಯೆಯಾಗಿದ್ದೆ; ಇಂತಹ ನಿನ್ನನ್ನು ಕೊಂ ಡೊಯ್ದು ಕರುಣಾವಿಮುಖನಾದ ಯಮನು ನನ್ನ ಸರ್ವಸ್ವವನ್ನೂ ಅಪಹರಿಸಿ ದಂತಾಯಿತಲ್ಲವೆ, ಹೇಳು) ಎಂಬ ಶ್ಲೋಕಕ್ಕೆ ಇದೂ ಒಂದುವೇಳೆ ಅಲ್ಪ ಸ್ವಲ್ಪವಾದರೂ ಆಧಾರವಾಗಿರಬಹುದೇ-ಎಂಬ ಸಂಶಯವುಂಟಾಗುತ್ತದೆ.

'ಕಠಿನ ಹೃದಯೇ ಮುಂಚ ಕ್ರೋಧಂ ಸುಖ ಪ್ರತಿಘಾತಕಂ। ಲಿಖತಿ ದಿವಸಂ ಯಾತಂ ಯಾತಂ ಯಮಃ ಕಿಲ ಮಾನಿನಿ॥ ವಯಸಿ ತರುಣೇ ನೈತ ದ್ಯುಕ್ತಂ ಚಲೇ ಚ ಸಮಾಗಮೇ। ಭವತಿ ಕಲಹೋ ಯಾವತ್ತಾವದ್ ವರಂ ಸುಭಗೇ ರತಂ॥' ಎಂಬ ಶ್ಲೋಕವೂ ಸಹ, ಭಾಸಮಹಾಕವಿಯು ಮಾನವ ಹೃದಯದ ಭಾವಗಳನ್ನೇ ವೀಣೆಯಾಗಿ ಮಾಡಿಕೊಂಡು ನುಡಿ ಸಿರುವ ಮಧುರತಾನ. ನಿರಂತರವೂ ಕಲಹವಾಡುತ್ತಿದ್ದ ಇನಿಯಳನ್ನು ಕುರಿತು ಆವಳ ಪ್ರಿಯನು, "ಎಲೌ ಕಠಿನ ಹೃದಯೆ! ಸುಖಕ್ಕೆ ಪ್ರತಿಘಾತ ವನ್ನುಂಟುಮಾಡುವ ಈ ಕೋಪವನ್ನು ಬಿಟ್ಟುಬಿಡು. ಮಾನಿನಿ! ಇಲ್ಲಿ ನೋಡು; ದಿನಗಳು ಕಳೆದಹಾಗೆಲ್ಲಾ ಯಮನು, 'ಹೋಯಿತು! ಹೋಯಿತು, ದಿನವು ಹೋಯಿತು' ಎಂದು ಬರೆಯುತ್ತಿದ್ದಾನೆ. ನಾವು ಜೀವಂತರಾಗಿ ಒಟ್ಟಿ ಗಿರುವುದೂ ಸ್ವಲ್ಪ ಕಾಲದವರೆಗೆ ಮಾತ್ರವೇ. ಕಲಹದಲ್ಲಿ ಕಳೆಯುವ ಕಾಲ ವನ್ನು ಪ್ರೀತಿಯಿಂದ ಕಳೆಯುವುದು ಎಷ್ಟೋ ಮೇಲು'' ಎಂದು ಹೇಳುವಂತೆ ಈ ಶ್ಲೋಕವು ವಿರಚಿತವಾಗಿದೆ. ಭಾಸಕವಿಯು ಮನೋಹರವಾದ ಉಪ ಮಾನಗಳನ್ನು ಕೊಡುವನೆಂಬುದಕ್ಕೆ ಅವನು ಚಳಿಗಾಲದ ಧರ್ಮವನ್ನು

ವರ್ಣಿಸಿರುವ, 'ವಿರಹವನಿತಾ ವಕ್ತ್ರೌಪಮ್ಯಂ ಬಿಭರ್ತಿ ನಿಶಾಪತಿ । ಗಲಿತ ವಿಭವಸ್ಯಾಜ್ಞೇವಾದ್ಯ ದ್ಯುತಿರ್ಮಸೃಣಾರವೇಃ ॥ ಅಭಿನವ ವಧೂ ರೋಷ ಸ್ವಾದುಃ ಕರೀಷ ತನೂನಪಾದ್ । ಅಸರಲ ಜನಾಶ್ಲೇಷ ಕ್ರೂರಸ್ತುಷಾರ ಸಮೀರಣಃ ॥' ಎಂಬ ಶ್ಲೋಕವು ನಿದರ್ಶನವಾಗಿದೆ.

'ಪ್ರಿಯನನ್ನು ಅಗಲಿದ ವಿರಹದಿಂದ ಕಳೆಗುಂದಿದ ವನಿತೆಯ ಮುಖದಂತೆ ಚಂದ್ರನು ಪೇಲವವಾಗಿದ್ದಾನೆ. ವೈಭವದ ಕಾಲವು ಕಳೆದುಹೋಗಿ ಬಡತನವು ಬಂದವನ ಆಜ್ಞೆಯು ನಿಷ್ಫಲವಾದಹಾಗೆ ಸೂರ್ಯನ ಕಾಂತಿಯು ಶಕ್ತಿಗುಂದಿದೆ. ಉರಿಯುತ್ತಿರುವ ಬೆಂಕಿಯು ನವವಧುವಿನ ರೋಷದಂತೆ ಹಿತಕರವಾಗಿದೆ. ಸರಳಸ್ವಭಾವದವರಲ್ಲದ ಜನರ ಆಲಿಂಗನದಂತೆ ಹಿಮಕಣದಿಂದ ಕೂಡಿದ ಮಾಗಿಯ ಗಾಳಿಯು ಕ್ರೂರವಾಗಿ ಹಿತವಿಲ್ಲದೆ ಇದೆ' ಎಂಬುದೇ ಅದರ ಅರ್ಥ. ಉಪಮಾನಗಳೂ, ಹಿಮಂತಋತುವಿನಲ್ಲಿ ನಡೆಯುವ ಕಾರ್ಯಗಳ ಈ ವರ್ಣನೆಯೂ, ಎಷ್ಟು ರಮಣೀಯವಾಗಿವೆ! ಒಬ್ಬಳು ಹೆಂಗಸು ತಾನು ಪ್ರಿಯನೆಂದು ಭಾವಿಸಿದ್ದವನು ತನ್ನಲ್ಲಿ ಅನುರಕ್ತನಾಗಿಲ್ಲವೆಂದು ಗೊತ್ತುಮಾಡಿಕೊಂಡು ತನ್ನ ಮನಸ್ಸಿನ ಭಾವವನ್ನು ಖಂಡಿತವಾದ ಮಾತುಗಳಿಂದ ಸೂಚಿಸಿ, 'ಕೃತಕ ಕೃತಕೈರ್ಮಾಯಾ ಸಖ್ಯೈಸ್ತ್ವಯಾಸ್ಮ್ಯತಿವಂಚಿತಾ । ನಿಭೃತ ನಿಭೃತೈಃ ಕಾರ್ಯಾಲಾಪೈರ್ಮಯಾಪ್ಯುಪಲಕ್ಷಿತಮ್॥ ಭವತು ವಿದಿತಂ ನೇಷ್ಯಾಹಂ ತೇ ವೃಥಾ ಪರಿಖಿದ್ಯಸೇ । ಹ್ಯಹಮಸಹನಾ ತ್ವಂ ನಿಃಸ್ನೇಹಃ ಸಮೇನ ಸಮಂ ಗತಂ ॥' ಎಂದು ಹೇಳುವಂತೆ ರಚಿಸಲ್ಪಟ್ಟಿರುವ ಶ್ಲೋಕವೂ ರಮಣೀಯವಾಗಿದೆ. 'ನಿನ್ನ ನಟನೆಗಳಿಂದಲೂ, ಸ್ನೇಹದ ವೇಷದಿಂದಲೂ ನಾನು ವಿಶೇಷವಾಗಿ ವಂಚಿತೆಯಾದೆನು. ನಾನೂ ನಂಬಿ ಸುಮ್ಮನಿದ್ದೆನು. ಇನ್ನು ಸ್ಪಷ್ಟವಾಗಿ ತಿಳಿದುಕೋ. ನೀನು ನನ್ನನ್ನು ಪ್ರಿಯಳೆಂದು ಭಾವಿಸಿಲ್ಲ. ನನ್ನ ಪ್ರೀತಿಯನ್ನು ಪಡೆಯಲು ನಿನ್ನ ಪ್ರಯತ್ನಗಳು ವ್ಯರ್ಥವೇ ಸರಿ. ನಾನು ಅಸಹನವುಳ್ಳವಳಾಗಿದ್ದೇನೆ. ನೀನು ಸ್ನೇಹವಿಲ್ಲದವನಾಗಿದ್ದೀಯೆ. ಇವೆರಡಕ್ಕೂ ಪರಸ್ಪರವಾಗಿ ಸರಿಹೋದಂತಾಯಿತು' ಎಂಬುದು ಇದರ ತಾತ್ಪರ್ಯವಾಗಿದೆ. ನೊಂದ ಮನಸ್ಸಿನ ಆಕೆಯ ನಿಷ್ಠುರ ವಚನವು ನೈಸರ್ಗಿಕವಾಗಿಯೂ ಸರಳವಾಗಿಯೂ ಇದೆ. ಆದರೂ ಹೃದಯವನ್ನೇ ಕಠಾರಿಯಿಂದ ಇರಿಯುವಂತಿದೆ. 'ಪ್ರತ್ಯಾಸನ್ನ ವಿವಾಹ ಮಂಗಲ

ವಿಧೌ ದೇವಾರ್ಚನವ್ಯಸ್ತಯಾ। ದೃಷ್ಟ್ವಾಗ್ರೇ ಪರಿಣೇತುರೇವ ಲಿಖಿತಾಂ ಗಂಗಾಧರಸ್ಯಾಕೃತಿಮ್॥ ಉನ್ಮಾದ ಸ್ಮಿತರೋಷ ಲಜ್ಜಿತ ರಸ್ಯೈ ಗೌರ್ಯಾ ಕಥಂಚಿಚ್ಚಿರಾದ್। ವೃದ್ಧಸ್ತ್ರೀ ವಚನಾತ್ ಪ್ರಿಯೇ ವಿನಿಹಿತಃ ಪುಷ್ಪಾಂಜಲಿಃ ಪಾತು ವಃ॥' ಎಂಬುದು ಭಾಸಕೃತವಾದ ಮತ್ತೊಂದು ಶ್ಲೋಕ. ತನ್ನ ವಿವಾಹವು ನಡೆಯುವುದಕ್ಕೆ ಸ್ವಲ್ಪ ಮುಂಚಿತವಾಗಿ ಗೌರೀದೇವಿಯು ದೇವಾರ್ಚನವ್ಯಸ್ತೆಯಾಗಿ ಕುಳಿತಿರುವಸಮಯದಲ್ಲಿ, ಮುಂದೆ ತಾನು ವರಿಸಬೇಕಾದ ಗಂಗಾಧರನ ಚಿತ್ರವೊಂದು ತನ್ನ ಸಮೀಪದಲ್ಲಿದ್ದುದನ್ನು ಅವಳು ನೋಡಿದಳಂತೆ. ಆಗ ಅವಳು ತನ್ನ ಮನಸ್ಸಿನಲ್ಲುಂಟಾದ ಪ್ರೇಮಾಧಿಕ್ಯಭರದಿಂದಲೂ, ಸಂತೋಷದಿಂದಲೂ (ಗಂಗೆಯನ್ನು ಕಂಡುದರಿಂದುಂಟಾದ) ರೋಷದಿಂದಲೂ, ಲಜ್ಜೆಯಿಂದಲೂ ಕೂಡಿ ಸ್ತಂಭೀಭೂತಳಾದಳಂತೆ. ಕೊನೆಗೆ ಬಹುಕಾಲ ಹಾಗಿದ್ದ ಬಳಿಕ ವೃದ್ಧಸ್ತ್ರೀಯ ಮಾತುಗಳಿಗೆ ಕಿವಿಗೊಟ್ಟು ಬಹುಪ್ರಯತ್ನದಿಂದ ತನ್ನ ಪ್ರಾಣಪ್ರಿಯನಿಗೆ ಪುಷ್ಪಾಂಜಲಿಯನ್ನು ಸಮರ್ಪಿಸಿದಳಂತೆ. ಕವಿಯು ಮನೋಹರವಾದ ಈ ದೃಶ್ಯವನ್ನು ನಮ್ಮ ಮುಂದಿಟ್ಟು, 'ಗೌರೀದೇವಿಯು ಸಮರ್ಪಿಸಿದ ಆ ಪುಷ್ಪಾಂಜಲಿಯು ನಿಮ್ಮನ್ನು ಕಾಪಾಡಲಿ!' ಎಂದು ಹಾರೈಸಿದ್ದಾನೆ. ಅಂತು, ಈ ಶ್ಲೋಕಗಳನ್ನು ನೋಡಿದರೆ ಕವಿಯ ಕಲ್ಪನಾಸಾಮರ್ಥ್ಯವೂ, ವರ್ಣನಾವೈಖರಿಯೂ, ಶ್ರೇಷ್ಠತರಗತಿಯವೆಂದು ತೋರುತ್ತದೆ. ಅವನ ವಾಕ್ಚಾತುರ್ಯವೂ, ಪರಿಶೀಲನಾಶಕ್ತಿಯೂ ಅಮೋಘವಾಗಿವೆ. ಭಾವಗೀತೆಗಳಂತಿರುವ ಈ ಶ್ಲೋಕಗಳಲ್ಲಿ ಭಾಸಕವಿಯು ತನ್ನ ಭಾವಗಳನ್ನು ಮನೋಹರವಾಗಿ ಚಿತ್ರಿಸಿದ್ದಾನೆ. ಭಾವಕ್ಕೆ ತಕ್ಕ ಶೈಲಿಯೂ ಇದೆ. ಅದರಿಂದ ರತ್ನಕ್ಕೆ ಕುಂದಣದ ಕಟ್ಟಡವೂ ಒದಗಿದಂತಾಗಿದೆ.

**ತಿರುವಾಂಕೂರಿನಲ್ಲಿ ಸಿಕ್ಕಿದ ಹದಿಮೂರು ರೂಪಕಗಳು:**— ಮೊದಲು ಹೇಳಿದಂತೆ ಭಾಸಕೃತವೆಂದು ನಾನಾ ಗ್ರಂಥಕರ್ತರುಗಳೂ ಉದಾಹರಿಸಿರುವ ಶ್ಲೋಕಗಳು ಹೊರತು, ೧೯೧೦ನೆಯ ಇಸವಿಯವರೆಗೂ ಭಾಸನು ರಚಿಸಿದ ಕೃತಿಗಳೆಂಬುದಾಗಿ ಯಾವ ಗ್ರಂಥಗಳೂ ಹೊರಬಿದ್ದಿರಲಿಲ್ಲ. ತಿರುವಾಂಕೂರು ಸರ್ಕಾರದ ಪುಸ್ತಕಭಂಡಾರ ಸಂಬಂಧವಾದ ದೊಡ್ಡ ಅಧಿಕಾರದಲ್ಲಿದ್ದ (ಈಚೆಗೆ ದಿವಂಗತರಾದ) ಮಹಾಮಹೋಪಾಧ್ಯಾಯ ಡಾಕ್ಟರ್ ಟಿ. ಗಣಪತಿಶಾಸ್ತ್ರಿಗಳವರಿಗೆ ೧೯೧೦ನೆಯ ಇಸವಿಯಲ್ಲಿ ಓಲೆಯಗರಿ ಪುಸ್ತಕದಲ್ಲಿ

ಬರೆದಿದ್ದ ಹತ್ತು ರೂಪಕಗಳು ದೊರೆತುವು. ಸ್ವಪ್ನವಾಸವದತ್ತ, ಪ್ರತಿಜ್ಞಾ ಯೌಗಂಧರಾಯಣ, ಪಂಚರಾತ್ರ, ಚಾರುದತ್ತ, ದೂತಘಟೋತ್ಕಚ, ಅವಿಮಾರಕ, ಬಾಲಚರಿತ, ಮಧ್ಯಮವ್ಯಾಯೋಗ, ಕರ್ಣಭಾರ, ಊರುಭಂಗ ಎಂಬಿವೇ ಆ ಹತ್ತು ರೂಪಕಗಳು. ಅವು ದೊರೆತ ತರುವಾಯ ಮತ್ತೆ ಮೂರು ಬೇರೆ ರೂಪಕಗಳೂ ಅವರಿಗೆ ಸಿಕ್ಕಿದುವು. ದೂತವಾಕ್ಯ, ಅಭಿಷೇಕ ನಾಟಕ, ಪ್ರತಿಮಾನಾಟಕ—ಎಂಬಿವೇ ಆ ಮೂರು ರೂಪಕಗಳು. ತಿರುವಾಂಕೂರು ಮಹಾರಾಜರ ಅರಮನೆಯ ಪುಸ್ತಕ ಭಂಡಾರದಲ್ಲಿ ಕೂಡ ಅಭಿಷೇಕ ನಾಟಕದ ಮತ್ತು ಪ್ರತಿಮಾನಾಟಕದ ಒಂದೊಂದು ಹಸ್ತಲಿಖಿತ ಪ್ರತಿಯು ಇದ್ದುದು ಆ ಬಳಿಕ ಕಂಡುಬಂದಿತು. ಶೈಲಿಯಲ್ಲೂ, ಕಲ್ಪನಾ ಸಾಮರ್ಥ್ಯದಲ್ಲೂ, ಗಾಂಭೀರ್ಯದಲ್ಲೂ ಈ ರೂಪಕಗಳು ಪ್ರತಿಭಾ ಶಾಲಿಗಳಾದ ಋಷಿಗಳು ರಚಿಸಿರತಕ್ಕ ಉತ್ತಮಗ್ರಂಥಗಳನ್ನು ಹೋಲುವಂತೆ ಗಣಪತಿಶಾಸ್ತ್ರಿಯವರಿಗೆ ತೋರಿತು. (ಅವರು ಈ ಅಂಶವನ್ನು ಪ್ರತಿಮಾ ನಾಟಕದ ಪೀಠಿಕೆಯಲ್ಲಿ ಹೇಳಿದ್ದಾರೆ) ಅವರು ಕೆಲವು ಕಾರಣಗಳಿಗಾಗಿ ಅವು ಭಾಸಕೃತವೆಂದು ನಿರ್ಧರಿಸಿ, ಅವುಗಳನ್ನು ಅಚ್ಚುಹಾಕಿಸಿ, ಗೀರ್ವಾಣ ಭಾಷಾಭಿಮಾನಿಗಳೆಲ್ಲರ ಕೃತಜ್ಞತೆಗೂ ಪಾತ್ರರಾದರು.

ಈ ಹದಿಮೂರು ರೂಪಕಗಳಲ್ಲಿ ಪ್ರತಿಜ್ಞಾ ಯೌಗಂಧರಾಯಣದ ಮತ್ತು ಸ್ವಪ್ನವಾಸವದತ್ತದ ಕಥಾವಸ್ತುವು ಐತಿಹಾಸಿಕವಾದುದು. ಚಾರುದತ್ತದ ಮತ್ತು ಅವಿಮಾರಕದ ಕಥಾವಸ್ತುವು ಕಲ್ಪಿತವಾದುದು.(ಈ ನಾಲ್ಕು ರೂಪಕಗಳಿಗೂ ಕವಿಯು ಕಥಾವಸ್ತುವನ್ನು ಬಹುಶಃ ಗುಣಾಢ್ಯನ ಬೃಹತ್ಕಥೆಯ ಆಧಾರದಮೇಲೆ ಅಳವಡಿಸಿಕೊಂಡಿರಬಹುದೆಂದು ಕೆಲವರ ಅಭಿಪ್ರಾಯ). ಮಧ್ಯಮವ್ಯಾಯೋಗ, ಪಂಚರಾತ್ರ, ದೂತವಾಕ್ಯ, ದೂತಘಟೋತ್ಕಚ, ಕರ್ಣಭಾರ, ಮತ್ತು ಊರುಭಂಗ—ಇವು ಆರು ರೂಪಕಗಳ ಕಥಾವಸ್ತುವಿಗೂ ಮಹಾಭಾರತವು ಆಧಾರವಾಗಿದೆ. ಕವಿಯು ಅಭಿಷೇಕ ನಾಟಕವನ್ನೂ, ಪ್ರತಿಮಾ ನಾಟಕವನ್ನೂ, ರಾಮಾಯಣದ ಆಧಾರದ ಮೇಲೆ ಬರೆದಿದ್ದಾನೆ. ಬಾಲಚರಿತವು ಶ್ರೀಕೃಷ್ಣನ ಬಾಲಲೀಲಾವಿನೋದ ವಿಷಯವಾಗಿ ಜನಜನಿತವಾಗಿ ಹರಡಿದ್ದ ವಿಚಾರಗಳನ್ನು ಅವಲಂಬಿಸಿ ಬರೆದ ರೂಪಕವಾಗಿದೆ. ಕಥಾವಸ್ತುವನ್ನು ಕವಿಯು ಇತರ ಗ್ರಂಥಗಳ ಆಧಾರ

ದಿಂದ ಅಳವಡಿಸಿಕೊಂಡಿದ್ದರೂ, ಈ ಹದಿಮೂರು ರೂಪಕಗಳಲ್ಲಿ ಪ್ರತಿಯೊಂದರಲ್ಲೂ ಅವನ ಪ್ರತಿಭೆಯೂ, ಕಲ್ಪನಾಚಾತುರ್ಯವೂ, ರೂಪಕ ಲೇಖನ ಸಾಮರ್ಥ್ಯವೂ, ಬಹು ಚೆನ್ನಾಗಿ ತೋರಿಬರುತ್ತವೆ.

ಮೇಲೆ ಹೇಳಿದ ಹದಿಮೂರು ರೂಪಕಗಳೂ ಪ್ರಕಟವಾದ ತರುಣದಲ್ಲಿ, ಭಾರತೀಯ ಸಾಹಿತಿಗಳೂ, ವಿದೇಶೀಯ ಸಾಹಿತಿಗಳೂ, ಬಹುಮಂದಿ ಅವು ಭಾಸಕೃತವೆಂಬುದನ್ನು ಅನುಮೋದಿಸಿ, ಭಾಸಕೃತಿ ಭಂಡಾರವು ದೊರೆಯಿತೆಂದು ಆಶ್ಚರ್ಯ ಸಂತೋಷಗಳನ್ನು ವ್ಯಕ್ತಪಡಿಸಿದರು. ಆದರೆ ಡಾಕ್ಟರ್ ಬಾರ್ನೆಟ್‌ರವರೂ, ಶ್ರೀಮಾನ್ ಭಟ್ಟನಾಥಸ್ವಾಮಿಯವರೂ, ಅವು ಭಾಸ ವಿರಚಿತವೆಂಬುದನ್ನು ಒಪ್ಪಲಿಲ್ಲ. ಸ್ವಲ್ಪಕಾಲದಲ್ಲೇ ಭಿನ್ನಾಭಿಪ್ರಾಯವು ಬಲ ಪಡುವುದಕ್ಕೆ ಪ್ರಾರಂಭವಾಯಿತು. ಅವು ಭಾಸಕೃತವೆಂದು ಮೊದಲು ಮೊದಲು ಒಪ್ಪಿಕೊಂಡಿದ್ದ ಶ್ರೀಮಾನ್ ಹೀರಾನಂದಶಾಸ್ತ್ರಿಗಳು * ಮುಂತಾದವರು ತದ್ವಿರುದ್ಧವಾಗಿ ಅಭಿಪ್ರಾಯಪಡುವುದಕ್ಕೆ ಪ್ರಾರಂಭಿಸಿದರು. ಪ್ರಸಕ್ತ ರೂಪಕಗಳು ಭಾಸಕೃತವಲ್ಲವೆಂದು ಹೇಳುವವರ ಸಂಖ್ಯೆಯೂ ಹೆಚ್ಚಿತು. ಆಗಿನಿಂದಲೂ ಈ ವಿಚಾರದಲ್ಲಿ ವಾದ ಪ್ರತಿವಾದಗಳು ನಡೆಯುತ್ತಿವೆ. ಡಾಕ್ಟರ್ ಗಣಪತಿ ಶಾಸ್ತ್ರಿಗಳು ನಿಷ್ಕರ್ಷೆಮಾಡಿದಂತೆ, ಈ ರೂಪಕಗಳು ಭಾಸ ಕೃತವೆಂಬ ಅನುಮಾನಕ್ಕೆ ಹೆಚ್ಚು ಆಧಾರವುಂಟೆಂದು ಅಭಿಪ್ರಾಯಪಟ್ಟಿರುವವರ ಗುಂಪಿಗೆ ಡಾಕ್ಟರ್ ಎಂ. ವಿಂಟರ್ನಿಟ್ಸ್ ಅವರು, ಡಾಕ್ಟರ್ ಬೆರ್ರಿಡೇಲ್ ಕೀತ್ ಅವರು, ಪ್ರೊಫೆಸರ್ ಕಾಳೆಯವರು, ಪ್ರೊಫೆಸರ್ ಭಿಡೇಯವರು, ಡಾಕ್ಟರ್ ಅಭಯಂಕಾರ್ ಅವರು, ಡಾಕ್ಟರ್ ಸುಖ್ತಂಕಾರ್ ಅವರು, ಡಾಕ್ಟರ್ ಬ್ಯಾನರ್ಜಿಯವರು, ಮುಂತಾದ ವಿದ್ವಾಂಸರು ಸೇರಿದ್ದಾರೆ. ಪ್ರೊಫೆಸರ್ ಸಿಲ್ವೇನ್ ಲೆವಿ ಅವರು, ಡಾಕ್ಟರ್ ಬಾರ್ನೆಟ್‌ರವರು, ಶ್ರೀಮಾನ್‌ರವರುಗಳಾದ ಎ. ಕೆ. ಪಿಶರೋತಿಯವರು, ಕೆ. ಆರ್. ಪಿಶರೋತಿಯವರು, ಕುಪ್ಪಸ್ವಾಮಿ

* ಶಕ್ತಿಭದ್ರನ ಆಶ್ಚರ್ಯ ಚೂಡಾಮಣಿಯೆಂಬ ರೂಪಕವನ್ನೋದಿದ ಮೇಲೆ, ಅದಕ್ಕೂ, ಈ ರೂಪಕಗಳಿಗೂ, ಇರುವ ಹೋಲಿಕೆಯನ್ನು ಕಂಡು ವಿಸ್ಮಿತರಾಗಿ, ತಮ್ಮ ಮೊದಲಿನ ಅಭಿಪ್ರಾಯವನ್ನು ಮಾರ್ಪಡಿಸಬೇಕಾಯಿತೆಂದು ಶ್ರೀಮಾನ್ ಹೀರಾನಂದ ಶಾಸ್ತ್ರಿಯವರು ಹೇಳಿದ್ದಾರೆ. ಶಕ್ತಿಭದ್ರನು ಶ್ರೀಮಚ್ಛಂಕರಾಚಾರ್ಯರ ಸಮಕಾಲೀನನು.

ಶಾಸ್ತ್ರಿಗಳವರು, ಮುಂತಾದ ವಿದ್ವಾಂಸರು ಅವು ಭಾಸಕೃತವಲ್ಲವೆಂದು ಅಭಿಪ್ರಾಯ ಪಟ್ಟಿದ್ದಾರೆ. ದಿವಂಗತರಾದ ವ್ಯಾಕ್ಡೊನೆಲ್ ಅವರ ಅಭಿಪ್ರಾಯವೂ ಅದೇ ಬಗೆಯದು.

**ರೂಪಕ ಕರ್ತೃತ್ವ ವಿಚಾರ**:-ಭಾಸಕೃತವೆಂದು ಡಾಕ್ಟರ್ ಗಣಪತಿ ಶಾಸ್ತ್ರಿಗಳವರು ನಿರ್ಧರಿಸಿರುವ ಹದಿಮೂರು ರೂಪಕಗಳಲ್ಲಿ ಯಾವುದರಲ್ಲೂ ಗ್ರಂಥಕರ್ತನು ತನ್ನ ಹೆಸರನ್ನು ಹೇಳಿಕೊಂಡಿಲ್ಲ. ಈ ರೂಪಕಗಳ ಕರ್ತೃವು ಯಾರೆಂಬ ವಿಚಾರದಲ್ಲಿ ಪುಂಖಾನು ಪುಂಖವಾಗಿ ವಾದ ಪ್ರತಿವಾದಗಳು ನಡೆದೂ ನಡೆಯುತ್ತಲೂ ಇರುವುದಕ್ಕೆ ಅದೇ ಕಾರಣ. ಇತರ ಕವಿಗಳು ರೂಪಕಾರಂಭದಲ್ಲಿ ತಮ್ಮ ಹೆಸರನ್ನು ಹೇಳಿಕೊಂಡಿರುವಂತೆ ಈತನೂ ತಾನು ಯಾರೆಂಬುದನ್ನು ಸ್ಪಷ್ಟವಾಗಿ ತಿಳಿಸಿದ್ದ ಪಕ್ಷಕ್ಕೆ ಈಗಿನ ಸಂದಿಗ್ಧಸ್ಥಿತಿಗೇ ಅವಕಾಶವಿರುತ್ತಿರಲಿಲ್ಲ. ಈ ಹದಿಮೂರು ರೂಪಕಗಳೂ ಭಾಸಕೃತವೆಂದು ಭಾವಿಸಲು ಡಾಕ್ಟರ್ ಗಣಪತಿ ಶಾಸ್ತ್ರಿಗಳವರು ಸೂಚಿಸಿರುವ ಕಾರಣಗಳನ್ನು ಒಪ್ಪುವವರು ಕೂಡ, ಅವು ಭಾಸಕೃತವೆಂದೇ ಘಂಟಾಘೋಷವಾಗಿ ಸಿದ್ಧಾಂತ ಮಾಡುವುದಕ್ಕೆ ಸುತರಾಂ ಅವಕಾಶವಿಲ್ಲ. ಇನ್ನು ಕವಿಯ ಕಾಲ ವಿಚಾರದಲ್ಲಂತು, ರೂಪಕಗಳು ಭಾಸಕೃತವೆಂದು ತರ್ಕಿಸುವವರಲ್ಲೇ ಭಿನ್ನಾಭಿಪ್ರಾಯವಿದೆ. ಆದಕಾರಣ, ಈ ರೂಪಕಗಳ ಕರ್ತೃತ್ವ ವಿಚಾರದಲ್ಲೂ, ಕವಿಯ ಕಾಲ ದೇಶಗಳ ವಿಚಾರದಲ್ಲೂ, ಡಾಕ್ಟರ್ ಗಣಪತಿಶಾಸ್ತ್ರಿಗಳವರ ವಾದಸರಣಿಗೆ ಅನುಕೂಲ ಪಕ್ಷದವರ ಅಭಿಪ್ರಾಯಗಳನ್ನೂ, ಪ್ರತಿಕೂಲ ಪಕ್ಷದವರ ಅಭಿಪ್ರಾಯಗಳನ್ನೂ ಕ್ರೋಢೀಕರಿಸಿ ಒಂದು ನೆಲೆಗೆ ಬರುವುದೆಂದರೆ, ಅದಕ್ಕಾಗಿಯೇ ಒಂದು ದೊಡ್ಡ ಗ್ರಂಥವನ್ನು ಬರೆಯಬೇಕಾಗುವಷ್ಟು ಮಟ್ಟಿಗೆ ವಿಷಯ ಬಾಹುಳ್ಯವುಂಟು. ನಾನಾವಿಚಾರಗಳನ್ನೂ ಆ ಬಗೆಯಲ್ಲಿ ವಿಶದವಾಗಿ ಚರ್ಚಿಸಲು ಈ ಗ್ರಂಥದ ಆಶಯವು ಅವಕಾಶ ಕೊಡುವುದಿಲ್ಲವಾದ ಕಾರಣ, ಕೇವಲ ದಿಕ್ಪ್ರದರ್ಶನಾರ್ಥವಾಗಿ ಕೆಲವು ಮುಖ್ಯಾಂಶಗಳನ್ನು ಮಾತ್ರವೇ ಇಲ್ಲಿ ಸೂಚಿಸಿ ಅಷ್ಟರಿಂದಲೇ ತೃಪ್ತಿಪಡಬೇಕಾಗಿದೆ. ಈ ಸಂಬಂಧದಲ್ಲಿ ಯಾರೇ ವಿಚಾರಮಾಡಿದರೂ ನಾಲ್ಕು ಮೂಲ ವಿಷಯಗಳನ್ನು ಚರ್ಚಿಸಬೇಕಾಗುತ್ತದೆ. ಅವುಗಳು ಯಾವುವೆಂದರೆ:-ಒಬ್ಬ ಕವಿಯೇ ಪ್ರಸಕ್ತ ರೂಪಕಗಳನ್ನೆಲ್ಲ ಬರೆದಿದ್ದಾನೆಯೇ-ಎಂಬ ವಿಚಾರ.

ಹಾಗಿದ್ದ ಪಕ್ಷದಲ್ಲಿ ಆತನು ಭಾಸಮಹಾಕವಿಯಿರಬಹುದೇ-ಎಂಬ ವಿಚಾರ; ಕವಿಯ ಕಾಲವು ಯಾವುದು ಮತ್ತು ದೇಶವು ಯಾವುದು ಎಂಬೆರಡು ವಿಚಾರಗಳು. ಇವು ನಾಲ್ಕನ್ನೂ ಮುಂದೆ ಅತಿ ಸಂಕ್ಷೇಪವಾಗಿ ಚರ್ಚಿಸಲಾಗುವುದು.

**೧. ಒಬ್ಬ ಕವಿಯೇ ಪ್ರಸಕ್ತರೂಪಕಗಳನ್ನೆಲ್ಲ ಬರೆದಿದ್ದಾನೆಯೇ ಎಂಬ ವಿಚಾರ:**—ಪ್ರಸಕ್ತ ರೂಪಕಗಳಿಗೆ ಪರಸ್ಪರವಾಗಿರತಕ್ಕ ಕೆಲವು ಸಾಮ್ಯಗಳನ್ನು ನೋಡಿದರೆ, ಅವುಗಳನ್ನು ರಚಿಸಿದ ಕವಿಯು ಒಬ್ಬನೇ ಹೊರತು ಹಲವರಲ್ಲವೆಂದು ಸ್ಪಷ್ಟವಾಗುತ್ತದೆ. ಈ ರೂಪಕಗಳು 'ನಾಂದ್ಯಂತೇ ತತಃ ಪ್ರವಿಶತಿ ಸೂತ್ರಧಾರಃ' ಎಂಬ ರಂಗಸಂಬಂಧವಾದ ಸೂಚನೆಯೊಡನೆ ಪ್ರಾರಂಭವಾಗುತ್ತವೆ .ಮಂಗಳಶ್ಲೋಕವು ಆ ತರುವಾಯ ಬರುತ್ತದೆ. ಕಾಳಿದಾಸ, ಭವಭೂತಿ, ಶ್ರೀಹರ್ಷ, ಭಟ್ಟನಾರಾಯಣ ಮುಂತಾದ ಕವಿಗಳು ಬರೆದಿರುವ ಸಮಸ್ತ ರೂಪಕಗಳಲ್ಲಿಯೂ ಮಂಗಳ ಶ್ಲೋಕದ ತರುವಾಯ ಮಾತ್ರವೇ ಸೂತ್ರಧಾರನ ಪ್ರವೇಶದ ಸೂಚನೆಯಿರುತ್ತದೆ. ಅಲ್ಲದೆ ಪ್ರಸಕ್ತ ರೂಪಕಗಳಲ್ಲಿ ಇತರ ರೂಪಕಗಳಲ್ಲಿರುವ 'ಪ್ರಸ್ತಾವನಾ' ಎಂಬುದಕ್ಕೆ ಬದಲಾಗಿ 'ಸ್ಥಾಪನಾ' ಎಂಬ ಪದಪ್ರಯೋಗವಿದೆ. ಆದರೆ ಇವೆರಡೂ ಪ್ರಸಕ್ತ ರೂಪಕಗಳಲ್ಲಿ ಮಾತ್ರವೇ ಕಂಡುಬರುವ ಲಕ್ಷಣಗಳೆಂದು ನಾವು ಹೇಳುವಂತಿಲ್ಲ. ಏಕೆಂದರೆ ಕ್ರಿಸ್ತಶಕ ಏಳನೆಯ ಶತಮಾನದಲ್ಲಿದ್ದ ಮಹೇಂದ್ರವಿಕ್ರಮವರ್ಮನೆಂಬಾತನು ರಚಿಸಿರುವ ಮತ್ತವಿಲಾಸಪ್ರಹಸನವೂ ಶಕ್ತಿಭದ್ರನ ಆಶ್ಚರ್ಯಚೂಡಾಮಣಿಯೂ, ನೀಲಕಂಠಕವಿಯ ಕಲ್ಯಾಣ ಸೌಗಂಧಿಕವೂ, ಕುಲಶೇಖರವರ್ಮನ ಸುಭದ್ರಾಧನಂಜಯ ಮತ್ತು ತಪತೀ ಸಂವರಣವೆಂಬೆರಡು ರೂಪಕಗಳೂ, ಈಶ್ವರದತ್ತನ ಧೂರ್ತವಿಟಸಂವಾದವೆಂಬ ರೂಪಕವೂ, ಶ್ಯಾಮಲಕನ ಪಾದತಾಡಿತಕವೆಂಬ ರೂಪಕವೂ, ಇದೇ ಲಕ್ಷಣಗಳಿಂದ ಕೂಡಿರುವುವು. ಅಲ್ಲದೆ, ಬೋಧಾಯನನ ಭಗವದಜ್ಜುಕ, ವರರುಚಿಯ ಉಭಯಾಭಿಸಾರಿಕಾ, ಇವೇ ಮೊದಲಾದ ರೂಪಕಗಳಲ್ಲಿಯೂ ಇದೇ ಎರಡು ಲಕ್ಷಣಗಳುಂಟು. ದಿಙ್ನಾಗನು ರಚಿಸಿರುವ ಕುಂದಮಾಲಾ ಎಂಬ ರೂಪಕದಲ್ಲಯೂ 'ಪ್ರಸ್ತಾವನಾ' ಎಂಬುದಕ್ಕೆ ಬದಲಾಗಿ 'ಸ್ಥಾಪನಾ' ಎಂದಿದೆ. ಆದಕಾರಣ, ಡಾಕ್ಟರ್ ಗಣಪತಿಶಾಸ್ತ್ರಿಗಳ ಸಿದ್ಧಾಂತವನ್ನು ಒಪ್ಪದಿರುವವರು ಈ ಎರಡು ಲಕ್ಷಣಗಳೂ ಪ್ರಸಕ್ತ ರೂಪಕಗಳಂತೆಯೇ

ಅವುಗಳಲ್ಲಿ ಕಂಡುಬರುವುದಕ್ಕೆ ಬಹಳ ತೂಕವನ್ನು ಕೊಟ್ಟು, ಪ್ರಸಕ್ತ ರೂಪ ಕಗಳು ಭಾಸಕೃತವಲ್ಲವೆಂದೂ, ಯಾವನೋ ಈಚಿನ ಕವಿಯು ಅವುಗಳನ್ನು ರಚಿಸಿರಬೇಕೆಂದೂ ವಾದಿಸುತ್ತಾರೆ. ಈ ವಾದಸರಣಿಯಲ್ಲಿ ಹುರುಳಿಲ್ಲವೆಂದು ಹೇಳಬೇಕಾಗುವುದು. ಏಕೆಂದರೆ, ಮಹೇಂದ್ರವಿಕ್ರಮವರ್ಮ, ಶಕ್ತಿಭದ್ರ, ಮುಂತಾದ ಕವಿಗಳೆಲ್ಲರೂ ಪ್ರಸಕ್ತ ರೂಪಕಗಳನ್ನು ಬರೆದಿರುವ ಕವಿಯನ್ನೇ ಅನುಕರಣಮಾಡಿರಬೇಕು. ಅಲ್ಲದೆ, ಪ್ರಸಕ್ತ ರೂಪಕಗಳೇ ಒಂದು ಗುಂಪಿನ ವೆಂಬುದಕ್ಕೆ ಮತ್ತೊಂದು ಪ್ರಬಲಕಾರಣವಿದ್ದೇ ಇದೆ. ಮೇಲೆ ಹೇಳಿದ ಎರಡು ಲಕ್ಷಣಗಳೂ ಅವುಗಳಿಗೂ, ಹಿಂದೆ ಸೂಚಿಸಿದ ಇತರ ರೂಪಕ ಗಳಿಗೂ ಸಮಾನವಾಗಿದ್ದರೂ, ಆ ಇತರ ರೂಪಕಗಳಲ್ಲಿ ಆ ಆ ಕವಿಗಳು ತಮ್ಮ ಹೆಸರನ್ನು ಹೇಳಿಕೊಂಡಿರುವಂತೆ ಪ್ರಸಕ್ತ ರೂಪಕಗಳಲ್ಲಿ ಕವಿಯು ತನ್ನ ಹೆಸರನ್ನು ಹೇಳಿಕೊಂಡಿಲ್ಲ.

ಕೆಲವರಂತು, ಶಕ್ತಿಭದ್ರನ ಆಶ್ಚರ್ಯ ಚೂಡಾಮಣಿಯೆಂಬ ರೂಪ ಕಕ್ಕೂ ಈ ಹದಿಮೂರು ರೂಪಕಗಳಿಗೂ ಹೋಲಿಕೆಯಿರುವುದರಿಂದ, ಶಕ್ತಿ ಭದ್ರನೇ ಅವುಗಳನ್ನು ರಚಿಸಿರಬೇಕೆಂದೂ ಶಂಕಿಸುತ್ತಾರೆ. ಈ ಹದಿಮೂರು ರೂಪಕಗಳಲ್ಲೊಂದಾದ ಅಭಿಷೇಕನಾಟಕದಲ್ಲಿರುವ 'ಯಮ ವರುಣ ಕುಬೇರ ವಾಸವಾದ್ಯೈ । ಸ್ತ್ರಿದಶಗಣೈರಭಿಸಂಭೃತೋ ವಿಭಾತಿ ॥ ದಶರಥವಚ ನಾತ್ ಕೃತಾಭಿಷೇಕ । ಸ್ತ್ರಿದಶಪತಿತ್ವಮವಾಪ್ಯ ವೃತ್ರಹೇವ ॥' ಎಂಬ ಶ್ಲೋಕದ ಮೊದಲನೆಯ ಪಾದವೂ, ಆಶ್ಚರ್ಯಚೂಡಾಮಣಿಯ 'ಯಮ ವರುಣ ಕುಬೇರ ವಾಸವಾದೀ। ನಮೃತಭುಜೋ ಜಿತವಾನ್ಭವಾನಯತ್ನಃ॥ ಕಥಮಿಹ ಶಿಥಿಲೀಕೃತಃ ಸಮಾಧಿಃ । ಕುಸುಮಮಯೈಃ ಕುಸುಮಾಯುಧಸ್ಯ ಬಾಣೈಃ ॥ ಎಂಬ ಶ್ಲೋಕದ ಮೊದಲನೆಯ ಪಾದವೂ ಬಹುಮಟ್ಟಿಗೆ ಪರ ಸ್ಪರವಾಗಿ ಹೋಲಿಕೆಯುಳ್ಳವಾಗಿವೆ. ಭಾಸಕೃತವೆಂದು ಹೇಳುವ ರೂಪಕಗ ಳಲ್ಲಿ ಎಂಟು ರೂಪಕಗಳಲ್ಲೂ ಕಂಡುಬರುವ 'ಅಯೇ! ಕಿನ್ನು ಖಲು ಮಯಿ ವಿಜ್ಞಾಪನ ವ್ಯಗ್ರೇ ಶಬ್ದ ಇವ ಶ್ರೂಯತೇ' ಎಂಬ ಪದಗಳು ಆಶ್ಚರ್ಯ ಚೂಡಾಮಣಿಯಲ್ಲೂ ಕಂಡುಬರುತ್ತವೆ. ಇತರ ಕೆಲವು ಪದಪ್ರಯೋಗ ಗಳೂ, ವಾಕ್ಯಗಳೂ, ಅಭಿಷೇಕನಾಟಕದಲ್ಲಿರುವಂತೆಯೇ ಆಶ್ಚರ್ಯಚೂಡಾ ಮಣಿಯಲ್ಲಿ ಸಹ, ಇವೆ. ಮಧ್ಯಮ ವ್ಯಾಯೋಗದಲ್ಲಿರುವ ಕೆಲವು ವಾಕ್ಯ

ಗಳೂ ಆಶ್ಚರ್ಯಚೂಡಾಮಣಿಯಲ್ಲಿವೆ. ಆಶ್ಚರ್ಯ ಚೂಡಾಮಣಿಯ ಕೆಲವು ಸನ್ನಿವೇಶಗಳು ಅಭಿಷೇಕನಾಟಕ, ಪ್ರತಿಮಾನಾಟಕ, ಊರುಭಂಗ, ಇವುಗಳಲ್ಲಿ ಬರುವ ಸನ್ನಿವೇಶಗಳನ್ನು ಸ್ವಲ್ಪಮಟ್ಟಿಗೆ ಹೋಲತಕ್ಕವಾಗಿವೆ. ಆದರೂ ಈ ಕಾರಣಗಳಿಗಾಗಿಯೇ ಶಕ್ತಿಭದ್ರನೇ ಈ ಹದಿಮೂರು ನಾಟಕಗಳನ್ನೂ ಬರೆದನೆಂದಾಗಲಿ, ಅಥವಾ ಡಾಕ್ಟರ್ ಬಾರ್ನೆಟ್‌ರವರೂ, ಶ್ರೀವರ್ಮಾ ಪಿಶರೋತಿಗಳವರೂ ಹೇಳುವಂತೆ ಶಕ್ತಿಭದ್ರನ ಆಶ್ಚರ್ಯಚೂಡಾಮಣಿಯನ್ನು ಅನುಕರಿಸಿ ಕ್ರಿಸ್ತಶಕ ೭೦೦ಕ್ಕೂ ೧೦೦೦ಕ್ಕೂ ಮಧ್ಯದಲ್ಲಿ ಯಾವುದೋ ಕಾಲದಲ್ಲಿದ್ದ ಯಾವನೋ ಕೇರಳ ದೇಶೀಯನು ಅವುಗಳನ್ನು ಬರೆದಿರಬೇಕೆಂದಾಗಲಿ ಹೇಳುವುದರಲ್ಲಿ ಔಚಿತ್ಯವಿಲ್ಲ. ಏಕೆಂದರೆ, ಇದು ನಿಜವಾಗಿದ್ದ ಪಕ್ಷಕ್ಕೆ, ಆಶ್ಚರ್ಯಚೂಡಾಮಣಿಯಲ್ಲಿ ತನ್ನ ಹೆಸರನ್ನು ಸ್ಪಷ್ಟವಾಗಿ ಹೇಳಿ ಆತ್ಮಪ್ರಶಂಸೆ ಮಾಡಿಕೊಂಡಿರುವ ಶಕ್ತಿಭದ್ರನು ಈ ಹದಿಮೂರು ನಾಟಕಗಳಲ್ಲೂ ಅದೇ ರೀತಿ ತನ್ನ ಹೆಸರನ್ನು ಹೇಳಿಕೊಳ್ಳದೆ ಸುಮ್ಮನಿರುತ್ತಿರಲಿಲ್ಲ. ಅವನ ಮಾದರಿಯನ್ನನುಸರಿಸಿ ಮತ್ತಾರಾದರೂ ಈ ರೂಪಕಗಳನ್ನು ರಚಿಸಿದ್ದರೆ, ಅವರು ಆತ್ಮಪ್ರಶಂಸೆಯಲ್ಲಿ ಒಂದು ವೇಳೆ ಶಕ್ತಿಭದ್ರನನ್ನು ಮೀರಿಸದೆ ಹೋಗಿದ್ದರೂ ಕನಿಷ್ಠ ಪಕ್ಷ ಅವನಷ್ಟುಮಟ್ಟಿಗಾದರೂ ಸ್ವವಿಷಯವನ್ನು ಹೇಳದೆ ಬಿಡುತ್ತಿರಲಿಲ್ಲ. ಆದಕಾರಣ, ಭಾಸಕೃತವೆಂಬ ರೂಪಕಗಳಂತೆಯೇ ಆಶ್ಚರ್ಯಚೂಡಾಮಣಿಯೇ ಮುಂತಾದುವೂ ಸೂತ್ರಧಾರನಿಂದಲೇ ಆರಂಭವಾಗಿ ಪ್ರಸ್ತಾವನೆಯೆಂಬುದಕ್ಕೆ ಬದಲಾಗಿ ಸ್ಥಾಪನೆಯೆಂದೇ ಅವುಗಳಲ್ಲಿರುವ ಸಂವಿಧಾನವನ್ನು ನೋಡಿದರೆ, ಆ ಇತರ ಕವಿಗಳು ಭಾಸಕೃತವೆಂಬ ರೂಪಕಗಳ ಕರ್ತೃವನ್ನು ಅನುಸರಿಸಿರಬೇಕೆಂದು ಅಥವಾ ಅವನೂ, ಅವರುಗಳೂ, ಉಭಯತ್ರರೂ ಮತ್ತಾವುದೋ ಪೂರ್ವಸಂಪ್ರದಾಯವನ್ನನುಸರಿಸಿರಬೇಕೆಂದು ತೋರುವುದು. ಶಕ್ತಿಭದ್ರನ ಕೃತಿಗೂ, ಅಭಿಷೇಕನಾಟಕ ಮಧ್ಯಮವ್ಯಾಯೋಗಗಳಿಗೂ ಇರತಕ್ಕ ಪದಗಳ ಮತ್ತು ವಾಕ್ಯಗಳ ಪರಸ್ಪರ ಸಾದೃಶ್ಯವನ್ನು ನೋಡಿದರೂ, ಶಕ್ತಿಭದ್ರನೇ ಅವುಗಳ ಕರ್ತೃವನ್ನು ಅನುಕರಣ ಮಾಡಿರಬೇಕೆಂದು ತೋರುವುದು. ಕವಿಗಳು ಹೀಗೆ ಮಾಡುವುದರಲ್ಲಿ ಆಶ್ಚರ್ಯವೂ ಇಲ್ಲ. ಏಕೆಂದರೆ, ಅಶ್ವಘೋಷನ ಬುದ್ಧಚರಿತದಲ್ಲಿ ವರ್ಣಿತವಾಗಿರುವ ಕೆಲವು ಸನ್ನಿವೇಶಗಳೇ ಅಲ್ಪಸ್ವಲ್ಪ ಮಾರ್ಪಾಡುಗಳೊ

ಡನೆ ರಘುವಂಶದಲ್ಲಿ ವರ್ಣಿತವಾಗಿವೆ. ವಾಲ್ಮೀಕಿರಾಮಾಯಣದ ಅನೇಕ ಪದಗಳೂ ಉಪಮಾನಗಳೂ, ಅತ್ಯಲ್ಪವಾದ ಮಾರ್ಪಾಡುಗಳೊಡನೆ, ಕಾಳಿದಾಸ ಮಹಾಕವಿಯು ರಚಿಸಿರುವ ಮೇಘಸಂದೇಶ ಕಾವ್ಯಕ್ಕಿಳಿದಿವೆ. ಕಾಳಿದಾಸ ಮಹಾಕವಿಯ ಕಾವ್ಯಗಳಲ್ಲಿಯ ಕೆಲವು ಪದಪ್ರಯೋಗಗಳೂ, ಸನ್ನಿವೇಶಗಳೂ ಭವಭೂತಿ ಮಹಾಕವಿಯ ರೂಪಕಗಳಲ್ಲ ಸೇರಿವೆ. ಭಾಸಕೃತವೆನ್ನುವ ಪ್ರಸಕ್ತರೂಪಕಗಳಲ್ಲಿಯ ಕೆಲವು ಸನ್ನಿವೇಶಗಳೂ ಕಾಳಿದಾಸ ಮಹಾಕವಿಯ ರೂಪಕಗಳಲ್ಲಿ ಕಂಡುಬರುತ್ತವೆ. ಚಾರುದತ್ತದ ಅನೇಕ ಪದಗಳೂ ಶ್ಲೋಕಗಳೂ ಮೃಚ್ಛಕಟಿಕದಲ್ಲಿ ಸೇರಿವೆ. ಹೀಗಿರುವಲ್ಲಿ ಪ್ರಸಕ್ತರೂಪಕಗಳಿಗೂ, ಶಕ್ತಿಭದ್ರನ ಆಶ್ಚರ್ಯಚೂಡಾಮಣಿಗೂ ಇರತಕ್ಕ ಪದಪ್ರಯೋಗದ ಮತ್ತು ಸನ್ನಿವೇಶಗಳ ಪರಸ್ಪರ ಸಾದೃಶ್ಯಗಳನ್ನೇ ಪ್ರಧಾನವಾಗಿಭಾವಿಸಿ, ಅವುಗಳು ಶಕ್ತಿಭದ್ರನಕೃತಿಗಳೆಂದುಭ್ರಮಿಸುವುದರಲ್ಲಿಲೇಶವೂ ಔಚಿತ್ಯವಿಲ್ಲ.

ಭಾಸಕೃತವೆನ್ನುವ ಹದಿಮೂರು ರೂಪಕಗಳಲ್ಲೂ ಕಂಡುಬರುವ (ಸೂತ್ರಧಾರ ಪ್ರವೇಶವಾದ ಮೇಲೆ ಮಂಗಳ ಶ್ಲೋಕವೂ, ಪ್ರಸ್ತಾವನೆಯೆಂಬುದಕ್ಕೆ ಬದಲಾಗಿ ಸ್ಥಾಪನೆಯೂ ಇರುವ) ಎರಡು ಲಕ್ಷಣಗಳೇ ಇತರ ಕೆಲವು ರೂಪಕಗಳಲ್ಲೂ ಕಂಡುಬಂದರೂ, ಈ ಹದಿಮೂರು ರೂಪಕಗಳಲ್ಲಿ ಒಂದರಲ್ಲೂ ಇತರ ರೂಪಕಗಳಲ್ಲಿರುವಂತೆ ಕವಿಯು ತನ್ನ ಹೆಸರನ್ನು ಹೇಳಿಕೊಂಡಿಲ್ಲದಕಾರಣ, ಈ ಹದಿಮೂರು ರೂಪಕಗಳೇ ಪ್ರತ್ಯೇಕವಾದೊಂದು ಗುಂಪೆಂಬುದು ಮೇಲೆ ಹೇಳಿದ ಅಂಶಗಳಿಂದ ಸಿದ್ಧವಾಯಿತು. ಅವುಗಳಲ್ಲಿ ಕಂಡುಬರುವ ಇತರ ಕೆಲವು ಮುಖ್ಯಲಕ್ಷಣಗಳನ್ನು ವಿಚಾರಮಾಡಿದಲ್ಲಿ, ಅವುಗಳನ್ನು ಒಬ್ಬನೇ ಕವಿಯು ರಚಿಸಿದ್ದಾನೆಂಬುದನ್ನು ಪ್ರತಿಪಾದಿಸಲು ಅನುಕೂಲವಾಗುವುದು.

**ಇತರ ಕೆಲವು ಮುಖ್ಯ ಲಕ್ಷಣಗಳು:**—ಈ ರೂಪಕಗಳಲ್ಲಿ ಕಂಡುಬರುವ ಇತರ ಕೆಲವು ಮುಖ್ಯ ಲಕ್ಷಣಗಳಾವುವೆಂದರೆ:—**ಮೊದಲನೆಯದು;** ಪ್ರತಿಜ್ಞಾಯೌಗಂಧರಾಯಣ, ಚಾರುದತ್ತ, ಅವಿಮಾರಕ, ಪ್ರತಿಮಾ, ಕರ್ಣಭಾರ, ಇವುಗಳ ಹೊರತು ಉಳಿದ ಎಂಟು ರೂಪಕಗಳಲ್ಲೂ, ಸೂತ್ರಧಾರನು 'ಏವಮಾರ್ಯಮಿಶ್ರಾನ್ ವಿಜ್ಞಾಪಯಾಮಿ। ಅಯೇ ಕಿನ್ನು ಖಲು ಮಯಿ ವಿಜ್ಞಾಪನವ್ಯಗ್ರೇ ಶಬ್ದ ಇವ ಶ್ರೂಯತೇ। ಅಂಗ। ಪಶ್ಯಾಮಿ'

ಎಂದು ಹೇಳುತ್ತಾನೆ. **ಎರಡನೆಯದು;** ಪಂಚರಾತ್ರ, ಸ್ವಪ್ನವಾಸವದತ್ತ, ಪ್ರತಿಜ್ಞಾಯೌಗಂಧರಾಯಣ, ಮತ್ತು ಪ್ರತಿಮಾ ನಾಟಕ, ಇವು ನಾಲ್ಕ ರಲ್ಲೂ ಮಂಗಳಶ್ಲೋಕವು ಮುದ್ರಾಲಂಕಾರ ಯುಕ್ತವಾಗಿದೆ. ಎಂದರೆ, ಆ ಆ ರೂಪಕದ ಮುಖ್ಯ ಪಾತ್ರಗಳ ಹೆಸರುಗಳೂ ಆಯಾ ಮಂಗಳ ಶ್ಲೋಕದಲ್ಲಿ ಬರುವಂತೆ ಕವಿಯು ಅದನ್ನು ರಚಿಸಿದ್ದಾನೆ. ಉದಾಹರಣೆಗಾಗಿ ಒಂದು ಶ್ಲೋಕವನ್ನು ಪರಿಗಣಿಸೋಣ. ಸ್ವಪ್ನವಾಸವದತ್ತದ ಮಂಗಳ ಶ್ಲೋಕವು 'ಉದಯನವೇಂದು ಸವರ್ಣಾ ವಾಸವದತ್ತಾಬಲೌ ಬಲಸ್ಯ ತ್ವಾಮ್। ಪದ್ಮಾವತೀರ್ಣ ಪೂರ್ಣೌ ವಸಂತಕಮ್ರೌ ಭುಜೌ ಪಾತಾಮ್॥' ಎಂದಿದೆ. ಈ ಶ್ಲೋಕದಲ್ಲಿ ಶ್ಲೇಷೆಯ ಸಹಾಯದಿಂದ ಕವಿಯು ಬಲ ದೇವನನ್ನೂ ಸ್ತುತಿಸುತ್ತ, ಮುಖ್ಯಪಾತ್ರಗಳಾದ ಉದಯನ, ವಾಸವದತ್ತೆ, ವಸಂತಕ, ಪದ್ಮಾವತಿ, ಇವರುಗಳ ಹೆಸರುಗಳನ್ನೂ ಸೂಚಿಸಿದ್ದಾನೆ. ಉಳಿದ ಮೂರು ರೂಪಕಗಳ ಮಂಗಳಶ್ಲೋಕಗಳಲ್ಲೂ ಹೀಗೆಯೇ ಮುದ್ರಾ ಲಂಕಾರವಿದೆ. **ಮೂರನೆಯದು;** ಒಂದು ರೂಪಕದಲ್ಲಿ ಬಂದ ಭರತ ವಾಕ್ಯದ ಶ್ಲೋಕವೂ, ಇತರಶ್ಲೋಕಗಳೂ, ಮತ್ತೊಂದು ರೂಪಕದಲ್ಲಾಗಲಿ ಅಥವಾ ಮತ್ತೆ ಕೆಲವು ರೂಪಕಗಳಲ್ಲಾಗಲಿ ಬರುವ ಅಂಶ. ಮೊದಲು ಭರತ ವಾಕ್ಯದ ವಿಚಾರವನ್ನು ತೆಗೆದುಕೊಳ್ಳೋಣ. ಈ ರೂಪಕಗಳ ಭರತವಾಕ್ಯ ಗಳೇ ಒಂದು ವಿಧವಾಗಿವೆ. ಇತರ ಕವಿಗಳು ರಚಿಸಿರುವ ರೂಪಕಗಳ ಭರತ ವಾಕ್ಯಗಳ ಸ್ವಭಾವಕ್ಕೂ, ಇವುಗಳ ಸ್ವಭಾವಕ್ಕೂ ಬಹಳ ವ್ಯತ್ಯಾಸವುಂಟು. ಈ ರೂಪಕಗಳ ಭರತವಾಕ್ಯಗಳು ಸಾಮಾನ್ಯವಾಗಿ 'ನಮ್ಮ ಮಹಾರಾಜನು ರಾಜ್ಯವನ್ನು ಕಾಪಾಡಿಕೊಂಡಿರಲಿ!' ಎಂಬ ಅರ್ಥವುಳ್ಳವುಗಳಾಗಿರುತ್ತವೆ. 'ಭವಂತ್ವರಜಸೋ ಗಾವಃ ಪರಚಕ್ರಂ ಪ್ರಶಾಮ್ಯತು। ಇಮಾಮಪಿ ಮಹೀಂ ಕೃತ್ಸ್ನಾಂ ರಾಜಸಿಂಹಃ ಪ್ರಶಾಸ್ತು ನಃ॥' ಎಂಬ ಶ್ಲೋಕವು ಅವಿಮಾರಕ, ಅಭಿಷೇಕ ನಾಟಕ, ಪ್ರತಿಜ್ಞಾಯೌಗಂಧರಾಯಣ ಇವುಗಳಲ್ಲಿ ಭರತವಾಕ್ಯ ವಾಗಿ ಬರುತ್ತದೆ. ಈ ಶ್ಲೋಕದ 'ಇಮಾಮಪಿ ಮಹೀಂ ಕೃತ್ಸ್ನಾಂ ರಾಜ ಸಿಂಹಃ ಪ್ರಶಾಸ್ತು ನಃ।' ಎಂಬ ಉತ್ತರಾರ್ಧವು ಪಂಚರಾತ್ರದ ಭರತವಾಕ್ಯ ದಲ್ಲಿ ಸೇರಿದೆ. 'ಇಮಾಂ ಸಾಗರಪರ್ಯಂತಾಂ ಹಿಮವದ್ವಿಂಧ್ಯಕುಂಡಲಾಂ। ಮಹೀಮೇಕಾತಪತ್ರಾಂಕಾಂ ರಾಜಸಿಂಹಃ ಪ್ರಶಾಸ್ತು ನಃ॥' ಎಂಬ ಶ್ಲೋಕವು

ಸ್ವಪ್ನವಾಸವದತ್ತದಲ್ಲೂ ಬಾಲಚರಿತ್ರದಲ್ಲೂ ಭರತವಾಕ್ಯವಾಗಿದೆ. 'ಕತ್ತಲೆಯು ಮೈಗೆ ಅಂಟಿಕೊಳ್ಳುವಂತಿದೆ. ಆಕಾಶವು ಕಾಡಿಗೆಯ ಮಳೆ ಕರೆಯುವಂತಿದೆ. ಅಸತ್ಪುರುಷರ ಸೇವೆಯಂತೆ ನೋಟವು ನಿಷ್ಫಲತೆಯನ್ನು ಹೊಂದಿದೆ' ಎಂಬ ಅಂಧಕಾರವರ್ಣನೆಯಿರುವ 'ಲಿಂಪತೀವ ತಮೋಽಂಗಾನಿ ವರ್ಷತೀವಾಂಜನಂ ನಭಃ। ಅಸತ್ಪುರುಷಸೇವೇವ ದೃಷ್ಟಿರ್ನಿಷ್ಫಲತಾಂ ಗತಾ ॥' ಎಂಬ ಶ್ಲೋಕವು ಬಾಲಚರಿತದಲ್ಲೂ ಮತ್ತು ಚಾರುದತ್ತದಲ್ಲೂ, ಎರಡರಲ್ಲೂ ಬರುತ್ತದೆ. ಇದೇ ರೀತಿಯಲ್ಲಿ ಸ್ವಪ್ನವಾಸವದತ್ತದ ಆರನೆಯ ಅಂಕದಲ್ಲಿ ಒಂದು ಶ್ಲೋಕದ 'ಕಿಂ ವಕ್ಷ್ಯತೀತಿ ಹೃದಯಂ ಪರಿಶಂಕಿತಂ ಮೇ ॥' ಎಂಬ ಕೊನೆಯ ಪಾದವು ಅಭಿಷೇಕನಾಟಕದ ನಾಲ್ಕನೆಯ ಅಂಕದಲ್ಲಿರುವ ಒಂದು ಶ್ಲೋಕಕ್ಕೂ ಕೊನೆಯಪಾದವಾಗಿದೆ. ಪ್ರತಿಜ್ಞಾಯೌಗಂಧರಾಯಣದಲ್ಲಿ '(ಮಗಳಿಗೆ) ಮದುವೆ ಮಾಡಲಿಲ್ಲವೆಂದರೆ ಲಜ್ಜೆ ಮದುವೆ ಮಾಡಿದರೆ (ಅವಳನ್ನು ಕಳುಹಿಸಬೇಕೆಂಬ) ಮನೋವ್ಯಥೆ. ಹೀಗೆ ಧರ್ಮಸ್ನೇಹಗಳ ನಡುವೆ ನನ್ನ ಮನಸ್ಸು ದೋಲಾಯಮಾನವಾಗಿದೆ' ಎಂಬ ಅರ್ಥಕ್ಕೆ 'ಅದತ್ತೇತ್ಯಾಗತಾ ಲಜ್ಜಾ ದತ್ತೇತಿ ವ್ಯಥಿತಂ ಮನಃ। ಧರ್ಮಸ್ನೇಹಾಂತರೇ ನ್ಯಸ್ತಾ ಬುದ್ಧಿರ್ದೋಲಾಯತೇ ಮಮ ॥' ಎಂಬ ಶ್ಲೋಕವಿದೆ. ಅಭಿಷೇಕನಾಟಕದಲ್ಲಿ ಸೀತಾದೇವಿಯ ಅಗ್ನಿಶುದ್ಧಿಗಾಗಿ ಚಿತಿಯನ್ನು ಸಿದ್ಧಗೊಳಿಸುವಂತೆ ರಾಮನು ಆಜ್ಞಾಪಿಸಿದುದನ್ನು ಕೇಳಿದಾಗ ಲಕ್ಷ್ಮಣನು, 'ವಿಜ್ಞಾಯ ದೇವ್ಯಾಃ ಶೌಚಂ ಚ ಶ್ರುತ್ವಾ ಚಾರ್ಯಸ್ಯ ಶಾಸನಂ। ಧರ್ಮಸ್ನೇಹಾಂತರೇ ನ್ಯಸ್ತಾ ಬುದ್ಧಿರ್ದೋಲಾಯತೇ ಮಮ ॥' (ಸೀತಾದೇವಿಯ ಪಾರಿಶುದ್ಧ್ಯವನ್ನೂ ತಿಳಿದು ಆರ್ಯನ ಅಪ್ಪಣೆಯನ್ನೂ ಕೇಳಿರುವ ನನ್ನ ಮನಸ್ಸು ಧರ್ಮಸ್ನೇಹಗಳ ನಡುವೆ ದೋಲಾಯಮಾನವಾಗಿದೆ) ಎಂದು ಹೇಳುತ್ತಾನೆ. ಈ ಎರಡು ಶ್ಲೋಕಗಳ ಉತ್ತರಾರ್ಧವೂ ಒಂದೇ ಆಗಿದೆ. **ನಾಲ್ಕನೆಯದು;** ಭರತಮುನಿಯ ನಾಟ್ಯಶಾಸ್ತ್ರದ ನಿಯಮಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಕವಿಯು ಅವಕ್ಕೆ ಬದ್ಧನಾಗಿ ವರ್ತಿಸಿಲ್ಲದಿರುವುದು. (ಈ ಕಾರಣದಿಂದ ಕವಿಯು ಭರತಮುನಿಯ ನಾಟ್ಯಶಾಸ್ತ್ರವು ಹುಟ್ಟುವುದಕ್ಕಿಂತಲೂ ಪೂರ್ವದಲ್ಲಿದ್ದವನೆಂದೂ ಕೆಲವು ಪಂಡಿತರು ತರ್ಕಿಸಿದ್ದಾರೆ). ಸಾವನ್ನು ರಂಗಸ್ಥಳದಲ್ಲಿ ಪ್ರದರ್ಶಿಸಕೂಡದೆಂಬುದೂ, ರೂಪಕವು ಮರಣದಿಂದ

ಕೊನೆಗಾಣಕೂಡದೆಂಬುದೂ ಭರತಮುನಿಯ ನಾಟ್ಯಶಾಸ್ತ್ರ ನಿಯಮಗಳು. ಊರುಭಂಗದಲ್ಲಿ ದುರ್ಯೋಧನನು ರಂಗಸ್ಥಳದಲ್ಲೇ ಮೃತನಾಗುವನು. ಅವನ ಮರಣದಿಂದಲೇ ಆ ರೂಪಕವು ಕೊನೆಗಾಣುವುದು ಅಭಿಷೇಕನಾಟಕ ದಲ್ಲಿ ವಾಲಿಯು ರಂಗಸ್ಥಳದಲ್ಲೇ ಮೃತಪಡುವಂತೆ ಚಿತ್ರಿತವಾಗಿದೆ. ಬಾಲ ಚರಿತದಲ್ಲಿ ಘೋರವಾದ ಕಾಳಗವೂ, ಮರಣವೂ, ರಂಗಸ್ಥಳದಲ್ಲೇ ನಡೆಯು ವುವು ಕವಿಯು ಭರತಮುನಿಯ ನಾಟ್ಯಶಾಸ್ತ್ರ ನಿಯಮಗಳನ್ನನುಸರಿಸಿಲ್ಲ ವೆಂಬುದು ಈ ಅಂಶಗಳಿಂದ ವ್ಯಕ್ತವಾಗುವುದು. **ಐದನೆಯದು;** ಆವರಣ ವಸ್ತ್ರವೆಂಬ ಅಥವಾ ಅವಗುಂಠನ ಮುಂತಾದ ಆಚ್ಛಾದನವಸ್ತ್ರವೆಂಬ ಅರ್ಥ ದಲ್ಲಿ 'ಯವನಿಕಾ' ಎಂಬ ಪದವನ್ನು ಪಯೋಗಿಸಿರುವುದು. ಈ ಪದಕ್ಕೆ ಸಾಮಾನ್ಯವಾಗಿ ರಂಗಸ್ಥಳದ ತೆರೆ (ಫರದೆ) ಯೆಂಬ ಅರ್ಥವುಂಟು. ಆದರೆ ಪ್ರಸಕ್ತರೂಪಕಗಳಲ್ಲಿ ಮಾತ್ರ ಕವಿಯು ಅದನ್ನು ವಿಶೇಷಾರ್ಥದಲ್ಲಿ ಪ್ರಯೋ ಗಿಸಿದ್ದಾನೆ. ಪ್ರತಿಮಾನಾಟಕದಲ್ಲಿ ದಶರಥನು ಮೂರ್ಛಿತನಾದಾಗ ಕಾಂಚು ಕೀಯನು ಯವನಿಕಾಸ್ತರಣಮಾಡುವಂತೆ ಸೂಚನೆಯಿದೆ(ಕಾಂಚುಕೀಯೋ ಯವನಿಕಾಸ್ತರಣಂ ಕರೋತಿ). ಆಬಳಿಕ ಎಲ್ಲರೂ 'ಹಾ ಹಾ ಮಹಾರಾಜಃ' ಎಂದು ಕೂಗಿಕೊಳ್ಳುತ್ತಾರೆ. ಆದಕಾರಣ, ಕಾಂಚುಕೀಯನು ಯವನಿ ಕಾಸ್ತರಣಮಾಡಿದನೆಂದರೆ, ರಂಗಸ್ಥಳದ ತೆರೆಯನ್ನೆಳೆದನೆಂದು ಅರ್ಥ ಮಾಡುವಂತಿಲ್ಲ. ಪಾತ್ರವೇ ರಂಗಸ್ಥಳದ ತೆರೆಯನ್ನು (ಫರದೆಯನ್ನು) ಮುಚ್ಚುವುದು ಆಭಾಸವೂ ಹೌದು. ಆದುದರಿಂದ, ಯವನಿಕಾಸ್ತರಣವೆಂಬು ದಕ್ಕೆ ಇಲ್ಲಿ (ಮೇಲೆ ಸೂಚಿಸಿದ) ವಿಶೇಷಾರ್ಥವೇ ಇರಬೇಕು. ಆವಂತಿಕೆ ಯೆಂಬ ಕೃತಕನಾಮವನ್ನಿಟ್ಟುಕೊಂಡಿರುವ ವಾಸವದತ್ತೆಯು ಮುಖದ ಮೇಲಿರುವ ಅವಗುಂಠನವನ್ನು ತೆಗೆಯಬೇಕೆಂಬ ಅರ್ಥದಲ್ಲಿ 'ಸಂಕ್ಷಿಪ್ಯತಾಂ ಯವನಿಕಾ' ಎಂದು ಉದಯನನು ಹೇಳಿರುವಂತೆ ಸ್ವಪ್ನವಾಸವದತ್ತನಾಟಕ ದಲ್ಲಿದೆ. ಅಲ್ಲಿ 'ಯವನಿಕಾ' ಎಂದರೆ ಅವಗುಂಠನವೆಂದು ಪ್ರೊಫೆಸರ್ ಭಿಡೇಯವರು ಅರ್ಥಮಾಡಿದ್ದಾರೆ ಅವೇ ಸಾಧುವೆಂದೂ, ಡಾಕ್ಟರ್ ಕೀತ್ ರವರು ತೆರೆಯೆಂಬುದಾಗಿ ಮಾಡಿರುವ ಅರ್ಥವು ಸಾಧುವಲ್ಲವೆಂದೂ ತೋರು ತ್ತದೆ. (ಸ್ವಪ್ನವಾಸವದತ್ತ ನಾಟಕವನ್ನು ವಿಮರ್ಶಿಸುವಲ್ಲಿ ಮುಂದೆ ಈ ವಿಚಾರವನ್ನು ವಿಶದವಾಗಿ ಅರಿಕೆಮಾಡಲಾಗುವುದು.) ಅವಿಮಾರಕದಲ್ಲಿ

ಮೋಡಗಳು ನಕ್ಷತ್ರಗಳ ಮುಂದಿರುವ (ಅವಗುಂಠನ ಅಥವಾ ಮುಖಾವರಣ ರೂಪದ ?) ವಸ್ತ್ರಗಳಂತಿವೆಯೆಂದು ('ಭಗಣಯವನಿಕಾಃ' ಎಂದು) ಕವಿಯು ವರ್ಣಿಸಿದ್ದಾನೆ. ದುರ್ಯೋಧನನು ವ್ಯಾತಿಯನ್ನೈದಿದ ಸನ್ನಿವೇಶವನ್ನು ವರ್ಣಿಸುವಾಗ್ಗೆ ಊರುಭಂಗ ನಾಟಕದಲ್ಲೂ ಯವನಿಕಾಸ್ತರಣವು ನಡೆಯುವಂತೆ ಸೂಚಿತವಾಗಿದೆ. **ಆರನೆಯದು;** ಒಂದೇ ಬಗೆಯ ಘಟನೆಗಳನ್ನು ಚಿತ್ರಿಸಿರುವುದು. ಕನ್ಯಾಪಿತನ ಕರ್ತವ್ಯವನ್ನು ಕುರಿತು ಪ್ರತಿಜ್ಞಾಯೌಗಂಧರಾಯಣದಲ್ಲೂ, ಅವಿಮಾರಕದಲ್ಲೂ , ಹೇಳಿರುವ ಅಂಶಗಳೂ, ಆಗಿನ ಸಮಯಸನ್ನಿವೇಶಗಳೂ, ಒಟ್ಟಿನಲ್ಲಿ ಒಂದರ ಪಡಿಯಚ್ಚು ಮತ್ತೊಂದೆನ್ನುವಂತಿವೆ. ದೂತವಾಕ್ಯದಲ್ಲೂ, ಬಾಲಚರಿತದಲ್ಲೂ ಮತ್ತು ಎರಡರಲ್ಲೂ ಶ್ರೀಕೃಷ್ಣನ ಆಯುಧಗಳಾದ ಸುದರ್ಶನ, ಶಂಖ, ಮುಂತಾದುವುಗಳು ರಂಗಸ್ಥಳಕ್ಕೆ ಬಂದು ವಿಜೃಂಭಿಸುವಂತೆ ಚಿತ್ರಿತವಾಗಿದೆ. **ಏಳನೆಯದು;** ನಾನಾ ರೂಪಕಗಳಲ್ಲೂ ಪಾತ್ರಗಳ ಹೆಸರುಗಳಲ್ಲಿ ಪರಸ್ಪರವಾಗಿರುವ ಹೋಲಿಕೆ. ಒಂದೇ ಹೆಸರಿನ ಕೆಲಕೆಲವು ಪಾತ್ರಗಳು ಒಂದಕ್ಕಿಂತ ಹೆಚ್ಚು ರೂಪಕಗಳಲ್ಲಿ ಬರುತ್ತವೆ. ಪ್ರತಿಜ್ಞಾಯೌಗಂಧರಾಯಣ, ಸ್ವಪ್ನವಾಸವದತ್ತ, ಪ್ರತಿಮಾನಾಟಕ, ಅಭಿಷೇಕ ನಾಟಕ, ಇವು ನಾಲ್ಕರಲ್ಲೂ ಪ್ರತಿಹಾರಿಯ ಹೆಸರು ವಿಜಯೆಯೆಂದು. ದೂತವಾಕ್ಯದಲ್ಲಿ ದುರ್ಯೋಧನನ ಕಾಂಚುಕೀಯನ ಹೆಸರು ಬಾದರಾಯಣ. ಪ್ರತಿಜ್ಞಾಯೌಗಂಧರಾಯಣದಲ್ಲಿ ಮಹಾಸೇನನ ಕಾಂಚುಕೀಯನ ಹೆಸರೂ ಬಾದರಾಯಣನೆಂದೇ ಇದೆ. ಮಧ್ಯಮವ್ಯಾಯೋಗದಲ್ಲಿ ಮತ್ತು ಪಂಚರಾತ್ರದಲ್ಲಿ ಭೀಮನಿಗೆ ಮಧ್ಯಮನೆಂದು ಹೆಸರು (ಇವೆರಡು ರೂಪಕಗಳಲ್ಲೂ ಭೀಮನು ತನ್ನ ತೋಳುಗಳೇ ತನ್ನ ಆಯುಧವೆಂದು ಹೇಳುತ್ತಾನೆ ) ಈ ಮುಖ್ಯಲಕ್ಷಣಗಳನ್ನೆಲ್ಲ ಕುರಿತು ಯುಕ್ತರೀತಿಯಲ್ಲಿ ಪರ್ಯಾಲೋಚಿಸಿ ನೋಡಿದರೆ, ಒಬ್ಬನೇ ಕವಿಯು ಈ ರೂಪಕಗಳೆಲ್ಲವನ್ನೂ ಬರೆದಿರಬೇಕೆಂದು ತೋರುತ್ತದೆ. ಇನ್ನೂ ಕೆಲವು ಅಂಶಗಳಿವೆ. ಈ ಮುಖ್ಯಲಕ್ಷಣಗಳ ಜೊತೆಗೆ ಅವನ್ನೂ ಪರ್ಯಾಲೋಚಿಸಿ ತೂಗಿ ನೋಡಿದರಂತು, ಈ ಹದಿಮೂರು ರೂಪಕಗಳನ್ನೂ ಒಬ್ಬನೇ ಕವಿಯು ರಚಿಸಿರಬೇಕೆಂಬುದು ಮತ್ತಷ್ಟು ಖಚಿತವಾಗಿ ವ್ಯಕ್ತವಾಗುವುದು. ಇನ್ನು ಆ ಅಂಶಗಳನ್ನು ಸೂಚಿಸಲಾಗುವುದು.

ಡಾಕ್ಟರ್ ಲಕ್ಷ್ಮಣ ಸರೂಪ್‌ರವರೂ, ಡಾಕ್ಟರ್ ವಿಂಟರ್ನಿಟ್ಸ್‌ರವರೂ ಹೇಳಿರುವಂತೆ ಸ್ವಪ್ನವಾಸವದತ್ತವನ್ನೂ ಪ್ರತಿಜ್ಞಾಯೌಗಂಧರಾಯಣವನ್ನೂ ಒಬ್ಬ ಕವಿಯೇ ಬರೆದಿರಬೇಕು. ಮಹಾವೀರಚರಿತೆಯ ಕಥಾಭಾಗದ ಮುಂದಣ ಕಥೆಯೇ ಉತ್ತರ ರಾಮಚರಿತದಲ್ಲಿ ಚಿತ್ರಿತವಾಗಿರುವಂತೆ, ಪ್ರತಿಜ್ಞಾಯೌಗಂಧರಾಯಣದ ಕಥೆಯ ಉತ್ತರ ಭಾಗವೇ ಸ್ವಪ್ನವಾಸವದತ್ತ ನಾಟಕದಲ್ಲಿ ಚಿತ್ರಿತವಾಗಿದೆ. ಪ್ರತಿಜ್ಞಾಯೌಗಂಧರಾಯಣದಲ್ಲಿ ಚಿತ್ರಿತವಾಗಿರುವ ಉದಯನ, ವಾಸವದತ್ತ, ಯೌಗಂಧರಾಯಣ, ವಸಂತಕ, ಈ ಪಾತ್ರಗಳಿಗೂ ಸ್ವಪ್ನವಾಸವದತ್ತ ನಾಟಕದಲ್ಲಿ ಚಿತ್ರಿತವಾಗಿರುವ ಅದೇ ಪಾತ್ರಗಳಿಗೂ ಸ್ವಭಾವದಲ್ಲಿ ಲೇಶಮಾತ್ರವೂ ವ್ಯತ್ಯಾಸವಿಲ್ಲ. ಸ್ವಪ್ನವಾಸವದತ್ತ ನಾಟಕದ ಸೊಬಗನ್ನು ಸಂಪೂರ್ಣವಾಗಿ ಗ್ರಹಿಸಬೇಕಾದರೆ, ಪ್ರತಿಜ್ಞಾಯೌಗಂಧರಾಯಣವನ್ನು ಓದಿರಲೇಬೇಕು ಇವೆರಡು ರೂಪಕಗಳ ಕಥಾವಸ್ತುವನ್ನೂ ಕವಿಯು ಬಹುಶಃ ಗುಣಾಢ್ಯರಚಿತವಾದ ಬೃಹತ್ಕಥೆಯಿಂದ ತೆಗೆದುಕೊಂಡಿರಬೇಕೆಂದು ತೋರುತ್ತದೆ. ಬೃಹತ್ಕಥೆಯೆಂಬ ಗ್ರಂಥವು ಈಗ ದೊರೆಯುವ ಹಾಗಿಲ್ಲವಾದರೂ, ಅದರ ಆಧಾರದ ಮೇಲೆ ರಚಿಸಲ್ಪಟ್ಟಿರುವ ಕಥಾಸರಿತ್ಸಾಗರವೆಂಬ ಗ್ರಂಥವು ದೊರೆಯುವುದಾಗಿದೆ. ಅದರಲ್ಲಿ ಇಲ್ಲದ ಕೆಲವು ಅಂಶಗಳು ಪ್ರತಿಜ್ಞಾಯೌಗಂಧರಾಯಣದಲ್ಲಿವೆ. ಇದರಿಂದ ಆ ಅಂಶಗಳು ಗುಣಾಢ್ಯನ ಬೃಹತ್ಕಥೆಯಲ್ಲೂ ಇರಲಿಲ್ಲವೆಂದೂ, ಅವು ಕಲ್ಪಿತವೆಂದೂ ನಿರ್ಧರಿಸಬಹುದಾಗಿದೆ. ಮಹಾಸೇನನೆಂಬ ರಾಜನಿಗೆ ಸೆರೆಸಿಕ್ಕಿ ಅವನ ಮಗಳಾದ ವಾಸವದತ್ತೆಯಲ್ಲಿ ಅನುರಾಗವ್ಯಾಮೋಹಗೊಂಡ ಉದಯನ ರಾಜನು ತನ್ನ ಮಂತ್ರಿಯಾದ ಯೌಗಂಧರಾಯಣನ ಸಹಾಯದಿಂದ ಸೆರೆಮನೆಯಿಂದ ತಪ್ಪಿಸಿಕೊಂಡು ವಾಸವದತ್ತೆಯೊಡನೆ ಕೌಶಾಂಬಿಗೆ ಓಡಿಹೋದುದೂ, ವಾಸವದತ್ತೆಯ ಮಾತಾಪಿತೃಗಳು ಮುಂದೆ ತಮ್ಮ ಮಗಳ ಮತ್ತು ಉದಯನನ ಚಿತ್ರಗಳನ್ನು ಬರೆಯಿಸಿ ಅವಕ್ಕೇ ವಿವಾಹ ಮಾಡುವುದೂ, ಆ ಅಂಶಗಳು. ಸ್ವಪ್ನವಾಸವದತ್ತ ನಾಟಕದಲ್ಲಿ ಆ ಸಂಗತಿಗಳನ್ನು ವಿಶದವಾಗಿ ಹೇಳದೆ, ಉದಯನನಲ್ಲಿಗೆ ಆ ಚಿತ್ರಗಳನ್ನು ಕಳುಹಿಸುವ ಸನ್ನಿವೇಶವು ಮಾತ್ರವೇ ಸೂಚಿತವಾಗಿದೆ. ಅಲ್ಲದೆ, ಪ್ರತಿಜ್ಞಾಯೌಗಂಧರಾಯಣದಲ್ಲಿ ಚಿತ್ರಿತವಾಗಿರುವ ಪೂರ್ವಕಥೆಯ ಅಂಶಗಳನ್ನು ಸೂಚಿಸಿ, ಉದಯನನು

ವೇಷಧಾರಿಯಾಗಿದ್ದ ಯೌಗಂಧರಾಯಣನನ್ನು (ಸ್ವಪ್ನವಾಸವದತ್ತ ನಾಟಕ
ದಲ್ಲಿ) ಗುರುತಿಸುವಾಗ್ಗೆ 'ಹೌದು; ನೀನು ಯೌಗಂಧರಾಯಣ. ರಾಜನೀತಿ
ನಿಪುಣತೆಯ ತಂತ್ರಗಳನ್ನೆಸಗಿ, ಹುಚ್ಚನಂತೆ ನಟಿಸಿ, ಯುದ್ಧ ಮುಂತಾದು
ವುಗಳನ್ನು ಕೈಕೊಂಡು ನನ್ನನ್ನು ಸಮುದ್ಧರಿಸಿದೆ,' ಎಂದು ಹೇಳುವನು.
ಆದಕಾರಣ, ಪ್ರತಿಜ್ಞಾ ಯೌಗಂಧರಾಯಣವನ್ನೂ, ಸ್ವಪ್ನವಾಸವದತ್ತ
ನಾಟಕವನ್ನೂ, ಬರೆದ ಕವಿಯು ಒಬ್ಬನೇ ಆಗಿರಬೇಕು.

ಮಗಳಿಗೆ ಅನುರೂಪನಾದ ವರನು ಸಿಕ್ಕದೆ ಹೋದುದನ್ನು ಕುರಿತು
ತಂದೆಯು ಹಂಬಲಿಸುವಂತೆ ಪ್ರತಿಜ್ಞಾಯೌಗಂಧರಾಯಣದಲ್ಲೂ, ಅವಿ
ಮಾರಕದಲ್ಲೂ, ಚಿತ್ರಿತವಾಗಿರುವ ಸನ್ನಿವೇಶಗಳಿಗೆ ಸಮೀಪ ಸಾದೃಶ್ಯವಿರು
ವುದರಿಂದ, ಆವೆರಡು ರೂಪಕಗಳನ್ನೂ ಒಬ್ಬ ಕವಿಯೇ ರಚಿಸಿರಬೇಕು.
ಸ್ವಪ್ನವಾಸವದತ್ತ ನಾಟಕದ ನಾಲ್ಕನೆಯ ಅಂಕದಲ್ಲಿ ಬರುವ ಪ್ರತಿಹಾರಿ
ಕಾಂಚುಕೀಯರ ಸಂಭಾಷಣವೂ, ಅಭಿಷೇಕ ನಾಟಕದ ಮೂರನೆಯ ಅಂಕ
ದಲ್ಲಿ ಬರುವ ಪ್ರತಿಹಾರಿ ಶಂಕುಕರ್ಣರ ಸಂಭಾಷಣವೂ, ಪದಪ್ರಯೋಗ
ದಲ್ಲಿ ಬಹುಮಟ್ಟಿಗೆ ಒಂದೇ ಆಗಿವೆ. ಅಲ್ಲದೆ, ಆವೆರಡು ನಾಟಕಗಳ ಭರತ
ವಾಕ್ಯಗಳಿಗೂ ಪರಸ್ಪರ ಸಾದೃಶ್ಯವಿದೆ; ಆದಕಾರಣ, ಸ್ವಪ್ನವಾಸವದತ್ತವನ್ನು
ಬರೆದಾತನೇ ಅಭಿಷೇಕನಾಟಕವನ್ನೂ ಬರೆದಿರಬೇಕು, ಪ್ರತಿಜ್ಞಾಯೌಗಂಧ
ರಾಯಣವನ್ನೂ, ಸ್ವಪ್ನವಾಸವದತ್ತವನ್ನೂ ಒಬ್ಬ ಕವಿಯೇ ಬರೆದಿರಬೇ
ಕೆಂದು ಹಿಂದೆ ಸಿದ್ಧಾಂತಮಾಡಿರುವುದರಿಂದ, ಅವುಗಳನ್ನು ಬರೆದ ಕವಿಯೇ
ಅವಿಮಾರಕವನ್ನೂ ಅಭಿಷೇಕನಾಟಕವನ್ನೂ ಬರೆದಿರಬೇಕೆಂಬುದು ಇದರಿಂದ
ನಿಷ್ಕರ್ಷೆಯಾದಂತಾಯಿತು. ಅಭಿಷೇಕ ನಾಟಕದಲ್ಲಿ ವಾಲಿಯು ಮೃತ
ನಾಗುವಾಗ್ಗೆ ಅವನು ಮಹಾನದಿಗಳನ್ನೂ, ವೀರವಾಹೀ ವಿಮಾನವನ್ನೂ
ಕಾಣುವಂತೆಯೇ, ಊರುಭಂಗದಲ್ಲಿ ದುರ್ಯೋಧನನು ಮೃತನಾಗುವಾಗ್ಗೆ
ತಾನೂ ಕಾಣುವುದಲ್ಲದೆ ವಾಲಿಯಂತೆಯೇ ಬಹುಮಟ್ಟಿಗೆ ಒಂದೇ ಪದಸರಣಿ
ಯಲ್ಲಿ ಅವುಗಳನ್ನು ಸೂಚಿಸುವ ಕಾರಣದಿಂದಲೂ, ಅಭಿಷೇಕ ನಾಟಕ,
ಪ್ರತಿಜ್ಞಾಯೌಗಂಧರಾಯಣ, ಮತ್ತು ಅವಿಮಾರಕ, ಇವು ಮೂರರಲ್ಲೂ
ಒಂದೇ ಶ್ಲೋಕವೇ ಭರತವಾಕ್ಯವಾಗಿರುವ ಕಾರಣದಿಂದಲೂ, ಅದೇ ಕವಿಯೇ
ಊರುಭಂಗವನ್ನೂ ಬರೆದಿರಬೇಕೆಂಬುದು ಸಿದ್ಧವಾದಂತಾಯಿತು. ನಾವು

ಹಿಂದೆಯೇ ಸೂಚಿಸಿರುವಂತೆ ಅಂಧಕಾರವರ್ಣನೆಯ ಮನೋಹರವಾದೊಂದು ಶ್ಲೋಕವು ಬಾಲಚರಿತದಲ್ಲೂ, ಚಾರುದತ್ತದಲ್ಲೂ, ಈ ಎರಡರಲ್ಲೂ ಇದೆ. ಬಾಲಚರಿತದಲ್ಲಿ ಬರುವ ಗೋಪಾಲಕರ ದೃಶ್ಯದ ಹಲವು ವಾಕ್ಯಗಳೂ ಹೆಸರುಗಳೂ, ಪಂಚರಾತ್ರದಲ್ಲಿ ಬರುವ ಗೋಪಾಲಕರ ದೃಶ್ಯದಲ್ಲಿ ಸಹ ಕಂಡುಬರುತ್ತವೆ. ಬಾಲಚರಿತ, ದೂತವಾಕ್ಯ, ಮತ್ತು ಸ್ವಪ್ನವಾಸವದತ್ತ, ಈ ಮೂರು ರೂಪಕಗಳಲ್ಲೂ ಒಂದೇ ಶ್ಲೋಕವೇ ಭರತವಾಕ್ಯವಾಗಿ ಬರುತ್ತದೆ. ತನ್ನ ಭುಜದಂಡವೇ ತನ್ನ ಆಯುಧವೆಂದು ಬಾಲಚರಿತದಲ್ಲಿ ದಾಮೋದರನು ಹೇಳುವಂತೆಯೇ, ಪಂಚರಾತ್ರ ಮಧ್ಯಮ ವ್ಯಾಯೋಗಗಳಲ್ಲಿ ಭೀಮನೂ ಹೇಳುತ್ತಾನೆ. ಚಾರುದತ್ತದಲ್ಲಿ ಬರುವ ಕತ್ತಲೆಯ ವರ್ಣನೆಗೂ, ಅವಿಮಾರಕದಲ್ಲಿ ಬರುವ ಕತ್ತಲೆಯ ವರ್ಣನೆಗೂ ಹೋಲಿಕೆಯಿದೆ. ರಾಮನ ವನವಾಸದ ಸಂಬಂಧದಲ್ಲಿ ದಶರಥನ ಪ್ರಲಾಪವನ್ನು ವರ್ಣಿಸಿರುವ ಪ್ರತಿಮಾನಾಟಕದ 'ಹಾ ವತ್ಸ ರಾಮ ಜಗತಾಂ ನಯನಾಭಿರಾಮ। ಹಾ ವತ್ಸ ಲಕ್ಷ್ಮಣ ಸಲಕ್ಷಣ ಸರ್ವಗಾತ್ರ॥ ಹಾ ಸಾಧ್ವಿ ಮೈಥಿಲಿ ಪತಿಸ್ಥಿತ ಚಿತ್ತವೃತ್ತೇ। ಹಾ ಹಾ ಗತಾಃ ಕಿಲ ವನಂ ಬತ ಮೇ ತನೂಜಾಃ॥' ಎಂಬ ಶ್ಲೋಕವನ್ನು ರಚಿಸಿದ ಕೈಚಳಕವೇ, ಇಂದ್ರಜಿತುವಿನ ಮರಣವಾರ್ತೆಯನ್ನು ಕೇಳಿದ ದಶಾನನನ ಪ್ರಲಾಪವನ್ನು ವರ್ಣಿಸಿರುವ ಅಭಿಷೇಕನಾಟಕದ 'ಹಾ ವತ್ಸ ಸರ್ವಜಗತಾಂ ಜ್ವರಕೃತ್ ಕೃತಾಸ್ತ್ರ। ಹಾ ವತ್ಸ ವಾಸವಜಿದಾನತ ವೈರಿಚಕ್ರ॥ ಹಾ ವತ್ಸ ವೀರ ಗುರುವತ್ಸಲ ಯುದ್ಧಶೌಂಡ। ಹಾ ವತ್ಸ ಮಾಮಿಹ ವಿಹಾಯ ಗತೋಽಸಿ ಕಸ್ಮಾತ್॥' ಎಂಬ ಶ್ಲೋಕದಲ್ಲೂ ಕಂಡುಬರುತ್ತದೆ. ಆದ ಕಾರಣ, ಈ ಅಂಶಗಳೆಲ್ಲವನ್ನೂ ಪರಿಗಣಿಸಿ ನೋಡಿದರೆ, ಪ್ರತಿಜ್ಞಾಯೌಗಂಧರಾಯಣ, ಸ್ವಪ್ನವಾಸವದತ್ತ, ಬಾಲಚರಿತ, ಪಂಚರಾತ್ರ, ಅವಿಮಾರಕ, ಚಾರುದತ್ತ, ಮಧ್ಯಮ ವ್ಯಾಯೋಗ, ಅಭಿಷೇಕನಾಟಕ, ಪ್ರತಿಮಾ ನಾಟಕ, ದೂತವಾಕ್ಯ, ಊರುಭಂಗ, ಈ ಹನ್ನೊಂದು ರೂಪಕಗಳನ್ನೂ ಒಬ್ಬ ಕವಿಯೇ ರಚಿಸಿರಬೇಕೆಂಬುದು ಸ್ಪಷ್ಟವಾಗುತ್ತದೆ. ಕರ್ಣಭಾರವನ್ನೂ, ದೂತಘಟೋತ್ಕಚವನ್ನೂ, ಆ ಹನ್ನೊಂದು ರೂಪಕಗಳೊಡನೆ ಸಂಬಂಧಿಸಿ ತೋರಿಸುವುದಕ್ಕೇನೋ ಹೆಚ್ಚಿನ ಆಧಾರವಿಲ್ಲ. ಆದರೂ, ಅವುಗಳಲ್ಲಿ ಕಂಡುಬರುವಂತೆಯೇ ಇವೆರಡು ರೂಪಕಗಳಲ್ಲಿಯೂ ಒಂದೇ ವಿಧದ ಕವಿತಾಧೋರಣೆ, ಕಲ್ಪನಾ

ಸಾಮರ್ಥ್ಯ, ಭಾವೋನ್ನತಿ, ಮುಂತಾದ ಗುಣಗಳೇ ಕಂಡುಬರುವಕಾರಣ, ಒಬ್ಬ ಕವಿಯೇ ಈ ಹದಿಮೂರು ರೂಪಕಗಳನ್ನೂ ರಚಿಸಿರಬೇಕೆಂದು ಹೇಳಬಹುದಾಗಿದೆ. ಆದರೆ, ಈ ಹದಿಮೂರು ರೂಪಕಗಳಲ್ಲಿ ಕೆಲಕೆಲವು ರೂಪಕಗಳ ಶೈಲಿಗಳು ಒಂದೊಂದು ಬಗೆಯಾಗಿರುವುದರಿಂದ, ಅವುಗಳನ್ನು ಏಕಕರ್ತೃಕವೆನ್ನುವ ಬಗೆ ಹೇಗೆಂದು ಕೆಲವರು ಸಂಶಯಪಡಬಹುದು. ಬರೆಯುವವನು ಒಬ್ಬನೇ ಆದರೂ, ಆ ಆ ಗ್ರಂಥದ ಕಥಾವಸ್ತುವಿಗೂ, ಭಾವರಸಗಳಿಗೂ ಅನುಗುಣವಾಗಿ ಅವನೇ ಬೇರೆ ಬೇರೆ ಶೈಲಿಗಳನ್ನು ಅಳವಡಿಸಿಕೊಂಡು ಬರೆಯಬೇಕಾಗುವುದೆಂಬುದು ಸ್ವತಸ್ಸಿದ್ಧವಾದ ವಿಷಯವಾದಕಾರಣ, ಈ ಬಗೆಯ ಅನುಮಾನಗಳಿಗೆ ಆಧಾರವೇ ಇಲ್ಲ. ಅಲ್ಲದೆ, ಕವಿಯ ವಯಸ್ಸು ಮುಂದುವರಿದ ಹಾಗೆಲ್ಲ, ಶೈಲಿಯೂ ಪರಿಣಾಮ ಹೊಂದಿ ಮಾರ್ಪಡುತ್ತ ಹೋಗುತ್ತದೆ. ಅಂತು, ಮೇಲೆ ಸೂಚಿಸಿರುವ ಎಲ್ಲ ಅಂಶಗಳನ್ನೂ ತೂಗಿ ನೋಡಿದರೆ, ಈ ಹದಿಮೂರು ರೂಪಕಗಳನ್ನೂ ಒಬ್ಬ ಕವಿಯೇ ಬರೆದಿರಬೇಕೆಂಬುದಾಗಿ ನಿಷ್ಕರ್ಷೆ ಮಾಡಲು ಸಾಕಾದಷ್ಟು ಕಾರಣಗಳಿವೆಯೆಂದು ಹೇಳಬಹುದು.

**೨ ಈ ರೂಪಕಗಳು ಭಾಸವಿರಚಿತವೆ—ಎಂಬ ವಿಚಾರ.**—ಈ ರೂಪಕಗಳಲ್ಲಿ ಯಾವುದೊಂದರಲ್ಲೂ ಕವಿಯು ತನ್ನ ಹೆಸರನ್ನು ಹೇಳಿಕೊಂಡಿಲ್ಲವಾದಕಾರಣ, ಇವು ಭಾಸಕೃತವೆನ್ನಲು ಪ್ರತ್ಯಕ್ಷ ಪ್ರಮಾಣವೇನೂ ಇಲ್ಲ. ಏನಿದ್ದರೂ, ಕೇವಲ ಅನುಮಾನ ಪ್ರಮಾಣದಿಂದ ಇವು ಭಾಸಕೃತಿಗಳಾಗಿದ್ದರೂ ಇರಬಹುದೆಂಬ ಸಿದ್ಧಾಂತವು ಮಾತ್ರವೇ ಸಾಧ್ಯ.

ಈ ರೂಪಕಗಳೆಲ್ಲ ಏಕಕರ್ತೃಕವೆಂದು ಹೇಳುವುದಕ್ಕಿರುವ ಕಾರಣಗಳನ್ನು ಮೇಲೆ ಸೂಚಿಸಲಾಯಿತಷ್ಟೆ. ಇವುಗಳಲ್ಲಿ ಯಾವುದೊಂದನ್ನೇ ಆಗಲಿ ಭಾಸನು ಬರೆದಿರಬಹುದೆಂದು ಶಂಕಿಸುವುದಕ್ಕೆ ಕಾರಣವುಂಟೆಂಬುದನ್ನು ತೋರಿಸಿದರೂ ಸಹ, ಇವೆಲ್ಲವೂ ಭಾಸಕೃತವೆಂದೇ ಶಂಕಿಸಲು ಅವಕಾಶವನ್ನು ಕಲ್ಪಿಸಿದಂತಾಗುವುದು. ಹಿಂದೆಯೇ ತಿಳಿಸಿರುವಂತೆ ಕೆಲವು ಕವಿಗಳೂ ಲೇಖಕರೂ ಭಾಸನ ಗ್ರಂಥಗಳನ್ನು ಕೊಂಡಾಡಿದ್ದಾರಷ್ಟೆ. ಅವರ ಹೇಳಿಕೆಗಳು ಪ್ರಸಕ್ತ ಗ್ರಂಥಗಳಿಗೆ ಅನ್ವಯಿಸುವುವೇ-ಎಂಬುದನ್ನು ಪರಿಶೀಲಿಸಿ

ನೋಡೋಣ. ಇವುಗಳಲ್ಲಿ ಹಾಸ್ಯರಸವು ಚಿತ್ರಿತವಾಗಿರುವ ಬಗೆಯನ್ನು ನೋಡಿದರೆ 'ಭಾಸೋ ಹಾಸಃ' ಎಂಬ ಮುರಾರಿ ಕವಿಯ ವಚನವನ್ನು ಇವಕ್ಕೆ ಅನ್ವಯಿಸಲು ಯಾವ ಬಾಧಕವೂ ಇರದು. ಏಕೆಂದರೆ, ಇವುಗಳಲ್ಲಿ ಬರುವ ಹಾಸ್ಯರಸವು, ಅವುಗಳು ಭಾಸನಂತಹ ಮಹಾಕವಿಯ ಕೃತಿಗಳೆನ್ನಿಸಲು ಯೋಗ್ಯವಾಗಿವೆಯೆನ್ನುವಷ್ಟುಮಟ್ಟಿಗೆ ಗಾಂಭೀರ್ಯವುಳ್ಳದಾಗಿ ಕೇವಲ ಶುದ್ಧವಾಗಿದೆ. ನಾವು ಹಿಂದೆ ಉದಹರಿಸಿರುವ ಬಾಣನ ವಾಣಿಯ ಒರೆಹಿಡಿದು ನೋಡಿದರೂ, ಇವು ಭಾಸಕೃತವಿರಬಹುದೆಂಬ ಅನುಮಾನವು ಸಿದ್ಧಿಸುತ್ತದೆ. ಏಕೆಂದರೆ, ಇವು 'ಸೂತ್ರಧಾರ ಕೃತಾರಂಭ'ಗಳಾಗಿವೆ. ಬಾಣನು ಹೇಳಿರುವ ಬಹು ಭೂಮಿಕೆಗಳಿಂದಲೂ ಪತಾಕೆಗಳಿಂದಲೂ ಕೂಡಿರುವ ಲಕ್ಷಣವೂ ಇವಕ್ಕೆ ಅನ್ವಯಿಸುತ್ತದೆ. ವಾಕ್ಪತಿರಾಜನು ಭಾಸಮಹಾಕವಿಯನ್ನು 'ಜಲಣಮಿತ್ತ' ('ಜ್ವಲನ ಮಿತ್ರ') ಎಂದು ಕರೆದಿರುವ ಅಂಶವನ್ನೂ ಹಿಂದೆಯೇ ಸೂಚಿಸಿದ್ದೇವೆ. ಸ್ವಪ್ನವಾಸವದತ್ತದಲ್ಲಿರುವ ಲಾವಾಣಕ ನಗರದ ಅಗ್ನಿಯ ಅನಾಹುತ ವಾರ್ತೆ, ಪಂಚರಾತ್ರದಲ್ಲಿ ಅವಭೃತಸ್ನಾನವಾದಮೇಲೆ ಯಜ್ಞ ಮಂಟಪಕ್ಕೆ ಹೊತ್ತಿಸಿರುವ ಉರಿಯ ವರ್ಣನೆಯು ಬರುವುದು, ಅಭಿಷೇಕ ನಾಟಕದಲ್ಲಿರುವ ಸೀತಾದೇವಿಯ ಅಗ್ನಿಪ್ರವೇಶದ ಸನ್ನಿವೇಶ, ಅವಿಮಾರಕದಲ್ಲಿ ರಾಜಪುತ್ರನು ಅಗ್ನಿಪ್ರವೇಶಮಾಡುವುದಾಗಿ ನಿಶ್ಚಯಿಸುವುದು,–ಈ ಅಂಶಗಳನ್ನು ನೋಡಿದರೆ, ಈ ರೂಪಕಗಳನ್ನು ಬರೆದ ಕವಿಯು 'ಜ್ವಲನಮಿತ್ರ' (ಅಗ್ನಿಯ ಸ್ನೇಹಿತ) ಎಂಬ ಬಿರುದಿಗೆ ಅರ್ಹನೆಂದರೂ ಸಲ್ಲುವುದು. ಇನ್ನು ರಾಜಶೇಖರ ಕವಿಯು ರಚಿಸಿರುವ 'ಭಾಸ ನಾಟಕ ಚಕ್ರೇಪಿ ಛೇಕೈಃ ಕ್ಷಿಪ್ತೇ ಪರೀಕ್ಷಿತುಂ। ಸ್ವಪ್ನವಾಸವದತ್ತಸ್ಯ ದಾಹಕೋऽಭೂನ್ನ ಪಾವಕಃ ॥' ಎಂಬ ಶ್ಲೋಕದ ವಿಚಾರ. ಭಾಸನು ಅನೇಕ ನಾಟಕಗಳನ್ನು (ಭಾಸನಾಟಕಚಕ್ರ) ಬರೆದಿದ್ದನೆಂಬುದೂ, ಅವುಗಳಲ್ಲಿ ಸ್ವಪ್ನವಾಸವದತ್ತವೆಂಬುದೂ ಒಂದೆಂಬುದೂ, ಅವನ ನಾಟಕಗಳಲ್ಲೆಲ್ಲ ಅದೇ ಅತ್ಯುತ್ತಮವಾದುದೆಂಬುದೂ, ಈ ಶ್ಲೋಕದಿಂದ ಸ್ಪಷ್ಟವಾಗುವ ಅಂಶಗಳಾಗಿವೆ. ಪ್ರಸಕ್ತ ರೂಪಕಗಳಾದ ಹದಿಮೂರು ರೂಪಕಗಳಲ್ಲಿ ಸ್ವಪ್ನವಾಸವದತ್ತವೂ ಒಂದಾಗಿದೆ. ಆದಕಾರಣ, ಈ ಸ್ವಪ್ನವಾಸವದತ್ತ ನಾಟಕವೂ—ಈ ನಿಮಿತ್ತದಿಂದ ಉಳಿದ ಹನ್ನೆರಡು ನಾಟಕಗಳೂ—ಭಾಸಕೃತವೆಂದು ಅನುಮೇಯಿಸುವುದಕ್ಕೆ ಅವಕಾಶವಿದೆ.

ಈ ಸಂಬಂಧದಲ್ಲಿ ಮತ್ತೊಂದು ಅಂಶವನ್ನು ಸೂಚಿಸಬೇಕಾಗಿದೆ. ಡಾಕ್ಟರ್ ಗಣಪತಿ ಶಾಸ್ತ್ರಿಗಳಿಗೆ ಸಿಕ್ಕಿದ ಸ್ವಪ್ನವಾಸವದತ್ತ ನಾಟಕದ ಹಸ್ತಲಿಖಿತ ಪ್ರತಿಯಲ್ಲಿ ಸ್ವಪ್ನನಾಟಕವೆಂದು ಮಾತ್ರವೇ ಇದ್ದಿತು. ಅದು ಸ್ವಪ್ನವಾಸವ ದತ್ತವೆಂಬುದರ ಸಂಕುಚಿತನಾಮವೆಂದು ಅವರು ಹೇಳಿದುದನ್ನು ಅನೇಕ ಪಂಡಿತರು ಅಂಗೀಕರಿಸಲಿಲ್ಲ. ಸ್ವಪ್ನನಾಟಕವೇ ಬೇರೆಯೆಂದೂ, ಅದೆಂದಿ ಗೂ ಸ್ವಪ್ನವಾಸವದತ್ತ ನಾಟಕವಾಗಿರಲಾರದೆಂದೂ, ಅವರು ವಾದಿಸತೊಡ ಗಿದರು. 'ಸ್ವಪ್ನವಾಸವದತ್ತಾ ಸಮಾಪ್ತಾ' (ಸ್ವಪ್ನವಾಸವದತ್ತವು ಸಮಾಪ್ತ ವಾಯಿತು) ಎಂಬುದಾಗಿಯೇ ಸ್ಪಷ್ಟವಾಗಿ ಬರೆದಿದ್ದ ಹಸ್ತಲಿಖಿತ ಪ್ರತಿ ಯೊಂದನ್ನು ಪಂಡಿತರಾದ ಮ|| ರಾ|| ಎ. ಅನಂತಾಚಾರ್ಯರು ಡಾಕ್ಟರ್ ಗಣಪತಿ ಶಾಸ್ತ್ರಿಗಳವರಿಗೆ ಕಳುಹಿಸಿಕೊಟ್ಟರು. ಅಲ್ಲದೆ ಡಾಕ್ಟರ್ ಲಕ್ಷಣ ಸರೂಪ್‌ರವರು ಮಲೆಯಾಳಿ ಲಿಪಿಯಲ್ಲಿ ಬರೆದಿದ್ದ ಓಲೆಯಗರಿಯ ಪುಸ್ತಕವು ತಮಗೆ ದೊರೆಯಿತೆಂದೂ, ಅದು ಡಾಕ್ಟರ್ ಗಣಪತಿಶಾಸ್ತ್ರಿಗಳವರಿಗೆ ಸಿಕ್ಕಿದ ಸ್ವಪ್ನನಾಟಕದಂತೆಯೇ ಇರುವುದಾಗಿಯೂ, ಅದರ ಕೊನೆಯಲ್ಲಿ 'ಸ್ವಪ್ನ ವಾಸವದತ್ತಂ ಸಮಾಪ್ತಮ್ । ಶಿವಮಸ್ತು' (ಸ್ವಪ್ನವಾಸವದತ್ತವು ಸಮಾಪ್ತ ವಾಯಿತು. ಮಂಗಳವಾಗಲಿ) ಎಂದು ಬರೆದಿದೆಯೆಂದೂ ಹೇಳಿದ್ದಾರೆ. ಆದ ಕಾರಣ, ಸ್ವಪ್ನನಾಟಕವು ಸ್ವಪ್ನವಾಸವದತ್ತ ನಾಟಕವಲ್ಲವೆಂಬ ವಾದವು ಮುರಿದಂತಾಯಿತು. ಈಗ ಸಿಕ್ಕಿರುವ ಸ್ವಪ್ನವಾಸವದತ್ತ ನಾಟಕದ ಕಥಾ ಸರಣಿಯನ್ನೇ ಇಟ್ಟುಕೊಂಡು ಬಹುಶಃ ಆರುಮಂದಿ ಇತರ ಕವಿಗಳು ನಾಟಕಗಳನ್ನು ಬರೆದಿದ್ದಾರೆಂದು ("Probably half a dozen other poets have written plays on the same theme as the Svapnavasavadatta.") ಡಾಕ್ಟರ್ ಬಾರ್ನೆಟ್‌ರವರು ಹೇಳಿರುವುದರಲ್ಲಂತೂ ಲೇಶಮಾತ್ರವೂ ಹುರುಳಿಲ್ಲ. ಏಕೆಂದರೆ ಆ ಕಥಾ ಸರಣಿಯನ್ನೇ ಪೂರ್ತಿಯಾಗಿ ಅನುಸರಿಸಿ ಬರೆದ ನಾಟಕವು ಮತ್ತೊಂದಿಲ್ಲ. ಒಂದೇ ಕಥಾವಸ್ತುವನ್ನವಲಂಬಿಸಿ ರೂಪಕಗಳನ್ನು ಬರೆದಿದ್ದರೂ, ಭಾರ ತೀಯ ನಾಟಕ ಕರ್ತೃಗಳು ಒಂದೇ ಹೆಸರನ್ನಿಟ್ಟು ಇಬ್ಬರು ಎರಡು ನಾಟಕ ಗಳನ್ನು ಬರೆದಿರುವುದಕ್ಕೆ ಸಾಮಾನ್ಯವಾಗಿ ಯಾವ ನಿದರ್ಶನಗಳೂ ದೊರೆಯ ಲಾರವು. ಅವರು ಹಾಗೆ ಮಾಡಿರುವರೆಂದು ಹೇಳುವುದು ಹೆಚ್ಚು ಸಂಭಾವ್ಯ

ವೆಂದು ಹೇಳಲಾಗುವುದಿಲ್ಲ. ತಾನು ಉನ್ಮಾದ ವಾಸವದತ್ತಾಕಾರನೆಂದು ಶಕ್ತಿಭದ್ರನು ಹೇಳಿಕೊಂಡಿದ್ದಾನೆ. ವೀಣಾವಾಸವದತ್ತವೆಂಬ ಅಪೂರ್ಣ ರೂಪಕವೂ ಒಂದಿದೆಯಂತೆ. ಒಂದೇ ಕಥಾವಸ್ತುವಿನಮೇಲೆ ಹಲವು ನಾಟಕಗಳು ಹುಟ್ಟಿದರೂ, ಅವುಗಳ ಹೆಸರು ಒಂದೇ ಆಗಿರುವುದಿಲ್ಲನೆಂಬ ಅಂಶವು ಈ ಹೆಸರುಗಳಿಂದಲೇ ಸ್ವಲ್ಪಮಟ್ಟಿಗೆ ವ್ಯಕ್ತವಾಗುತ್ತದೆ. ಅಂತೂ, ಮೇಲೆ ಸೂಚಿಸಿರುವ ಕಾರಣಗಳಿಂದ, ಈಗ ಸಿಕ್ಕಿರುವ ಸ್ವಪ್ನವಾಸವದತ್ತ ನಾಟಕವು ಭಾಸಕೃತ ಸ್ವಪ್ನವಾಸವದತ್ತ ನಾಟಕವಾಗಿರಬೇಕೆಂದು ಶಂಕಿಸುವುದಕ್ಕೆ ಅವಕಾಶವಿದೆ· ಈ ವಿಷಯಕ್ಕೆ ಸಾಧಕ ಬಾಧಕಗಳಾಗಿರತಕ್ಕ ಇತರ ನಾನಾ ಅಂಶಗಳನ್ನೂ ಮುಂದೆ ಸಂಕ್ಷೇಪವಾಗಿ ವಿಚಾರಮಾಡೋಣ:—

## ಸಾಧಕಗಳ ವಿಚಾರ

**ಭಾವಪ್ರಕಾಶದ ಶ್ಲೋಕಗಳು:**—ಶಾರದಾತನಯನು ರಚಿಸಿರುವ ಭಾವಪ್ರಕಾಶನೆಂಬ ಗ್ರಂಥದಲ್ಲಿ ಕೆಲವು ಶ್ಲೋಕಗಳಿವೆ. ಅವುಗಳಲ್ಲಿ ಸ್ವಪ್ನವಾಸವದತ್ತ ನಾಟಕದ ಕಥಾಭಾಗವನ್ನು ಆತನು ಉದಾಹರಣಾರ್ಥವಾಗಿ ವಿವರಿಸಿದ್ದಾನೆ. ಆ ಕಥಾಭಾಗವು ಈಗ ಸಿಕ್ಕಿರುವ ಸ್ವಪ್ನವಾಸವದತ್ತ ನಾಟಕದ ಕಥಾವಿವರವಂತೆಯೇ ಇದೆ. 'ಸ್ವಪ್ನವಾಸವದತ್ತಾಖ್ಯಮುದಾಹರಣಮತ್ರ ತು। ಆಚ್ಛಿದ್ಯ ಭೂಪಾತ್ ವ್ಯಸನಾತ್ ದೇವೀ ಮಾಗಧಿಕಾ ಕರೇ ॥ ನ್ಯಸ್ತಾ ಯತಸ್ತತೋ ನ್ಯಾಸಾತ್ ಮುಖಸಂಧಿರಯಂಭವೇತ್ । ನ್ಯಾಸಸ್ಯ ಚ ಪ್ರತಿಮುಖಂ ಸಮುದ್ಭೇದ ಉದಾಹೃತಂ ॥' ಎಂಬ ಶ್ಲೋಕಗಳನ್ನು ನೋಡಿದರೆ, ಈಗಿನ ಸ್ವಪ್ನವಾಸವದತ್ತ ನಾಟಕದಲ್ಲಿ ಬ್ರಾಹ್ಮಣ ವೇಷಧಾರಿಯಾದ ಯೌಗಂಧರಾಯಣನು ವಾಸವದತ್ತಾದೇವಿಯನ್ನು ಅವಂತಿಕೆಯೆಂಬ ಹೆಸರಿನಿಂದ ಮಗಧರಾಜ ಪುತ್ರಿ ಪದ್ಮಾವತಿಯ ಬಳಿಯಲ್ಲಿ ನ್ಯಾಸವಾಗಿ ಒಪ್ಪಿಸುವ ಸನ್ನಿವೇಶವು ಸೂಚಿತವಾಗಿರುವಂತೆ ತೋರುತ್ತದೆ. ಶಾರದಾತನಯನು ಸ್ವಪ್ನವಾಸವದತ್ತದಿಂದ ತೆಗೆದು ಅದೇ ಗ್ರಂಥದಲ್ಲಿ (ಭಾವಪ್ರಕಾಶದಲ್ಲಿ) ಉದಹರಿಸಿರುವ 'ಚಿರಪ್ರಸುಪ್ತಃ ಕಾಮೋ ಮೇ ವೀಣಯಾ ಪ್ರತಿಬೋಧಿತಃ। ತಾಂ ತು ದೇವೀಂ ನ ಪಶ್ಯಾಮಿ ಯಸ್ಯಾ ಘೋಷವತೀ ಪ್ರಿಯಾ॥' ಎಂಬ ಶ್ಲೋಕವು ಈಗ ದೊರೆತಿರುವ ಸ್ವಪ್ನವಾಸವದತ್ತ ನಾಟಕದಲ್ಲಿದೆ.

**ವಾಮನನ ಶ್ಲೋಕ:**—ಕ್ರಿಸ್ತಶಕ ಒಂಬತ್ತನೆಯ ಶತಮಾನಕ್ಕಿಂತ ಬಹುಕಾಲಕ್ಕೆ ಹಿಂದೆಯೇ ಜೀವಿಸಿದ್ದ ವಾಮನನು ವ್ಯಾಜೋಕ್ತಿಗೆ ನಿದರ್ಶನ ವಾಗಿ 'ಶರಚ್ಛಂದ್ರಾಂಶುಗೌರೇಣ ವಾತಾವಿದ್ಧೇನ ಭಾಮಿನಿ। ಕಾಶಪುಷ್ಪ ಲವೇನೇದಂ ಸಾಶ್ರುಪಾತಂ ಮುಖಂ ಕೃತಮ್ ॥' ಎಂಬ ಶ್ಲೋಕವನ್ನು ತನ್ನ ಕಾವ್ಯಾಲಂಕಾರ ಸೂತ್ರವೃತ್ತಿಯಲ್ಲಿ ಉದಹರಿಸಿದ್ದಾನೆ. ಬಹುಶಃ ಪಾಠ ಭೇದದ ದೆಸೆಯಿಂದ ಎರಡು ಪದಗಳು ಬೇರೆಯಾಗಿ ಆತನಿಂದ ಉದಹರಿಸ ಲ್ಪಟ್ಟಿರುವ ಶ್ಲೋಕವು ಈಗಿನ ಸ್ವಪ್ನವಾಸವದತ್ತ ನಾಟಕದಲ್ಲಿ 'ಶರಚ್ಛ ಶಾಂಕ ಗೌರೇಣ ವಾತಾವಿದ್ಧೇನ ಭಾಮಿನಿ। ಕಾಶಪುಷ್ಪಲವೇನೇದಂ ಸಾಶ್ರು ಪಾತಂ ಮುಖಂ ಮಮ ॥' ಎಂದಿದೆ. ವಾಮನನು ಆ ಶ್ಲೋಕವನ್ನು ಉದ ಹರಿಸಿರುವ ಅಧ್ಯಾಯದಲ್ಲೇ 'ಯೋ ಭರ್ತೃ ಪಿಂಡಸ್ಯ ಕೃತೇ ನ ಯುದ್ಧ್ಯೇತ್' ಎಂಬುದನ್ನೂ ಉದಹರಿಸಿದ್ದಾನೆ. ಇದು ಪ್ರತಿಜ್ಞಾ ಯೌಗಂಧರಾಯಣದಲ್ಲಿ ರುವ ಒಂದು ಶ್ಲೋಕದ ನಾಲ್ಕನೆಯ ಪಾದವಾಗಿದೆ. ಆದಕಾರಣ, ವಾಮ ನನು ಪ್ರತಿಜ್ಞಾಯೌಗಂಧರಾಯಣ ಮತ್ತು ಸ್ವಪ್ನವಾಸವದತ್ತ ನಾಟಕ ಗಳಿಂದ ಉದಹರಿಸಿದ್ದಾನೆಂದು ಹೇಳಬಹುದಾಗಿದೆ. ಆದರೆ ತಾನು ಯಾವ ಗ್ರಂಥದಿಂದ ಅವುಗಳನ್ನು ತೆಗೆದುಕೊಂಡನೋ ಅದನ್ನು ಮಾತ್ರ ಅವನು ಸೂಚಿಸಿಲ್ಲ.

**ಭಾಮಹನ ವಿಮರ್ಶೆ:**—ಭಾಮಹನು ತನ್ನ ಕಾವ್ಯಾಲಂಕಾರದಲ್ಲಿ ನ್ಯಾಯವಿರೋಧವನ್ನು ವಿವರಿಸುವುದಕ್ಕಾಗಿ ಕೆಲವು ಶ್ಲೋಕಗಳನ್ನು ಬರೆದಿ ದ್ದಾನೆ. ಅವುಗಳನ್ನು ನೋಡಿದರೆ, ಪ್ರತಿಜ್ಞಾ ಯೌಗಂಧರಾಯಣದ ಕಥಾ ಭಾಗವನ್ನು ಅವನು ಆಕ್ಷೇಪಿಸಿರುವಂತೆ ತೋರುತ್ತದೆ. ಅಲ್ಲದೆ ಪ್ರತಿಜ್ಞಾ ಯೌಗಂಧರಾಯಣದಲ್ಲ ಪ್ರಾಕೃತ ಭಾಷೆಯಲ್ಲಿರುವ 'ಅಣೇಣ ಮಮ ಭಾದಾ ಹದೋ, ಅಣೇಣ ಮಮ ಪಿದಾ, ಅಣೇಣ ಮಮ ಸುದಾ' ಎಂಬ ಗದ್ಯವೇ ಭಾಮಹನಿಂದ ಸಂಸ್ಕೃತ ಶ್ಲೋಕರೂಪದಲ್ಲಿ 'ಹತೋऽನೇನ ಮಮ ಭ್ರಾತಾ ಮಮ ಪುತ್ರಃ ಪಿತಾ ಮಮ।' ಎಂದು ಬರೆಯಲ್ಪಟ್ಟಿರುವಂತೆ ತೋರುತ್ತದೆ. ಹೀಗಿದ್ದೂ ಮತ್ತಾವುದೋ ಗ್ರಂಥವು ಇದಕ್ಕೆ ಆಧಾರವಾಗಿರಕೂಡದೇಕೆಂದು ಮ॥ ರಾ॥ ಹೀರಾನಂದ ಶಾಸ್ತ್ರಿಗಳವರು ಕಟ್ಟಿರುವ ಊಹೆಯು ಸಮಂಜಸ ವಾಗಿಲ್ಲ; ಅವರ ವಾದಸರಣಿಯು ವಿಚಿತ್ರವಾಗಿಯೂ ಇದೆ.

**ಶೃಂಗಾರ ಪ್ರಕಾಶದ ವಾಕ್ಯಗಳು:**—ಭೋಜದೇವನು ರಚಿಸಿರುವ ಶೃಂಗಾರ ಪ್ರಕಾಶದಲ್ಲಿ 'ಸ್ವಪ್ನವಾಸವದತ್ತೇ ಪದ್ಮಾವತೀಮಸ್ವಸ್ಥಾಂ ದ್ರಷ್ಟುಂ ರಾಜಾ ಸಮುದ್ರಗೃಹಕಂ ಗತಃ । ಪದ್ಮಾವತೀ ರಹಿತಂ ಚ ತದವಲೋಕ್ಯ ತಸ್ಯಾ ಏವ ಶಯನೇ ಸುಷ್ವಾಪ। ವಾಸವದತ್ತಾಂ ಚ ಸ್ವಪ್ನವದಸ್ವಪ್ನೇ ದದರ್ಶ । ಸ್ವಪ್ನಾಯಮಾನಶ್ಚ ವಾಸವದತ್ತಾಮಾಬಭಾಷೇ।' ಎಂದಿದೆ. ಇದು ಈಗ ದೊರೆತಿರುವ ಸ್ವಪ್ನವಾಸವದತ್ತ ನಾಟಕದ ಐದನೆಯ ಅಂಕದ ಸಾರಾಂಶವೇ ಆಗಿದೆ. ಉದಯನನು ಅಸ್ವಸ್ಥಳಾದ ಪದ್ಮಾವತಿಯನ್ನು ನೋಡಲು ಸಮುದ್ರಗೃಹಕ್ಕೆ ಹೋದುದು, ಅವಳು ಅಲ್ಲಿಲ್ಲದಿರುವುದು, ಅಲ್ಲಿ ಹಾಸಿದ್ದ ಹಾಸಿಗೆಯಲ್ಲಿ ಅವನು ಮಲಗಿ ನಿದ್ರಿಸುವುದು, ಅವನು ಸ್ವಪ್ನದಲ್ಲಿ ವಾಸವದತ್ತೆಯನ್ನು ಕಂಡಂತೆ ಮಾತನಾಡುವುದು, ಅಷ್ಟರಲ್ಲಿ ಅವಂತಿಕೆಯ ವೇಷದ ನಿಜವಾದ ವಾಸವದತ್ತೆಯೇ ಅವನ ಬಳಿಗೆ ಬಂದಿರುವುದು, ಈ ಅಂಶಗಳನ್ನೆಲ್ಲ ಭೋಜದೇವನು ಸೂಚಿಸಿದ್ದಾನೆ. ಅವನು ವಾಕ್ಯವನ್ನು 'ಸ್ವಪ್ನವಾಸವದತ್ತೇ' (ಸ್ವಪ್ನವಾಸವದತ್ತದಲ್ಲಿ) ಎಂದೇ ಪ್ರಾರಂಭಿಸಿರುವುದರಿಂದ, ಸ್ವಪ್ನವಾಸವದತ್ತ ನಾಟಕದಿಂದ ಅವನು ಉದಹರಿಸುತ್ತಿದ್ದಾನೆಂಬುದು ಸ್ಪಷ್ಟವಾಗುತ್ತದೆ. ಅವನು ಉದಹರಿಸಿರುವ ಅಂಶಗಳೂ ಈಗಿನ ನಾಟಕದಲ್ಲಿವೆ.

**ಅಮರ ಟೀಕಾ ಸರ್ವಸ್ವದ ಶ್ಲೋಕಗಳು :**—ಸರ್ವಾನಂದನು ಅಮರ ಟೀಕಾ ಸರ್ವಸ್ವವೆಂಬ ತನ್ನ ಗ್ರಂಥದಲ್ಲಿ ಶೃಂಗಾರರಸವು ಮೂರು ವಿಧವೆಂದು ಸೂಚಿಸಿ, ಅದಕ್ಕೆ ನಿದರ್ಶನವನ್ನೂ ತಿಳಿಸಿ 'ತ್ರಿವಿಧಃ ಶೃಂಗಾರಃ ಧರ್ಮಾರ್ಥಕಾಮ ವಿಭಿನ್ನಃ। ತತ್ರಾದ್ಯೋ ಯಥಾ ನಂದಯಂತ್ಯಾಂ ಬ್ರಾಹ್ಮಣ ಭೋಜನಮ್। ದ್ವಿತೀಯಃ ಸ್ವದಿಶಮಾತ್ಮಸಾತ್ಕರ್ತು ಮುದಯನಸ್ಯ ಪದ್ಮಾವತೀ ಪರಿಣಯೋಽರ್ಥ ಶೃಂಗಾರಃ। ತೃತೀಯಃ ಸ್ವಪ್ನವಾಸವದತ್ತೇ ತಸ್ಯೈವ ವಾಸವದತ್ತಾ ಪರಿಣಯಃ ಕಾಮಶೃಂಗಾರಃ ॥' ಎಂದು ಬರೆದಿದ್ದಾನೆ. 'ಶೃಂಗಾರರಸದಲ್ಲಿ ಧರ್ಮಶೃಂಗಾರ, ಅರ್ಥಶೃಂಗಾರ, ಮತ್ತು ಕಾಮ ಶೃಂಗಾರ, ಎಂಬ ಮೂರು ಭೇದಗಳುಂಟು. ನಂದಯಂತೀ ಎಂಬುದರಲ್ಲಿ ಬ್ರಾಹ್ಮಣ ಭೋಜನದಂತೆ ಧರ್ಮಶೃಂಗಾರ. ಉದಯನನು ತಾನು ಕಳೆದುಕೊಂಡಿದ್ದ ತನ್ನ ರಾಜ್ಯವನ್ನು ಮತ್ತೆ ವಶಪಡಿಸಿಕೊಳ್ಳುವುದಕ್ಕಾಗಿ ಪದ್ಮಾವತಿಯನ್ನು ವಿವಾಹಮಾಡಿಕೊಂಡುದು ಎರಡನೆಯದಾದ ಅರ್ಥ ಶೃಂಗಾರ,

ಮೂರನೆಯದು ಸ್ವಪ್ನವಾಸವದತ್ತದಲ್ಲಿ ಆ ವಾಸವದತ್ತಾ ಪರಿಣಯವೇ ಕಾಮಶೃಂಗಾರ' ಎಂಬುದು ಇದರ ತಾತ್ಪರ್ಯ. ಈಗ ದೊರೆತಿರುವ ವಾಸವದತ್ತ ನಾಟಕದಲ್ಲಿ ವಾಸವದತ್ತಾಪರಿಣಯವು ನಡೆದಂತೆ ಕಥಾವಸ್ತುವಿನಲ್ಲಿಲ್ಲದ ಕಾರಣ, ಅದು ನಿಜವಾದ ವಾಸವದತ್ತವಲ್ಲವೆಂದು ಕೆಲವರು ಅಭಿಪ್ರಾಯ ಪಡುತ್ತಾರೆ ಇದು ಸಾಧುವಾಗಿ ತೋರುವುದಿಲ್ಲ. ಸರ್ವಾನಂದನು ಈಗಿನ ವಾಸವದತ್ತ ನಾಟಕದ ಕಥಾಭಾಗವನ್ನೇ ಉದಹರಿಸಿದ್ದಾನೆಂದು ತೋರುತ್ತದೆ. ಏಕೆಂದರೆ, ಧರ್ಮಶೃಂಗಾರಕ್ಕೆ ನಂದಯಂತೀ ಗ್ರಂಥವನ್ನು ಸೂಚಿಸಿ ಆತನು ನಿದರ್ಶನವನ್ನು ಕೊಟ್ಟಿದ್ದಾನೆ. ಮೂರನೆಯ ಕಾಮಶೃಂಗಾರಕ್ಕೆ ಸ್ವಪ್ನವಾಸವದತ್ತ ನಾಟಕವನ್ನು ಸೂಚಿಸಿ ಆತನು ನಿದರ್ಶನವನ್ನು ಹೇಳಿದ್ದಾನೆ. ಎರಡನೆಯದಾದ ಅರ್ಥಶೃಂಗಾರಕ್ಕೆ ಉದಯನನು ಪದ್ಮಾವತಿಯನ್ನು ವಿವಾಹ ಮಾಡಿಕೊಂಡುದನ್ನು ಮಾತ್ರವೇ ಸೂಚಿಸಿ ಸರ್ವಾನಂದನು ಗ್ರಂಥದ ಹೆಸರನ್ನು ತಿಳಿಸದೆ ಸುಮ್ಮನಾಗಿದ್ದಾನೆ. ಗ್ರಂಥದ ಹೆಸರನ್ನು ಸೂಚಿಸದೆ ಅವನ ನಿದರ್ಶನಗಳು ಪೂರ್ತಿಯಾಗುವಂತಿಲ್ಲ. ಆದಕಾರಣ, ಡಾಕ್ಟರ್ ಲಕ್ಷ್ಮಣ ಸರೂಪ್‌ರವರು ಹೇಳುವಂತೆ ಅರ್ಥಶೃಂಗಾರ ಕಾಮಶೃಂಗಾರಗಳೆರಡಕ್ಕೂ ಅವನು ಸ್ವಪ್ನವಾಸವದತ್ತದಿಂದಲೇ ಉದಾಹರಣೆಗಳನ್ನು ಕೊಟ್ಟಿದ್ದಾನೆಂಬುದು ಸಾಧುರೀತಿಯಲ್ಲಿ ಫಲಿತವಾಗುತ್ತದೆ. ಉದಯನನು ರಾಜ್ಯವನ್ನು ಕಳೆದುಕೊಂಡಂತೆಯೂ, ಪದ್ಮಾವತೀ ವಿವಾಹವಾದಮೇಲೆ ಮಗಧರಾಜನ ಸಹಾಯದಿಂದ ಶತ್ರುನಿಗ್ರಹಮಾಡಿ ಅವನು ಮತ್ತೆ ತನ್ನ ರಾಜ್ಯವನ್ನು ಪಡೆದಂತೆಯೂ ಚಿತ್ರಿತವಾಗಿರುವುದು ಈಗ ಉಪಲಬ್ಧವಾಗಿರುವ ಸ್ವಪ್ನವಾಸವದತ್ತದಲ್ಲಿ ಮಾತ್ರವೇ. ಬೃಹತ್ಕಥೆಯ ಆಧಾರದ ಮೇಲೆ ರಚಿಸಲ್ಪಟ್ಟಿರುವ ಅವರ ಪ್ರತಿಚ್ಛಾಯಾರೂಪವಾದ ಸೋಮದೇವನ ಗ್ರಂಥದಲ್ಲಾಗಲಿ, ಕ್ಷೇಮೇಂದ್ರನ ಗ್ರಂಥದಲ್ಲಾಗಲಿ, ಅಥವಾ ಬುದ್ಧಸ್ವಾಮಿಯ ಗ್ರಂಥದಲ್ಲಾಗಲಿ, ಇರುವ ಉದಯನನ ಕಥೆಯಲ್ಲಿ ಈ ವಿಷಯವೇ ಬಂದಿಲ್ಲ. ತನ್ನ ರಾಜ್ಯವನ್ನು ವಿಸ್ತರಿಸಿಕೊಳ್ಳುವ ಆಶೆಯಿಂದ ಉದಯನನು ಪದ್ಮಾವತೀ ಪರಿಣಯಕ್ಕೆ ಸಮ್ಮತಿಸಿದನೆಂದು ಅವುಗಳಲ್ಲಿ ಹೇಳಿದೆ. ಆದಕಾರಣ, ಸರ್ವಾನಂದನು ಸ್ವಪ್ನವಾಸವದತ್ತ ನಾಟಕದಿಂದಲೇ ಉದಯನ ಪದ್ಮಾವತಿಯರ ವಿವಾಹದ ಅರ್ಥಶೃಂಗಾರವನ್ನು ತೆಗೆದುಕೊಂಡಿರಬೇಕು. ಇನ್ನು ವಾಸವ

ದತ್ತ ನಾಟಕದಲ್ಲಿ ವಾಸವದತ್ತಾ ಪರಿಣಯವೇ ನಡೆಯದಿರುವಲ್ಲಿ ಕಾಮ ಶೃಂಗಾರಕ್ಕೆ ನಿದರ್ಶನವಾಗಿ ಅದನ್ನು ಸೂಚಿಸಿ ಕವಿಯು ಆಭಾಸಮಾಡಿದ್ದಾನೆಂಬುದಕ್ಕೆ ಸಮಾಧಾನವೇನೆಂಬುದನ್ನು ಪರಿಗಣಿಸೋಣ. ವಾಸವದತ್ತೆಯ ತಾಯಿಯಾದ ಅಂಗಾರವತೀದೇವಿಯು ಧಾತ್ರಿ ವಸುಂಧರೆಯೊಡನೆ ಉದಯನ ವಾಸವದತ್ತೆಯರ ಪ್ರತಿಕೃತಿಗಳನ್ನು ಬರೆದಿರುವ ಚಿತ್ರಫಲಕವನ್ನು ಕಳುಹಿಸಿ, ಅವರು (ಉದಯನ ವಾಸವದತ್ತೆಯರು) ಕೌಶಾಂಬಿ ದೇಶಕ್ಕೆ ಓಡಿಹೋದ ಮೇಲೆ ತಾನೂ ಮಹಾಸೇನನೂ ಅವರ ಪ್ರತಿಕೃತಿಗಳನ್ನು ಬರೆಯಿಸಿ ಅವಕ್ಕೇ ವಿವಾಹಕರ್ಮವನ್ನು ನೆರವೇರಿಸಿದ್ದಂತೆ ಸಂದೇಶವನ್ನು ಕಳುಹಿಸುತ್ತಾಳೆ. ಉದಯನ ವಾಸವದತ್ತೆಯರ ವರ್ತನವೂ, ಈ ವಿವಾಹವೂ, ಕಾಮಶೃಂಗಾರದ ಮನೋಹರ ನಿದರ್ಶನಗಳೆನ್ನಲು ಲೇಶವೂ ಅಭ್ಯಂತರವಿಲ್ಲ. ಸರ್ವಾನಂದನು ಕಾಮಶೃಂಗಾರದ ಉದಾಹರಣೆಯಾಗಿ ಸೂಚಿಸಿರುವುದು ಈ ಅಂಶವನ್ನೇ. ಇದುವರೆಗೆ ಹೇಳಿದ ಪ್ರಮಾಣಗಳನ್ನೆಲ್ಲ ಪರಿಶೀಲಿಸಿ ನೋಡಿದರೆ ಸ್ವಪ್ನವಾಸವದತ್ತ ನಾಟಕವೂ, ತನ್ಮೂಲಕ ಇತರ ಹನ್ನೆರಡು ನಾಟಕಗಳೂ ಭಾಸಕೃತವೇ ಆಗಿರಬೇಕೆಂಬ ಅನುಮಾನವೇ ದೃಢಪಡುವುದು.

## ಬಾಧಕಗಳ ವಿಚಾರ

**ಧ್ವನ್ಯಾಲೋಕ ಲೋಚನದ ಶ್ಲೋಕ:**—ಪ್ರಸಕ್ತ ರೂಪಕಗಳು ಭಾಸಕೃತವಲ್ಲವೆಂದು ಅಭಿಪ್ರಾಯಪಡುವವರು ಮಾಡುವ ಮುಖ್ಯವಾದ ಆಕ್ಷೇಪಣೆಗಳಲ್ಲಿ ಕೆಲವನ್ನು ಹಿಂದೆಯೇ ಅಲ್ಲಲ್ಲಿ ಹೇಳಲಾಗಿದೆ. ಮತ್ತೆ ಕೆಲವನ್ನು ಈಗ ವಿಚಾರಮಾಡೋಣ. ಆನಂದವರ್ಧನನ ಧ್ವನ್ಯಾಲೋಕಕ್ಕೆ ಅಭಿನವ ಗುಪ್ತಾಚಾರ್ಯನು ಬರೆದಿರುವ ಧ್ವನ್ಯಾಲೋಕ ಲೋಚನವೆಂಬ ವ್ಯಾಖ್ಯಾನದಲ್ಲಿ, "ಸ್ವಪ್ನವಾಸವದತ್ತಾಖ್ಯ ನಾಟಕದಲ್ಲಿ 'ರೆಪ್ಪೆಗಳೆಂಬ ಬಾಗಿಲುಗಳಿಂದ ಕೂಡಿದ್ದ ನಯನವೆಂಬ ದ್ವಾರವನ್ನು ತನ್ನ ರೂಪದ ತಾಡನದಿಂದ ಉದ್ಘಾಟಿಸಿಕೊಂಡು ಆ ರಾಜಕುಮಾರಿಯು ನನ್ನ ಹೃದಯಗೃಹವನ್ನು ಪ್ರವೇಶಿಸಿದಳು' ಎಂದು ಶ್ಲೋಕವಿರುವಂತೆ"* ಎಂಬುದಾಗಿ ಬರೆದಿದ್ದಾನೆ.

---

* "ಯಥಾ ಸ್ವಪ್ನವಾಸವದತ್ತಾಖ್ಯೇ ನಾಟಕೇ ।
ಸ್ವಂಚಿತ ಪಕ್ಷ್ಮಕಪಾಟ ನಯನದ್ವಾರಂ ಸ್ವರೂಪತಾಡನೇನ ।
ಉದ್ಘಾಟ್ಯ ಸಾ ಪ್ರವಿಷ್ಟಾ ಹೃದಯಗೃಹಂ ಮೇ ನೃಪತನೂಜಾ ॥"

ಸ್ವಪ್ನವಾಸವದತ್ತ ನಾಟಕದಲ್ಲಿರುವುದಾಗಿ ಅವನು ಹೇಳಿರುವ ಶ್ಲೋಕವು ಈಗಿನ ಸ್ವಪ್ನವಾಸವದತ್ತದಲ್ಲಿಲ್ಲ. ಆದಕಾರಣ, ಇದು ಭಾಸಕೃತವಾದ ಸ್ವಪ್ನವಾಸವದತ್ತವಲ್ಲವೆಂದು ಮ|| ರಾ|| ಹೀರಾನಂದ ಶಾಸ್ತ್ರಿಗಳೇ ಮುಂತಾದವರು ಅಭಿಪ್ರಾಯಪಡುತ್ತಾರೆ. ಕವಿಗಳು ಕೆಲವುವೇಳೆ ರಸಕ್ಕಿಂತಲೂ ಹೆಚ್ಚಾಗಿ ಅಲಂಕಾರಕ್ಕೇ ಗಮನಕೊಟ್ಟು ಕೃತಿಯ ಮಾಧುರ್ಯಕ್ಕೆ ಕುಂದಕವನ್ನು ತರುವರೆಂಬುದಕ್ಕೆ ಉದಾಹರಣೆಯಾಗಿ ಅಭಿನವ ಗುಪ್ತಾಚಾರ್ಯನು ಸ್ವಪ್ನವಾಸವದತ್ತದ ಶ್ಲೋಕವೆಂದು ಅದನ್ನು ಉದಹರಿಸಿದ್ದಾನೆ. ಭಾಸಕೃತಿಗಳೆಂದು ಹೇಳುವ ಹದಿಮೂರು ರೂಪಕಗಳಲ್ಲಿ ಯಾವುದೊಂದರಲ್ಲಿಯೂ ಅಭಿನವ ಗುಪ್ತಾಚಾರ್ಯನು ಉದಹರಿಸಿರುವ ಶ್ಲೋಕದಷ್ಟುಮಟ್ಟಿಗೆ ಅಲಂಕಾರ ಶೃಂಖಲೆಗಳಿಂದ ಬದ್ಧವಾಗಿ ರಸಾಭಾಸಮಾಡಿರುವ ಮತ್ತಾವ ಶ್ಲೋಕವೂ ಕಂಡುಬರುವುದಿಲ್ಲ. ಅಭಿನವ ಗುಪ್ತಾಚಾರ್ಯನಂತಹ ಉದ್ದಾಮ ಪಂಡಿತನು ಸ್ವಪ್ನವಾಸವದತ್ತದಲ್ಲಿಲ್ಲದಿದ್ದ ಶ್ಲೋಕವನ್ನು ಪ್ರಮಾದವಶದಿಂದ ಉದಹರಿಸಿದನೆಂದು ಹೇಳುವುದೂ ಗುರುತರವಾದ ಅಪರಾಧವಾದೀತು. ಆದುದರಿಂದ, ಪಾಠಭೇದವುಳ್ಳ ಪ್ರತಿಗಳಿದ್ದುದೇ ಇದಕ್ಕೆ ಕಾರಣವಾಗಿರಬೇಕೆಂದೇ ಹೇಳಬೇಕಾಗುವುದು.

ಪದ್ಮಾವತಿಯ ವಿಚಾರವಾಗಿ ಈ ಶ್ಲೋಕವು ಈಗಿರುವ ಸ್ವಪ್ನವಾಸವದತ್ತ ನಾಟಕದಲ್ಲಿ ಬರುವುದಕ್ಕೆ ಔಚಿತ್ಯವಿಲ್ಲ. ಏಕೆಂದರೆ, ಪದ್ಮಾವತಿಯಲ್ಲಿ ಅವನಿಗೆ ಪ್ರಥಮ ಸಂದರ್ಶನದಲ್ಲಿ ಪ್ರೇಮವಾಗಲಿ ಅನುರಾಗವಾಗಲಿ ಅಂಕುರಿಸಲು ಅವಕಾಶವಿಲ್ಲ. ವಾಸವದತ್ತೆಯ ವಿಚಾರವಾಗಿ ಒಂದುವೇಳೆ ಅವನು ಈ ವಿಧವಾಗಿ ಹಲುಬಿದ್ದರೂ ಹಲುಬಿರಬಹುದು. ಅಭಿನವಗುಪ್ತಾಚಾರ್ಯನು ನೋಡಿದ ಪ್ರತಿಯಲ್ಲಿ ಆ ಶ್ಲೋಕವು ಇದ್ದಿರಬಹುದು. ಡಾಕ್ಟರ್ ಗಣಪತಿ ಶಾಸ್ತ್ರಿಗಳವರಿಗೆ ಸಿಕ್ಕಿದ ಪ್ರತಿಯಲ್ಲಿ ಆ ಶ್ಲೋಕವು ಪಾಠಭೇದದಿಂದಲೋ, ಅಥವಾ ಆ ಪ್ರತಿಯ ಲೇಖಕನ ಪ್ರಮಾದವಶದಿಂದಲೋ ಬಿಟ್ಟುಹೋಗಿರಬಹುದು. ಶಾಕುಂತಲ ನಾಟಕದ ಬಂಗಾಳಿ ಭಾಷೆಯ ಪ್ರತಿಗಳಲ್ಲಿರುವ ಅನೇಕ ಶ್ಲೋಕಗಳು ದೇವನಾಗರಿ ಪ್ರತಿಯಲ್ಲಿಲ್ಲ. ಸ್ವಪ್ನವಾಸವದತ್ತ ನಾಟಕದ ವಿಷಯದಲ್ಲಿ ಕೂಡ, ಅದೇರೀತಿ ಪಾಠಭೇದಗಳೂ ಇದ್ದಿರಬಹುದು. ಈ ಸಂಬಂಧದಲ್ಲಿ ನಾವು ಮತ್ತೊಂದು ಅಂಶವನ್ನೂ ಗಮನಿಸಬೇಕು.

ಅಭಿನವ ಗುಪ್ತಾಚಾರ್ಯನು 'ಕ್ವಚಿತ್ ಕ್ರೀಡಾ ಯಥಾ ಸ್ವಪ್ನವಾಸವದತ್ತಾಯಾಂ' (ಸ್ವಪ್ನವಾಸವದತ್ತದಲ್ಲಿರುವಂತೆ ಕೆಲವು ಸಂದರ್ಭಗಳಲ್ಲಿ ಆಟವೂ ಕಂಡುಬರುವುದುಂಟು) ಎಂದೂ ಹೇಳಿದ್ದಾನೆ. ಅದಕ್ಕೆ ಸರಿಯಾಗಿ ಪದ್ಮಾವತಿಯು ಚೆಂಡಾಟವನ್ನಾಡುತ್ತಿರುವ ದೃಶ್ಯವೂ ಈಗ ಸಿಕ್ಕಿರುವ ವಾಸವದತ್ತ ನಾಟಕದಲ್ಲಿದೆ. ಆದಕಾರಣ, ಮೇಲೆ ಸೂಚಿಸಿದ ಶ್ಲೋಕವು ಪಾಠಭೇದದಿಂದಲೋ ಪ್ರಮಾದವಶದಿಂದಲೋ ಬಿಟ್ಟುಹೋಗಿರಬೇಕೆಂಬ ಅಂಶವೇ ಮತ್ತಷ್ಟು ಖಚಿತವಾಗುತ್ತದೆ. ಈಗಿನ ಸ್ವಪ್ನವಾಸವದತ್ತವು ಭಾಸಕೃತವಲ್ಲವೆಂದು ವಾದಿಸುವವರಿಗೂ ಈ 'ಕ್ವಚಿತ್ ಕ್ರೀಡಾ ಯಥಾ ಸ್ವಪ್ನವಾಸವದತ್ತಾಯಾಂ' ಎಂಬ ವಾಕ್ಯವು ನುಂಗಲಾರದ ತುತ್ತಾಗಿದೆ. * ಆದರೂ ಅವರು ವಿಚಿತ್ರವಾದ ವಾದಸರಣಿಯೊಂದನ್ನು ಹೂಡಿದ್ದಾರೆ. ಈಗಿನ ಸ್ವಪ್ನವಾಸವದತ್ತ ನಾಟಕವು ನಿಜವಾದ ಭಾಸಕೃತಿಯಾದ ಸ್ವಪ್ನವಾಸವದತ್ತದ ಆಧಾರದಮೇಲೆ ರಚಿತವಾದುದೆಂದೂ, ಅದರಲ್ಲಿದ್ದ ಚೆಂಡಾಟದ ವಿಚಾರವೇ ಇದರಲ್ಲಿಯೂ ಬಂದಿದೆಯೆಂದೂ ಅವರು ಅಭಿಪ್ರಾಯ ಪಡುತ್ತಾರೆ. ಇಂತಹ ವಿಲಕ್ಷಣವಾದ ವಾದಸರಣಿಗೆ ಸಮಾಧಾನ ಹೇಳಿ ಫಲವಿಲ್ಲ. ಈ ಬಗೆಯ ವಾದದಲ್ಲಿ ಹುರುಳಿಲ್ಲವೆಂಬುದನ್ನಂತೂ ಹೇಳಬೇಕಾದುದೇ ಇಲ್ಲ. ಅವರು ಹೀಗೆ ವಿಲಕ್ಷಣ ಸಿದ್ಧಾಂತಕ್ಕೆ ಹೊರಡದೆ, ಈ ವಾಕ್ಯದಿಂದಲೇ ಈಗಿನ ಸ್ವಪ್ನವಾಸವದತ್ತ ನಾಟಕವು ಭಾಸಕೃತವೆಂದು ನಿರ್ಧಾರಕವಾಗಿ ತೀರ್ಮಾನಿಸುವುದಕ್ಕಾಗುವುದಿಲ್ಲವೆಂದು ಅಗತ್ಯವಾಗಿ ಹೇಳಬಹುದಾಗಿದ್ದಿತು. ಆದಾಗ್ಗೂ, ಈಗಿನ ಸ್ವಪ್ನವಾಸವದತ್ತ ನಾಟಕವು ಭಾಸಕೃತವಿರಬಹುದೆನ್ನುವವರೂ ಆ ವಾಕ್ಯ

---

* ಈಗಿನ ಸ್ವಪ್ನವಾಸವದತ್ತ ನಾಟಕವು ಭಾಸಕೃತವಲ್ಲವೆಂದು ವಾದಿಸುವವರಲ್ಲೊಬ್ಬರಾದ ಮ|| ರಾ|| ಹೀರಾನಂದ ಶಾಸ್ತ್ರಿಗಳವರು ಕೂಡ "Here it might be said that Abhinava Gupta's mention of the play in the words... ..............will favour the indentification of the Trivandrum drama with the ancient Svapnavasavadatta for, in the Trivandrum *Nataka* we do find Padmavati sporting with a ball, although there is not much of *Krida* in it" ಎಂದು ಹೇಳಿದ್ದಾರೆ.

ವನ್ನು ಅನುಮಾನ ಪ್ರಮಾಣವಾಗಿ ಅಂಗೀಕರಿಸಬೇಕಾಗಿದೆಯೇ ಹೊರತು, ನಿರ್ಧಾರಕವಾಗಲ್ಲ.

**ನಾಟ್ಯದರ್ಪಣದಲ್ಲಿರುವ ಉದಾಹರಣೆಯ ಶ್ಲೋಕ:**—ಈ ರೂಪಕಗಳು ಭಾಸಕೃತವಲ್ಲವೆಂದು ವಾದಿಸುವವರು ಸೂಚಿಸುವ ಮತ್ತೊಂದು ಆಕ್ಷೇಪವು, ನಾಟ್ಯದರ್ಪಣದಲ್ಲಿ ಭಾಸನ ಸ್ವಪ್ನವಾಸವದತ್ತ ನಾಟಕದ ಶ್ಲೋಕವೆಂದು ಉದಹರಿಸಿರುವ ಒಂದು ಶ್ಲೋಕವು ಈಗ ಉಪಲಬ್ಧವಾಗಿರುವ ಸ್ವಪ್ನವಾಸವದತ್ತದಲ್ಲಿಲ್ಲದಿರುವುದೇ ಆಗಿದೆ. ರಾಮಚಂದ್ರ ಗುಣಚಂದ್ರರು ರಚಿಸಿರುವ ನಾಟ್ಯದರ್ಪಣವೆಂಬ ಗ್ರಂಥದಲ್ಲಿ "ಭಾಸಕೃತವಾದ ಸ್ವಪ್ನವಾಸವದತ್ತದಲ್ಲಿ ಶೇಫಾಲಿಕಾ ಮಂಟಪದ ಶಿಲಾತಲವನ್ನು ನೋಡಿ ವತ್ಸರಾಜನು 'ಪಾದಾಕ್ರಾಂತವಾದ ಪುಷ್ಪಗಳು. ಇನ್ನೂ ಬೆಚ್ಚಗಿರುವ ಶಿಲಾಸನ. ನಿಶ್ಚಯ. ಇಲ್ಲಿ ಕುಳಿತಿದ್ದವಳು ಯಾವಳೋ ನನ್ನನ್ನು ಕಂಡು ಇದೇ ತಾನೆ ತಟಕ್ಕನೆ ಎದ್ದುಹೋಗಿರಬೇಕು' ಎಂದು ಹೇಳುವಂತಿರುವ ಶ್ಲೋಕದಂತೆ" ಎಂಬುದಾಗಿ ಸೂಚಿಸಿದ್ದಾರೆ.* ಊಹೆಯಿಂದ ನಿಜಾಂಶವನ್ನು ತರ್ಕಿಸಿ ನಿರ್ಧರಿಸುವುದಕ್ಕೆ ನಿದರ್ಶನವಾಗಿ ಗ್ರಂಥಕರ್ತರು ಇದನ್ನು ತಿಳಿಸಿದ್ದಾರೆ. ಕಾಲನ್ನು ಇಳಿಯಬಿಟ್ಟು ಕುಳಿತಿರುವಾಗ್ಗೆ ಹೆಜ್ಜೆಯ ಬಳಿಯಲ್ಲಿ ನೆಲದ ಮೇಲಿರುವ ಹೂಗಳನ್ನೂ, ಶಿಲಾಸನವು ಇನ್ನೂ ಕಾವಿನಿಂದ ಕೂಡಿರುವುದನ್ನೂ ಕಂಡು ವತ್ಸರಾಜನು ಹಾಗೆ ಊಹಿಸಿ ಹೇಳಿದುದನ್ನು ಅವರು ಉದಾಹರಣೆಯಾಗಿ ಹೇಳಿದ್ದಾರೆ. ಅಲ್ಲದೆ, ಸ್ವಪ್ನವಾಸವದತ್ತವು ಭಾಸಕೃತವೆಂದೂ ಸ್ಪಷ್ಟವಾಗಿ ಅವರು ಹೇಳಿದ್ದಾರೆ. ಅವರು ಉದಹರಿಸಿರುವ ಶ್ಲೋಕವು ಈಗ ಉಪಲಬ್ಧವಾಗಿರುವ ಸ್ವಪ್ನವಾಸವದತ್ತ ನಾಟಕದಲ್ಲಿಲ್ಲವೆಂದೂ, ಆದಕಾರಣ ಅದು ಭಾಸಕೃತವಲ್ಲವೆಂದೂ ಪ್ರೊಫೆಸರ್ ಸಿಲ್ವೆನ್ ಲೆವಿಯವರು ಅಭಿಪ್ರಾಯಪಟ್ಟು ಒಂದು ಲೇಖನವನ್ನು ಪ್ರಕಟಿಸಿದ್ದರು.

---

*"ಯಥಾ ಭಾಸಕೃತೇ ಸ್ವಪ್ನವಾಸವದತ್ತೇ ಶೇಫಾಲಿಕಾ ಮಂಡಪ ಶಿಲಾತಲಮವಲೋಕ್ಯ ವತ್ಸರಾಜಃ |

ಪಾದಾಕ್ರಾಂತಾನಿ ಪುಷ್ಪಾಣಿ ಸೋಷ್ಮಚೇದಂ ಶಿಲಾಸನಮ್ |
ನೂನಂ ಕಾಚಿದಿಹಾಸೀನಾ ಮಾಂ ದೃಷ್ಟ್ವಾ ಸಹಸಾ ಗತಾ ||"

ಆದರೆ, ಶ್ಲೋಕವೇನೂ ಇಲ್ಲದಿದ್ದರೂ ಅದರ ಅರ್ಥವನ್ನೇ ಉಳ್ಳ (ಗದ್ಯ ರೂಪದ) ರಾಜವಿದೂಷಕರ ಸಂಭಾಷಣವು (ಶೇಫಾಲಿಕಾ ಕುಸುಮಗಳು ನೆಲದಮೇಲೆ ಬಿದ್ದಿರುವ ಅಂಶದೊಡನೆ) ಈಗ ಉಪಲಬ್ಧವಾಗಿರುವ ಸ್ವಪ್ನ ವಾಸವದತ್ತದಲ್ಲಿದೆ. ಹೀಗಿರಲು ಪಾಠಭೇದವೇ ಕಾರಣವೆಂದು ತೋರುತ್ತದೆ. ಶ್ಲೋಕರೂಪದಲ್ಲಿರುವುದಾಗಿ ಹೇಳಿರುವುದು ಗದ್ಯರೂಪದಲ್ಲಿರುವ ಕಾರಣ, ಇದನ್ನು ಒಪ್ಪುವುದಕ್ಕಾಗುವುದಿಲ್ಲವೆಂದು ಯಾರಾದರೂ ಅಭಿಪ್ರಾಯಪಡುವುದಾದರೆ ಅದಕ್ಕೂ ಸಮಾಧಾನಹೇಳಬಹುದು. ವಿಶ್ವನಾಥನು ತನ್ನ ಸಾಹಿತ್ಯ ದರ್ಪಣದಲ್ಲಿ 'ವ್ಯವಹಾರ'ಕ್ಕೆ, ಎಂದರೆ ಹಾಸ್ಯರಸ ಪರಿಪೂರಿತವಾದ ಭಾಷಣಕ್ಕೆ, ನಿದರ್ಶನವಾಗಿ ಮಾಳವಿಕಾಗ್ನಿಮಿತ್ರ ನಾಟಕದಲ್ಲಿರತಕ್ಕ ಭಾಗವೆಂದು ಗಣದಾಸನಿಗೂ ವಿದೂಷಕನಿಗೂ (ಮಾಲವಿಕೆಯ ಲಾಸ್ಯವು ಮುಗಿದಮೇಲೆ) ನಡೆಯುವ ಸಂಭಾಷಣವನ್ನು ಉದಹರಿಸಿದ್ದಾನೆ. ಅದಕ್ಕೂ, ಈಗ ಕಾಳಿದಾಸಕೃತ ಮಾಲವಿಕಾಗ್ನಿ ಮಿತ್ರವೆಂದು ಅಚ್ಚಾಗಿರುವ ಪುಸ್ತಕದ ಪ್ರತಿಯ ಅದೇ ಭಾಗಕ್ಕೂ ವ್ಯತ್ಯಾಸವಿದೆ. ಒಂದರಲ್ಲಿ ಶ್ಲೋಕ ರೂಪದಲ್ಲಿರುವುದೇ ಮತ್ತೊಂದರಲ್ಲಿ ಗದ್ಯರೂಪದ ಸಂಭಾಷಣದ ರೂಪದಲ್ಲಿದೆ. ಹೀಗಾಗಿರುವುದಕ್ಕೆ ಪಾಠಭೇದವೇ ಕಾರಣವಾಗಿರಬೇಕಲ್ಲವೆ ? ದೇವನಾಗರಿಯಲ್ಲಿ ಅಚ್ಚಾದ ಶಾಕುಂತಲ ನಾಟಕದ ಕೆಲವು ಪ್ರತಿಗಳಲ್ಲಿ 'ನ ಖಲು ನ ಖಲುಃ ಬಾಣಸ್ಸನ್ನಿಪಾತೋಽಯಮಸ್ಮಿನ್....' ಎಂಬ ಶ್ಲೋಕವೂ 'ಕುಲ್ಯಾಂಭೋಭಿಃ....' ಎಂಬ ಶ್ಲೋಕವೂ ಬಿಟ್ಟುಹೋಗಿವೆ. ಹಿಂದೆ ಭರತ ಖಂಡದಲ್ಲಿದ್ದ ಪರಿಸ್ಥಿತಿಯ ದೃಷ್ಟಿಯಿಂದ ಈ ಬಗೆಯ ದೋಷವು ಅನಿವಾರ್ಯವಾದುದು. ಆದಕಾರಣ ಅದನ್ನೇ ಪ್ರಧಾನವಾಗಿಟ್ಟುಕೊಂಡು ಪ್ರೊಫೆಸರ್ ಸಿಲ್ವನ್ ಲೆವಿಯವರು ಆರೀತಿ ಅಭಿಪ್ರಾಯಪಟ್ಟಿರುವುದು ಅಸಂಗತವೇ ಸರಿ. ಸಾಗರ ನಂದಿಯು ತಾನು ರಚಿಸಿರುವ ನಾಟಕ ಲಕ್ಷಣ ರತ್ನಕೋಶದಲ್ಲಿ ಸ್ವಪ್ನವಾಸವದತ್ತ ನಾಟಕದ ಆದಿಭಾಗವನ್ನು ಉದಹರಿಸಿ, 'ಯಥಾ ಸ್ವಪ್ನ ವಾಸವದತ್ತೇ ನೇಪಥ್ಯೇ ಸೂತ್ರಧಾರಃ ಉತ್ಸಾರಣಾಂ ಶ್ರುತ್ವಾ ಪಠತಿ। ಅಯೇ ಕಥಂ ತಪೋವನೇಽಪ್ಯುತ್ಸಾರಣಾ । (ವಿಲೋಕ್ಯ) ಕಥಂ ಮಂತ್ರೀ ಯೌಗಂಧರಾಯಣಃ ವತ್ಸರಾಜಸ್ಯ ರಾಜ್ಯಪ್ರತ್ಯಾನಯನಂ ಕರ್ತುಕಾಮಃ ಪದ್ಮಾವತೀ ಯಜನೇನೋತ್ಸಾರ್ಯತೇ। ಇತಿ' ಎಂದು ಬರೆದಿದ್ದಾನೆ. ಈಗಿನ

ಸ್ವಪ್ನವಾಸವದತ್ತ ನಾಟಕದ ಆದಿಭಾಗದಲ್ಲಿ ಇದೇ ವಿಷಯವೇ ಇದ್ದರೂ ವಾಕ್ಯವಿಧಾನವು ಬೇರೆ ರೀತಿಯಲ್ಲಿದೆ. ಪಾಠಭೇದವುಂಟೆಂಬುದಕ್ಕೆ ಇದೂ ಒಂದು ನಿದರ್ಶನವಾಗಿದೆ. ಈ ಬಗೆಯ ವ್ಯತ್ಯಾಸಗಳಿಗೆಲ್ಲ ಪಾಠಭೇದವೆಂಬ ಹೆಸರನ್ನಿಟ್ಟು ಸುಲಭವಾಗಿ ಜಾರಿಕೊಳ್ಳುವುದಕ್ಕಾಗಿ ಹೀಗೆ ಹೇಳಿರುವಂತೆ ಯಾರೊಬ್ಬರೂ ಭಾವಿಸಕೂಡದು. ಪಾಠಭೇದದಿಂದಲೋ ಅಥವಾ ಪ್ರಮಾದ ವಶದಿಂದಲೋ ಇದೇ ಬಗೆಯ ದೋಷಕ್ಕೇ ಆಕರವಾಗಿರುವ ಶಾಕುಂತಲ ವನ್ನೂ, ಮಾಳವಿಕಾಗ್ನಿಮಿತ್ರ ನಾಟಕವನ್ನೂ ಕಾಳಿದಾಸನದಲ್ಲವೆಂದು ಪರಿ ತ್ಯಜಿಸುವುದರಲ್ಲಿ ಔಚಿತ್ಯವುಂಟೇ ಎಂಬುದನ್ನು ಸಾವಧಾನವಾಗಿ ಪರ್ಯಾ ಲೋಚಿಸಬೇಕಾದುದು ಆವಶ್ಯಕ. ಅವುಗಳ ವಿಷಯದಲ್ಲಿ ಆರೀತಿಮಾಡು ವುದು ಉಚಿತವೆನಿಸುವುದಾದರೆ, ಈಗಿನ ಸ್ವಪ್ನವಾಸವದತ್ತದ ವಿಷಯಕ್ಕೂ ಅದೇ ತೀರ್ಮಾನವನ್ನೇ ಧಾರಾಳವಾಗಿ ಅನ್ವಯಿಸಬಹುದು.

**ಧಾವಕ ವಿಚಾರ:**—ರಾಜಶೇಖರನ ವಾಣಿಯು ನಂಬಿಕೆಗೆ ಅರ್ಹ ವಲ್ಲವೆಂಬುದು, ಈ ರೂಪಕಗಳು ಭಾಸಕೃತವಲ್ಲವೆಂದು ಹೇಳುವವರು ಸೂಚಿ ಸುವ ಮತ್ತೊಂದು ಕಾರಣವಾಗಿದೆ. ಭಾಸನಾಟಕ ಚಕ್ರವು ವಿಮರ್ಶೆಯೆಂಬ ಅಗ್ನಿಪರೀಕ್ಷೆಗೆ ಗುರಿಯಾಯಿತೆಂದೂ, ಸ್ವಪ್ನವಾಸವದತ್ತವೊಂದು ಆ ಪರೀಕ್ಷೆ ಯಲ್ಲಿ ಪಾರಾಯಿತೆಂದೂ, ('ಭಾಸನಾಟಕ ಚಕ್ರೇಽಪಿ ಛೇಕೈಃ ಕ್ಷಿಪ್ತೇ ಪರೀಕ್ಷಿ ತುಂ । ಸ್ವಪ್ನವಾಸವದತ್ತಸ್ಯ ದಾಹಕೋಽಭೂನ್ನ ಪಾವಕಃ ॥') ರಾಜಶೇಖ ರನು ಹೇಳಿರುವುದನ್ನು ನಾವು ಹಿಂದೆಯೇ ಉದಹರಿಸಿದೆವಷ್ಟೆ. ಅವನ ಮಾತುಗಳು ನಂಬಿಕೆಗೆ ಅರ್ಹವಲ್ಲವೆಂದು ಅಭಿಪ್ರಾಯಪಟ್ಟು ಅದಕ್ಕೆ ಆಧಾರ ವಾಗಿ ಅದೇ ರಾಜಶೇಖರನ ಕೆಲವು ಶ್ಲೋಕಗಳನ್ನು * ಮ॥ ರಾ॥ ಎ. ಕೆ. ಪಿಶರೋತಿಯವರು ಸೂಚಿಸಿದ್ದಾರೆ. ಈ ಶ್ಲೋಕಗಳಿಗೆ ಅವರು ಹೇಳುವ

---

* "ಕಾರಣಂ ತು ಕವಿತ್ವಸ್ಯ ನ ಸಂಪನ್ನ ಕುಲೀನತಾ ।
ಧಾವಕೋಽಪಿ ಹಿ ಯದ್ ಭಾಸಃ ಕವೀನಾಮುಗ್ರಿಮೋಽಭವತ್ ॥
ಆದೌ ಭಾಸೇನ ರಚಿತಾ ನಾಟಿಕಾ ಪ್ರಿಯದರ್ಶಿಕಾ ।
ತಸ್ಯ ರತ್ನಾವಲೀ ನೂನಂ ರತ್ನಮಾಲೇವ ರಾಜತೇ ॥
* * * * * *
ನಾಗಾನಂದಂ ಸಮಾಲೋಕ್ಯ ಯಸ್ಯ ಶ್ರೀಹರ್ಷ ವಿಕ್ರಮಃ ॥"

ಅರ್ಥವೇನೆಂದರೆ: 'ಸಂಪತ್ತಾಗಲಿ, ಕುಲೀನತೆಯಾಗಲಿ, ಕವಿತಾ ಸಾಮರ್ಥ್ಯಕ್ಕೆ ಕಾರಣವಲ್ಲ. ಭಾಸನು ಅಗಸರವನಾದರೂ ಕವಿಗಳಲ್ಲಿ ಅಗ್ರಗಣ್ಯನೆನಿಸಿದನು. ಅವನು ಮೊದಲು ಪ್ರಿಯದರ್ಶಿಕಾ ನಾಟಿಕೆಯನ್ನು ರಚಿಸಿದನು. ಅವನು ರಚಿಸಿರುವ ರತ್ನಾವಳಿಯು ರತ್ನಮಾಲೆಯಂತೆ ರಾಜಿಸುತ್ತಿದೆ.... ಅವನು ರಚಿಸಿದ ನಾಗಾನಂದವನ್ನು ನೋಡಿದ ವಿಕ್ರಮಿ ಶ್ರೀಹರ್ಷನು......' ಈರೀತಿ ಅವರು ಅರ್ಥಮಾಡಿದ್ದಾರೆ. ಪ್ರಿಯದರ್ಶಿಕಾ, ರತ್ನಾವಳಿ, ನಾಗಾನಂದ, ಇವು ಮೂರೂ ಶ್ರೀಹರ್ಷಕೃತವೆಂದು ಸುಪ್ರಸಿದ್ಧವಾಗಿರುವಲ್ಲಿ ಅವುಗಳು ಭಾಸಕೃತವೆಂದು ರಾಜಶೇಖರನು ಇಲ್ಲಿ ಹೇಳಿರುವುದರಿಂದ, ಈ ಶ್ಲೋಕಗಳಲ್ಲಿರುವ ಸುಳ್ಳಿನ ಕಂತೆಯಂತೆಯೇ ಅವನು ಹೇಳಿರುವ ಭಾಸ ವಿಷಯಕವಾದ ಮತ್ತೊಂದು ಹೇಳಿಕೆಯೂ ಸಟೆಯೆಂದು ಅವರು ನಿರ್ಧರಿಸಿದ್ದಾರೆ. ಮ|| ರಾ|| ಕೆ. ಆರ್. ಪಿಶರೋತಿಯವರು ಈ ಶ್ಲೋಕಗಳಲ್ಲಿ ರಾಜಶೇಖರನು ಸೂಚಿಸಿರುವುದು ತಪ್ಪು ಅಭಿಪ್ರಾಯವೆಂದೂ ಆದಕಾರಣ ರಾಜಶೇಖರನ ಮಾತುಗಳು ನಂಬಿಕೆಗೆ ಅನರ್ಹವೆಂದೂ, ಹೇಳುತ್ತಾರೆ. ಅಲ್ಲದೆ, ಒಂದುವೇಳೆ ಅವನ ಮಾತುಗಳು ನಿಜವಾಗುವ ಪಕ್ಷಕ್ಕೆ ಕಾಳಿದಾಸನಿಗೆ ಪೂರ್ವದಲ್ಲಿ ಸ್ವಪ್ನವಾಸವದತ್ತವನ್ನು ಬರೆದವನೊಬ್ಬ ಭಾಸನೂ, ಶ್ರೀಹರ್ಷನ ಸನ್ಮಾನಕ್ಕೆ ಪಾತ್ರನಾದ ಭಾಸನೆಂಬ ಹೆಸರಿನ ಧಾವಕ (ಅಗಸ) ನೊಬ್ಬನೂ, ಈರೀತಿ ಇಬ್ಬರು ಭಾಸರು ಇದ್ದರೆಂದು ಅವರು ಅನುಮೇಯಿಸುತ್ತಾರೆ. ಈ ಈರ್ವರು ವಿಮರ್ಶಕರೂ ಭರತಖಂಡದ ಸಾಹಿತ್ಯಸಂಬಂಧವಾದ ಐತಿಹ್ಯವನ್ನೇ ಗಮನಿಸದೆ ರಾಜಶೇಖರನ ಶ್ಲೋಕಗಳಿಗೆ ಅಪಾರ್ಥ ಮಾಡಿರುವುದೇ ಈ ಆಭಾಸಕ್ಕೆ ಕಾರಣವೆಂದು ಡಾಕ್ಟರ್ ಲಕ್ಷ್ಮಣ ಸರೂಪ್‌ರವರು ಹೇಳಿರುವುದು ನಿಜವೆಂದು ತೋರುತ್ತದೆ. ಈ ಸಂಬಂಧದಲ್ಲಿ ಅವರು ಸೂಚಿಸಿರುವ ಸಮಾಧಾನವು ವಿಶ್ವಾಸಾರ್ಹವೆಂದು ಹೇಳಬಹುದಾಗಿದೆ. ಪ್ರಿಯದರ್ಶಿಕಾ, ರತ್ನಾವಳಿ ಮತ್ತು ನಾಗಾನಂದ, ಈ ಮೂರು ರೂಪಕಗಳನ್ನೂ ರಚಿಸಿದವನು ಶ್ರೀಹರ್ಷನಲ್ಲವೆಂದೂ, ಧಾವಕನೆಂಬೊಬ್ಬ ಕವಿಯು ಅವುಗಳನ್ನು ರಚಿಸಿದನೆಂದೂ, ಆಶ್ರಿತನಾದ ಆಸ್ಥಾನ ಕವಿಯ ಕೃತಿಗಳು ಆಶ್ರಯದಾತನಾದ ಶ್ರೀಹರ್ಷನ ಹೆಸರಿನಲ್ಲಿ ಪ್ರಕಟೀಕೃತವಾದುವೆಂದೂ, ಪ್ರತೀತಿಯುಂಟು. ರಾಜಶೇಖರ ಕವಿಯು ಸೂಚಿಸಿರುವುದು ಆ ಧಾವಕ ಕವಿಯ ವಿಚಾರವನ್ನು. ಆದ

ಕಾರಣ, ಈ ಶ್ಲೋಕಗಳಲ್ಲಿರುವ ಧಾವಕಶಬ್ದಕ್ಕೆ ಮ|| ರಾ|| ಪಿಶರೋತಿಯವರು ಸೂಚಿಸಿರುವಂತೆ ಅಗಸರವನೆಂದು ಅರ್ಥವಲ್ಲ. ಅದು ಕವಿಯ ಹೆಸರು. ಈ ಶ್ಲೋಕಗಳಲ್ಲಿರುವ ಭಾಸಶಬ್ದವು ಧಾವಕಕವಿಯ ಪ್ರತಿಭೆಯನ್ನು ಕೊಂಡಾಡುವುದಕ್ಕಾಗಿ ಉಪಯೋಗಿಸಿರುವ ವಿಶೇಷಣ. ಈ ದೃಷ್ಟಿಯಿಂದ ಶ್ಲೋಕಗಳಿಗೆ ಅರ್ಥಮಾಡಿದರೆ ಅವು ಸಮಂಜಸವಾಗಿಯೇ ಇರುತ್ತವೆ. ಆಗ್ಗೆ ಈ ಶ್ಲೋಕಗಳಿಗೆ 'ಸಂಪತ್ತಾಗಲಿ, ಕುಲೀನತೆಯಾಗಲಿ, ಕವಿತಾಸಾಮರ್ಥ್ಯಕ್ಕೆ ಕಾರಣವಲ್ಲ. ಏಕೆಂದರೆ ಪ್ರತಿಭಾಶಾಲಿಯಾದ ಧಾವಕನು ಕವಿಗಳಲ್ಲಿ ಅಗ್ರಗಣ್ಯನೆನಿಸಿದನು. ಆ ಪ್ರತಿಭಾಶಾಲಿಯು ಮೊಟ್ಟಮೊದಲು ಪ್ರಿಯದರ್ಶಿಕಾ ನಾಟಿಕೆಯನ್ನು ರಚಿಸಿದನು. ಅವನು ರಚಿಸಿರುವ ರತ್ನಾವಳಿಯು ರತ್ನಮಾಲೆಯಂತೆ ರಾಜಿಸುತ್ತಿದೆ. ಅವನು ರಚಿಸಿದ ನಾಗಾನಂದವನ್ನು ನೋಡಿದ ವಿಕ್ರಮಿ ಶ್ರೀಹರ್ಷನು........' ಎಂದು ಅರ್ಥವಾಗುತ್ತದೆ. ಇಲ್ಲಿ ಕವಿಗಳಲ್ಲಿ ಅಗ್ರಗಣ್ಯನೆಂದರೆ, ಶ್ರೀಹರ್ಷನ ಕಾಲದ ಕವಿಗಳಲ್ಲಿ ಅಗ್ರಗಣ್ಯನೆಂಬುದೇ ರಾಜಶೇಖರನ ಆಶಯವೆಂದು ತೋರುವುದು. ಹೀಗೆ ಅರ್ಥಮಾಡಿದರೆ ರಾಜಶೇಖರನ ವಚನಗಳು ಪೂರ್ಣ ಗೌರವಕ್ಕೆ ಅರ್ಹವಾದ ವಿಶ್ವಸನೀಯ ವಚನಗಳೆನ್ನಲು ಅಡ್ಡಿಯಿಲ್ಲ. ಆದರೆ ಈ ಶ್ಲೋಕಗಳಲ್ಲಿ ಧಾವಕನೆಂದರೆ, ಆ ಹೆಸರಿನ ಕವಿಯೆಂದು ಅರ್ಥಮಾಡಲು ಆಧಾರವೇನೆಂದು ಯಾರಾದರೂ ಪೂರ್ವಪಕ್ಷ ಮಾಡಿದರೆ, ಅದಕ್ಕೂ ಸಮಾಧಾನವನ್ನು ಹೇಳಬಹುದಾಗಿದೆ.

ಧಾವಕನ ವಿಚಾರವನ್ನು ಕುರಿತು ಮೂವರು ಪ್ರಸ್ತಾವಿಸಿದ್ದಾರೆ. ನಾಗೋಜಿಯೆಂಬಾತನು 'ಧಾವಕಃ ಕವಿಃ। ಸ ಹಿ ಶ್ರೀಹರ್ಷ ನಾಮ್ನಾ ರತ್ನಾವಲೀಂ ಕೃತ್ವಾ ಬಹುಧನಂ ಲಬ್ಧವಾನ್ । ಇತಿ ಪ್ರಸಿದ್ಧಮ್ ।' (ಧಾವಕನು ಕವಿ. ಅವನು ಶ್ರೀಹರ್ಷನೆಂಬ ಹೆಸರಿನಿಂದ ರತ್ನಾವಳೀ ಎಂಬ ಗ್ರಂಥವನ್ನು ರಚಿಸಿ ಬಹಳ ಹಣವನ್ನು ಪಡೆದನು-ಎಂಬುದು ಪ್ರಸಿದ್ಧವಾಗಿದೆ.) ಎಂದು ಹೇಳಿದ್ದಾನೆ. ಪರಮಾನಂದನೆಂಬ ವ್ಯಾಖ್ಯಾನಕಾರನು 'ಧಾವಕ ನಾಮಾ ಕವಿಃ । ಸ್ವಕೃತಿಂ ರತ್ನಾವಲೀಂ ನಾಮ ನಾಟಿಕಾಂ ವಿಕ್ರೀಯ ಶ್ರೀಹರ್ಷ ನಾಮ್ನೋ ರಾಜ್ಞಃ ಸಕಾಶಾದ್ ಬಹುಧನಮವಾಪೇ । ಇತಿ ಪುರಾವೃತ್ತಮ್ ॥' (ಧಾವಕನೆಂಬ ಹೆಸರಿನ ಕವಿಯಿದ್ದನು. ಅವನು ತನ್ನ ಕೃತಿಯಿಂದ ರತ್ನಾವಳಿಯೆಂಬ ಹೆಸರಿನ ನಾಟಿಕೆಯನ್ನು ವಿಕ್ರಯಿಸಿ ಶ್ರೀಹರ್ಷ

ನೆಂಬ ಹೆಸರಿನ ರಾಜನಿಂದ ಬಹಳ ಹಣವನ್ನು ಪಡೆದನು-ಎಂಬುದು ಪೂರ್ವ ಚರಿತ್ರೆ) ಎಂದು ಹೇಳಿದ್ದಾನೆ. ಕಾವ್ಯರಚನೆಯನ್ನು ಕೈಕೊಳ್ಳುವುದು ಯಶಸ್ಸಿಗಾಗಿ ಅಥವಾ ಧನಾರ್ಜನೆಗಾಗಿ (ಕಾವ್ಯಂ ಯಶಸೇಽರ್ಥಕೃತೇ) ಎಂದು ಹೇಳಿ ಅದಕ್ಕೆ ನಿದರ್ಶನವಾಗಿ ಕಾವ್ಯಪ್ರಕಾಶಕಾರನು 'ಕಾಲಿದಾಸಾದೀನಾಮಿವ ಯಶಃ। ಶ್ರೀಹರ್ಷಾದೇರ್ಧಾವಕಾದೀನಾಮಿವ ಧನಮ್ ।' (ಕಾಳಿದಾಸನೇ ಮೊದಲಾದವರಂತೆ ಯಶಸ್ಸಿಗಾಗಿ. ಶ್ರೀಹರ್ಷ ಮುಂತಾದವರಿಂದ ಧಾವಕನೇ ಮೊದಲಾದವರು ಪಡೆದಂತೆ ಹಣವನ್ನು ಪಡೆಯುವುದಕ್ಕಾಗಿ) ಎಂದು ಹೇಳಿರುವುದೂ ಇದಕ್ಕೆ ಉಪಷ್ಟಂಭಕವಾಗಿದೆ. ಕಾವ್ಯಪ್ರಕಾಶ ತಿಲಕವೆಂಬ ಗ್ರಂಥವನ್ನು ಬರೆದಿರುವ ಜಯರಾಮನ ಅಭಿಪ್ರಾಯವೂ, ಕಾವ್ಯಪ್ರದೀಪ ಪ್ರಭಾಕಾರನು ತನ್ನ ಗ್ರಂಥದಲ್ಲಿ ಬರೆದಿರುವ ಅಭಿಪ್ರಾಯವೂ, ಇದಕ್ಕೆ ಸಹಾಯಕವಾಗಿವೆ. ಆದಕಾರಣ, ರಾಜಶೇಖರನ ಶ್ಲೋಕಗಳಲ್ಲಿ ಆಭಾಸವೇನೂ ಇಲ್ಲವೆಂದೂ, ಭಾಸಕೃತ ಸ್ವಪ್ನವಾಸವದತ್ತದ ವಿಚಾರದಲ್ಲಿ ಅವನು ಹೇಳಿರುವ ಮಾತುಗಳು ನಂಬಿಕೆಗೆ ಅರ್ಹವೆಂದೂ ಧಾರಾಳವಾಗಿ ಹೇಳಬಹುದಾಗಿದೆ.

**ಸಾಹಿತ್ಯದರ್ಪಣದಲ್ಲಿರುವ ಉದಾಹರಣೆಯ ಶ್ಲೋಕ:**—ಬಾಲಚರಿತದಿಂದ ಉದ್ಧೃತವಾದಂತೆ ಸಾಹಿತ್ಯದರ್ಪಣದಲ್ಲಿ ಸೂಚಿತವಾಗಿರುವ ಒಂದು ಶ್ಲೋಕವು ಈಗ ಉಪಲಬ್ಧವಾಗಿರುವ ಬಾಲಚರಿತದಲ್ಲಿಲ್ಲವೆಂಬುದೂ ಒಂದು ಆಕ್ಷೇಪಣೆಯಾಗಿದೆ. 'ಉತ್ಸಾಹಾತಿಶಯಂ ವತ್ಸ ತವ ಬಾಲ್ಯಂ ಚ ಪಶ್ಯತಃ । ಮಮ ಹರ್ಷವಿಷಾದಾಭ್ಯಾಮಾಕ್ರಾಂತಂ ಯುಗಪನ್ಮನಃ ॥' ಎಂಬುದೇ ಆ ಶ್ಲೋಕ. ಸಾಹಿತ್ಯದರ್ಪಣದ ವ್ಯಾಖ್ಯಾನಕಾರನು ಈ ಶ್ಲೋಕವು ಪರಶುರಾಮನು ಶ್ರೀರಾಮನನ್ನು ಕುರಿತು ಹೇಳಿದುದೆಂದು ತಿಳಿಸಿದ್ದಾನೆ. ಪ್ರತಿಮಾ ನಾಟಕವು ಅಯೋಧ್ಯಾಕಾಂಡ ಅರಣ್ಯಕಾಂಡಗಳ ಕಥೆಗೂ, ಅಭಿಷೇಕ ನಾಟಕವು ಕಿಷ್ಕಿಂಧಾಕಾಂಡ ಸುಂದರಕಾಂಡ ಯುದ್ಧಕಾಂಡಗಳ ಕಥೆಗೂ, ವಿಶೇಷತಃ ಸಂಬಂಧಪಟ್ಟಿವೆ. ಆದಕಾರಣ, ಬಾಲಕಾಂಡ ಸಂಬಂಧವಾದ ಕಥಾವಸ್ತುವನ್ನೂ ಉಪಯೋಗಿಸಿ ಬರೆದ ಒಂದು ರೂಪಕವು ಇದ್ದಿರಬಹುದು. ಆದರೆ ಅದಕ್ಕೂ ಬಾಲಚರಿತವೆಂದೇ ಹೆಸರಿದ್ದುದು ಸಂಶಯಾಸ್ಪದವಾಗುತ್ತದೆ. ಬಹುಶಃ ಅದಕ್ಕೆ ಮತ್ತಾವುದೋ

ದೀರ್ಘತರವಾದ ಹೆಸರಿದ್ದು ಸಾಹಿತ್ಯದರ್ಪಣಕಾರನು ತನ್ನ ಅನುಕೂಲ್ಯ ಕ್ಕಾಗಿ ಬಾಲಚರಿತವೆಂದು ಸಂಕ್ಷಿಪ್ತ ನಾಮಧೇಯವನ್ನು ಪ್ರಯೋಗಮಾಡಿರ ಬಹುದು. ಮೇಲೆ ಉದಹರಿಸಿರುವ ಶ್ಲೋಕವು ಅದರಲ್ಲಿರಬಹುದು. ಈ ಶ್ಲೋಕವೇನೋ ಬಹಳ ಚೆನ್ನಾಗಿದೆ. ಪರಶುರಾಮನು ಕೇವಲ ವಿನಯ ಶೀಲನಾಗಿದ್ದಂತೆ ಇದರಲ್ಲಿ ಚಿತ್ರತವಾಗಿರುವುದು ಮನೋಹರವಾಗಿದೆ.

**ಸುಭಾಷಿತ ಕೋಶಗಳಲ್ಲಿರುವ ಭಾಸಕೃತ ಶ್ಲೋಕಗಳು ಪ್ರಸಕ್ತ ರೂಪಕಗಳಲ್ಲಿಲ್ಲದಿರುವ ವಿಚಾರ:**—ಭಾಸಕೃತವೆಂದು ಸುಭಾಷಿತ ಕೋಶ ಗಳಲ್ಲಿ ಸಂಪಾದಿತವಾಗಿರುವ ಕೆಲವು ಶ್ಲೋಕಗಳ ವಿಚಾರವನ್ನು ಮೊದಲೇ ಸೂಚಿಸಿ ಅವುಗಳಲ್ಲಿ ಕೆಲವನ್ನು ಉಲ್ಲೇಖಿಸಿರುವುದು ಸರಿಯಷ್ಟೆ. ಆ ಶ್ಲೋಕ ಗಳಲ್ಲಿ ಯಾವುದೊಂದೂ ಈಗ ಉಪಲಬ್ಧವಾಗಿರುವ ರೂಪಕಗಳಲ್ಲಿಲ್ಲವಾದ ಕಾರಣ, ಈ ರೂಪಕಗಳು ಭಾಸಪ್ರಣೀತವಲ್ಲವೆಂಬ ಅಭಿಪ್ರಾಯವಿದೆ. ಭಾಸ ಮಹಾಕವಿಯು ಚಾಟುಶ್ಲೋಕಗಳ ರೂಪದಲ್ಲೇ ಆಗಲಿ, ಅಥವಾ ರೂಪಕಕ್ಕೆ ಸಂಬಂಧವಿಲ್ಲದ ಕೇವಲ ಕವಿತೆಯ ರೂಪದಲ್ಲೇ ಆಗಲಿ, ಈ ಶ್ಲೋಕಗಳನ್ನು ರಚಿಸಿರಬಹುದು. ಹಾಗಿದ್ದ ಪಕ್ಷಕ್ಕೆ ಅವು ಪ್ರಸಕ್ತರೂಪಕಗಳಲ್ಲಿರುವುದಕ್ಕೇ ಕಾರಣವಿಲ್ಲ. ಅಥವಾ ಭಾಸಪ್ರಣೀತಗಳಾಗಿದ್ದರೂ ಇನ್ನೂ ಉಪಲಬ್ಧವಾಗಿಲ್ಲ ದಿರುವ ಇತರ ಗ್ರಂಥಗಳಲ್ಲಿ ಅವುಗಳು ಕಂಡುಬರಬಹುದು. ರಾಜಶೇಖರನು 'ಭಾಸನಾಟಕ ಚಕ್ರೇಪಿ' ಎಂದು ಹೇಳಿರುವುದರಿಂದ, ಭಾಸನು ಅನೇಕ ನಾಟಕಗಳನ್ನು ಬರೆದಿರಬೇಕೆಂದು ಅರ್ಥವಾಗುತ್ತದೆ.

ಶ್ರೀರಂಗದ ವಾಣೀವಿಲಾಸ ಮುದ್ರಣಶಾಲೆಯವರು ಪ್ರಕಟಿಸಿರುವ ಪ್ರಿಯದರ್ಶಿಕಾ ನಾಟಿಕೆಯ ಭೂಮಿಕೆಯಲ್ಲಿ 'ಶ್ರೀಮತಾಂ ಶ್ರೀನಿವಾಸ ಶಾಸ್ತ್ರಿ ಣಾಂ ಪುಸ್ತಕಶಾಲಾಯಾಂ ಭಾಸಸ್ಯ ಕಿರಣಾವಳೀ ಮುಕುಟತಾಡಿತಕೋದಾ ತ್ತ ರಾಘವಾಸಿ ನಾಮ ನಾಟಕಾನಿ ಪೂರ್ವಂ ಕದಾಚಿತ್ಸಂಗೃಹೀತಾನ್ಯಾಸನ್। ಸ್ವಯಂ ಚ ವಿಲೋಕಿತಾನಿ । ತತ್ರ ಉದಾತ್ತರಾಘವ ಪ್ರಸ್ತಾವನಾಯಾಂ ಭಾಸಕವಿರಾತ್ಮಾನಂ ತ್ರಯೋವಿಂಶತೇಃ ರೂಪಕಾಣಾಂ ಕರ್ತಾರಂ ಪ್ರಸ್ತೌ ತೀತಿ ಶ್ರೀನಿವಾಸಶಾಸ್ತ್ರಿಣಾಮುವರಜೈಃ ಶ್ರೀಮದ್ಭಿರ್ನಾರಾಯಣಶಾಸ್ತ್ರಿಭಿರುಚ್ಯ ತೇ।' ಎಂದಿದೆ. ಇದನ್ನು ನೋಡಿದರೆ, ಶ್ರೀನಿವಾಸ ಶಾಸ್ತ್ರಿಗಳೆಂಬವರ ಪುಸ್ತಕಶಾಲೆಯಲ್ಲಿ ಭಾಸವಿರಚಿತವಾದ ಕಿರಣಾವಳೀ, ಮುಕುಟತಾಡಿತಕ,

ಉದಾತ್ತರಾಘವ, ಎಂಬೀ ಮೂರು ನಾಟಕಗಳ ಪ್ರತಿಗಳು ಸಂಗೃಹೀತ ವಾದಂತೆಯೂ, ಉದಾತ್ತ ರಾಘವ ನಾಟಕದ ಪ್ರಸ್ತಾವನೆಯಲ್ಲಿ ಕವಿಯು ತಾನು ಇಪ್ಪತ್ತಮೂರು ನಾಟಕಗಳನ್ನು ರಚಿಸಿದಂತೆ ಹೇಳಿಕೊಂಡಿರುವುದಾಗಿ ನಾರಾಯಣಶಾಸ್ತ್ರಿಗಳು ಸೂಚಿಸಿರುವಂತೆಯೂ ಕಂಡುಬರುತ್ತದೆ. ಆದರೆ, ಆ ಮೂರು ಗ್ರಂಥಗಳೇನಾದುವು, ಅವು ಮೂರು ಗ್ರಂಥಗಳನ್ನೂ ಏಕೆ ಪ್ರಕಟಿಸಲಿಲ್ಲ-ಎಂಬ ಸಂಗತಿಗಳೇ ಸೂಚಿತವಾಗಿಲ್ಲ. ಅಂತೂ, ಭಾಸನು ಅನೇಕ ರೂಪಕಗಳನ್ನು ಬರೆದಂತೆ ಬಾಣನ ಮತ್ತು ರಾಜಶೇಖರನ ವಚನಗಳ ಪ್ರಮಾಣವಿದೆ. ಆದಕಾರಣ, ಸುಭಾಷಿತ ಕೋಶಗಳಲ್ಲಿರುವ ಆ ಶ್ಲೋಕಗಳು ಈಗ ದೊರೆತಿಲ್ಲದಿರುವ ಭಾಸನ ರೂಪಕಗಳಲ್ಲಿರಬಹುದು. ಆದರೆ ಉದಾತ್ತರಾಘವ ಮುಂತಾದ ಮೂರು ಗ್ರಂಥಗಳೂ ದೊರೆತಲ್ಲದೆ, ಭಾಸಕೃತವಾದ ಇಪ್ಪತ್ತಮೂರು ರೂಪಕಗಳ ವಿಚಾರವನ್ನು ನಂಬುವುದು ಕಷ್ಟ. ಇದು ಹೋಗಲಿ. ಭಾಸನು ವಿಷ್ಣುಧರ್ಮವೆಂಬ ಗ್ರಂಥವೊಂದನ್ನು ಬರೆದಿದ್ದಂತೆಯೂ ತಿಳಿಯಬರುತ್ತದೆ. (ಇದಕ್ಕೆ ಆಧಾರವೇನೆಂಬ ವಿಚಾರದಲ್ಲಿ ಈ ಮೊದಲನೆಯ ತರಂಗದ ಕೊನೆಯಲ್ಲಿ ಕೊಟ್ಟಿರುವ ಪರಿಶಿಷ್ಟವನ್ನು ದಯೆಯಿಟ್ಟು ನೋಡಿ.) ಪ್ರಸಕ್ತ ಶ್ಲೋಕಗಳು ಆ ಗ್ರಂಥದಲ್ಲಿದ್ದರೂ ಇರಬಹುದು.

**ಮತ್ತವಿಲಾಸ ಪ್ರಹಸನದಲ್ಲಿರುವ ಶ್ಲೋಕದ ವಿಚಾರ:**—ಕ್ರಿಸ್ತಶಕ ೬೨೦ ರಲ್ಲಿದ್ದ ಮಹೇಂದ್ರ ವಿಕ್ರಮವರ್ಮನೆಂಬೊಬ್ಬ ಪಲ್ಲವ ವಂಶದ ಅರಸು ಮತ್ತವಿಲಾಸ ಪ್ರಹಸನವೆಂಬ ರೂಪಕವೊಂದನ್ನು ಬರೆದಿದ್ದಾನೆ. ಅದರಲ್ಲಿ ವಾಮಾಚಾರದ ಶಾಕ್ಯರ ಸಂಬಂಧವಾದ ಶ್ಲೋಕವೊಂದಿದೆ.* ಈ ಶ್ಲೋಕವನ್ನು ಸೋಮದೇವಪುರಿಯು ತನ್ನ ಯಶಸ್ತಿಲಕವೆಂಬ ಗ್ರಂಥದಲ್ಲಿ ಸೇರಿಸಿ ಅದು ಭಾಸಕೃತವೆಂದು ಹೇಳಿದ್ದಾನೆ. ಆದರೆ ಈ ಶ್ಲೋಕವು ಈಗ ಭಾಸಕೃತವೆಂದು ಶಂಕಿಸುವ ಹದಿಮೂರು ನಾಟಕಗಳಲ್ಲಿ ಯಾವುದರಲ್ಲಿಯೂ ಇಲ್ಲ. ಅದು ಇರಬೇಕಾದ ಆವಶ್ಯಕತೆಯೂ ಇಲ್ಲ. ಅವುಗಳಲ್ಲಿ ಈ ಶ್ಲೋಕವಿಲ್ಲ

* "ಪ್ರೇಯಾ ಸುರಾ ಪ್ರಿಯತಮಾ ಮುಖಮೀಕ್ಷಣೀಯಂ ।
ಗ್ರಾಹ್ಯಃ ಸ್ವಭಾವ ಲಲಿತೋ ವಿಕಟಶ್ಚ ವೇಷಃ ॥
ಯೇನೇದ ಮೀದೃಶಮದೃಶ್ಯತ ಮೋಕ್ಷವರ್ತ್ಮ ।
ದೀರ್ಘಾಯುರಸ್ತು ಭಗವಾನ್ ಸ ಪಿನಾಕಪಾಣಿಃ ॥"

ವಾದುದರಿಂದ ಅವು ಭಾಸಕೃತವಲ್ಲವೆಂದೂ, ಮತ್ತವಿಲಾಸವು ರಚಿಸಲ್ಪಟ್ಟ ಕಾಲದಲ್ಲಿದ್ದ, ಎಂದರೆ, ಕ್ರಿ. ಶ ಏಳನೆಯ ಶತಮಾನದಲ್ಲಿದ್ದ-ಯಾವನೋ ಒಬ್ಬ ಕವಿಯು ಅಥವಾ ಹಲವು ಕವಿಗಳು, ಅವುಗಳನ್ನು ರಚಿಸಿರಬೇಕೆಂದೂ, ಡಾಕ್ಟರ್ ಬಾರ್ನೆಟ್‌ರವರು ಸೂಚಿಸಿದ್ದಾರೆ. ಇದೇ ಸಂದರ್ಭದಲ್ಲಿ ಮ|| ರಾ|| ಹೀರಾನಂದಶಾಸ್ತ್ರಿಗಳವರು 'ಸೋಮದೇವನ ಯಶಸ್ತಿಲಕದ ಆಧಾರದಮೇಲೆ ಈ ಶ್ಲೋಕವು ಭಾಸಕೃತವೆಂದು ಗೊತ್ತಾಗಿದೆ. ಈ ಕಾರಣದಿಂದಲೇ ಮತ್ತ ವಿಲಾಸ ಪ್ರಹಸನವು ಭಾಸಕೃತವೆಂದು ಹೇಳಲಾದೀತೆ? ಅದೃಷ್ಟವಶದಿಂದ ಮತ್ತವಿಲಾಸ ಪ್ರಹಸನವನ್ನು ಬರೆದವರಾರೆಂಬುದು ನಮಗೆ ತಿಳಿದಿದೆ!' ಎಂದು ಹೇಳಿದ್ದಾರೆ. ಇಂಗ್ಲಿಷ್ ಭಾಷೆಯಲ್ಲಿ ಬರೆದಿರುವ ಅವರ ಲೇಖನದ ಈ ಭಾಗವನ್ನು ನೋಡಿದರೆ, ಅವರು ಕುಹಕಮಾಡಿ ಬರೆದಿರುವ ಬಗೆಯು ಧ್ವನಿಯಿಂದ ಗೊತ್ತಾಗುತ್ತದೆ. ಇಂತಹ ದೊಡ್ಡ ಪಂಡಿತರು ಹೀಗೆ ವರ್ತಿಸಿ ದರಲ್ಲಾ—ಎಂದು ಮನಸ್ಸಿಗೆ ವಿಷಾದವಾಗುತ್ತದೆ. ಈ ಶ್ಲೋಕವು ಪ್ರಸಕ್ತ ರೂಪಕಗಳಲ್ಲಿಲ್ಲದ ಮಾತ್ರಕ್ಕೇ ಅವು ಭಾಸಕೃತವಲ್ಲವೆನ್ನುವುದು ಯುಕ್ತವಲ್ಲ. ಅದು ಭಾಸಕೃತನಾದ ಮತ್ತಾವುದಾದರೂ ಗ್ರಂಥದಲ್ಲಿದ್ದು, ಅದನ್ನು ಮತ್ತ ವಿಲಾಸ ಪ್ರಹಸನಕಾರನು ತನ್ನ ಗ್ರಂಥದಲ್ಲಿ ಸೇರಿಸಿಕೊಂಡಿರಬಹುದು; ಅಥವಾ ಸೋಮದೇವಸೂರಿಯೇ ಆ ಶ್ಲೋಕವು ಭಾಸಕೃತವಲ್ಲದಿದ್ದರೂ ಅದು ಭಾಸಕೃತವೆಂದು ಹೇಳಿರಬಹುದು. ಸುಭಾಷಿತಾವಳಿ, ಸೂಕ್ತಿಮುಕ್ತಾ ವಳಿ, ಸದುಕ್ತಿಕರ್ಣಾಮೃತ, ಶಾರ್ಙ್ಗಧರ ಪದ್ಧತಿ ಮುಂತಾದ ಸುಭಾಷಿತ ಕೋಶಗಳ ಸಂಪಾದಕರುಗಳಲ್ಲೇ ಯಾವ ಯಾವ ಶ್ಲೋಕಗಳು ಭಾಸಕೃತ ವೆಂಬುದರ ವಿಚಾರವಾಗಿ ಭಿನ್ನಾಭಿಪ್ರಾಯವಿರುವ ಅಂಶವನ್ನೂ ಅವರೆಲ್ಲರೂ ಭಾಸಕೃತವೆಂದು ಅಂಗೀಕರಿಸಿರುವ ಹತ್ತು ಶ್ಲೋಕಗಳು ಮಾತ್ರವೇ ಭಾಸ ಕೃತವೆಂದು ನಾವು ಮೊದಲೇ ಸೂಚಿಸಿರುವುದನ್ನೂ ಈ ಸಂಬಂಧದಲ್ಲಿ ನೆನ ಪಿಗೆ ತರುವುದು ಯುಕ್ತವಾಗಿದೆ. ಒಬ್ಬರು ಭಾಸಕೃತವೆಂದ ಶ್ಲೋಕವನ್ನು ಮತ್ತೊಬ್ಬರು ಭಾಸಕೃತವಲ್ಲವೆಂದರೆ, ಅಂತಹವರಿಬ್ಬರಲ್ಲಿ ಯಾರ ಹೇಳಿಕೆ ಯನ್ನು ನಂಬಬೇಕು? ಅವರಲ್ಲಿ ಒಬ್ಬರ ಹೇಳಿಕೆಯಾದರೂ ಸುಳ್ಳಾಗಿರ ಬೇಕಲ್ಲವೆ? ಹೀಗಿರುವಲ್ಲಿ ಸೋಮದೇವನೇತಕ್ಕೆ ಇದಕ್ಕೆ ಅಪವಾದಸ್ವರೂಪ ನೆನ್ನಬೇಕು? ಅವನ ಹೇಳಿಕೆಯೂ ಸುಳ್ಳಾಗಿದ್ದರೂ ಇರಬಹುದು.

**ಈ ಸಾಧಕ ಬಾಧಕಗಳಿಂದ ಫಲಿತವಾಗುವ ಅಂಶಗಳು:**—ಇದು ವರೆಗೂ ಚರ್ಚಿಸಿದ ನಾನಾ ಅಂಶಗಳನ್ನೂ ಕುರಿತು ಪರ್ಯಾಲೋಚಿಸಿದರೆ ಈ ಹದಿಮೂರು ರೂಪಕಗಳೂ ಭಾಸಕೃತವೆನ್ನಲು ನಮಗಿರತಕ್ಕ ಕಾರಣಗಳೇ, ರೂಪಕಗಳು ಭಾಸಕೃತವಲ್ಲವೆಂದು ಹೇಳುವವರು ಸೂಚಿಸುವ ಆಕ್ಷೇಪಗಳಿಗಿಂತ ವಿಶೇಷ ಪ್ರಬಲವಾಗಿರುವಂತೆ ತೋರುತ್ತದೆ. ಅವರು ಮಾಡುವ ಆಕ್ಷೇಪಗಳಿಗೆ ತೂಕವುಂಟೆಂದು ಹೇಳಲು ಅಡ್ಡಿಯಿಲ್ಲ. ಆದರೂ ಸಾಧಕವಿಚಾರಗಳ ಗುರುತ್ವದ ಮುಂದೆ ಬಾಧಕ ವಿಚಾರಗಳ ಆ ತೂಕವು ಅಷ್ಟೇನೂ ಕೆಂದುವಂತಿಲ್ಲ. ಏಕೆಂದರೆ ಅಭಿನವಗುಪ್ತನ ಹೇಳಿಕೆಗನುಸಾರವಾಗಿ ಚೆಂಡಾಟವು ಈಗಿನ ಸ್ವಪ್ನವಾಸವದತ್ತದಲ್ಲಿರುವುದೇ ಮುಂತಾದ ಕೆಲವು ಪ್ರಮಾಣಗಳು ಪ್ರತಿಪಕ್ಷದವರಿಗೂ ನುಂಗಲಾರದ ತುತ್ತುಗಳಾಗಿ ಪರಿಣಮಿಸಿವೆ. ಹದಿಮೂರು ರೂಪಕಗಳೂ ಭಾಸಕೃತವೆಂದು ಒಪ್ಪದಿರುವಷ್ಟುಮಟ್ಟಿಗೆ ಮಾತ್ರ ಪ್ರತಿಪಕ್ಷದವರೆನಿಸಿರುವ ಮ|| ರಾ|| ಕೆ. ಜಿ. ಶಂಕರರವರು ('ಆಶುತೋಷ ಮೆಮೋರಿಯಲ್ ವಾಲ್ಯೂಂ' ಎಂಬ ಹೆಸರಿನಿಂದ ಆಶುತೋಷ ಮುಕರ್ಜಿಯವರ ಸ್ಮಾರಕವಾಗಿ ಪ್ರಕಟವಾಗಿರುವ ಗ್ರಂಥದ ಎರಡನೆಯ ಭಾಗದಲ್ಲಿ) ಸ್ವಪ್ನನಾಟಕ, ಪ್ರತಿಜ್ಞಾಯೌಗಂಧರಾಯಣ, ಅಭಿಷೇಕನಾಟಕ, ಪಂಚರಾತ್ರ, ದೂತವಾಕ್ಯ, ಬಾಲಚರಿತ, ಅವಿಮಾರಕ, ಈ ಏಳು ರೂಪಕಗಳೂ ಭಾಸಕೃತವೆನ್ನುತ್ತಾರೆ. ಈ ಹದಿಮೂರು ರೂಪಕಗಳೂ ಭಾಸಕೃತವೇ ಆಗಿರಬೇಕೆಂದು ಅನೇಕ ವಿದ್ವಾಂಸರು ವಾದಿಸಿದ್ದಾರೆ. ಈಗಿರುವ ರೂಪಕಗಳಲ್ಲೊಂದಾದ ಸ್ವಪ್ನವಾಸವದತ್ತ ನಾಟಕವು ಭಾಸಕೃತಿಯಾದ ಸ್ವಪ್ನವಾಸವದತ್ತದ ಆಧಾರದಮೇಲೆ ರಂಗಸ್ಥಳದಲ್ಲಿ ಅಭಿನಯಿಸಲು ರಚಿಸಿದ ರಂಗಪಾಠವಾಗಿರಬಹುದೆಂದೂ ಕೆಲವರು ಶಂಕಿಸುತ್ತಾರೆ. ಆದರೆ ಇದನ್ನು ಒಪ್ಪುವುದು ಸಾಧ್ಯವಿಲ್ಲ. ಏಕೆಂದರೆ, ಸ್ವಪ್ನವಾಸವದತ್ತವು ಕೇವಲ ರಂಗಪಾಠವು ಮಾತ್ರವೇ ಆಗಿದ್ದರೆ, ಅದೆಂದಿಗೂ ಈಗಿನಷ್ಟು ಸೊಗಸಾಗಿ ಇರುತ್ತಿರಲಿಲ್ಲ. ಆದರೆ ನಾವು ಮತ್ತೊಂದು ಅಂಶವನ್ನು ಇಲ್ಲಿ ವಿಷಾದದಿಂದ ಸೂಚಿಸಬೇಕಾಗಿದೆ. ನಾವು ಮುಂದೆ ತಿಳಿಸುವ ಈ ರೂಪಕಗಳ ವೈಶಿಷ್ಟ್ಯದ ಕಡೆಗೆ ಯುಕ್ತವೆನಿಸುವಷ್ಟು ಗಮನಕೊಟ್ಟು, ಆ ವೈಶಿಷ್ಟ್ಯವು ಎಷ್ಟು ಅಮೋಘವಾದುದೆಂಬುದನ್ನೂ, ಅದು ಭಾಸನಂತಹ ಉದ್ದಾಮ

ಕವಿಗೆ ಕೂಡ ಕೀರ್ತಿದಾಯಕವೆನಿಸುವಂತಹವೆಂಬ ಅಂಶವನ್ನೂ, ಪ್ರತಿಪಕ್ಷದವರು ಉಚಿತ ರೀತಿಯಲ್ಲಿ ಪರ್ಯಾಲೋಚಿಸಿ ನೋಡಿಲ್ಲ. ಅಷ್ಟೇಕೆ? ಉಭಯ ಪಕ್ಷದವರೂ ಶುಷ್ಕವಾದಗಳಿಗೆ ಗಮನಕೊಟ್ಟಿರುವಷ್ಟಿಗೆ, ಕೃತಿಯಲ್ಲಿರುವ ರಸವತ್ಸ್ಥಲಗಳ ಅಮೃತರಸವನ್ನಾಸ್ವಾದಿಸಿ ಅವು ಭಾಸಮಹಾಕವಿಯೆಂಬ ಕಲ್ಪವೃಕ್ಷದಿಂದಲೇ ದೊರೆಯಬಹುದಾದಷ್ಟು ರುಚಿಕರವಾಗಿವೆ ಎಂಬುದನ್ನು ಗ್ರಹಿಸುವುದಕ್ಕೆ ಗಮನಕೊಟ್ಟಿಲ್ಲವೆಂದರೂ ಔಚಿತ್ಯದ ಮೇರೆಯನ್ನು ಮೀರಿದಂತಾಗುವುದಿಲ್ಲ. ಹದಿಮೂರು ರೂಪಕಗಳೂ ಒಬ್ಬನೇ ಕವಿಯಿಂದ ರಚಿತವಾದುವೆನ್ನಲು ಅಡ್ಡಿಯಿಲ್ಲ. ಭಾಸನು ಸ್ವಪ್ನವಾಸವದತ್ತವೆಂಬ ನಾಟಕವೊಂದನ್ನು ರಚಿಸಿದ್ದನೆಂಬುದಕ್ಕೆ ತಕ್ಕಷ್ಟು ಪ್ರಮಾಣಗಳಿವೆ. ಈಗ ದೊರೆತಿರುವ ಸ್ವಪ್ನವಾಸವದತ್ತನಾಟಕವೂ ಇತರ ಹನ್ನೆರಡು ರೂಪಕಗಳೂ ಬಹುಶಃ ಭಾಸನು ಬರೆದುವುಗಳಾಗಿಯೇ ಇರಬೇಕು. ರಾಜಶೇಖರನ ವಚನಗಳ ಆಧಾರನೇ ಮುಂತಾದ ಪ್ರಮಾಣಗಳಿಗನುಸಾರವಾಗಿ ಒರೆಹಿಡಿದು ನೋಡಿದರೆ ಆ ರೀತಿ ತೋರಿಬರುತ್ತದೆ. ಈಗ ದೊರೆತಿರುವ ಗ್ರಂಥಗಳಿಂದ ತೋರಿಬರುವಂತೆ, ಕಾಳಿದಾಸನೇ ಮುಂತಾದ ಕವಿಗಳು ಕೂಡ ಉಪಕೃತರಾಗಿರುವ ಕುರುಹುಗಳಿಂದ (ಅವುಗಳನ್ನು ಮುಂದೆ ಸೂಚಿಸಲಾಗುವುದು.) ಆ ಅನುಮಾನವು ಮತ್ತಷ್ಟು ದೃಢಪಡುತ್ತದೆ. ಈ ರೂಪಕಗಳ ಶೈಲಿ, ಅವುಗಳಲ್ಲಿ ಇರುವ ಪ್ರಾಕೃತದ ಮತ್ತು ಆರ್ಷೇಯ ಪ್ರಯೋಗಗಳ ಸ್ವಭಾವದಿಂದ ಹೊರಹೊಮ್ಮುವ ಪ್ರಾಚೀನತೆ, ನಾಟ್ಯಶಾಸ್ತ್ರ ನಿಯಮಗಳನ್ನು ಉಲ್ಲಂಘಿಸಿರುವುದು, ವಾಕ್ಪತಿರಾಜನು ಭಾಸನಿಗೆ ಕೊಟ್ಟಿರುವ 'ಜಲಣಮಿತ್ತ' (ಅಗ್ನಿಮಿತ್ರ) ಎಂಬ ಪ್ರಶಸ್ತಿಯು ಈ ರೂಪಕಗಳ ಕವಿಗೆ ಒಪ್ಪುವಂತಿರುವುದು, ಈ ಅಂಶಗಳಿಂದ ಆ ಅನುಮಾನವೇ ಖಚಿತವಾಗುತ್ತದೆ. ಆದರೂ, ಗ್ರಂಥಕರ್ತನು ಭಾಸನೆಂದು ರೂಪಕಗಳಲ್ಲೇ ಸ್ಪಷ್ಟವಾಗಿ ಹೇಳಿಲ್ಲವಾದಕಾರಣ, ಅವುಗಳನ್ನು ರಚಿಸಿದವನು ಭಾಸಮಹಾಕವಿಯೆಂದು ನಿಷ್ಕರ್ಷೆಯಾಗಿ ಹೇಳುವುದಕ್ಕಿಲ್ಲದೆ ಕೇವಲ ಅನುಮಾನಪ್ರಮಾಣಗಳಿಂದಲೇ ತೃಪ್ತಿಪಟ್ಟುಕೊಳ್ಳಬೇಕಾಗಿದೆ.

**ಈ ರೂಪಕಗಳ ವೈಶಿಷ್ಟ್ಯ:**—ಈ ರೂಪಕಗಳ ಕಲಾ ನೈಪುಣ್ಯ, ರಚನಾವೈಖರಿ, ಇವೇ ಮುಂತಾದ ಅಂಶಗಳನ್ನು (Art and techni-

que) ಮುಂದಣ ತರಂಗಗಳಲ್ಲಿ ರೂಪಕಗಳ ವಿಮರ್ಶೆಯು ನಡೆದ ತರುವಾಯ
ಅರಿಕೆ ಮಾಡುವೆವು. ಈ ರೂಪಕಗಳ ವೈಶಿಷ್ಟ್ಯದಂತಿರುವ ನಾಲ್ಕು ಲಕ್ಷಣ
ಗಳನ್ನು ಮಾತ್ರವೇ ಇಲ್ಲಿ ಸೂಚಿಸುವೆವು.

**ಮೊದಲನೆಯದು:**—ಈ ರೂಪಕಗಳಲ್ಲೆಲ್ಲ ಎಲ್ಲಿ ನೋಡಿದರೂ ಕಮ
ನೀಯವಾಗಿ ರಾರಾಜಿಸುತ್ತಿರುವ ಗುಣವು, ನಮ್ಮ ಕವಿಪುಂಗವನು ಪ್ರದರ್ಶಿ
ಸಿರುವ ಹೃದಯ ವೈಶಾಲ್ಯ. ಆದುದರಿಂದಲೇ ಅವನು ತನ್ನ ಆ ಗುಣವು
ಬೆಳಗುವಂತೆಯೂ, ಕಾವ್ಯದ ಸೊಬಗು ಬೀರುವಂತೆಯೂ, ರಾಮಾಯಣ
ಮಹಾಭಾರತಗಳ ಕಥಾವಸ್ತುವಿನಲ್ಲಿ ಮಾರ್ಪಾಡುಗಳನ್ನು ಮಾಡಿ ರೂಪಕ
ಗಳನ್ನು ರಚಿಸಿದ್ದಾನೆ. ಆದಕಾರಣ, ಅವನಿಗೆ ಮತ್ತೊಂದು ಬೇರೆ ಭಾರತವು
ದೊರೆತಿದ್ದಿತೆಂದು ಜಯಸಲ್ವಾಲ್‌ರವರು ಹೇಳುವುದರಲ್ಲಿ ಅರ್ಥವಿಲ್ಲ.
ಏಕೆಂದರೆ, ಭಾರತದ ಸಂಬಂಧದ ಮಾರ್ಪಾಡುಗಳಿಗೇನೋ ಇದರಿಂದ
ಸಮಾಧಾನ ಹೇಳಬಹುದು. ಆದರೆ ರಾಮಾಯಣ ಸಂಬಂಧವಾಗಿ ಪ್ರತಿಮಾ
ನಾಟಕದಲ್ಲಿರುವ ಮಾರ್ಪಾಡುಗಳಿಗೆ ಆಗ್ಗ ಸಮಾಧಾನವೇ ದೊರೆಯುವ
ಹಾಗಿಲ್ಲ. ಧರ್ಮದ್ರೋಹಿಗಳೆಂದೂ ಪಾತಕಿಗಳೆಂದೂ ಸಮುದಾಯತ್ವೇನ
ದೂಷಿಸಲ್ಪಟ್ಟಿರುವ ದುರ್ಯೋಧನ, ಕರ್ನ, ಘಟೋತ್ಕಚ, ರಾವಣ,
ಮುಂತಾದವರ ವಿಚಾರದಲ್ಲಿ ಕೂಡ ಕವಿಯು ತನ್ನ ಕರುಣಾರ್ದ್ರಹೃದಯದ
ತನಿರಸವನ್ನೆರೆದು, ಅವರಲ್ಲಿ ಕೂಡ ನಮಗೆ ಅನುತಾಪಮಿಶ್ರಿತವಾದ ಆಸಕ್ತಿ
ಸಹಾನುಭೂತಿಗಳುಂಟಾಗುವಂತೆ ಮೂರ್ತಿಗಳನ್ನು ಕಡೆದು ನಿಲ್ಲಿಸಿದ್ದಾನೆ.
ಆರ್ಯರೆನಿಸಿದವರು ಕೆಲವರು ಒಟ್ಟು 'ರಾಕ್ಷಸ' ಜಾತಿಗೇ ಬರೆಯನ್ನೆಳೆದು
ಅನ್ಯಾಯಮಾಡಿದ ರಾಕ್ಷಸ ರಾಕ್ಷಸಿಯರಲ್ಲಿ ಕೂಡ ನಮ್ಮ ಕವಿಯ ಕರುಣಾರಸ
ಪರಿಪೂರಿತವಾದ ಅಪಾಂಗದ ಅನುಗ್ರಹವುಂಟು. ಹಿಡಿಂಬಾದೇವಿಯ ವಿಚಾರ
ದಲ್ಲಿ ಭೀಮನಿಂದ "ಜಾತ್ಯಾತು ರಾಕ್ಷಸೀ। ನ ತು ಸಮುದಾಚಾರೇಣ।"
(ಹುಟ್ಟಿನಲ್ಲಿ ರಾಕ್ಷಸ ಕುಲದವಳು. ಅಷ್ಟೆ. ನಡೆನುಡಿಗಳಲ್ಲಲ್ಲ.) ಎಂದು
ಕವಿಯು ಹೇಳಿಸುವಾಗ—ಭೀಮನು ತನ್ನ ಮತ್ತು ತನ್ನ ಮಗನ ದೈವತ
ವೆಂಬ ಹಿಡಿಂಬಾದೇವಿಯ ಅಮೃತವಾಕ್ಕುಗಳ ಮಧುರ ತಾನವು ನಮ್ಮ ಕಿವಿಗ
ಳಿಂದ ದೂರವಾಗುವ ಮೊದಲೇ ಈ ಮಾತುಗಳು ಕೇಳಿಸಿದಾಗ—ನಾವು
ಆನಂದದಿಂದ ಕಂಬನಿಯ ಕಾಣಿಕೆಯನ್ನೊಪ್ಪಿಸುವಂತಾಗುವುದು. ಇದು

ಮಧ್ಯಮವ್ಯಾಯೋಗದ ಮಾತಾಯಿತು. ಪಂಚರಾತ್ರದಲ್ಲಂತೂ, ಕವಿಯು ದುರ್ಯೋಧನನನ್ನು ಧರ್ಮವೀರನನ್ನಾಗಿ ಚಿತ್ರಿಸಿದ್ದಾನೆ. ಇತರ ರೂಪಕಗಳಲ್ಲಿಯೂ ಇಂತಹ ಅನೇಕ ನಿದರ್ಶನಗಳಿವೆ. ಕವಿಯು ದುರ್ಯೋಧನನನ್ನು ಧರ್ಮವೀರನನ್ನಾಗಿ ಚಿತ್ರಿಸಿರುವುದನ್ನು ಕೇಳಿ ಅನೇಕರಿಗೆ ಅದು ಅಸಹ್ಯಕರವಾಗಿ ತೋರಬಹುದು. ಕಲಾಪ್ರಪಂಚವೇ ಬೇರೆ, ಮತವಿಷಯಕವಾದ ಪ್ರಪಂಚವೇ ಬೇರೆ-ಎಂಬ ವಿಭಜನೆಯ ಸಾಮರ್ಥ್ಯವೇ ಇಲ್ಲದವರಿಗೆ ತೋರುವುದೇ ಹಾಗೆ. ಆಬಗೆಯ ವಿಭಜನೆಯ ಸಾಮರ್ಥ್ಯವು ಲಭಿಸಿರುವುದೂ ಒಂದು ಸಂಸ್ಕಾರವಿಶೇಷ. ಕ್ರಿಸ್ತಶಕ ಇಪ್ಪತ್ತನೆಯ ಶತಮಾನದಲ್ಲಿ ಆಧುನಿಕ ನಾಗರಿಕತೆಯ ಮಧ್ಯವರ್ತಿಗಳೆಂದೂ ವಿದ್ಯಾವಂತರೆಂದೂ ಹೇಳಿಕೊಳ್ಳುವವರಲ್ಲಿ ಕೂಡ, ಅನೇಕರಲ್ಲಿ ಇಂದಿಗೂ ಅಭಾವವಾಗಿರುವ ಈ ಸಾಮರ್ಥ್ಯವು ಅನೇಕ ಶತಮಾನಗಳ ಹಿಂದೆಯೇ ನಮ್ಮ ಕವಿಯಲ್ಲಿ ಅತಿ ವಿಶೇಷವಾಗಿ ಪರಿಸ್ಫುಟವಾಗಿದ್ದುದನ್ನು ನೋಡಿದರೆ ಮುಗ್ಧತೆಯಿಂದ ಮೂಕರಾಗಬೇಕಾಗುವುದು.

**ಎರಡನೆಯದು:**—ಸ್ತ್ರೀ ಜಾತಿಯಲ್ಲೇ ಅಸೀಮ ಗೌರವವನ್ನಿಟ್ಟಿರುವುದು ಈ ರೂಪಕಗಳನ್ನು ಬರೆದ ಕವಿಯು ಪ್ರದರ್ಶಿಸಿರುವ ಮತ್ತೊಂದು ಗುಣ. ಈ ಗುಣವು ಅವನ ರೂಪಕಗಳ ಪುಟ್ಟಿಪುಟ್ಟಿಯಲ್ಲಿಯೂ ವ್ಯಕ್ತವಾಗುತ್ತದೆ. ಸ್ತ್ರೀಯರಲ್ಲಿ ಕೆಟ್ಟವರಿರುವುದೇ ವಿರಳವೆಂಬುದು ಕವಿಯ ದೃಢವಾದ ನಂಬಿಕೆಯಾಗಿದ್ದಂತೆಯೂ, ಯಾವ ತಪ್ಪು ನಡೆದರೂ ಅದಕ್ಕೆ ಪುರುಷರೇ ಕಾರಣರೆಂಬುದು ಅವನ ಭಾವನೆಯಾಗಿದ್ದಂತೆಯೂ ತೋರುತ್ತದೆ. ಹೀಗೆಂದ ಮಾತ್ರವೇ ಮಾನವ ಸ್ವಭಾವವನ್ನು ಅವನು ಅರಿತಿರಲಿಲ್ಲವೆಂದು ಅರ್ಥವಲ್ಲ. ಸ್ತ್ರೀಯರಲ್ಲಿಯೂ ಕೆಟ್ಟವರಿರುವುದು ನಮ್ಮ ಕವಿಗೆ ತಿಳಿಯದೆ ಇರಲಿಲ್ಲ. ಆದರೂ, ಸ್ತ್ರೀ ಜಾತಿಯಲ್ಲೇ ಅವನಿಗೆ ಅನಿರ್ವಚನೀಯವಾದೊಂದು ಬಗೆಯ ಗೌರವ. ಆದುದರಿಂದಲೇ ಕೈಕೆಯಿದೇವಿಯು ಹದಿನಾಲ್ಕು ದಿನಗಳಕಾಲ ರಾಮನಿಗೆ ವನವಾಸವಾಗಬೇಕೆಂದು ಕೇಳಲು ಬಯಸಿ ವಿಧಿವಿಲಾಸದಿಂದ ಹದಿನಾಲ್ಕು ವರುಷಗಳೆಂದು ಹೇಳಿದಳೆಂಬ ಮಾರ್ಪಾಡನ್ನು ಕವಿಯು ಕಲ್ಪಿಸಿದ್ದಾನೆ. ಮಹಾಸೇನನ ಹದಿನಾರುಮಂದಿ ಮಹಿಷಿಯರಲ್ಲಿ ಹಿರಿಯಳಾಗಿ ಪುಣ್ಯಶೀಲೆಯಾಗಿ ಊರಿಗೇ ದೇವಿಯಂತಿರುವ ಅಂಗಾರವತೀದೇವಿಯನ್ನು ಉದಯನನು 'ಷೋಡಶಾಂತಃಪುರ ಜ್ಯೇಷ್ಠಾ

ಪುಣ್ಯಾ ನಗರದೇವತಾ' ಎಂದು ವರ್ಣಿಸಿರುವುದನ್ನು ನೋಡಿ—ಉದಯ ನನು ಆಕೆಯನ್ನು ಗೌರವಿಸುವುದು ಹಾಗಿರಲಿ—ನಮಗೇ ಆಕೆಯಲ್ಲಿ ಗೌರ ವವು ಹುಟ್ಟುವುದು. ಕವಿಯು ಇದೇರೀತಿಯಲ್ಲಿ ಸ್ತ್ರೀ ಪಾತ್ರಗಳನ್ನೆಲ್ಲ ವಿಶೇಷ ಪ್ರೀತಿಗೌರವಗಳಿಂದ ಚಿತ್ರಿಸಿದ್ದಾನೆ.

**ಮೂರನೆಯದು:**—ದೇಶಾಭಿಮಾನದ ರಮ್ಯವಾದ ಚಿತ್ರವನ್ನು ಕಲ್ಪಿ ಸಿರುವುದು ನಮ್ಮ ಕವಿಯಲ್ಲಿ ಕೇವಲ ವೈಶಿಷ್ಟ್ಯದಂತಿರುವ ಮತ್ತೊಂದು ಗುಣ. ಸ್ವಧರ್ಮಾಚರಣೆಯ ದೆಸೆಯಿಂದಲೋ, ರಾಜಸೇವಾದೀಕ್ಷೆಯ ದೆಸೆಯಿಂದಲೋ, ಅಥವಾ ಸ್ವಸಾಮರ್ಥ್ಯವನ್ನು ಪ್ರದರ್ಶಿಸುವುದೇ ಮುಂ ತಾದ ಇತರ ಕಾರಣಗಳಿಂದಲೋ, ಅನೇಕರು ದೇಶೋನ್ನತಿಸಾಧಕವಾದ ಕಾರ್ಯಗಳನ್ನು ನೆರವೇರಿಸಿರುವ ಹಲವು ನಿದರ್ಶನಗಳನ್ನು ಸಂಸ್ಕೃತ ಭಾಷೆಯ ಇತರ ಕವಿಗಳ ರೂಪಕಗಳಲ್ಲಿ ನಾವು ಕಾಣಬಹುದು. ಆದರೆ, ಸ್ವದೇಶಪ್ರೇಮದಿಂದ ಉದ್ದೀಪಿತನಾದ ದೇಶವತ್ಸಲನನ್ನು ನಾವು ಕಾಣು ವುದು ಭಾಸಕೃತವೆನ್ನುವ ರೂಪಕಗಳಲ್ಲಿ ಮಾತ್ರವೇ. ಮತ್ತಾವ ವ್ಯಾಜಾಂ ತರವೂ ಇಲ್ಲದೆ ಸ್ವದೇಶವೆಂಬ ಕಾರಣಕ್ಕಾಗಿ ಮಾತ್ರವೇ ದೇಶವನ್ನು ಪ್ರೀತಿ ಸುತ್ತ, ದೇಶಭಕ್ತಿಯೆಂಬ ಗಂಗಾನದಿಯೂ ರಾಜಭಕ್ತಿಯೆಂಬ ಯಮುನಾ ನದಿಯೂ ಸಂಗಮವಾಗುವ ದೈವಿಕ ತೇಜೋಭರಿತವಾದ ಪ್ರಯಾಗಕ್ಷೇತ್ರ ದಲ್ಲಿ ಮನವಾರೆ ಆ ದಿವ್ಯನದಿಗಳ ಸಂಗಮದಲ್ಲಿ ಸ್ನಾನಮಾಡುವ ಪುಣ್ಯಶಾಲಿ ಯಾದ ಸಾಧಕಶ್ರೇಷ್ಠನನ್ನು ನಾವು ಕಾಣುವುದು ಭಾಸಕೃತವೆನ್ನುವ ರೂಪಕ ಗಳೆರಡರಲ್ಲಿ ಮಾತ್ರವೇ. ಸಂಸ್ಕೃತ ಭಾಷೆಯ ಮತ್ತಾವ ರೂಪಕದಲ್ಲಿಯೂ ಇಂತಹ ಸನ್ನಿವೇಶವನ್ನು ಕಾಣುವಂತಿಲ್ಲ. ನಾವು ಇಲ್ಲಿ ಪ್ರಸ್ತಾವಿಸುತ್ತಿರು ವುದು ಯೌಗಂಧರಾಯಣನ ಮಾತು. ಉದಯನ ರಾಜನು ಆರುಣಿಗೆ ಸೋತುದರಿಂದ, ರಾಜ್ಯವು ಶತ್ರುಗಳ ವಶವಾಯಿತೆಂದು ಅವನು ಸಂಕಟ ಪಡುವನು. ರಾಜ್ಯವನ್ನು ಶತ್ರುರಾಜನ ಕೈಯಿಂದ ಬಿಡಿಸಿಕೊಳ್ಳಲು ಅವನು ತಕ್ಕ ಮಾರ್ಗವೊಂದನ್ನು ಯೋಚಿಸುವನು. ಅದು ನೆರವೇರಲು ವಾಸವ ದತ್ತಾದೇವಿಯು ವೇಷಾಂತರವನ್ನು ಧರಿಸಿ ತನ್ನ ಪತಿಯಾದ ಉದಯನನಿಗೆ ಗೋಚರವಿಲ್ಲದಂತೆ ಹೊರಟುಹೋಗಿ ಅಜ್ಞಾತವಾಸದಲ್ಲಿರಬೇಕಾದುದೂ, ಅವಳು ಅಗ್ನಿದಗ್ಧಳಾದಳೆಂದು ಸುಳ್ಳು ಸಮಾಚಾರವನ್ನು ದೊರೆಗೆ ತಿಳಿಸ

ಬೇಕಾದುದೂ ಆವಶ್ಯಕವಾಗುವುದು. ಅವಳೂ ಸ್ವಂತ ಸುಖಕ್ಕಿಂತ ಪತಿಯ ಶ್ರೇಯಸ್ಸೂ, ರಾಜ್ಯದ ಸೇವೆಯೂ ಹೆಚ್ಚೆಂದು ಭಾವಿಸಿ ಅದಕ್ಕೊಪ್ಪುವಳು. ಯೌಗಂಧರಾಯಣನು ದೇಶವಾತ್ಸಲ್ಯ ಭರದಲ್ಲಿ ರಾಜನ ದಾಂಪತ್ಯ ಸುಖವನ್ನು ಹೀಗೆ ಬಲಿಕೊಡಬೇಕಾದ ಆವಶ್ಯಕತೆಗೆ ಅಳುಕದೆ-ರಾಜನ ಆಗ್ರಹಕ್ಕೆ ಪಾತ್ರನಾಗಿ ಪ್ರಾಣವನ್ನೊಪ್ಪಿಸುವ ಸಂಭವವಿದ್ದರೂ ಅದಕ್ಕೆ ಲಕ್ಷ್ಯಮಾಡದೆ ಕಾರ್ಯಸಾಧನೆಮಾಡಿ ಕೃತಾರ್ಥನಾಗುವನು. ರಾಜ್ಯವೂ, ರಾಜ್ಯಲಕ್ಷ್ಮಿಯಂತಿರುವ ವಾಸವದತ್ತೆಯೂ ಮತ್ತೆ ತನ್ನನ್ನು ಸೇರಿದಾಗ ರಾಜನಾದ ಉದಯನನು 'ಮಿತ್ರ! ಯೌಗಂಧರಾಯಣ, ದೇವ್ಯಪನಯದಲ್ಲಿ ನಿನಗೆ ಬುದ್ಧಿಯು ಹುಟ್ಟಿದುದೇಕೆ?' ಎಂದು ಕೇಳುವನು. ಯೌಗಂಧರಾಯಣನು ಪ್ರಭುವಿಗೆ ಸಂತೋಷವಾದರೆ ಸಾಕೆಂದು ಸಮಯೋಚಿತವಾದ ಪದ್ಯಮಾಲಿಕೆಯನ್ನು ಹಾಡುವ ಸ್ತುತಿಪಾಠಕನಲ್ಲ. ದೇವಿಯನ್ನು ಅಜ್ಞಾತವಾಸದಲ್ಲಿಟ್ಟುದುದಕ್ಕಾಗಿ ಮೊದಲೇ ರಾಜನ ಕ್ಷಮೆಯನ್ನು ಬೇಡಿರುವ ಯೌಗಂಧರಾಯಣನು—ರಾಜನಿಗಿಂತಲೂ ತನ್ನ ದೇಶವನ್ನೇ ಹೆಚ್ಚಾಗಿ ಪ್ರೀತಿಸುವ ಆ ದೇಶವತ್ಸಲನು—'ಕೌಶಾಂಬೀಂ ಮಾತ್ರಂ ಪರಿಪಾಲಯಾಮಿ' ಎಂದು ಉತ್ತರಕೊಡುವನು. ರಾಜನಿಗೆ ಸುಖೋದರ್ಕವಾಗಲೆಂಬ ಉದ್ದೇಶದಿಂದ ತಾನು ಆರೀತಿ ಮಾಡಿದುದಾಗಿ ಅವನು ಹೇಳುವುದಿಲ್ಲ. ಕೌಶಾಂಬಿಯನ್ನು ಗೆಲಿಸಿಕೊಂಡು ಒಪ್ಪಿಸುವುದಕ್ಕಾಗಿ ತಾನು ಹಾಗೆ ಮಾಡಿದುದಾಗಿಯೇ ಅವನು ಹೇಳುವನು. ಅವನ ವಾಕ್ಯದಲ್ಲಿರುವ ಭಾವಸಮುದ್ರವನ್ನು ಮೂಲದಲ್ಲೇ ನೋಡಿ ಆನಂದಿಸಬೇಕಲ್ಲದೆ ಆ ವಾಕ್ಯವನ್ನು ಯಾವ ಭಾಷೆಗೇ ತರ್ಜುಮೆಮಾಡಿದರೂ, ಅದರ ಸೊಬಗನ್ನೂ ಅದರಲ್ಲಿರುವ ದೇಶಭಕ್ತಿಯ ಉಜ್ಜ್ವಲ ತೇಜಸ್ಸನ್ನೂ ಪೂರ್ತಿಯಾಗಿ ಪರಿಚಯಮಾಡಿಕೊಡುವುದು ಸಾಧ್ಯವಿಲ್ಲ. ಇದು ಅತಿಶಯೋಕ್ತಿಯೆಂದು ಯಾರಾದರೂ ಆಕ್ಷೇಪಿಸುವುದಾದರೆ ಕವಿಪಾದಾಬ್ಜಭೃಂಗವಾಗಲಾರದವರ ಶುಷ್ಕ ಪಾಂಡಿತ್ಯಕ್ಕೆ ಕವಿಹೃದಯ ದರ್ಶನ ಸೌಭಾಗ್ಯವು ಸರ್ವಥಾ ದೊರೆಯದೆಂದು ವಿಷಾದದಿಂದಲೂ ವಿನೀತಭಾವದಿಂದಲೂ ಉತ್ತರ ಹೇಳಬೇಕಾಗುವುದು.

**ನಾಲ್ಕನೆಯದು:**-ರಂಗಯೋಗ್ಯವೆನಿಸಿ ಹೃದಯಂಗಮವಾಗಿರುವುದು ಈ ರೂಪಕಗಳ ವೈಶಿಷ್ಟ್ಯದಂತಿರುವ ಮತ್ತೊಂದು ಗುಣ. (ಈ ರೂಪಕ

ಗಳು ಹೀಗಿರುವುದಕ್ಕೆ ಕಾರಣಗಳನ್ನು ರೂಪಕಗಳನ್ನು ವಿಮರ್ಶೆಮಾಡಿದ ತರುವಾಯ ಅರಿಕೆಮಾಡುವೆವು.) ಕಾಳಿದಾಸ, ಭವಭೂತಿ, ಮುಂತಾದವರು ಮನೋಜ್ಞವಾಗಿ ರೂಪಕಗಳನ್ನು ರಚಿಸಿದ್ದರೂ, ಅವುಗಳು ಒಟ್ಟು ಪ್ರಪಂಚ ದಲ್ಲೇ ಪ್ರಸಿದ್ಧವಾಗಿದ್ದರೂ, ಕವಿತಾಸಾಮರ್ಥ್ಯ ವಿಚಾರದಲ್ಲಿ ಪ್ರಸಕ್ತ ರೂಪಕ ಗಳನ್ನು ರಚಿಸಿದ ಕವಿಯು ಕಾಳಿದಾಸ ಭವಭೂತಿಮಹಾಕವಿಗಳಿಗಿಂತ ಕಡಿಮೆಯೆನಿಸುವುದು ನಿಜವಾದರೂ, ರಂಗಯೋಗ್ಯವೆನಿಸುವ ರೀತಿಯಲ್ಲಿ ರೂಪಕಗಳನ್ನು ರಚಿಸಿರುವ ಸಾಮರ್ಥ್ಯದ ವಿಚಾರದಲ್ಲಿ ಮಾತ್ರ, ಆತನು ಅವರೆಲ್ಲರನ್ನೂ ಮೀರಿಸಿರುವನೆಂದು ನಿಸ್ಸಂದೇಹವಾಗಿ ಹೇಳಬಹುದಾಗಿದೆ.

**ಪ್ರಸಕ್ತ ರೂಪಕಗಳಿಂದ ಇತರ ಕವಿಗಳು ಉಪಕೃತರಾಗಿರುವ ವಿಚಾರ:**—ಈ ರೂಪಕಗಳಲ್ಲಿರುವ ಕೆಲಕೆಲವು ಭಾವಗಳನ್ನೂ ಸನ್ನಿವೇಶ ಗಳನ್ನೂ ಅನೇಕ ಕವಿಗಳು ಉಪಯೋಗಿಸಿಕೊಂಡು ಪ್ರಯೋಜನ ಹೊಂದಿ ರುವರೆಂದು ಹೇಳಬಹುದಾಗಿದೆ. ಅವರಲ್ಲಿಯೂ ಕಾಳಿದಾಸ ಮಹಾಕವಿ ಯಷ್ಟು ಮಟ್ಟಿಗೆ ಮತ್ತಾರೂ ಆರೀತಿ ಮಾಡಿಲ್ಲವೆಂದು ತೋರುವುದು. ಆದಾಗ್ಯೂ, 'ಕವಿಕುಲ ಗುರು'ವಾದ ಆ ಮಹಾಕವಿಯು ಆರೀತಿ ಮಾಡು ವುದರಲ್ಲಿ ಕೂಡ ತನ್ನ ಪ್ರತಿಭಾಸಂಪತ್ತಿಯ ತೇಜಸ್ಸಿನಿಂದ ಅವುಗಳನ್ನು ಬೆಳ ಗಿಸಿ ಅನಿರ್ವಚನೀಯವಾದೊಂದು ಬಗೆಯ ನವ್ಯತೆಯ ಸೊಬಗನ್ನು ಬೀರಿರು ವನು. ಅವನು ಯಾವ ಯಾವ ಅಂಶಗಳನ್ನು ಹೇಗೆ ಹೇಗೆ ಉಪಯೋಗಿಸಿ ಕೊಂಡಿದ್ದಾನೆಂಬುದನ್ನು ಅವರ ಕೃತಿಗಳಿರುವ ಪರಸ್ಪರ ಸಾದೃಶ್ಯಗಳನ್ನು ಸೂಚಿಸುವ ಮೂಲಕ ಡಾಕ್ಟರ್ ಗಣಪತಿಶಾಸ್ತ್ರಿಗಳವರು ತೋರ್ಪಡಿಸಿದ್ದಾರೆ. ಆದರೂ, ಕಾಳಿದಾಸನು ಈರೀತಿ ಮಾಡಿರುವುದನ್ನು ಅವನ 'ಭಾಸೋಪ ಜೀವಿತ್ವ'ವೆಂದು ಅವರು ಕರೆದಿರುವುದು ಉಚಿತವೆಂದು ತೋರುವುದಿಲ್ಲ. ರೂಪಕಗಳ ವಿಮರ್ಶೆಯನ್ನು ಅರಿಕೆಮಾಡುವುದಕ್ಕೆ ಮೊದಲೇ ಇದನ್ನು ವಿಶದವಾಗಿ ಚರ್ಚಿಸುವುದು ಸರಿಯಲ್ಲ. ಆದಕಾರಣ, ಇಲ್ಲಿ ಅದನ್ನು ಚರ್ಚಿ ಸದೆ, ಒಟ್ಟಿನಮೇಲೆ ಕಾಳಿದಾಸ ಮುಂತಾದ ಕವಿಗಳು ಈ ರೂಪಕಗಳಿಂದ ಹೇಗೆ ಉಪಕೃತರೆಂಬ ಅಂಶವನ್ನು ಮಾತ್ರವೇ ಇಲ್ಲಿ ಕೇವಲ ಪ್ರಾಸಂಗಿಕ ವಾಗಿ ಸೂಚಿಸಬೇಕಾಗಿದೆ. ಭಾಷೆ, ವಸ್ತು, ಪಾತ್ರರಚನೆ, ಈ ಮೂರರಲ್ಲಿ

ಕೆಲಕೆಲವರು ಕವಿಗಳು ಕೆಲಕೆಲವನ್ನು ಈ ರೂಪಕಗಳಲ್ಲಿಯ ಅಂಶಗಳ ಆಧಾರದ ಮೇಲೆ ಅಳವಡಿಸಿಕೊಂಡಿದ್ದಾರೆ.

ಮೊದಲು ಭಾಷಾಧೋರಣೆಯ ಸಂಬಂಧವಾಗಿ ಶೈಲಿ, ವರ್ಣನೆಯ ಸೊಬಗು, ಮುಂತಾದುವುಗಳ ವಿಚಾರ. ಇವುಗಳ ವಿಷಯದಲ್ಲಿ ಡಾಕ್ಟರ್ ಗಣಪತಿಶಾಸ್ತ್ರಿಗಳು ಕಾಳಿದಾಸನನ್ನು ಭಾಸೋಪಜೀವಿಯೆನ್ನುವುದಕ್ಕಿಂತ ಕಾಳಿದಾಸನೂ, ಭಾಸನೂ ಇಬ್ಬರೂ—ಕೊನೆಗೆ ಭವಭೂತಿ ಮುಂತಾದ ಇತರ ಅನೇಕ ಕವಿಗಳೂ—ವಾಲ್ಮೀಕ್ಯುಪಜೀವಿಗಳೆಂದು ಹೇಳಿದ್ದರೆ ಯುಕ್ತವಾಗಿರುತ್ತಿದ್ದಿತು. ಸೊಗಸಾದ ಉಪಮೆಗಳನ್ನೂ, ಶಬ್ದಸಂಪತ್ತಿಯನ್ನೂ, ಮೃದುಮಧುರ ಶಬ್ದಗುಂಫನದ ನಾದಮಾಧುರ್ಯವನ್ನೂ, ಸೊಂಪು ಸುಮ್ಮಾನಗಳನ್ನೇ ಪುಷ್ಪಾಂಜಲಿಗಳಂತೆ ಎರಚಿಕೊಂಡು ವಾಣಿಯ ವೀಣೆಯ ಗತಿಗೆ ನರ್ತನವನ್ನೆಸಗುವ ಹಾಗೆ ತೋರುವ ಮನನೋಹಕಗಳಾದ ಪದಗಳ ಪೊಂಥಾವಣೆಯ ಸೊಬಗನ್ನೂ, ಭಾಸಕಾಳಿದಾಸರಿಬ್ಬರೂ—ಇತರರೂ—ಆದಿಕವಿಯಾದ ವಾಲ್ಮೀಕಿ ಕೋಕಿಲೆಯ ಪಂಚಮಸ್ವರದ ಮಂಜುಳನಾದ ಸಂದೋಹದಿಂದ ಸಂಗ್ರಹಿಸಿದ್ದಾರೆಂಬುದು ಖಚಿತವಾಗಿ ಗೊತ್ತಾಗುತ್ತದೆ. ಅದನ್ನೆಲ್ಲಾ ಈ ಗ್ರಂಥದಲ್ಲಿ ಚರ್ಚಿಸಲು ಅವಕಾಶವಿಲ್ಲ. ಈ ದಾರಿಯಲ್ಲಿ ಹೊರಟು ಪರಿಶೋಧಗಳನ್ನು ನಡೆಯಿಸಿ ದೊಡ್ಡದೊಂದು ಗ್ರಂಥವನ್ನೇ ಯಾರಾದರೂ ಬರೆಯಬಹುದಾದಷ್ಟು ಅವಕಾಶವಿದೆ. ವಾಲ್ಮೀಕಿ ಮಹರ್ಷಿಗಳ ಕಾವ್ಯದಿಂದ ಸಂಗ್ರಹಿಸಿದ ಅಂಶಗಳನ್ನು ಭಾಸಕಾಳಿದಾಸಾದಿಗಳು ಮನೋಜ್ಞವಾಗಿ ಉಪಯೋಗಿಸಿಕೊಂಡಿದ್ದಾರೆ. ಪುಷ್ಪಧೂಳಿಯ ರೂಪದಲ್ಲಿ ತಂದುದನ್ನು ಜೇನಿನಿಂದ ತುಂಬಿದ ಮೇಣದ ಗೂಡಿನ ಮನೋಹರರೂಪಕ್ಕಿಳಿಸಿದ್ದಾರೆ. ಆದುದರಿಂದ ಉಪಜೀವಿಯೆಂಬ ಪದವನ್ನು-ಧ್ವನಿಯ ದೃಷ್ಟಿಯಿಂದ ನೋಡಿದರೆ ಅಲ್ಪಸ್ವಲ್ಪ ಕಟುತರವಾಗಿ ತೋರುವ ಉಪಜೀವಿಯೆಂಬ ಪದವನ್ನು—ಅವರಲ್ಲಿ ಯಾರೊಬ್ಬರಿಗೆ ಅನ್ವಯಿಸುವುದೂ ತರವಲ್ಲ.

ಇನ್ನು, ವಸ್ತು ಮತ್ತು ಪಾತ್ರರಚನೆಯ ವಿಚಾರದಲ್ಲಿ ಇತರ ಕವಿಗಳು ಪ್ರಸಕ್ತ ರೂಪಕಗಳಿಂದ ಉಪಕೃತರಾಗಿರುವ ವಿಷಯ. ಸ್ವಪ್ನವಾಸವದತ್ತ ನಾಟಕದಲ್ಲಿ ಬರುವ ಸ್ವಪ್ನವೃತ್ತಾಂತದ ಆಧಾರದ ಮೇಲೆ ಭವಭೂತಿ ಮಹಾಕವಿಯು ತನ್ನ ಉತ್ತರರಾಮಚರಿತದ 'ಛಾಯಾ' ಭಾಗವನ್ನು ಅಳ

ವಡಿಸಿದ್ದಾನೆಂಬು ತೋರುವುದು. ಎಂದರೆ ಆ ಸ್ವಪ್ನವೃತ್ತಾಂತದ ಮಾದರಿ ಯನ್ನನುಸರಿಸಿ ಮತ್ತಷ್ಟು ಸುವಿಸ್ತರವಾಗಿರುವಂತೆ ಆತನು ತನ್ನ ಕಟ್ಟಣ ವನ್ನು ಕಟ್ಟಿದ್ದಾನೆ. ಸೀತಾದೇವಿಯು ರಾಮನೆದುರಿಗೇ ಇದ್ದರೂ ಅವನಿಗೆ ಕಾಣದಂತೆ ಸನ್ನಿವೇಶವನ್ನು ಕಲ್ಪಿಸಿ—ಅಲ್ಲಿ ಸ್ವಪ್ನದ ತೆರೆಯಿದ್ದರೆ ಇಲ್ಲಿ ಭಾಗೀರಥೀದೇವಿಯ ಅನುಗ್ರಹದ ತೆರೆಯನ್ನು ಹಾಕಿ—ಕರುಣರಸವನ್ನು ಹಿಂಡಿದ್ದಾನೆ, ಭವಭೂತಿ ಮಹಾಕವಿ. ಆತನು ಮಹಾವೀರ ಚರಿತದಲ್ಲಿ ಕೈಕಯಿಯು ದೂಷಣೆಗೆ ಪಾತ್ರಳಲ್ಲದಿರುವಂತೆ (ವಾಲ್ಮೀಕಿ ರಾಮಾಯಣ ದಲ್ಲಿಲ್ಲದ) ಸನ್ನಿವೇಶವನ್ನು ಹೊಸದಾಗಿ ಕಲ್ಪಿಸಿರುವುದೂ ಪ್ರತಿಮಾನಾಟಕದ ಕೈಕಯಿದೇವಿಯ ದರ್ಶನದ ಪ್ರಭಾವದಿಂದಲೇ ಎಂದು ತೋರುವುದು. ಅವನು ವಾಲ್ಮೀಕಿ ರಾಮಾಯಣದಲ್ಲಿಲ್ಲದ ನೂತನ ಸನ್ನಿವೇಶಗಳನ್ನು ಕಲ್ಪಿ ಸುವಲ್ಲಿ ವಹಿಸಿರುವ ಸ್ವಾತಂತ್ರ್ಯದ ವಿಧಾನವು ಬೇರೆಯಾಗಿರಬಹುದು. ಆದರೆ ಅದರ ಜಾತಿಯು ಮಾತ್ರ ಪ್ರತಿಮಾ ನಾಟಕದಲ್ಲಿ ಬೆಳಗುತ್ತಿರುವ ವಿಧಾನದಂತಹದೇ ಆಗಿದೆ. ಶಾಕುಂತಲದಲ್ಲಿ ದುಷ್ಯಂತನು ಉಂಗುರವನ್ನು ನೋಡಿ ನೋಡಿ ಶಕುಂತಳೆಗಾಗಿ ಹಂಬಲಿಸುವ ಸನ್ನಿವೇಶಕ್ಕೆ ಉದಯನನು (ಸ್ವಪ್ನವಾಸವದತ್ತದಲ್ಲಿ) ಘೋಷವತಿಯೆಂಬ ವೀಣೆಯನ್ನು ನೋಡಿ ವಾಸವ ದತ್ತೆಯನ್ನು ಕುರಿತು ಹಂಬಲಿಸುವ ಸನ್ನಿವೇಶವೇ ಪ್ರೇರಕವಾಗಿರಬೇಕೆಂದು ತೋರುತ್ತದೆ. ಭಾಸಕೃತವೆನ್ನುವ ರೂಪಕಗಳಲ್ಲಿ ಚಿತ್ರಿತನಾಗಿರುವ ದುರ್ಯೋ ಧನನನ್ನು ನೋಡದೆ ಹೋಗಿದ್ದರೆ, ಭಟ್ಟನಾರಾಯಣನೆಂದಿಗೂ ವೇಣೀ ಸಂಹಾರ ನಾಟಕದ ದುರ್ಯೋಧನನನ್ನು ಚಿತ್ರಿಸುವುದು ಸಾಧ್ಯವಾಗುತ್ತಿರ ಲಿಲ್ಲವೆಂದು ಹೇಳಬೇಕಾಗುತ್ತದೆ. ಶೂದ್ರಕನಂತೂ ಚಾರುದತ್ತದ ಪಡಿ ಯಚ್ಚನ್ನೇ ಉಪಯೋಗಿಸಿ ಮೃಚ್ಛಕಟಿಕವನ್ನು ಬರೆದಿದ್ದಾನೆ. ಆದರೂ ಅವನು ತನ್ನ ಸ್ವಕೀಯ ಪ್ರತಿಭೆಯಿಂದ ರಾಜಕೀಯ ವಿಚಾರಗಳನ್ನೂ ಸಹ ಚಾರುದತ್ತದ ಸಾಮಾಜಿಕ ವಿಚಾರಗಳೊಡನೆ ಸೇರಿಸಿ ಮೃಚ್ಛಕಟಿಕ ಪ್ರಕರಣ ವನ್ನು ರಚಿಸಿದ್ದಾನೆ. ಚಾರುದತ್ತದಲ್ಲಿರುವ ಪಾಣಿನಿಯ ಸೂತ್ರವಿರುದ್ಧವಾದ ಪ್ರಯೋಗಗಳನ್ನೆಲ್ಲಾ ಶೂದ್ರಕನು ತನ್ನ ಗ್ರಂಥದಲ್ಲಿ ತಿದ್ದುಪಡಿ ಮಾಡಿ ಕೊಂಡಿರುವುದರಿಂದಲೂ, ಚಾರುದತ್ತವೇ ಮೃಚ್ಛಕಟಿಕಕ್ಕಿಂತ ಪ್ರಾಚೀನ ವೆಂಬ ಅಂಶವು ವ್ಯಕ್ತವಾಗುತ್ತದೆ.

ಚಾರುದತ್ತವು ಕೇರಳ ರಂಗಸ್ಥಳಕ್ಕಾಗಿ ರಚಿಸಲ್ಪಟ್ಟ ಮೃಚ್ಛಕಟಿಕದ ರಂಗಪಾಠದ ಗ್ರಂಥವೆಂದು ಕೆಲವರು ಹೇಳುವುದಂತೂ ಕೇವಲ ರಸಾಭಾಸದ ಮಾತೇಸರಿ. ಒಂದುವೇಳೆ ಅದು ನಿಜವಾಗುವುದಾದರೆ, ಚಾರುದತ್ತವು ಅಪೂರ್ಣವಾಗಿರುವುದಕ್ಕೆ ಕಾರಣವೇನೆಂಬುದನ್ನು ಅವರು ತಿಳಿಸಬಹುದಾಗಿದ್ದಿತು. ಅದು ಹಾಗಿರಲಿ. ಕೇರಳದೇಶದವರೇನು ಅಸಭ್ಯಜನರೆ? ಮೃಚ್ಛಕಟಿಕದಲ್ಲಿ ಮನೋಹರವಾಗಿ ಬಳೆದುಬಂದಿರುವ ರಾಜಕೀಯವಿಪ್ಲವದ ಸಂಗತಿಯು ಅವರಿಗೆ ಸೊಗಸಲಿಲ್ಲವೆ? ರಂಗಪಾಠವಾಗಿ ಕತ್ತರಿಸಿಟ್ಟ ಮೃಚ್ಛಕಟಿಕಕ್ಕೆ ಅವರು 'ಚಾರುದತ್ತ' ಎಂದು ಬೇರೆ ಹೆಸರನ್ನಿಟ್ಟುದಕ್ಕೆ ಕಾರಣವೇನು? ಹೀಗೆ ನಡೆದಿರುವುದು ಎಲ್ಲಿಯಾದರೂ ಉಂಟೆ? ಮೃಚ್ಛಕಟಿಕದ ಮಾದರಿಯನ್ನು ನೋಡಿಕೊಂಡು ಮತ್ತಾವನೋ ಕವಿಯು ಚಾರುದತ್ತವನ್ನು ರಚಿಸಿರಬೇಕೆಂದು ಕೆಲವರು ಹೇಳುವುದಂತೂ, ಇನ್ನೂ ಆಭಾಸದ ಮಾತು. ಮೃಚ್ಛಕಟಿಕವನ್ನು ಚಾರುದತ್ತದ ಆಧಾರದ ಮೇಲೆ ಬರೆದಿದ್ದರೆ ಅದರ ಮಾತೇ ಬೇರೆ. ಅದನ್ನು ಹಾಗೆ ಬರೆದಿರಬೇಕೆಂದೂ ತೋರುತ್ತದೆ. ಶೂದ್ರಕನು ಚಾರುದತ್ತದಿಂದ ಅನೇಕ ಸಂಗತಿಗಳನ್ನೂ, ಶ್ಲೋಕಗಳನ್ನೂ, ವಾಕ್ಯಗಳನ್ನೂ ತೆಗೆದುಕೊಂಡಿದ್ದರೂ, ಹೃದಯಂಗಮವಾಗಿ ಹೊಸ ಸಂಗತಿಗಳನ್ನೂ ಸೇರಿಸಿ ರೂಪಕರಚನೆ ಮಾಡಿರುವುದರಿಂದ ಅಷ್ಟೇನೂ ಹೆಚ್ಚಿನ ಆಕ್ಷೇಪಣೆಗೆ ಗುರಿಯಾಗುವಂತಿಲ್ಲ. ಆದರೆ, ಮೃಚ್ಛಕಟಿಕದ ಆಧಾರದ ಮೇಲೆ ಚಾರುದತ್ತವನ್ನು—ಸೌಧವೊಂದರಲ್ಲಿ ಹೆಚ್ಚುಭಾಗವನ್ನು ಕೆಡವಿ ಒಂದೆರಡು ಕೋಣೆಗಳನ್ನುಳಿಸಿದಂತೆ—ರಚಿಸಿದ್ದರೆ, ಕವಿಯು ಯಾವ ಯಶಸ್ಸಿನ ಪ್ರಾಪ್ತಿಗಾಗಿ ಹಾಗೆ ಮಾಡಿರಬೇಕು? ಪಂಡಿತ ಗೋಷ್ಠಿಯಲ್ಲಿ ಯಾವ ಮುಖವನ್ನು ಹೊತ್ತು ಚಾರುದತ್ತವನ್ನು ತನ್ನದೆಂದು ತೋರಿಸಿರಬೇಕು?

ಉದಯನನನ್ನು ಕಥಾನಾಯಕನನ್ನಾಗಿಟ್ಟು ರೂಪಕಗಳನ್ನು ರಚಿಸಿದ ಶ್ರೀಹರ್ಷ (ಧಾವಕ?)ನೇ ಮುಂತಾದ ಕವಿಗಳೆಲ್ಲರಿಗೂ, ಸ್ವಪ್ನವಾಸವದತ್ತ ನಾಟಕವೇ ಪ್ರಚೋದಕವಾಗಿರಬೇಕೆಂಬುದಂತೂ, ಸ್ವಯಂವೇದ್ಯವಾಗಿಯೇ ಇದೆ. ಅವರ ರೂಪಕಗಳ ಕಥಾವಸ್ತುವೇನೊ ಬೇರೆಬೇರೆಯಾಗಿದ್ದರೂ, ಉದಯನ ವಿಷಯವಾಗಿ ಬರೆಯಲು ಪ್ರೇರಣೆಯು ದೊರೆತುದು ಸ್ವಪ್ನವಾಸವದತ್ತದಿಂದಲೇ—ಎನ್ನಬಹುದು. ಸ್ವಪ್ನವಾಸವದತ್ತ ನಾಟಕವೇ ಇಲ್ಲದೆ

ಹೋಗಿದ್ದರೆ ಇವುಗಳೆಲ್ಲ ಇಷ್ಟು ಮನೋಹರ ರೂಪವನ್ನು ತಳೆಯುತ್ತಿದ್ದುವೋ ಇಲ್ಲವೋ ಎಂಬುದನ್ನು ಹೇಳುವ ಬಗೆ ಹೇಗೆ? ವಾಲ್ಮೀಕಿ ರಾಮಾಯಣವೇ ಇಲ್ಲವೆ ಹೋಗಿದ್ದರೆ, ಪ್ರತಿಮಾ ನಾಟಕವೇ ಮುಂತಾದ ಶ್ರೀರಾಮಚಂದ್ರ ವಿಷಯಕವಾದ ರೂಪಕಗಳು ಹುಟ್ಟುತ್ತಿದ್ದುವೋ ಇಲ್ಲವೋ ಎಂಬುದನ್ನು ಹೇಳಬಲ್ಲವರಾರು?

**೩. ಕವಿಯ ಕಾಲ ವಿಚಾರ:**—ಪ್ರಸಕ್ತ ರೂಪಕಗಳು ರಚಿತವಾದ ಕಾಲ ನಿರ್ಣಯ ವಿಚಾರವು ಒಂದು ದೊಡ್ಡ ಸಮುದ್ರದಂತಿದೆ. ಕವಿಯ ಕಾಲನಿರ್ಣಯದ ವಿಚಾರದಲ್ಲಿ ಪಂಡಿತರುಗಳಲ್ಲಿ ವಿಧವಿಧವಾದ ಭಿನ್ನಾಭಿಪ್ರಾಯಗಳಿವೆ. ಪ್ರಸಕ್ತ ರೂಪಕಗಳ ಕಾಲನಿರ್ಣಯವನ್ನು ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದಿಂದ ಹಿಡಿದು ಕ್ರಿಸ್ತಶಕ ಹನ್ನೊಂದನೆಯ ಶತಮಾನದವರೆಗೆ ಹಲವರು ಹಲವು ವಿಧಗಳಲ್ಲಿ ಗೊತ್ತುಮಾಡಿದ್ದಾರೆ. ಬಹು ವಿಷಯಗಳನ್ನೊಳಗೊಂಡಿರುವ ಆ ಕಾಲ ನಿರ್ಣಯದ ಸಮಗ್ರ ವಿಷಯವನ್ನೂ ಚರ್ಚಿಸಲು ಈ ಗ್ರಂಥದ ಆಶಯದ ದೃಷ್ಟಿಯಿಂದ ಇಲ್ಲಿ ಅವಕಾಶವಿಲ್ಲವೆಂಬ ಸಂಗತಿಯನ್ನು ಮೊದಲೇ ಅರಿಕೆಮಾಡಿದ್ದೇನೆ. ಕೇವಲ ಸೀಮಾರೇಖೆಗಳಂತಿರುವ ಕೆಲವು ಅಂಶಗಳನ್ನು ಮಾತ್ರವೇ ಇಲ್ಲಿ ಪ್ರಸ್ತುತಪಡಿಸುವುದು ಸಾಧ್ಯ.

ಈ ರೂಪಕಗಳಲ್ಲಿ ರಾಮಾಯಣ ಮಹಾಭಾರತಗಳಲ್ಲಿರುವಂತೆ ಆರ್ಷ ಪ್ರಯೋಗಗಳಿರುವುದನ್ನೂ, ಭಾಷಾಸರಳತೆಯನ್ನೂ, ಶೈಲಿಯು ಅತಿ ಸುಲಭವಾಗಿ ಸಹಜ ಸೌಂದರ್ಯವುಳ್ಳುದಾಗಿರುವುದನ್ನೂ ನೋಡಿದರೆ, ಈ ರೂಪಕಗಳು ಜನರು ಸಂಸ್ಕೃತ ಭಾಷೆಯಲ್ಲೇ ಇನ್ನೂ ಮಾತನಾಡುತ್ತಿದ್ದಷ್ಟು ಹಿಂದಿನ ಕಾಲದಲ್ಲಿ ರಚಿಸಲ್ಪಟ್ಟಿರಬೇಕೆಂದು ಡಾಕ್ಟರ್ ಗಣಪತಿಶಾಸ್ತ್ರಿಗಳು ಅಭಿಪ್ರಾಯಪಡುತ್ತಾರೆ. ಪಾಣಿನ್ಯಾಚಾರ್ಯನ ವ್ಯಾಕರಣಸೂತ್ರಗಳಿಗೆ ವಿರುದ್ಧವಾಗಿರುವ ಪ್ರಯೋಗಗಳು ಈ ಗ್ರಂಥಗಳಲ್ಲಿ ಇರುವುದರಿಂದಲೂ, ಭರತಮುನಿಯ ನಾಟ್ಯಶಾಸ್ತ್ರ ನಿಯಮಗಳಿಗೆ ವಿರುದ್ಧವಾಗಿ ಈ ಗ್ರಂಥ ಕರ್ತನು ರೂಪಕರಚನೆ ಮಾಡಿರುವುದರಿಂದಲೂ, ಅವರಿಬ್ಬರಿಗಿಂತಲೂ ಪೂರ್ವದಲ್ಲೇ ಅವನು ಗ್ರಂಥರಚನೆ ಮಾಡಿದವನೆಂದು ಅವರು ಸೂಚಿಸಿದ್ದಾರೆ. ಅಲ್ಲದೆ, ಈ ರೂಪಕಗಳಲ್ಲಿರುವ ಪ್ರಾಕೃತವು ಬಹಳ ಪ್ರಾಚೀನ

ಕಾಲದ ಪ್ರಾಕೃತಭಾಷೆಯೆಂದು ತೋರುವುದರಿಂದಲೂ, ಪ್ರತಿಜ್ಞಾಯೌಗಂಧರಾಯಣ ಕಥಾವಸ್ತುವನ್ನು ವಿಚಾರಮಾಡಿರುವ ಭಾಮಹನು ಗುಣಾಢ್ಯನಿಗಿಂತ ಹಿಂದಿನವನಾಗಿ ಕನಿಷ್ಠಪಕ್ಷ ಕ್ರಿಸ್ತಪೂರ್ವ ಒಂದನೆಯ ಶತಮಾನಕ್ಕಿಂತ ಈಚಿನವನಲ್ಲದಿರುವುದರಿಂದಲೂ ಭಾಸನು ಅವನಿಗಿಂತ ಒಂದೆರಡು ಶತಮಾನಗಳಷ್ಟು ಹಿಂದಿನವನೆಂಬುದು ಅವರ ಅಭಿಪ್ರಾಯವಾಗಿದೆ. 'ನವಂ ಶರಾವಂ ಸಲಿಲೈಸ್ಸುಪೂರ್ಣಂ ಸುಸಂಸ್ಕೃತಂ ದರ್ಭಕೃತೋತ್ತರೀಯಂ। ತತ್ತಸ್ಯ ಮಾಭೂನ್ನರಕಂ ಸ ಗಚ್ಛೇತ್ ಯೋ ಭರ್ತೃಪಿಂಡಸ್ಯ ಕೃತೇ ನ ಯುಧ್ಯೇತ್ ॥' ಎಂಬ ಶ್ಲೋಕವು ಪ್ರತಿಜ್ಞಾಯೌಗಂಧರಾಯಣದಲ್ಲಿಯೂ ಇದೆ. ಅಲ್ಲದೆ ಅದು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿಯೂ ಇದೆ. ಪೋಷಿಸಿದ ಒಡೆಯನ ಸೇವೆಗಾಗಿ ಯುದ್ಧಮಾಡದೆ ಹೋದವರಿಗೆ ನರಕಪ್ರಾಪ್ತಿಯೆಂದು ತಿಳಿಸುವ ಈ ಶ್ಲೋಕವನ್ನು ವೇದದ ವಾಕ್ಯಗಳಂತೆಯೇ ಪ್ರಮಾಣಶ್ಲೋಕವಾದ ಆಧಾರವಚನದಂತೆ ಉದಾಹರಿಸಿ ಹೇಳುತ್ತಿರುವನೆಂಬ ಅಭಿಪ್ರಾಯವು ಬರುವಂತಹ ಸನ್ನಿವೇಶದಲ್ಲಿ ಕೌಟಿಲ್ಯನು ಹೇಳಿದ್ದಾನೆ. ಆದಕಾರಣ, ಕೌಟಿಲ್ಯನೇ ಅದನ್ನು ಭಾಸನ ಗ್ರಂಥದಿಂದ ತೆಗೆದುಕೊಂಡಿರಬೇಕು. ಆದರೆ ಅದು ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದಲ್ಲಿದ್ದ ಕೌಟಿಲ್ಯನ ಕಾಲಕ್ಕೇ ಪ್ರಮಾಣವಾಗಿ ಉದಾಹರಿಸುವಮಟ್ಟಿನ ಪ್ರತಿಷ್ಠೆಯನ್ನು ಪಡೆದಿರಬೇಕಾದಲ್ಲಿ ಭಾಸನು ಕ್ರಿಸ್ತಪೂರ್ವ ನಾಲ್ಕನೆಯ ಶತಮಾನಕ್ಕಿಂತಲೂ ಬಹಳ ಹಿಂದಿನವನಾಗಿರಬೇಕು--ಎಂಬುದು ಡಾಕ್ಟರ್ ಗಣಪತಿಶಾಸ್ತ್ರಿಗಳ ಅಭಿಮತವಾಗಿದೆ. ಜೋನರಾಜನ ವ್ಯಾಖ್ಯಾನದಲ್ಲಿ [೫ನೆಯ ಪುಟವನ್ನು ದಯಿಯಿಟ್ಟು ನೋಡಿ] ಭಾಸನನ್ನೂ ವ್ಯಾಸರಂತೆಯೇ ಪ್ರಾಚೀನ ಕಾಲದ ಮುನಿಯೆಂದು ಸಂಭಾವಿಸಿರುವುದೂ, ಭಾಸನು ಕೇವಲ ಪ್ರಾಚೀನನೆಂಬುದಕ್ಕೆ ಸಹಾಯಕವೆಂಬುದು ಅವರ ಆಶಯವಾಗಿದೆ. ಪ್ರೊಫೆಸರ್ ಘಿಡೇಯವರೂ ಇದೇ ಬಗೆಯ ವಾದಸರಣಿಯನ್ನನುಸರಿಸಿ, ಭಾಸನು ಈ ರೂಪಕಗಳ ಕರ್ತೃವೆಂದೂ, ಆದರೆ ಅವನು ಕ್ರಿಸ್ತಪೂರ್ವ ೪೫೦ಕ್ಕೂ ಕ್ರಿಸ್ತಪೂರ್ವ ೩೦೦ಕ್ಕೂ ಮಧ್ಯದಲ್ಲಿದ್ದವನೆಂದೂ ಅಭಿಪ್ರಾಯಪಡುತ್ತಾರೆ. ದಿಗಂಬರ ಪಂಗಡದ ಜೈನಶ್ರಮಣಕರನ್ನು ಮಾತ್ರವೇ ಭಾಸನು ಪ್ರತಿಜ್ಞಾಯೌಗಂಧರಾಯಣದಲ್ಲಿಯೂ ಅವಿಮಾರಕದಲ್ಲಿಯೂ ವರ್ಣಿಸಿರುವುದರಿಂದಲೂ, ಆದಕಾರಣ ಅವನು ಶ್ವೇತಾಂಬರ

ಪಂಗಡದ ಜೈನಮತವು ಹುಟ್ಟುವುದಕ್ಕೆ ಮೊದಲೇ ಜೀವಿಸಿದ್ದನೆಂದು ಹೇಳಬೇಕಾಗುವುದರಿಂದಲೂ, ಕ್ರಿಸ್ತಪೂರ್ವ ೩೦೦ಕ್ಕಿಂತ ಈಚಿನವನಲ್ಲವೆಂಬುದು ಅವರ ಮತ. ಪ್ರಸಕ್ತ ರೂಪಕಗಳನ್ನು ಬರೆದವನು ಭಾಸನೇ ಎಂದು ಒಪ್ಪಿಕೊಳ್ಳುವವರಲ್ಲಿ ಕೂಡ, ಆತನ ಕಾಲದ ವಿಚಾರದಲ್ಲಿ ವಿಧವಿಧವಾಗಿ ಭಿನ್ನಾಭಿಪ್ರಾಯವಿದೆ.

ಮೇಲೆ ಹೇಳಿದಂತೆ ಡಾಕ್ಟರ್ ಗಣಪತಿ ಶಾಸ್ತ್ರಿಗಳೂ ಪ್ರೊಫೆಸರ್ ಭಿಡೇಯವರೂ ಮಾಡಿರತಕ್ಕ ಕವಿಯ ಕಾಲನಿರ್ಣಯ ವಿಧಾನದಲ್ಲಿ ನ್ಯೂನತೆಗಳುಂಟು. ಪಾಣಿನ್ಯಾಚಾರ್ಯನ ವ್ಯಾಕರಣ ಸೂತ್ರಗಳಿಗೆ ವಿರುದ್ಧವಾಗಿರುವ ಪ್ರಯೋಗಗಳು ಕಾಳಿದಾಸನ ಕೃತಿಗಳಲ್ಲಿಯೂ ಇವೆ. ಅವನು ಪಾಣಿನ್ಯಾಚಾರ್ಯನಿಗಿಂತ ಮುಂಚಿನವನೆಂದು ಹೇಳಲಾದೀತೆ? ಕವಿಯು ಭರತ ಮುನಿಯ ನಾಟ್ಯಶಾಸ್ತ್ರದ ನಿಯಮಗಳನ್ನು ಅನುಸರಿಸಿಲ್ಲವೆಂಬುದೇನೋ ನಿಜ. ಆದರೂ ಅವನು ಭರತಮುನಿಗಿಂತ ಮುಂಚಿನವನಾಗಿಯೇ ಇರಬೇಕೆಂದು ತರ್ಕಿಸಲಾಗುವುದಿಲ್ಲ. ಅವನು ಭರತಮುನಿಯ ಸಮಕಾಲೀನನಾಗಿಯೇ ಇರಬಹುದು. ಹಾಗಿದ್ದೂ ಭರತಮುನಿಯ ನಾಟ್ಯಶಾಸ್ತ್ರ ನಿಯಮಗಳನ್ನು ಅನುಸರಿಸದೆ ಮತ್ತಾವ ನಿಯಮಗಳನ್ನಾದರೂ ಅನುಸರಿಸಿರಬಹುದು. ಭಾಸನು ಒಂದು ನಾಟ್ಯಶಾಸ್ತ್ರವನ್ನು ರಚಿಸಿದ್ದನೆಂಬ ಐತಿಹ್ಯವೂ ಉಂಟು. ಅವನು ತಾನೇ ಸ್ವಯಂ ನಾಟ್ಯಶಾಸ್ತ್ರಾಚಾರ್ಯನಾಗಿ ತಾನೇ ಒಂದು ಸಂಪ್ರದಾಯವನ್ನು ಕಲ್ಪಿಸಿ ಅದಕ್ಕನುಸಾರವಾಗಿ ರೂಪಕಗಳನ್ನು ರಚಿಸಿರಬಹುದು. ರೂಪಕಗಳಲ್ಲಿರುವ ಪ್ರಾಕೃತದ ಸ್ವಭಾವದಿಂದಲೇ ಅವು ಪ್ರಾಚೀನವೆನ್ನಲಾಗುವುದಿಲ್ಲ. ಪ್ರಯಾಸಪಟ್ಟು ಪ್ರಾಚೀನಕಾಲದ ಪ್ರಾಕೃತದಲ್ಲಿ ಪಾಂಡಿತ್ಯವನ್ನು ಸಂಪಾದಿಸುವುದು ಯಾವಕಾಲದವರಿಗಾದರೂ ಸಾಧ್ಯವುಂಟು. ಅರ್ಥಶಾಸ್ತ್ರದಲ್ಲಿರುವ ಶ್ಲೋಕವನ್ನು ಚಾಣಕ್ಯನೂ, ಭಾಸನೂ ಇಬ್ಬರೂ ಮತ್ತಾವುದೋ ಗ್ರಂಥದಿಂದ ತೆಗೆದುಕೊಂಡಿದ್ದರೂ ಇರಬಹುದು. ಕೌಟಿಲ್ಯನು [ಚಾಣಕ್ಯನು] ಅದನ್ನು ಮನುಗೀತಿಯಿಂದ ತೆಗೆದುಕೊಂಡಿರುವುದಾಗಿ ಮಾಧವ ಯಜ್ವನು ಬರೆದಿರುವ ನಯಚಂದ್ರಿಕೆಯಲ್ಲಿ ಹೇಳಿದೆ. ಶ್ವೇತಾಂಬರ ಪಂಗಡದ ಜೈನಮತವು ಹುಟ್ಟಿದಮೇಲೆ ಮಾತ್ರವೇ ಕವಿಯು ಜೀವಿಸಿದ್ದವನಾದರೂ ದಿಗಂಬರ ಪಂಗಡದ ಜೈನಪಾತ್ರಗಳನ್ನು ಮಾತ್ರವೇ ರೂಪಕಗಳಲ್ಲಿ

ತರುವುದು ಸಾಧ್ಯ. ಆದುದರಿಂದ ಪ್ರೊಫೆಸರ್ ಭಿಡೇಯವರ ಹೇಳಿಕೆಯು ಪರಿಷ್ಕಾರವಾಗಿದೆಯೆಂದು ಒಪ್ಪುವಹಾಗಿಲ್ಲ. ಕವಿಯ ಕಾಲನಿರ್ಣಯದ ವಿಚಾರದಲ್ಲಿ ಇತರ ಪಂಡಿತರುಗಳಲ್ಲಿಯೂ ಭಿನ್ನಾಭಿಪ್ರಾಯಗಳಿವೆ. ಪ್ರಸಕ್ತ ರೂಪಕಗಳ ಕಾಲನಿರ್ಣಯವನ್ನು ಕ್ರಿಸ್ತಪೂರ್ವ ನಾಲ್ಕನೆಯ ಶತಮಾನ ದಿಂದ ಹಿಡಿದು ಕ್ರಿಸ್ತಶಕ ಹನ್ನೊಂದನೆಯ ಶತಮಾನದವರೆಗೆ ಪಲವರು ಹಲವು ವಿಧಗಳಲ್ಲಿ ಗೊತ್ತುಮಾಡಿದ್ದಾರೆ.

ಡಾಕ್ಟರ್ ಬಾರ್ನೆಟ್ ಮುಂತಾದ ಕೆಲವು ಪಂಡಿತರು ಮಾಡಿರುವ ಕಾಲನಿರ್ಣಯವೂ ಸರಿಯಾಗಿಲ್ಲ. ಪ್ರತಿಮಾ ನಾಟಕದಲ್ಲಿ ಸಂನ್ಯಾಸಿ ವೇಷದ ರಾವಣನು ಮನುವಿನ ಧರ್ಮಶಾಸ್ತ್ರವನ್ನೂ, ಮಹೇಶ್ವರನ ಯೋಗಶಾಸ್ತ್ರ ವನ್ನೂ, ಬೃಹಸ್ಪತಿಯ ಅರ್ಥಶಾಸ್ತ್ರವನ್ನೂ, ಮೇಧಾತಿಥಿಯ ನ್ಯಾಯಶಾಸ್ತ್ರ ವನ್ನೂ, ಪ್ರಾಚೇತಸನ ಶ್ರಾದ್ಧಕಲ್ಪವನ್ನೂ, ವ್ಯಾಸಂಗಮಾಡಿರುವುದಾಗಿ ರಾಮನೊಡನೆ ಹೇಳುತ್ತಾನೆ. ಈಗಿರುವ ಮನುಸ್ಮೃತಿಗೆ ಕ್ರಿಸ್ತಶಕ ಹತ್ತ ನೆಯ ಶತಮಾನದಲ್ಲಿದ್ದ ಮೇಧಾತಿಥಿಯೆಂಬಾತನು ವ್ಯಾಖ್ಯಾನವನ್ನು ಬರೆ ದಿದ್ದಾನೆ. ಆದಕಾರಣ, ಪ್ರತಿಮಾನಾಟಕವು ಹತ್ತನೆಯ ಶತಮಾನಕ್ಕೆ ಹಿಂದೆ ಬರೆಯಲ್ಪಟ್ಟುದೇ ಅಲ್ಲವೆಂದು ಡಾಕ್ಟರ್ ಬಾರ್ನೆಟ್‌ರವರು ಅಭಿಪ್ರಾ ಯಪಟ್ಟಿದ್ದಾರೆ. ಅವರ ಅಭಿಪ್ರಾಯವು ಸಾಧುವೆನ್ನುವ ಪಕ್ಷಕ್ಕೆ ರಾವಣನು ಮನುಸ್ಮೃತಿಯನ್ನೇ ವ್ಯಾಸಂಗ ಮಾಡಿದಂತೆ ಹೇಳಿಸಿದುದೂ ಸಾಲದೆ ಕವಿಯು ವಾಖ್ಯಾನಕಾರನ ಹೆಸರನ್ನೂ ಅವನಿಂದ ಹೇಳಿಸಿರುವುದೇತಕ್ಕೋ ತಿಳಿಯದು. ಪ್ರತಿಭಾಶಾಲಿಯಾದ ಕವಿಯು ರಾವಣನಂತಹ ಪ್ರಾಚೀನ ವ್ಯಕ್ತಿಯಿಂದ ಹತ್ತನೆಯ ಶತಮಾನದ ಮೇಧಾತಿಥಿಯ ವ್ಯಾಖ್ಯಾನದ ಸುದ್ದಿಯನ್ನು ಆಡಿಸಲಾರನೆಂಬಷ್ಟೂ ಅವರಿಗೆ ಹೊಳೆಯದೇ ಹೋದುದ ಕ್ಕಾಗಿ ವಿಷಾದಿಸಬೇಕಾಗಿದೆ. ಇಲ್ಲಿ ಕವಿಯು ಹೇಳಿಸಿರುವುದು ಈಗಿರುವ ಮನುಸ್ಮೃತಿಗಿಂತಲೂ ಹಿಂದಿದ್ದುದಾಗಿ ಐತಿಹ್ಯವಿರುವ ಬೃಹನ್ಮನುಧರ್ಮ ಶಾಸ್ತ್ರವೇ ಸರಿ. ಅದಕ್ಕೆ ಜೊತೆಹೊಂದುವಹಾಗೆ ರಾವಣನ ಕಾಲದ ಪ್ರಾಚೀ ನತೆಗೆ ಒಪ್ಪುವ ಪ್ರಮಾಣ ಗ್ರಂಥಗಳ ಹೆಸರನ್ನೇ ಕವಿಯು ಅವನಿಂದ ಹೇಳಿಸಿದ್ದಾನೆ. ಆದುದರಿಂದಲೇ ಕೌಟಿಲ್ಯನ ಅರ್ಥಶಾಸ್ತ್ರವನ್ನು ಹೇಳಿಸಿಲ್ಲ. ಬೃಹಸ್ಪತಿಯ ಅರ್ಥಶಾಸ್ತ್ರವೆಂದು ಹೇಳಿಸಿದ್ದಾನೆ. ಇಲ್ಲಿ ಮೇಧಾತಿಥಿಯೆಂಬುದು

ಯಾವನೋ ಅತ್ಯಂತ ಪ್ರಾಚೀನಕಾಲದ ಮುನಿಯ ಹೆಸರಾಗಿರಬೇಕು. ಅಲ್ಲದೆ ಇಲ್ಲಿ ಮೇಧಾತಿಥಿಯ ನ್ಯಾಯಶಾಸ್ತ್ರವೆಂದಿದೆ. ನ್ಯಾಯಶಾಸ್ತ್ರವೇ ಬೇರೆ. ಧರ್ಮಶಾಸ್ತ್ರವೇ ಬೇರೆ. ಕ್ರಿಸ್ತಶಕ ಹತ್ತನೆಯ ಶತಮಾನದ ಮೇಧಾತಿಥಿಯ ಮನುಧರ್ಮಶಾಸ್ತ್ರ ವ್ಯಾಖ್ಯಾನವನ್ನು ಕವಿಯು ರಾವಣ ನಿಂದ ಸೂಚಿಸಿದ್ದರೆ ಮೇಧಾತಿಥಿಯ ಧರ್ಮಶಾಸ್ತ್ರವೆಂದಿರುತ್ತಿದ್ದಿತೇ ಹೊರತು, ಮೇಧಾತಿಥಿಯ ನ್ಯಾಯಶಾಸ್ತ್ರವೆಂದಿರುತ್ತಿರಲಿಲ್ಲ. ಪ್ರತಿಮಾ ನಾಟಕದಲ್ಲಿ ವಾಲ್ಮೀಕಿರಾಮಾಯಣದಲ್ಲಿರುವಂತೆ ರಘುವಿನ ಮಗ ದಿಲೀಪ ನೆಂದಿರದೆ, ಕಾಳಿದಾಸನ ರಘುವಂಶದಲ್ಲಿರುವಂತೆಯೇ ದಿಲೀಪನ ಮಗ ರಘುವೆಂದಿರುವುದರಿಂದ ಅದನ್ನು ರಚಿಸಿದ ನಮ್ಮ ಕವಿಯು ಕಾಳಿದಾಸನಿಗೆ ಈಚಿನವನಾಗಿರಬೇಕೆಂಬುದಾಗಿ ಕೆಲವರು ಪಂಡಿತರು ಹೂಡಿರುವ ವಾದವೂ ಸರಿಯಲ್ಲ. ಈ ಅನುಕ್ರಮವನ್ನು ಆತನೂ ಕಾಳಿದಾಸನೂ ಇಬ್ಬರೂ ಮತ್ತಾವನಾದರೂ ಕವಿಯ ಗ್ರಂಥದಿಂದ ಸಂಗ್ರಹಿಸಿರಬಹುದು. ಪ್ರತಿಮಾ ಗೃಹವನ್ನು ಕವಿಯು ಮಹಾಬಲಿಪುರದ ಕಲ್ಲಿನ ದೇವಾಲಯಗಳನ್ನು ನೋಡಿ ಅವುಗಳ ಆಧಾರದ ದೆಸೆಯಿಂದ ಕಲ್ಪಿಸಿರಬೇಕೆಂದೂ, ಆದಕಾರಣ ಅವನು ಕ್ರಿಸ್ತಶಕ ಆರನೆಯ ಶತಮಾನಕ್ಕಿಂತಲೂ ಹಿಂದಿನವನಲ್ಲವೆಂದೂ ಮ|| ರಾ|| ಹೀರಾನಂದ ಶಾಸ್ತ್ರಿಗಳವರು ಹೇಳುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಕ್ರಿಸ್ತಶಕ ಒಂದನೆಯ ಶತಮಾನದಿಂದಲೂ ಶಿಲಾ ಪ್ರತಿಮೆಗಳಿರಲಿಲ್ಲವೆ? ಮಹಾಬಲಿಪುರದ ಕಲ್ಲಿನ ದೇವಾಲಯಗಳು ನಿರ್ಮಿತ ವಾಗಬೇಕಾದರೂ ಮೂಲರೂಪದ ಮಾದರಿಗಳಿರಬೇಕಲ್ಲ. ಅವುಗಳನ್ನು ನಮ್ಮ ಕವಿಯು ಏಕೆ ನೋಡಿರಬಾರದು? ಅಥವಾ ಯುದ್ಧದಲ್ಲಿ ಮಡಿದ ವೀರರೇ ಮುಂತಾದವರ ಪ್ರತಿಮೆಗಳನ್ನಿಟ್ಟು ಪೂಜಿಸುತ್ತಿದ್ದ ದಕ್ಷಿಣದೇಶದ ಪ್ರಾಚೀನ ಸಂಪ್ರದಾಯಕ್ಕನುಸಾರವಾಗಿ ಕವಿಯ ಮನಸ್ಸಿಗೆ ಪ್ರತಿಮಾ ಗೃಹನಿರ್ಮಾಣದ ಕಲ್ಪನೆಯೇತಕ್ಕೆ ಹೊಳೆದಿರಬಾರದು? ಅಥವಾ "ರವಿ ಕಾಣದುದನ್ನು ಕವಿಕಾಣುವನು" ಎಂಬಂತೆ ಕವಿಯೇ ಏತಕ್ಕೆ ತನ್ನ ಪ್ರತಿಭಾಸಾಮರ್ಥ್ಯದಿಂದ ಪ್ರತಿಮಾಗೃಹವನ್ನು ಕಲ್ಪಿಸಿರಬಾರದು? ಭರತ ವಾಕ್ಯಗಳಲ್ಲಿ 'ರಾಜಸಿಂಹ' ಎಂದು ಬರೆದಿರುವುದರ ಆಧಾರದ ಮೇಲೆ ಕ್ಷತ್ರಪ ರುದ್ರಸಿಂಹನ ಕಾಲದಲ್ಲಿ ಅವನ ಆಶ್ರಿತನಾಗಿ ನಮ್ಮ ಕವಿಯು

ಇದ್ದನೆನ್ನುವುದೂ ಸರಿಯಲ್ಲ. ಕವಿಯು ಅದನ್ನು ಲೋಕಾಭಿರಾಮವಾಗಿ ಯಾವ ರಾಜನಿಗೆ ಬೇಕಾದರೂ ಅನ್ವಯಿಸಲೆಂದು ಸೂಚಿಸಿರುವಂತೆ ತೋರುತ್ತದೆ. ನಮ್ಮ ಕವಿಯು ಬರೆದಿರುವ ರೂಪಕಗಳಲ್ಲಿ ಪ್ರತಿಮಾ ನಾಟಕವು ಕ್ರಿಸ್ತಶಕ ಹತ್ತನೆಯ ಶತಮಾನದಲ್ಲಿ ಬರೆಯಲ್ಪಟ್ಟುದೆಂದು ಡಾ|| ಬಾರ್ನೆಟ್‌ರವರು ಹೇಳಿದ್ದಾರಷ್ಟೆ. ಇತರ ಹನ್ನೆರಡು ರೂಪಕಗಳೂ ಕ್ರಿಸ್ತಶಕ ಏಳನೆಯ ಶತಮಾನದಲ್ಲಿದ್ದ ಯಾವನೋ ಕವಿಯಿಂದ ರಚಿಸಲ್ಪಟ್ಟಿರಬೇಕೆಂಬುದೇ ಅವರ ಸಿದ್ಧಾಂತ. "ಸ್ಥಾಪನಾ" ಮುಂತಾದ ವಿಚಾರಗಳಲ್ಲಿ ಅವು ಮತ್ತವಿಲಾಸ ಪ್ರಹಸನವನ್ನು ಹೋಲುವುದರಿಂದಲೂ, ಕ್ರಿಸ್ತಶಕ ಏಳನೆಯ ಶತಮಾನದಲ್ಲಿದ್ದ ಮಹೇಂದ್ರ ವಿಕ್ರಮವರ್ಮನು ಮತ್ತವಿಲಾಸ ಪ್ರಹಸನವನ್ನು ಬರೆದುದರಿಂದಲೂ, ಅವುಗಳನ್ನೂ ಯಾವನೋ ಕವಿಯು ಅದರ ಮಾದರಿಯಮೇಲೆ ಕ್ರಿಸ್ತಶಕ ಏಳನೆಯ ಶತಮಾನದಲ್ಲಿ ರಚಿಸಿರಬೇಕೆಂಬುದು ಡಾಕ್ಟರ್ ಬಾರ್ನೆಟ್‌ರವರ ಅಭಿಪ್ರಾಯವಾಗಿದೆ. ಆದರೆ ಈ ತೀರ್ಮಾನವು ಸರಿಯಲ್ಲವೆಂಬುದಕ್ಕೆ, ದೊಡ್ಡ ದೊಡ್ಡ ಸಮಾಸಪದಗಳೇ ಮುಂತಾದುವುಗಳಿಂದ ತುಂಬಿದ ಮತ್ತವಿಲಾಸ ಪ್ರಹಸನದ ಈಚಿನ ಬಗೆಯ ಶೈಲಿಗೂ, ಪ್ರಸಕ್ತ ರೂಪಕಗಳ ಪ್ರಾಚೀನ ವಿಧದ ಶೈಲಿಗೂ ಇರತಕ್ಕ ವಿಶೇಷ ಹೆಚ್ಚಿನ ವ್ಯತ್ಯಾಸವೊಂದೇ ಸಾಕು.

ನಾವು ಹಿಂದೆಯೇ ಸೂಚಿಸಿರುವಂತೆ ಶಾರದಾತನಯನೂ (ಕ್ರಿಸ್ತಶಕ ೧೨ನೆಯ ಶತಮಾನ), ಭೋಜದೇವನೂ (ಕ್ರಿಸ್ತಶಕ ೧೧ನೆಯ ಶತಮಾನ), ಅಭಿನವಗುಪ್ತಾಚಾರ್ಯನೂ (ಕ್ರಿಸ್ತಶಕ ೧೦ನೆಯ ಶತಮಾನ), ಈಗಿನ ಸ್ವಪ್ನವಾಸವದತ್ತದಲ್ಲಿರುವುದನ್ನು ಉದಹರಿಸಿದ್ದಾರೆ. ಭಾಸಕೃತ ಸ್ವಪ್ನವಾಸವದತ್ತದ ವಿಚಾರದಲ್ಲಿ ರಾಜಶೇಖರನು (ಕ್ರಿಸ್ತಶಕ ೯ನೆಯ ಶತಮಾನ) ಹೇಳಿರುವುದೂ ಅದಕ್ಕೆ ಅನ್ವಯಿಸುತ್ತದೆ. ಅದರಲ್ಲಿರುವ ಒಂದು ಶ್ಲೋಕವೂ, "ಯೋ ಭರ್ತೃಪಿಂಡಸ್ಯ ಕೃತೇ ಯುಧ್ಯೇತ್" ಎಂಬ ಪ್ರತಿಜ್ಞಾ ಯೌಗಂಧರಾಯಣದಲ್ಲಿರುವ ಶ್ಲೋಕ ಭಾಗವೂ ವಾಮನನ (ಕ್ರಿಸ್ತಶಕ ೮ನೆಯ ಶತಮಾನ) ಗ್ರಂಥದಲ್ಲಿವೆ. ಚಾರುದತ್ತದಲ್ಲಿರುವ "ಯಾಸಾಂ ಬಲಿರ್ಭವತಿ ಮದ್ಗೃಹದೇಹಲೀನಾಂ। ಹಂಸೈಶ್ಚ ಸಾರಸಗಣೈಶ್ಚ ವಿಭಕ್ತ ಪುಷ್ಪಃ॥ ತಾಸ್ವೇವ ಪೂರ್ವಬಲಿರೂಢಯವಾಂಕುರಾಸು।

ಬೀಜಾಂಜಲಿಃ ಪತತಿ ಕೀಟಮುಖಾವಲೀಢಃ ||" ಎಂಬ ಶ್ಲೋಕವೂ "ವಿಭಕ್ತಪುಷ್ಪಃ" ಎಂಬುದಕ್ಕೆ ಬದಲಾಗಿ "ವಿಲುಪ್ತ ಪೂರ್ವಃ" ಎಂಬ ಪದದೊಡನೆ ಆತನ ಗ್ರಂಥದಲ್ಲಿದೆ. ಆತನ ಗ್ರಂಥದಲ್ಲಿರುವ ಶ್ಲೋಕವು ಮೃಚ್ಛಕಟಿಕದಲ್ಲಿರುವ ಅದೇ ಹೋಲಿಕೆಯ ಶ್ಲೋಕಕ್ಕಿಂತಲೂ ಹೆಚ್ಚಾಗಿ ಚಾರುದತ್ತದ ಶ್ಲೋಕಸಾದೃಶ್ಯವನ್ನೇ ಪಡೆದಿರುವುದರಿಂದ ಅವನು ಚಾರು ದತ್ತದಿಂದಲೇ ಅದನ್ನು ತೆಗೆದು ಉದಹರಿಸಿರಬೇಕು. ಬಾಣನು (ಕ್ರಿಸ್ತ ಶಕ ೭ ನೆಯ ಶತಮಾನ) ಭಾಸನ ವಿಚಾರವಾಗಿ ಹೇಳಿರುವುದೂ ಈ ಗ್ರಂಥಗಳಿಗೆ ಅನ್ವಯಿಸುತ್ತದೆ. ಭಾಮಹನು (ಕ್ರಿ. ಶ. ೬ ನೆಯ ಶತಮಾನ) ಪ್ರತಿಜ್ಞಾಯೌಗಂಧರಾಯಣನನ್ನು ಕುರಿತು ಆಕ್ಷೇಪಿಸಿದ್ದಾನೆ. ಆದಕಾರಣ, ನಮ್ಮ ಕವಿಯು ಅವರೆಲ್ಲರಿಗಿಂತಲೂ ಹಿಂದಿನವನೆಂದಹಾಗಾಯಿತು. ನಮ್ಮ ಕವಿಯ ರೂಪಕಗಳ ರಾಜರು ಕಾಳಿದಾಸನು ಚಿತ್ರಿಸಿರುವ ರಾಜನಂತೆ ಯವನಸ್ತ್ರೀಯರ ಪರಿವಾರದಿಂದ ಕೂಡಿರದೆ, ಪ್ರಾಚೀನತೆಯ ಗುರುತಾಗಿ ಅಟ್ಟಹಾಸದಲ್ಲಿ ಕಡಿಮೆಯಾಗಿರುತ್ತಾರೆ. ಆತನ ರೂಪಕಗಳ ಶೈಲಿಯು ಕಾಳಿದಾಸ ಮುಂತಾದವರ ಕಾವ್ಯಗಳ ಶೈಲಿಗಿಂತಲೂ, ಅವುಗಳಲ್ಲಿರುವ ಪ್ರಾಕೃತವು ಕಾಳಿದಾಸ ಮುಂತಾದವರ ಕಾವ್ಯಗಳಲ್ಲಿರುವ ಪ್ರಾಕೃತ ಕ್ಕಿಂತಲೂ, ಪುರಾತನವಾಗಿರುವ ಕಾರಣದಮೇಲೆ ಆತನು ಕಾಳಿದಾಸನಿ ಗಿಂತ ಮುಂಚೆ ಕ್ರಿಸ್ತಶಕ ಮೂರನೆಯ ಶತಮಾನದಲ್ಲಿ ಅಥವಾ ನಾಲ್ಕನೆಯ ಶತಮಾನದ ಆದಿಭಾಗದಲ್ಲಿ ಇದ್ದನೆಂದು ಡಾಕ್ಟರ್ ವಿಂಟರ್ನಿಟ್ಸರವರು ಅಭಿಪ್ರಾಯಪಡುತ್ತಾರೆ. ಪ್ರಸಕ್ತ ರೂಪಕಗಳ ಪ್ರಾಕೃತವು ಅಶ್ವಘೋಷನ ಕಾಲಕ್ಕೂ ಕಾಳಿದಾಸನ ಕಾಲಕ್ಕೂ ಮಧ್ಯಕಾಲದ್ದೆಂದು ಅವರೂ, ಡಾಕ್ಟರ್ ಕೀತ್‌ರವರೂ ಸೂಚಿಸಿದ್ದಾರೆ. ಡಾಕ್ಟರ್ ಕೀತ್‌ರವರು ಪ್ರತಿಜ್ಞಾ ಯೌಗಂಧರಾಯಣದಲ್ಲಿರುವ ಒಂದು ಶ್ಲೋಕಕ್ಕೆ ಅಶ್ವಘೋಷನ ಬುದ್ಧ ಚರಿತೆಯ ಶ್ಲೋಕವೊಂದು ಆಧಾರವಾಗಿರಬೇಕೆಂದೂ ತಿಳಿಸಿ, ನಮ್ಮ ಕವಿಯು ಕ್ರಿಸ್ತಶಕ ಮೂರನೆಯ ಶತಮಾನದಲ್ಲಿದ್ದವನೆಂದು ಹೇಳಿದ್ದಾರೆ. ಆದರೆ, ಚಾರುದತ್ತವು ಮೃಚ್ಛಕಟಿಕಕ್ಕೂ ಹಿಂದಿನದೆಂಬುದನ್ನು ನಾವು ಗಮನಿಸುವುದಾದರೆ, ಡಾಕ್ಟರ್ ಕೀತ್‌ರವರು ನಿಷ್ಕರ್ಷೆ ಮಾಡಿರುವುದ ಕ್ಕಿಂತಲೂ ಇನ್ನೂ ಹಿಂದಿನ ಕಾಲವನ್ನೇ ಕವಿಯ ಕಾಲವೆಂದು ಹೇಳಬೇ

ಕಾಗುತ್ತದೆ. ಕಾಳಿದಾಸನ ಕಾಲನಿರ್ಣಯವಿಚಾರದಲ್ಲೇ ಪಂಡಿತರ ಅಭಿಪ್ರಾಯವು ಒಮ್ಮುಖವಾದ ನೆಲೆಗೆ ಬಂದು ನಿಂತಿಲ್ಲ. ಆದರೂ ಈ ವಿಚಾರಕ್ಕೂ, ಇತರ ನಾನಾವಿಚಾರಗಳಿಗೂ ಗಮನಕೊಟ್ಟು ಸಾಧಕ ಬಾಧಕಗಳನ್ನೆಲ್ಲ ತೂಗಿ ನೋಡಿದರೆ, ನಮ್ಮ ಕವಿಯು ಕಾಳಿದಾಸನಿಗಿಂತ ಮುಂಚಿನವನೂ, ಆದರೆ ಕ್ರಿಸ್ತಶಕ ಮೂರನೆಯ ಶತಮಾನ ಅಥವಾ ಅದಕ್ಕಿಂತ ಸ್ವಲ್ಪ ಹಿಂದಿನವನೂ, ಆಗಿದ್ದನೆಂದು ಹೇಳಿದರೆ ಅದು ಬಹುಶಃ ತಪ್ಪಾಗಲಾರದು. ಅಷ್ಟು ಕಾಲಕ್ಕೆ ಹಿಂದೆಯೇ ರಸವತ್ತಾದ ರೂಪಕ ಫಲಗಳನ್ನು ಒದಗಿಸಿರಬೇಕಾದರೆ, ಭಾಸನೇ ಪ್ರಸಕ್ತ ರೂಪಕಗಳನ್ನು ರಚಿಸಿದವನಾಗಿರಬಹುದಲ್ಲವೆ ?

೪. **ಕವಿಯು ಯಾವ ದೇಶದವನೆಂಬ ವಿಚಾರ:**—ಕವಿಯು ಉತ್ತರ ದೇಶದವನೇ ಅಥವಾ ದಕ್ಷಿಣ ದೇಶದವನೇ ಎಂಬುದನ್ನು ನಿರ್ಧರಿಸುವುದಕ್ಕೆ ಸಾಕಾದಷ್ಟು ಪ್ರಮಾಣಗಳಿಲ್ಲ. ಹೀಗಿರುವಲ್ಲಿ ಮ|| ರಾ|| ಪಿಶರೋತಿಗಳವರು (ರೂಪಕಗಳು ಭಾಸಕೃತವೆಂಬುದನ್ನಾಗಲಿ, ಅಥವಾ ಏಕಕರ್ತೃಕವೆಂಬುದನ್ನಾಗಲಿ ಒಪ್ಪದೆ) ಆಶ್ಚರ್ಯ ಚೂಡಾಮಣಿಯ ಕಾಲದಿಂದೀಚೆಗೆ ಈ ರೂಪಕಗಳು ಕೇರಳ ರಾಜ್ಯದ ಕವಿಗಳಿಂದ ರಚಿಸಲ್ಪಟ್ಟುವೆಂದು ತೋರಿಬರುವಂತೆ ಅಭಿಪ್ರಾಯವನ್ನು ಸೂಚಿಸಿದ್ದಾರೆ. ಈ ರೂಪಕಗಳ ಕರ್ತೃವು ಭಾಸನೆಂದು ಒಪ್ಪದ ಮ|| ರಾ|| ಕುಪ್ಪುಸ್ವಾಮಿ ಶಾಸ್ತ್ರಿಗಳವರು ಮುಂತಾದವರೂ ಕವಿಯು ಕೇರಳ ರಾಜ್ಯದವನೆಂದು ಹೇಳುತ್ತಾರೆ. ಮ|| ರಾ|| ಕುಪ್ಪುಸ್ವಾಮಿ ಶಾಸ್ತ್ರಿಗಳವರ ಮತವನ್ನು ಖಂಡಿಸಿ (ಮದರಾಸಿನ ಹಿಂದು ಎಂಬ ಇಂಗ್ಲಿಷ್ ಪತ್ರಿಕೆಗೆ "The Age of Bhasa—Some criticisms answered" ಎಂಬ ಅಭಿಧಾನದಿಂದ ೨-೨-೧೯೨೭ ಮತ್ತು ೯-೨-೧೯೨೭ರಲ್ಲಿ ಲೇಖನಗಳನ್ನು ಬರೆದಿದ್ದ) ಮ|| ರಾ|| ಆರ್. ವಾಸುದೇವ ಶರ್ಮರು ಪ್ರಸಕ್ತ ರೂಪಕಗಳು ಭಾಸಕೃತವೆಂದು ವಾದಿಸಿದ್ದಾರೆ. ಅಲ್ಲದೆ ಸ್ವಪ್ನವಾಸವದತ್ತ ನಾಟಕದ ಮಂಗಳ ಶ್ಲೋಕದಲ್ಲಿ ಬಲದೇವನನ್ನು ಸ್ತುತಿಸಿರುವುದರಿಂದಲೂ, ಅದೇ ನಾಟಕದಲ್ಲಿ ಕವಿಯು ಸಾರಸ ಪಕ್ಷಿಗಳ ಸಾಲನ್ನು ಬಲದೇವನ ತೋಳಿಗೆ ಹೋಲಿಸಿರುವುದರಿಂದಲೂ, ಬಲದೇವನ ಪೂಜೆಯೂ ಶ್ರಮಣರ ಪ್ರಾಬಲ್ಯವೂ ದಕ್ಷಿಣ ದೇಶ

ದಲ್ಲಿ ಪ್ರಬಲವಾಗುತ್ತಿದ್ದ 'ಶಿಲಪ್ಪದಿಕಾರಂ' ಎಂಬ ಜೈನ ಗ್ರಂಥ ಕಾಲದಲ್ಲಿ (ಕ್ರಿಸ್ತಶಕ ಎರಡನೆಯ ಶತಮಾನದ ಮಧ್ಯ ಕಾಲದಲ್ಲಿ) ಭಾಸನು ಇದ್ದ ನೆಂದು ಅವರು ಸೂಚಿಸಿದ್ದಾರೆ. ತಮಿಳು ರಂಗಸ್ಥಳಕ್ಕೆ ಬಲದೇವನು ಅಧಿ ದೈವವೆಂಬ ಅಂಶವೂ ಅವರ ಮನಸ್ಸಿನಲ್ಲಿರಬೇಕೆಂದು ತೋರುತ್ತದೆ. ಈ ಕಾರಣಗಳಿಂದ, ಭಾಸನು ತಮಿಳು ಚೇರರಾಜ್ಯದವನೆಂದು ಅವರು ನಿಷ್ಕರ್ಷೆ ಮಾಡಿದ್ದಾರೆ. ಅವರು ಸೂಚಿಸಿರುವ ಅಂಶಗಳಿಗೆ ನಾವು ತೂಕವನ್ನು ಕೊಡಬೇಕಾದುದು ನ್ಯಾಯವಾದರೂ, ಅವರ ತೀರ್ಮಾನವು ನಿರ್ಧಾರಕ ವಾಗಿಲ್ಲವೆಂಬುದನ್ನೂ ಹೇಳಲೇಬೇಕಾಗಿದೆ. ಜೈನರಿಗೆ ಬಲರಾಮನಲ್ಲಿ ಭಕ್ತಿಯು ಹೆಚ್ಚು. 'ಶಿಲಪ್ಪದಿಕಾರಂ' ಗ್ರಂಥದ ಕಾಲದಲ್ಲಿ ಜೈನ ಪ್ರಾಬ ಲ್ಯವೂ, ಬಲದೇವ ಪೂಜೆಯೂ ಹೆಚ್ಚಾಗಿರಬಹುದು. ಆದರೂ ಸ್ವಪ್ನ ವಾಸವದತ್ತ ನಾಟಕದಲ್ಲಿ ಬಲದೇವನ ಪ್ರಸ್ತಾಪವಿರುವ ಮಾತ್ರದಿಂದಲೇ ಕವಿಯು ಆ ಕಾಲದವನೆನ್ನುವುದು ಹೇಗೆ? ರಾಮಲಕ್ಷ್ಮಣರೂ, ಕೃಷ್ಣ ಬಲದೇವರೂ, ಹಿಂದುಗಳಲ್ಲಿ ಜೈನರಲ್ಲದವರಿಗೂ ಪ್ರಿಯ ವ್ಯಕ್ತಿಗಳೇ. ಬಲ ದೇವನು ವೀರಶ್ರೇಷ್ಠನು. ಕವಿಯು ಸಾರಸ ಪಕ್ಷಿಗಳ ಸೊಗಸಿನ ಸಾಲನ್ನು ನೋಡಿದಾಗ ತಟಕ್ಕನೆ ಬಲದೇವನ ತೋಳಿನ ನೆನಪು ಬಂದಿರಬಹುದು. ಅದರ ಚಿತ್ರವು ಅವನ ಚಿತ್ತಭಿತ್ತಿಯಲ್ಲಿ ನೆಲಸಿರಬಹುದು. ಮಂಗಳ ಶ್ಲೋಕದಲ್ಲಿ ಮುದ್ರಾಲಂಕಾರದಿಂದ ಮುಖ್ಯಪಾತ್ರಗಳ ಹೆಸರುಗಳು ಸೂಚಿತ ವಾಗಬೇಕೆಂಬುದು ಕವಿಯ ಸಂಕಲ್ಪ. 'ಆದರೂ ಒಟ್ಟು ಶ್ಲೋಕವು ಬಲದೇವಪರವಾಗಿಲ್ಲದೆ ಕೃಷ್ಣಪರವಾಗಬಹುದಾಗಿದ್ದಿತಲ್ಲ'-ಎಂದು ಪೂರ್ವ ಪಕ್ಷವು ಬಂದರೆ ಅದಕ್ಕೂ ಸಮಾಧಾನವನ್ನು ಹೇಳಬಹುದು.

'ವಾಸವದತ್ತಾ' ಎಂಬ ಹೆಸರು ಮುದ್ರಾಲಂಕಾರದಿಂದ ಸೂಚಿತ ವಾಗಬೇಕಾದರೆ ಆಸವದತ್ತಾಬಲೌ ಎಂಬುದನ್ನು ತಂದು 'ಔ'ಕಾರಾಂತ ವಾದ ಪದದ ಮುಂದಿಟ್ಟು ಸಂಧಿಮಾಡಿದಲ್ಲದೆ ನಿರ್ವಾಹವೇ ಇಲ್ಲ. ಆದರೆ 'ಆಸವದತ್ತಾಬಲೌ' ಎಂಬುದು ಬಂದೊಡನೆಯೇ ಮದ್ಯದ ಸಂಬಂಧವು ಬರಲೇಬೇಕು. ಕವಿಯು ತಾನು ವಿಷ್ಣುಭಕ್ತನೆಂಬುದನ್ನು ಇತರ ಕೆಲವು ರೂಪಕಗಳಲ್ಲಿ ಬಹು ಚೆನ್ನಾಗಿ ವ್ಯಕ್ತಪಡಿಸಿ, ಶ್ರೀ ಕೃಷ್ಣನು ವಿಷ್ಣುವಿನ ಅವತಾರವೆಂಬುದನ್ನು ಬಾಲಚರಿತದಲ್ಲಿಯೂ ದೂತವಾಕ್ಯಗಳಲ್ಲಿಯೂ ದೃಢ

ವಾಗಿ ತೋರ್ಪಡಿಸಿದ್ದಾನೆ. ಆದುದರಿಂದ ತನ್ನ ಆರಾಧಿಕ ದೈವಕ್ಕೆ ಆಸವ ಸಂಬಂಧವನ್ನು ಕಲ್ಪಿಸಲು ಅವನ ಮನಸ್ಸು ಒಡಂಬಡದೆ, ಶಿವನೇ ಮುಂತಾದ ಇತರ ಯಾವ ದೈವಗಳ ಯಾವ ಹೆಸರನ್ನು ತಂದರೂ ಮುದ್ರಾಲಂಕಾರ ಸಿದ್ಧಿಗೆ ಅವಕಾಶವಿಲ್ಲದೆ, ಬಲರಾಮನ ಪರವಾಗಿ ಮಂಗಳ ಶ್ಲೋಕವನ್ನು ರಚಿಸಿರಬಹುದು. ಜೈನರ ಪ್ರಾಬಲ್ಯವೂ ಬಲದೇವನ ಆರಾಧನೆಯೂ ಹೆಚ್ಚಾಗಿದ್ದ 'ಶಿಲಪ್ಪದಿಕಾರಂ' ಗ್ರಂಥದ ಕಾಲದಲ್ಲೇ— ಅದರ ಪರಿಣಾಮವಾಗಿಯೇ—ಭಾಸ ಕವಿಯು ಬಲದೇವ ಸ್ತುತಿಯಿಂದ ಪ್ರಾರಂಭಿಸಿ ಗ್ರಂಥರಚನೆಮಾಡಿದ್ದಲ್ಲಿ, ಮದ್ಯಸೇವನೆಯ ದೆಸೆಯಿಂದುಂಟಾದ ಹುಮ್ಮಸ್ಸಿನಿಂದ ಕೂಡಿದ ತೋಳುಗಳೆಂದು ಬಲದೇವನ ಬಾಹುಗಳನ್ನು ವರ್ಣಿಸುವುದರಲ್ಲಿ ಔಚಿತ್ಯವಿರುತ್ತಿದ್ದಿತೇ, ತಮ್ಮ ಆರಾಧ್ಯ ದೈವದ ಆ ವರ್ಣನೆಯನ್ನು ಕೇಳಿ ಜೈನರು ಹಿಗ್ಗುತ್ತಿದ್ದರೇ, ಕವಿಯಾದರೂ ಯಾವ ಬಗೆಯ ಲೋಭದಿಂದ ಆ ರೀತಿ ಮಾಡಿರಬೇಕು.—ಎಂಬಿವುಗಳೂ ವಿಚಾರ ಮಾಡಬೇಕಾದ ಅಂಶಗಳೇ ಸರಿ. ನಮ್ಮ ಕವಿಯು ಕೇರಳದೇಶದವನೆಂಬು ದಕ್ಕೆ ಮ|| ರಾ|| ಕುಪ್ಪಸ್ವಾಮಿ ಶಾಸ್ತ್ರಿಗಳೇ ಮುಂತಾದವರು ಹೇಳಿರುವ ಕಾರಣಗಳೂ ನಿರ್ಧಾರಕವಾಗಿಲ್ಲ. ಪ್ರತಿಮಾ ನಾಟಕದಲ್ಲಿ ಶ್ರೀರಾಮ ಪಟ್ಟಾಭಿಷೇಕದ ವಿಷಯವೇ ಸೀತಾದೇವಿಗೆ ಗೊತ್ತಿರಲಿಲ್ಲವಾದಕಾರಣ, ಗಂಡನನ್ನು ಮಾತ್ರವೇ ಕುಳ್ಳಿರಿಸಿ ಪಟ್ಟಾಭಿಷೇಕ ಮಾಡುವ ಕೇರಳ ರಾಜ್ಯದ ಪದ್ಧತಿಯನ್ನು ಇದು ಸೂಚಿಸುವುದೆಂಬುದು ಶುದ್ಧ ಅಸಂಗತವಾದುದು. ಪಟ್ಟಾಭಿಷೇಕದ ದಿನವೂ ಕೂಡ ಅವಳಿಗೆ ಅದರ ವಿಚಾರವು ತಿಳಿದಿರಲಿಲ್ಲ ವೆಂಬುದು ಕಾವ್ಯದಲ್ಲಿ ಮಾತ್ರವೇ ನಂಬಿಕೆಗರ್ಹನಾಗಿರುವ ಕೃತಕವಾದ ಕಲ್ಪನಾ ಪ್ರಪಂಚದ ಮಾತೇ ಹೊರತು, ಜೀವನದಲ್ಲಿ ಹಾಗೆ ನಡೆದೀತೆ? ಪಟ್ಟಾಭಿಷೇಕವು ಸರಿಯಾಗಿ ಮುಂದುವರಿದಿದ್ದರೆ ಸೀತೆಗೆ ಹೇಳಿಕಳುಹಿಸು ತ್ತಿದ್ದರೆಂದು ತೋರುವುದು. ಏಕೆಂದರೆ, ಪಟ್ಟಾಭಿಷೇಕ ಕರ್ಮವು ಪ್ರಾರಂಭ ವಾದ ತರುವಾಯ ರಾಣಿವಾಸದವರೊಡನೆ ಸೀತಾದೇವಿಯು ಬರುವ ಕಾಲವು ಸಮೀಪಿಸುವ ಮೊದಲೇ ಅದು ನಿಂತುಹೋಗಿರಬೇಕು. ಲಕ್ಷ್ಮಣ ಶತ್ರು ಘ್ನರು ಅಭಿಷೇಕಕ್ಕೆ ಘಟಗಳನ್ನು ಹಿಡಿದಿರುವಲ್ಲಿ, ದಶರಥನು ಛತ್ರವನ್ನು ಹಿಡಿದಿರುವಲ್ಲಿ, ಮಂಥರೆಯು ಬಂದು ಏನನ್ನೋ ರಾಜನ ಕಿವಿಯಲ್ಲಿ ಹೇಳಿದ

ಳೆಂದೂ, ಅಭಿಷೇಕಕ್ರಿಯೆಯು ಆ ಬಳಿಕ ಮುಂದುವರಿಯದೆ ಅಲ್ಲಿಗೇ ನಿಂತುಹೋಯಿತೆಂದೂ ರಾಮನು ಸೀತೆಯೊಡನೆ ಹೇಳುವನು. ಎಂದರೆ, ಆಗ್ಗೆ ಕೌಸಲ್ಯಾದೇವಿ ಮುಂತಾದವರು ಯಾರೂ ಇನ್ನೂ ದಶರಥನ ಬಳಿಗೆ ಬಂದಿರಲಿಲ್ಲವೆಂಬುದು ಇದರಿಂದ ವ್ಯಕ್ತವಾಗುವುದು. ಏಕೆಂದರೆ, ಮೂವರು ದೇವಿಯರೂ ರಾಜನಬಳಿಯಲ್ಲಿದ್ದ ಪಕ್ಷದಲ್ಲಿ ಅವರಲ್ಲಿ ಯಾರಾದರೂ ಒಬ್ಬರು ರಾಜನೊಡನೆ ಮಾತನಾಡುತ್ತಿದ್ದರೇ ಹೊರತು, ಮಂಥರೆಯು ಮಾತನಾಡುವುದಕ್ಕೇ ಅವಕಾಶವಿರುತ್ತಿರಲಿಲ್ಲ. ಕೈಕೆಯೀದೇವಿಯು ತಾನು ಅಂತಃಪುರದಲ್ಲಿದ್ದುದರಿಂದ ಮಂಥರೆಯೊಡನೆ ತನ್ನ ಬಿನ್ನಹವನ್ನು ಹೇಳಿ ಕಳುಹಿಸಿದ್ದಾಳೆಯೇ ಹೊರತು, ತಾನೇ ಎದುರಿಗಿದ್ದು ಮಂಥರೆಯಿಂದ ರಾಜನ ಕಿವಿಯಲ್ಲಿ ಅವಳು ಪಿಸುಗುಟ್ಟಿಸತಕ್ಕವಳಾಗಿಲ್ಲ. ಅವಳು ಹಾಗೆ ಮಾಡಿದ್ದಲ್ಲಿ ಅದು ಉಚಿತವೆನಿಸುತ್ತಲೂ ಇರಲಿಲ್ಲ. ರಾಣಿವಾಸದವರೂ, ಸೀತಾದೇವಿಯೂ ಸಭೆಯಲ್ಲಿಲ್ಲದೆಯೇ ಪಟ್ಟಾಭಿಷೇಕವು ಪೂರ್ತಿಯಾಗುತ್ತಿರಲಿಲ್ಲ. ಕರ್ಮಾರಂಭವಾದೊಡನೆಯೇ—ಅವರೆಲ್ಲರೂ ಅಂತಃಪುರದಿಂದ ಬರುವುದಕ್ಕೆ ಮೊದಲೇ—ಪಟ್ಟಾಭಿಷೇಕವು ಕೈಕೆಯಿಯು ವರಗಳನ್ನು ಬೇಡಿ ಮಂಥರೆಯನ್ನು ಕಳುಹಿಸಿದುದರ ಪರಿಣಾಮವಾಗಿ ನಿಂತುಹೋಗಿರಬೇಕೆಂದು ತೋರುವುದು.

ಕೇರಳ ರಾಜ್ಯದಲ್ಲಿ ಈಗಲೂ ಪ್ರತಿಜ್ಞಾ ಯೌಗಂಧರಾಯಣದ ಒಂದು ಭಾಗವೂ ಸ್ವಪ್ನವಾಸವದತ್ತದ ಒಂದು ಭಾಗವೂ, ಇತರ ಕೆಲವು ರೂಪಕಗಳ ಭಾಗಗಳೂ ಅಭಿನಯಿಸಲ್ಪಡುತ್ತಿರುವುದೂ, ಭಾಸನ ಕೃತಿಗಳೆನ್ನುವ ಈ ರೂಪಕಗಳೂ ಕೇರಳ ರಾಜ್ಯದಲ್ಲಿ (ತಿರುವಾಂಕೂರಿನಲ್ಲಿ) ದೊರೆತಿರುವುದೂ, ಕೇರಳ ರಾಜ್ಯವು ಹಿಂದೆ ಹೆಚ್ಚಾಗಿ ಶತ್ರುಗಳ ಹಾವಳಿಗೊಳಗಾಗದೆ ಸುರಕ್ಷಿತವಾಗಿದ್ದುದರ ಫಲಗಳೇ ಹೊರತು ಕವಿಯು ಕೇರಳ ರಾಜ್ಯದವನೇ ಸರಿಯೆಂಬುದನ್ನು ಅವು ನಿರ್ಧರವಾಗಿ ಸೂಚಿಸುವುದಿಲ್ಲ. ಮಲೆಯಾಳ ಭಾಷೆಯಲ್ಲಿ 'ಸಂಬಂಧ' ಎಂದರೆ ಮದುವೆಯೆಂದರ್ಥ. ಪ್ರತಿಜ್ಞಾ ಯೌಗಂಧರಾಯಣದಲ್ಲಿ, ಸಂಬಂಧವೆಂಬ ಪದವನ್ನು ಈ ಅರ್ಥದಲ್ಲಿ ಕವಿಯು ಉಪಯೋಗಿಸಿರುವನೆಂಬುದಕ್ಕೆ ಮಹಾಸೇನನು ಅಂಗಾರವತಿಯೊಡನೆ ಹೇಳುವ "ದೇವಿ! ಮಹಾಸೇನ ಶಬ್ದಮಪಿ ನ ಗಣ

ಯತಿ। ಕಿಂ ಪುನಸ್ಸಂಬಂಧ ಮಭಿಲಷತಿ।" ಎಂಬ ವಾಕ್ಯವೂ, ಯೌಗಂಧ ರಾಯಣನು ಬಂಗಾರದ ಬಟ್ಟಲಿನ ಮೆಚ್ಚನ್ನು ಸ್ವೀಕರಿಸಲು ಸಮ್ಮತಿಸಿ ದಾಗ ಹೇಳುವ "ಏವಂ ಸಂಬಂಧಂ ಮನ್ಯತೇ ಮಹಾಸೇನಃ, ತೇನ ಹ್ಯಾನೀಯತಾಂ ಭೃಂಗಾರಃ।" ಎಂಬ ವಾಕ್ಯವೂ ನಿದರ್ಶನವಾಗಿವೆ. ಈ ಕಾರಣದಿಂದ ಕವಿಯು ಕೇರಳದೇಶದವನೆಂದು ಕೆಲವರು ಶಂಕಿಸು ತ್ತಾರೆ. ಇದು ಸರಿಯಲ್ಲ. ಏಕೆಂದರೆ ಕಾಳಿದಾಸನು ಕೇರಳದೇಶದವನಲ್ಲ ವಷ್ಟೆ. ಅವನು ಕೂಡ, ಕುಮಾರಸಂಭವದ ಆರನೆಯ ಸರ್ಗದಲ್ಲಿ ಸಂಬಂಧ ವೆಂಬ ಪದವನ್ನು ಇದೇ ಅರ್ಥದಲ್ಲಿ ಉಪಯೋಗಿಸಿದ್ದಾನೆ. * ಅವನು ರಘು ವಂಶದಲ್ಲಿ ಏಳನೆಯ ಸರ್ಗದಲ್ಲಿಯೂ ಹಾಗೆ ಮಾಡಿದ್ದಾನೆ. ಭವಭೂತಿಯೂ ಸಂಬಂಧವೆಂಬ ಪದವನ್ನು ಇದೇ ಅರ್ಥದಲ್ಲಿ ಉಪಯೋಗಿಸಿದ್ದಾನೆ. ‡ ಅವನೂ ಕೇರಳದೇಶದವನಲ್ಲ. 'ವಿಚಾರಿತಂ' ಎಂಬ ಪದವೂ 'ಆಮ್' ಎಂಬ ಪದವೂ ಮಲೆಯಾಳಿ ಭಾಷೆಯಲ್ಲಿ ಯಾವ ಅರ್ಥದಲ್ಲಿ ಪ್ರಯೋಗಿಸ ಲ್ಪಡುವುವೋ ಅದೇ ಅರ್ಥದಲ್ಲೇ ಅವಿಮಾರಕ ಮುಂತಾದುವುಗಳಲ್ಲಿ ಉಪ ಯೋಗಿಸಲ್ಪಟ್ಟಿರುವುದರಿಂದ ಕವಿಯು ಕೇರಳದೇಶದವನೆಂಬುದಕ್ಕೆ ಅದು ನಿದರ್ಶನವೆಂಬುದೂ ಸರಿಯಲ್ಲ. ಸಂಸ್ಕೃತದಲ್ಲಿ ಆರೀತಿ ಪ್ರಯೋಗವಿಲ್ಲದೆ ಹೋಗಿ, ಮಲೆಯಾಳಿಯಿಂದ ಅದನ್ನು ತೆಗೆದುಕೊಂಡಿರಬೇಕಾದ ಆವಶ್ಯಕತೆ ಯೇನೂ ಇಲ್ಲ. ಇನ್ನು, ಅವಿಮಾರಕದಲ್ಲಿ ಸೋದರಮಾವನಿಗೆ ಹೆಚ್ಚಿನ ಮನ್ನಣೆಯು ದೊರೆಯುವುದರಿಂದ ಕವಿಯು 'ಮರುಮಕ್ಕಟ್ಟಾಯಂ' ಪದ್ಧತಿಗೆ ಸೇರಿದ ಮಲೆಯಾಳಿ ಯೆನ್ನಲಾಗುವುದಿಲ್ಲ. ಸೋದರಮಾವನು ಪಿತೃಸಮಾನನೆಂದು ಮುಂತಾಗಿ ಸ್ಮೃತಿಕಾರರೇ ಹೇಳಿದ್ದಾರೆ.

---

* "ತಾಮಸ್ಮದರ್ಥೇ ಯುಷ್ಮಾಭಿರ್ಯಾಚಿತವ್ಯೋ ಹಿಮಾಲಯಃ।
ವಿಕ್ರಿಯಾಯೈ ನ ಕಲ್ಪಂತೇ **ಸಂಬಂಧಾಃ** ಸದನುಷ್ಠಿತಾಃ ॥
ಉನ್ನತೇನ ಸ್ಥಿತಿಮತಾ ಧುರಮುದ್ವಹತಾ ಭುವಃ ।
ತೇನ ಯೋಜಿತ **ಸಂಬಂಧಂ** ವಿತ್ತ ಮಾಮಪ್ಯವಂಚಿತಮ್ ॥"

‡ ಜನಕಾನಾಂ ರಘೂಣಾಂ ಚ **ಸಂಬಂಧಃ** ಕಸ್ಯ ನ ಪ್ರಿಯಃ ।
ಯತ್ರ ದಾತಾ ಗ್ರಹೀತಾ ಚ ಸ್ವಯಂ ಕುಶಿಕ ನಂದನಃ ॥"

ವೇಣೀಸಂಹಾರ ಮುಂತಾದ ರೂಪಕಗಳಲ್ಲಿ ಕೂಡ, ಸೋದರಮಾವ
ನನ್ನು ತಂದೆಯಂತೆಯೇ ಗೌರವಿಸುವ ನಿದರ್ಶನವನ್ನು ಕಾಣಬಹುದು.
ಆದರೂ, ಮೇಲೆ ಹೇಳಿದ ಎಲ್ಲ ಕಾರಣಗಳನ್ನೂ ಒಟ್ಟಿನಲ್ಲಿ ಪರ್ಯಾ
ಲೋಚಿಸಿ ನೋಡಿದರೆ, ಕವಿಯು ದಕ್ಷಿಣದೇಶದವನಿದ್ದರೂ ಇರಬಹು
ದೆಂದೂ ಊಹಿಸಬಹುದು. ಆದರೂ ಅದು ಕೇವಲ ಊಹೆಯೇ ಹೊರತು
ಅದಕ್ಕೆ ವಿಶ್ವಸನೀಯವಾದ ಮತ್ತಾವ ಆಧಾರವೂ ಇಲ್ಲ. ಆತನ ರೂಪಕ
ಗಳು ಜನರಲ್ಲಿ ಪ್ರಚಾರದಲ್ಲಿಲ್ಲದೆ ಅನೇಕ ಶತಮಾನಗಳ ಕಾಲ ಕಣ್ಮರೆ
ಯಾಗಿ ಹೋದುದಕ್ಕೆ ಕಾರಣವೇನಿರಬಹುದೆಂಬುದನ್ನು ವಿಚಾರ ಮಾಡು
ವಲ್ಲಿ ಡಾಕ್ಟರ್ ಎ. ಬೆರ್ರಿಡೇಲ್ ಕೀತ್‌ರವರು, ಆತನು ಬಹುಶಃ ದಾಕ್ಷಿಣಾತ್ಯ
ನಿರಬಹುದೆಂದೂ, ಮಹಮ್ಮದೀಯರ ಪ್ರಾಬಲ್ಯ ಕಾಲದಲ್ಲಿ ಅವರ ಅಡ್ಡಿಯ
ದೆಸೆಯಿಂದ ಹಿಂದುಗಳದೆಂಬ ಯಾವುದೊಂದೂ ತಲೆಯೆತ್ತಲವಕಾಶವಿಲ್ಲದ
ಕಾರಣ—ಅದರಲ್ಲಿಯೂ ಭಾಸಕವಿಯಂತಹ ವಿಷ್ಣುಭಕ್ತನ ಗ್ರಂಥಗಳು
ಹೊರಗೆ ಬರುವುದಕ್ಕವಕಾಶವಿಲ್ಲದ ಕಾರಣ—ಹಾಗಾಗಿರಬೇಕೆಂದೂ,
ಆದರೂ ಇದು ಕೇವಲ ಊಹೆಯು ಮಾತ್ರವೇ ಎಂದೂ, ಅಭಿಪ್ರಾಯಪಟ್ಟಿ
ದ್ದಾರೆ. * ನಮ್ಮ ಕವಿಯು ಉಜ್ಜಯಿನಿಯವನಾದುದರಿಂದಲೇ ಅವನು
ಪ್ರತಿಜ್ಞಾಯೌಗಂಧರಾಯಣವನ್ನೂ ಸ್ವಪ್ನವಾಸವದತ್ತವನ್ನೂ ಬರೆದನೆಂದು
ಪ್ರೊಫೆಸರ್ ಕೋನೋ ಎಂಬವರು ಹೇಳಿರುವರು. ಅವನು ಉಜ್ಜಯಿನಿ
ಯವನೆಂಬುದಕ್ಕೆ ಈ ನಿದರ್ಶನವು ಸಾಲದು. ಅವನು ದಾಕ್ಷಿಣಾತ್ಯನೆಂದೂ

---

* Why his plays should have fared so badly as to disappear from popular use apparently for centuries does not appear. The most plausible view is that he was a poet of the south and that his dramas suffered from the general Mahomedan objection to everything Hindu, and especially to the dramas of an earnest devotee of Vishnu such as Bhasa was. But this is mere conjecture."

—*The Sanskrit Drama In Its Origin, Development, Theory and Practice* (page 105)

ನಿರ್ಧರಿಸುವ ಹಾಗಿಲ್ಲ. ಇಷ್ಟಕ್ಕೂ ವಾದಮಾಡಲು ಹೊರಟರೆ, ಅವನು ದಾಕ್ಷಿಣಾತ್ಯನೇ ಅಲ್ಲವೆಂದು ಬೇಕಾದರೂ ನಿರ್ಧರಿಸಲು ಕಾರಣಗಳನ್ನು ಸೂಚಿಸಬಹುದು. ಏಕೆಂದರೆ, ಕವಿಯು ದಾಕ್ಷಿಣಾತ್ಯನಾಗಿದ್ದರೆ, ರಾಮನು ಲಂಕೆಯಿಂದ ಪ್ರಯಾಣಮಾಡಿಬಂದ ಸನ್ನಿವೇಶದ ವರ್ಣನೆಯಲ್ಲಿ (ಅವನು ತನ್ನ ಹೃದಯವನ್ನು ಕುಣಿಸಿ ಉಲ್ಲಾಸಪಡಿಸುತ್ತಿದ್ದ) ದಕ್ಷಿಣ ದೇಶದ ಪರ್ವತಮಾಲೆ ಮುಂತಾದವುಗಳನ್ನು ಸೊಗಸಾಗಿ ವರ್ಣಿಸದೆ, ಅಭಿಷೇಕ ನಾಟಕದಲ್ಲಿ ಬರುವ "ಆಕ್ರಾಂತಾಃ ಪೃಥುಸಾನು ಕುಂಜ ಗಹನಾ ಮೇಘೋಪಮಾಃ ಪರ್ವತಾಃ|" ಎಂಬ ನೀರಸವಾದ ವರ್ಣನೆಯಿಂದ ಸುಮ್ಮನಾಗುತ್ತಿರಲಿಲ್ಲ. ಕಾಳಿದಾಸನು ಉಜ್ಜಯಿನಿಯನ್ನೂ, ಪಂಪನು ಬನವಾಸಿಯನ್ನೂ, ವರ್ಣಿಸಿರುವಂತೆಯೇ ಅವನೂ ಅವುಗಳನ್ನು ಪ್ರೀತ್ಯಭಿಮಾನಗಳ ಆನಂದಲಹರಿಯ ವೈಖರಿಯಿಂದಲೇ ವರ್ಣಿಸುತ್ತಿದ್ದನು. ಅವನು ದಾಕ್ಷಿಣಾತ್ಯನಾಗಿದ್ದರೆ, ದಕ್ಷಣದೇಶದವನಲ್ಲದ ಕಾಳಿದಾಸನಿಗಿಂತ ಹೆಚ್ಚಾಗಿಲ್ಲದಿದ್ದರೂ ಕಾಳಿದಾಸನ ಮಟ್ಟಿಗಾದರೂ ದಕ್ಷಿಣದೇಶದ ಪರಿಚಯವನ್ನು ಅವನು ತನ್ನ ಕಾವ್ಯಗಳಲ್ಲಿ ವ್ಯಕ್ತಗೊಳಿಸುತ್ತಿದ್ದನು. ಅವನು ದಾಕ್ಷಿಣಾತ್ಯನಾಗಿದ್ದರೆ, ಕಲ್ಪಿತ ಕಥಾವಸ್ತುವಿರುವ ಅವಿಮಾರಕದ ದೃಶ್ಯಗಳಾದರೂ ದಕ್ಷಿಣದೇಶದ ಪಟ್ಟಣಗಳಲ್ಲಿ ನಡೆದಂತೆ ಅವನು ಚಿತ್ರಿಸುತ್ತಿದ್ದನು; ಅವನು ರಚಿಸಿರುವ ರೂಪಕಗಳೆಲ್ಲದರ ಪಾತ್ರಗಳೂ ಆಗ್ಗೆ ಈಗಿನಂತೆ ಔತ್ತರೇಯರಾಗುತ್ತಿರಲಿಲ್ಲ. ಅವನು ದಾಕ್ಷಿಣಾತ್ಯನಾಗಿದ್ದರೆ, ಕಿಷ್ಕಿಂಧೆಯನ್ನು ಎರಡು ಸಲವೂ, ಮಹೇಂದ್ರ ಪರ್ವತವನ್ನು ಒಂದು ಸಲವೂ, ಪ್ರಾಸಂಗಿಕವಾಗಿ ಸೂಚಿಸಿರುವಷ್ಟುಮಟ್ಟಿನ ದಕ್ಷಿಣದೇಶ ಪರಿಚಯವನ್ನು ಮಾತ್ರವೇ ತೋರಿಸಿಕೊಳ್ಳಲು ಅವನ ಹೃದಯವೆಂದಿಗೂ ಸಮ್ಮತಿಸುತ್ತಿರಲಿಲ್ಲ. ಊಹೆಗೆ ಪ್ರಾರಂಭಿಸಿದರೆ ಈ ರೀತಿ ಬಗೆಬಗೆಯ ಕಾರಣ ಸರಣಿಗಳನ್ನು ಸೂಚಿಸಬಹುದು. ಆದಕಾರಣ, ಒಟ್ಟಿನಲ್ಲಿ ನೋಡಿದರೆ, ಕವಿಯು ಯಾವ ದೇಶದವನೆಂಬುದನ್ನಾಗಲಿ, ಅಥವಾ ಯಾವ ಊರಿನವನೆಂಬುದನ್ನಾಗಲಿ ಖಂಡಿತವಾಗಿ ನಿರ್ಧರಿಸುವುದು ಸಾಧ್ಯವಿಲ್ಲ. ಆದರೂ, ರೂಪಕ ಲೇಖಕನು ಉದ್ದೇಶಪೂರ್ವಕವಾಗಿ ಸ್ವವಿಷಯವನ್ನೆಂದಿಗೂ ಪಾತ್ರಗಳ ಮುಖಾಂತರವಾಗಿ ಹೊರಡಿಸುವ ಪ್ರಯತ್ನಮಾಡಕೂಡದೆಂಬ ನಿಯಮವನ್ನು ನಮ್ಮ

ಕವಿಯು ಬಹು ಚೆನ್ನಾಗಿ ಪರಿಪಾಲಿಸಿದ್ದಾನೆಂಬುದನ್ನು ಗಮನಿಸಿ ನಾವು ಸಂತೋಷಿಸಬಹುದಾಗಿದೆ.

ಅಂತೂ, ಅವನು ಯಾವ ದೇಶದವನೇ ಆಗಿರಲಿ, ಕಾಳಿದಾಸನಿಗಿಂತಲೂ ಅವನೇನೋ ಹಿಂದಿನವನೇ ಸರಿ. ಅವನ ರೂಪಕ ರಚನಾ ಸಾಮರ್ಥ್ಯವು ಶ್ರೇಷ್ಠ ತರಗತಿಯದಾಗಿರುವಕಾರಣ, ಅವನು ಭಾಸನಲ್ಲವೆಂದು ಪ್ರತಿಪಕ್ಷದವರು ಘಂಟಾಘೋಷವಾಗಿ ದೃಢಪಡಿಸುವವರೆಗೂ, ನಾವು ಈ ಮೊದಲೇ ತಿಳಿಸಿರುವ ಕಾರಣಗಳಿಗಾಗಿ ಅವನೇ ಭಾಸನೆಂದು ಭಾವಿಸಿ ಆನಂದಪಟ್ಟರೆ ಅದೆಂದಿಗೂ ಅಕ್ಷಮ್ಯವಾದ ಅಪರಾಧವೆನಿಸದೆಂದು ತೋರುತ್ತದೆ.

——o——

# ಪರಿಶಿಷ್ಟ

## ಭಾಸಮಹಾಕವಿಯು ವಿಷ್ಣುಧರ್ಮವೆಂಬ ಗ್ರಂಥವನ್ನು ಬರೆದಿದ್ದನೆಂಬುದಕ್ಕೆ ಆಧಾರ.

(೪೧ನೆಯ ಪುಟವನ್ನು ದಯೆಯಿಟ್ಟು ನೋಡಿ)

ಭಾಸನ ಗ್ರಂಥವು ದುಷ್ಟರ ದೋಷಾರೋಪಣೆಯ ಅಗ್ನಿಪರೀಕ್ಷೆಯಲ್ಲಿ ಉತ್ತೀರ್ಣವಾದ ವಿಚಾರದಲ್ಲಿ ಪೃಥ್ವೀರಾಜ ಚರಿತದ **"ಸತ್ಕಾವ್ಯ ಸಂಹಾರ ವಿಧೌ ಖಲಾನಾಂ ದೀಪ್ತಾನಿ ವಹ್ನೇರಪಿ ಮಾನಸಾನಿ। ಭಾಸಸ್ಯ ಕಾವ್ಯಂ ಖಲು ವಿಷ್ಣುಧರ್ಮಾನ್ ಸೋಽಪ್ಯಾನನಾತ್ ಪಾರತವನ್ನಮುಮೋಚ॥"** ಎಂಬ ಶ್ಲೋಕದ ವಿಷಯವನ್ನು ಹಿಂದೆಯೇ ಸೂಚಿಸಲಾಗಿದೆ (೪ನೆಯ ಮತ್ತು ೫ನೆಯ ಪುಟಗಳನ್ನು ದಯೆಯಿಟ್ಟು ನೋಡಿ.) ಈ ಶ್ಲೋಕದ ಉತ್ತರಾರ್ಧಕ್ಕೆ **"ಭಾಸಸ್ಯ ಕಾವ್ಯಂ ಖಲು ವಿಷ್ಣುಧರ್ಮಾನ್ ಸೋಽಪ್ಯಾನನಾತ್ ಭಾರತವನ್ನಮುಮೋಚ॥"** ಎಂಬ ಪಾಠವೂ ಇರುವಂತೆ ತೋರುತ್ತದೆ. ಶ್ಲೋಕದ ವ್ಯಾಖ್ಯಾನದಲ್ಲಿ ಜೋನರಾಜನು "ಸತಾಂ ಕಾವ್ಯಂ, ತದ್ವಿಷಯೇ ಸಂಹಾರವಿಧೌ ದಾಹೇ ದೋಷಾರೋಪಣೇಽಗ್ನೇರಪಿ ಸಕಾಶಾದ್ ದುರ್ಜನಾನಾಂ ಚಿತ್ತಾನಿ ದೀಪ್ತಾನ್ಯಜಡಾನಿ ಭವಂತಿ। ಅತ್ರ ಸಾಧನಮಾಹ—ಸೋಽಗ್ನಿರಪಿ ಭಾಸಮುನೇಃ ಕಾವ್ಯಂ ವಿಷ್ಣುಧರ್ಮಾನ್ ಮುಖಾತ್ ತ್ಯಕ್ತವಾನ್, ನಾದಹದಿತ್ಯರ್ಥಃ। ಪಾರತವದಿತ್ಯುಪಮಾ। ಅಗ್ನಿರ್ಹಿ ವಸ್ತ್ವಂತರವತ್ ಪಾರತಂ ದಗ್ಧುಮಶಕ್ತೋ ಮುಖಾನ್ಮುಂಚತಿ। ಭಾಸವ್ಯಾಸಯೋಃ ಕಾವ್ಯ ವಿಷಯೇಸ್ಪರ್ಧಾಂ ಕುರ್ವತೋಃ ಸರ್ವೋತ್ಕರ್ಷವರ್ತಿತ್ವೇನ ಪರೀಕ್ಷಕಾಂತರಾಭಾವಾತ್ ಪರೀಕ್ಷಾರ್ಥಮಗ್ನಿಮಧ್ಯೇ ತಯೋರ್ದ್ವಯೋಃ ಕಾವ್ಯದ್ವಯಂ ಕ್ಷಿಪ್ತಮ್। ತಯೋರ್ಮಧ್ಯಾದಗ್ನಿರ್ವಿಷ್ಣುಧರ್ಮಾನ್ನಾದಹದಿತಿ ಪ್ರಸಿದ್ಧಿಃ। ಖಲೈಸ್ತು ಪ್ರಾಪ್ತಂ ಸತ್ಕಾವ್ಯಂ ದಹ್ಯತೇ ಇತ್ಯಗ್ನೇಃಸಕಾಶಾತ್ ಖಲಾನಾಂ ದಾಹಕತ್ವಮಿತ್ಯರ್ಥಃ।" ಎಂದು ಬರೆದಿದ್ದಾನೆ. ಇಲ್ಲಿ ಜೋನರಾಜನು **"ಪಾರತವನ್ನಮುಮೋಚ"** ಎಂಬ

ಪಾಠವನ್ನೇ ಅಂಗೀಕರಿಸಿ, ಅಗ್ನಿಯು, ಇತರ ವಸ್ತುಗಳಂತೆ ಪಾದರಸವನ್ನು ಸುಟ್ಟು ಬೂದಿಮಾಡಲು ಶಕ್ಯವಿಲ್ಲದೆ ಬಿಟ್ಟುಬಿಡುವಂತೆ, ಇತರ ಕಾವ್ಯಗಳನ್ನು ಸುಟ್ಟು ಭಾಸನ ಕಾವ್ಯವನ್ನು ಮಾತ್ರ ಹಾಗೆಯೇ ಬಿಟ್ಟನು— ಎಂದು ತಾತ್ಪರ್ಯವೆಂಬುದನ್ನು ಸ್ಪಷ್ಟವಾಗಿ ಬರೆದಿದ್ದಾನೆ. **"ಪಾರತವದಿತ್ಯುಪಮಾ"** (ಪಾರತದಂತೆ ಎಂಬುದು ಉಪಮಾ) ಎಂದೇ ಹೇಳಿದ್ದಾನೆ. ಆದಕಾರಣ, **"ಭಾರತವನ್ಮನೋಽಚ॥"** ಎಂದು ಓದಿಕೊಳ್ಳಲು ಅವಕಾಶವು ಕಡಿಮೆಯೆಂದು ತೋರುವುದು. ಇದೇರೀತಿ **"ವಿಷ್ಣುಧರ್ಮಾನ್"** ಎಂಬುದನ್ನು ಬಿಟ್ಟು **"ವಿಷ್ಣುಧರ್ಮನ್"** ಎಂದು ಓದಿಕೊಳ್ಳುವುದಕ್ಕೂ ಅವಕಾಶವು ಕಡಿಮೆಯೆಂದೇ ಹೇಳಬೇಕಾಗುತ್ತದೆ. ಏಕೆಂದರೆ, ಶ್ಲೋಕದಲ್ಲಿಯೂ, ವ್ಯಾಖ್ಯಾನದಲ್ಲಿಯೂ, **"ವಿಷ್ಣುಧರ್ಮಾನ್"**ಎಂಬುದು ಭಾಸನ ಕಾವ್ಯಕ್ಕೆ ಅನ್ವಯಿಸುವುದೇ ಹೊರತು, ವಿಷ್ಣುಧರ್ಮನೆಂಬ ವ್ಯಕ್ತಿಗಲ್ಲವೆಂಬುದೇ ಸ್ಪಷ್ಟವಾಗಿದೆ. ಅದು ವಿಷ್ಣುಧರ್ಮಗಳನ್ನು ಕುರಿತ ಗ್ರಂಥವೋ, ಇಲ್ಲವೇ ವಿಷ್ಣುಧರ್ಮವೆಂಬುದೇ ಅದರ ಹೆಸರೋ ಆಗಿರಬೇಕು. ವ್ಯಾಖ್ಯಾನಕಾರನು ಪ್ರಾಸಂಗಿಕವಾಗಿ ವ್ಯಾಸರ ಹೆಸರನ್ನೂ ತಂದು ಸೇರಿಸಿದ್ದಾನೆ. ಶ್ಲೋಕದ ಆಶಯವನ್ನು ನೋಡಿದರೆ, ಅದು ಅನವಶ್ಯವಾಗಿರುವಂತೆ ತೋರುತ್ತದೆ. ವ್ಯಾಸರ ಗ್ರಂಥದ ಸಂಬಂಧವಾಗಿ ವಾಖ್ಯಾನದಲ್ಲಿ ಹೇಳಿರುವಂತಹ ಅರ್ಥವಾದವೇನಾದರೂ ವ್ಯಾಖ್ಯಾನಕಾರನ ಕಾಲದಲ್ಲಿ ಪ್ರಚಾರದಲ್ಲಿದ್ದಿತೋ ಹೇಗೋ ತಿಳಿಯದು. ಏಕೆಂದರೆ ವ್ಯಾಸರ ಗ್ರಂಥವಾದ ಮಹಾಭಾರತವು ಅಗ್ನಿಪರೀಕ್ಷೆಗೆ ಗುರಿಯಾಗಿ ಅದರಲ್ಲಿ ಉತ್ತೀರ್ಣವಾಯಿತೆಂಬ ಯಾವ ಐತಿಹ್ಯವೂ ಈಗ ಪ್ರಚಾರದಲ್ಲಿಲ್ಲ. ವ್ಯಾಖ್ಯಾನಕಾರನ ಮಾತುಗಳನ್ನು ನೋಡಿದರೆ, ಅವನ ಕಾಲದಲ್ಲಿ ಅದು ಪ್ರಚಾರದಲ್ಲಿಲ್ಲದೆ ಹೋಗಿದ್ದರೆ ಅವನೆಂದಿಗೂ ಹಾಗೆ ಬರೆಯುತ್ತಿರಲಿಲ್ಲವೆಂದೂ ಹೇಳಬೇಕಾಗುತ್ತದೆ. ಆದರೂ ಮೂಲಶ್ಲೋಕದ ಆಶಯದಲ್ಲೇ ಅವಕಾಶವಿಲ್ಲದಿದ್ದರೂ, ವ್ಯಾಖ್ಯಾನದಲ್ಲಿ ವ್ಯಾಸರ ವಿಚಾರವನ್ನೇಕೆ ಆತನು ಅನವಶ್ಯವಾಗಿ ತಂದುಹಾಕಬೇಕಾಗಿದ್ದಿತೆಂದು ಆಶ್ಚರ್ಯವಾಗುತ್ತದೆ. ಆದಾಗ್ಯೂ, ಈ ಪಾಠಭೇದಗಳ ವಿಷಯದಲ್ಲಿ ಇಂತಹದೇ ಸರಿಯೆಂದು ನಿಷ್ಕೃಷ್ಟವಾಗಿ ಹೇಳುವಂತಿಲ್ಲ.

—o—

# ಎರಡನೆಯ ತರಂಗ

——:——

## ರಾಮಾಯಣ ಸಂಬಂಧವಾದ ರೂಪಕಗಳು.



ಪ್ರತಿಮಾ ನಾಟಕ

ಅಭಿಷೇಕ ನಾಟಕ

# ಪ್ರತಿಮಾ ನಾಟಕ

## ೧. ಕಥಾಸಾರಾಂಶ

ರಘುಕುಲದ ಅರಸರಲ್ಲಿ ಮೃತರ ಶಿಲಾಪ್ರತಿಮೆಗಳನ್ನು ಪ್ರತಿಷ್ಠಿಸುತ್ತಿದ್ದ ಪ್ರತಿಮಾ ಗೃಹದಲ್ಲಿ ದಶರಥನ ಪ್ರತಿಮೆಯನ್ನು ಕಂಡು, ತಮ್ಮ ತಂದೆಯು ಮೃತಪಟ್ಟಿದ್ದ ಅಂಶವನ್ನು ಭರತನು ಅದರಿಂದ ಊಹಿಸಿದನೆಂಬ ಸನ್ನಿವೇಶವನ್ನು ಕಲ್ಪಿಸಿ, ಭಾಸಮಹಾಕವಿಯು ಈ ರೂಪಕಕ್ಕೆ ಪ್ರತಿಮಾ ನಾಟಕವೆಂದು ಹೆಸರಿಟ್ಟಿದ್ದಾನೆ. ವಾಲ್ಮೀಕಿರಾಮಾಯಣದ ಅಯೋಧ್ಯಾಕಾಂಡದಲ್ಲಿಯೂ ಅರಣ್ಯಕಾಂಡದಲ್ಲಿಯೂ, ಚಿತ್ರಿತವಾಗಿರುವ ಕಥಾಭಾಗಗಳೇ ಈ ನಾಟಕದಲ್ಲಿ ಹಲವು ಮಾರ್ಪಾಟುಗಳೊಡನೆ ಚಿತ್ರಿತವಾಗಿವೆ.

ಮೊದಲನೆಯ ಅಂಕವು ಪ್ರತಿಹಾರಿಯ ಪ್ರವೇಶದಿಂದ ಪ್ರಾರಂಭವಾಗುವುದು. ಶ್ರೀರಾಮನಿಗೆ ಪಟ್ಟಾಭಿಷೇಕ ಮಾಡುವುದಕ್ಕೆ ಬೇಕಾದ ಸಮಸ್ತ ಸಂಭರಗಳನ್ನೂ ಶೀಘ್ರವಾಗಿ ಅಣಿಮಾಡುವಂತೆ ದಶರಥ ಮಹಾರಾಜನು ಆಜ್ಞಾಪಿಸಿರುವನೆಂದು ಅವಳು ಕಾಂಚುಕೀಯನಿಗೆ ತಿಳಿಸುವಳು. ಮಹಾರಾಜನ ಆಜ್ಞೆಗನುಸಾರವಾಗಿ ಸಮಸ್ತ ಸಂಭರಗಳೂ ಸಿದ್ಧವಾಗಿರುವುದಾಗಿ ಅವನು ಉತ್ತರಹೇಳುವನು. ಆಬಳಿಕ ಪ್ರತಿಹಾರಿಯು ಸಾರಸಿಕೆಯೆಂಬವಳನ್ನು ಕುರಿತು (ಅರಮನೆಯ) ಸಂಗೀತಶಾಲೆಗೆ ಹೋಗಿ ಉತ್ಸವಕಾಲಕ್ಕೆ ತಕ್ಕ ನಾಟಕವೊಂದನ್ನು ಅಭಿನಯಿಸಲು ಸಿದ್ಧವಾಗುವಂತೆ ನಟವೃಂದಕ್ಕೆ ತಿಳಿಸುವಂತೆ ಹೇಳುವಳು. ಅವರು ಮೂವರೂ ಹೋದ ಬಳಿಕ ವಲ್ಕಲವನ್ನು ಹಿಡಿದು ಅವದಾತಿಕೆಯೆಂಬ ಚೇಟಿಯು ಪ್ರವೇಶಿಸುವಳು. ಅರಮನೆಯ ಸಂಗೀತಶಾಲೆಯಲ್ಲಿ ನೇಪಥ್ಯಪಾಲಿನಿಯಾದ ಆರ್ಯರೇವೆಯೆಂಬವಳು ರಂಗಸ್ಥಳದಲ್ಲಿ ಉಪಯೋಗವು ಮುಗಿದುಹೋಗಿದ್ದ ಅಶೋಕದ ಚಿಗುರನ್ನು ತಾನು ಯಾಚಿಸಿದರೂ ತನಗೆ ಕೊಡಲಿಲ್ಲವಾದ ಕಾರಣ, ಪರಿಹಾಸಕ್ಕಾಗಿ ಅವದಾತಿಕೆಯು ಆ ವಲ್ಕಲವನ್ನು ಆರ್ಯರೇವೆಯು

ಕಾಣದ ಹಾಗೆ ತಂದಿರುವಳು. ಮುಯ್ಯಿಗೆ ಮುಯ್ಯಿ ತೀರಿತೆಂದು ಅವಳು ಹಿಗ್ಗುತ್ತಿರುವಲ್ಲಿ ಸೀತಾದೇವಿಯು ಪ್ರವೇಶಿಸಿ ವಲ್ಕಲದ ವಿಚಾರವೇನೆಂಬು ದನ್ನು ತಿಳಿದುಕೊಂಡು ಪರಿಹಾಸಕ್ಕಾಗಿಯೂ ಕೆಟ್ಟಕೆಲಸ ಮಾಡಕೂಡ ದೆಂದೂ ವಲ್ಕಲವನ್ನು ಹಿಂದಕ್ಕೆ ಕೊಟ್ಟುಬರಬೇಕೆಂದೂ ಅವಳಿಗೆ ಬುದ್ಧಿ ಹೇಳುವಳು. ಅವದಾತಿಕೆಯು ಹೊರಡುವಷ್ಟರಲ್ಲಿ ಸೀತಾದೇವಿಗೆ ತಾನು ವಲ್ಕಲವನ್ನು ಧರಿಸಿದರೆ ಹೇಗಿರುವುದೋ ನೋಡಬೇಕೆಂದು ಕುತೂಹಲ ವಾಗುವುದು. ಆಕೆಯು ವಲ್ಕಲವನ್ನುಟ್ಟು ಹೇಗಿದೆಯೋ ಹೇಳಬೇಕೆಂದು ಅವದಾತಿಕೆಯನ್ನು ಕೇಳುವಳು. ಸೀತಾದೇವಿಯ ಮೈಮೇಲೆ ಆ ವಲ್ಕಲವು ಸುವರ್ಣರಚಿತವಾಗಿದ್ದಂತೆ ತೋರುತ್ತಿದ್ದುದಾಗಿ ಅವದಾತಿಕೆಯು ತಿಳಿಸು ವಳು. ಸೀತಾದೇವಿಯು ಕನ್ನಡಿಯನ್ನು ತರಹೇಳುವಳು. ಚೇಟಿಯು ಕನ್ನಡಿ ಯೊಡನೆ ಬಂದು ಶ್ರೀರಾಮನಿಗೆ ಪಟ್ಟಾಭಿಷೇಕವೆಂದು ಕಂಚುಕಿಯು ಹೇಳಿದನೆಂದು ತಿಳಿಸುವಳು. ಸೀತಾದೇವಿಯು “ದಶರಥನು ಕುಶಲಿಯಷ್ಟೆ ?” ಎಂದು ಕೇಳುವಳು. ಅಭಿಷೇಕ ವಿಚಾರವು ಇನ್ನೂ ಸೀತಾದೇವಿಗೆ ತಿಳಿದಿಲ್ಲ ದಿರುವುದು ಚೋದ್ಯವೆನಿಸಿದರೂ, ಅಭಿಷೇಕವು ಬಹಳ ಅವಸರವಾಗಿ ಏರ್ಪಟ್ಟಿತೆಂದೂ, ಸಕಾಲದಲ್ಲಿ ಸೀತೆಯನ್ನು ಕರೆಸುತ್ತಿದ್ದರೆಂದೂ ಊಹಿಸ ಬಹುದಾಗಿದೆ. ಮಹಾರಾಜನೇ ಶ್ರೀರಾಮನಿಗೆ ಪಟ್ಟಾಭಿಷೇಕ ಮಾಡುವ ನೆಂದು ತಾನು ಕೇಳಿದುದಾಗಿ ಚೇಟಿಯು ತಿಳಿಸಿ ಸೀತಾದೇವಿಯು ಕೊಟ್ಟ ಆಭರಣದ ಮೆಚ್ಚನ್ನು ಸ್ವೀಕರಿಸುವಳು. ಅಷ್ಟರಲ್ಲಿ ಪಟ್ಟಾಭಿಷೇಕ ಸಂಬಂಧ ವಾದ ಪಟಹಾದಿ ವಾದ್ಯಗಳು ಘೋರ್ಗರೆದು ನಿಂತುಹೋಗುವುವು. ಬಳಿಕ ರಾಮನು ಪ್ರವೇಶಿಸುವನು. ಸೀತಾದೇವಿಯು ಪಟ್ಟಾಭಿಷೇಕ ವಿಚಾರವಾಗಿ ಅವನನ್ನು ಕೇಳುವಳು. ಮಂಥರೆಯು ಮಹಾರಾಜನ ಕಿವಿಯಲ್ಲಿ ಏನನ್ನೋ ಹೇಳಿದುದರಿಂದ ಪಟ್ಟಾಭಿಷೇಕವು ನಿಂತುಹೋಯಿತೆಂದು ರಾಮನು ತಿಳಿಸು ವನು. ಕಾಂಚುಕೀಯನು ಪ್ರವೇಶಿಸಿ, ಭರತನಿಗೆ ರಾಜ್ಯವಾಗಬೇಕೆಂದು ಕೈಕೆಯಿಯು ಬೇಡಿದುದರಿಂದ ಶ್ರೀರಾಮನ ಪಟ್ಟಾಭಿಷೇಕವು ನಿಂತು ಹೋಯಿತೆಂದು ತಿಳಿಸಿ ಆಕೆಯ ಲೋಭವನ್ನು ಜರಿಯುವನು. ಮಾತೃ ನಿಂದೆಯನ್ನು ಕೇಳಲಾರೆನೆಂದು ಶ್ರೀರಾಮನು ತಿಳಿಸುವನು. ಭರತನಿಗಾಗಿ ರಾಜ್ಯವನ್ನು ಯಾಚಿಸಿ ರಾಮನಿಗೆ ವನವಾಸವಾಗಬೇಕೆಂದು ಕೋರಿದ

ಕೈಕೆಯಿಯನ್ನೇ ಕೊಲ್ಲುವುದಾಗಿ ಗರ್ಜಿಸುತ್ತ ರೋಷಭೀಷಣನಾದ ಲಕ್ಷ್ಮಣನು ಧನುರ್ಬಾಣಗಳನ್ನು ಹಿಡಿದು ಪ್ರವೇಶಿಸುವನು. ರಾಮನು ಅವನಿಗೆ ಸಮಾಧಾನ ಹೇಳುವನು. ಅಷ್ಟರಲ್ಲಿ ವಿನೋದಕ್ಕಾಗಿ ಸೀತಾದೇವಿಯು ಹಳೆಯ ವಲ್ಕಲವನ್ನು ಧರಿಸಿದ ವಾರ್ತೆಯನ್ನು ಕೇಳಿದ ಆರ್ಯರೇವೆಯು ಯಾರೂ ಧರಿಸದಿದ್ದ ಹೊಸ ವಲ್ಕಲವನ್ನು ಕಳುಹಿಸುವಳು. ಶ್ರೀರಾಮನು ಅದನ್ನು ಧರಿಸಿ ವನಕ್ಕೆ ಹೊರಡಲುದ್ಯುಕ್ತನಾಗುವನು. ಸೀತಾಲಕ್ಷ್ಮಣರು ತಾವೂ ಆತನೊಡನೆ ಹೊರಡಲು ಅನುಮತಿ ಬೇಡುವರು.

ಎರಡನೆಯ ಅಂಕದಲ್ಲಿ, ಶ್ರೀರಾಮನು ಸೀತಾಲಕ್ಷ್ಮಣರೊಡನೆ ವನಕ್ಕೆ ತೆರಳಿದ ಕಾರಣ, ದುಃಖದಿಂದ ಪರಿತಪಿಸುತ್ತ ಉನ್ಮತ್ತದಶೆಯಲ್ಲಿರುವ ದಶರಥನು ಪ್ರವೇಶಿಸುವನು. ಕೌಸಲ್ಯಾ ಸುಮಿತ್ರೆಯರನ್ನು ಗುರುತಿಸುವ ಸಾಮರ್ಥ್ಯವೂ ಅವನಿಗಿರುವುದಿಲ್ಲ. ಸುಮಂತ್ರನು ಬರಿಯ ರಥದೊಡನೆ ಹಿಂದಕ್ಕೆ ಬಂದುದನ್ನು ಕೇಳಿ, ಅದು ತನ್ನನ್ನು ಕರೆದೊಯ್ಯಲು ಯಮನಿಂದ ಬಂದ ರಥವೆಂದು ದಶರಥನು ಸಂಕಟಪಟ್ಟು ಬಗೆಬಗೆಯಾಗಿ ದುಃಖಿಸುವನು. ಆಗಿನ ತನ್ನ ಉನ್ಮತ್ತದಶೆಯಲ್ಲಿ ರಾಮಕಥಾ ಶ್ರವಣಸಂದಗ್ಧಹೃದಯನಾದ ತನ್ನನ್ನು ಸಂತೈಸಲು ಪಿತೃಗಳು ಬಂದರೆಂದು ಸೂಚಿಸಿ ಅವರನ್ನುದ್ದೇಶಿಸಿ ಮಾತನಾಡಿ ಮೂರ್ಛಿತನಾಗುವನು.

ಮೂರನೆಯ ಅಂಕವು, ಭಟನು ತನ್ನ ಕೈಕೆಳಗಿನವನಾದ ಸುಧಾಕಾರನನ್ನು ದಂಡಿಸುವ ಪ್ರವೇಶಕದಿಂದ ಪ್ರಾರಂಭವಾಗುವುದು. ಆ ವೇಳೆಗೆ ದಶರಥನು ಮೃತನಾಗಿ, ಅವನ ಶಿಲಾಪ್ರತಿಮೆಯು ಪ್ರತಿಮಾಗೃಹದಲ್ಲಿ ಸ್ಥಾಪಿತವಾಗಿರುವುದು. ಅಂದು ಕೌಸಲ್ಯಾ ದೇವಿ ಮುಂತಾದವರು ದಶರಥನ ಪ್ರತಿಮೆಯನ್ನು ನೋಡಲು ಅಲ್ಲಿಗೆ ಬರುವ ದಿನ. ಆ ಸಂಬಂಧದಲ್ಲಿ ಸುಧಾಕಾರನು ತಾನು ಹೇಳಿದ್ದ (ಗುಡಿಸುವುದು ಮುಂತಾದ) ಕೆಲಸಗಳನ್ನು ಮಾಡಿಲ್ಲವೆಂದು ಭಾವಿಸಿ ಭಟನು ಅವನನ್ನು ಹೊಡೆಯುವನು. ಅವರ ಮಾತುಗಳು ಹಾಸ್ಯದಿಂದ ತುಂಬಿವೆ. ಸುಧಾಕಾರನು ಭಟನ ಆಜ್ಞೆಯನ್ನು ನೆರವೇರಿಸಿರುವುದಾಗಿ ತಿಳಿಸುವನು. ಭಟನು ಅದನ್ನು ಅಮಾತ್ಯನಿಗೆ ವಿಜ್ಞಾಪಿಸುವುದಾಗಿ ಹೇಳುವನು. ಅವರೀರ್ವರೂ ಹೋದ ಬಳಿಕ

ಸೋದರಮಾವನ ಮನೆಯಿಂದ ಅಯೋಧ್ಯೆಗೆ ಬರುತ್ತಿರುವ ಭರತನು ಪ್ರವೇಶಿಸುವನು. ಆಯೋಧ್ಯೆಯಿಂದ ಹೋದ ದೂತನು ದಶರಥನಿಗೆ ದೇಹಾಲಸ್ಯವೆಂದು ಮಾತ್ರವೇ ಅವನಿಗೆ ತಿಳಿಸಿರುವನು. ಭರತನು ತಾನು ರಾಜಧಾನಿಗೆ ಹೋಗಿ ತಂದೆಯ ಪಾದಗಳಿಗೆ ನಮಸ್ಕರಿಸುವುದಾಗಿಯೂ, ಆಗ ರಾಮಲಕ್ಷ್ಮಣರೂ ಶತ್ರುಘ್ನನೂ ಓಡಿಬರುವುದಾಗಿಯೂ, ಮಾತೆಯರು ಅಶ್ರುಪೂರಿತೆಯರಾಗಿ ತನ್ನನ್ನು ನೋಡುವರೆಂದೂ, ಭೃತ್ಯರು ಸ್ತುತಿಸುವುದಾಗಿಯೂ, ಲಕ್ಷ್ಮಣನು ತನ್ನನ್ನು ಪರಿಹಾಸಮಾಡುವುದಾಗಿಯೂ, ಹೇಳಿಕೊಳ್ಳುವುದನ್ನು ಕೇಳಿ, ದಶರಥನ ಮರಣವನ್ನರಿಯದ ಅವನ ಆ ಮಾತುಗಳಿಗಾಗಿ ಸೂತನು ಪರಿತಾಪಪಡುವನು. ಅಷ್ಟರಲ್ಲಿ ಅಯೋಧ್ಯೆಯಿಂದ ಬಂದ ಭಟನು ಪ್ರವೇಶಿಸಿ ಕೃತ್ತಿಕಾನಕ್ಷತ್ರವು ಕಳೆಯುವವರೆಗೂ ಭರತನು ಪುರಪ್ರವೇಶ ಮಾಡಕೂಡದೆಂದು ಪುರೋಹಿತರು ಅಪ್ಪಣೆಮಾಡಿರುವುದಾಗಿ ತಿಳಿಸುವನು. ರಥದ ಕುದುರೆಗಳಿಗೆ ದಣಿವಾರಿಸುವಂತೆ ಭರತನು ಸೂತನಿಗೆ ಅಪ್ಪಣೆಮಾಡಿ ಅವನೂ ಭಟನೂ ಹೋದಬಳಿಕ ಪ್ರತಿಮಾಗೃಹಕ್ಕೆ ಪ್ರವೇಶ ಮಾಡುವನು. ಆದರ ಕಾವಲುಗಾರನಾದ ದೇವಕುಲಿಕನು ಪ್ರವೇಶಿಸಿ "ಕೆಲಸಮುಗಿಸಿ ನಾನು ಸ್ವಂತವಿಚಾರವನ್ನು ನೋಡುತ್ತಿರುವಲ್ಲಿ ಈ ಪ್ರತಿಮೆಗಳ ಅಲ್ಪಾಂತರಾಕೃತಿಯಂತಿರುವವನಾವನೋ ಒಳಕ್ಕೆ ಹೋದನು. ನಾನೂ ಹೋಗಿನೋಡುವೆನು" ಎಂದು ಪ್ರತಿಮಾ ಗೃಹಕ್ಕೆ ಹೋಗುವನು. ಪ್ರತಿಮಾಗೃಹದಲ್ಲಿ ದಶರಥನ ಪ್ರತಿಮೆಯನ್ನೂ ಕಂಡು ತಂದೆಯ ಸಾವನ್ನು ಶಂಕಿಸಿ ದೇವಕುಲಿಕನಿಂದ ದಶರಥನ ಮರಣವಾರ್ತೆಯನ್ನೂ ಅದಕ್ಕೆ ಕಾರಣವನ್ನೂ ಕೇಳಿ ಭರತನು ಮೂರ್ಛೆಹೊಂದುವನು. ಅಷ್ಟರಲ್ಲಿ ದೇವಿಯರು ಅಲ್ಲಿಗೆ ಬರುವರು. ಅವರ ಶೈತ್ಯೋಪಚಾರದಿಂದೆಚ್ಚೆತ್ತ ಭರತನು ಕೌಸಲ್ಯಾಸುಮಿತ್ರೆಯರಿಗೆ ನಮಸ್ಕಾರಮಾಡಿ, ಕೌಸಲ್ಯೆಯು ಹೇಳಿದರೂ ಕೈಕೆಯಿಗೆ ನಮಸ್ಕಾರಮಾಡದೆ ಅವಳು ತನ್ನ ತಾಯಿಯಲ್ಲವೆಂದೂ ಜರಿದು ರಾಮನನ್ನು ಕಾಣಲು ವನಕ್ಕೆ ಹೊರಡಲನುವಾಗುವನು.

ನಾಲ್ಕನೆಯ ಅಂಕದಲ್ಲಿ, ಭರತನು ಅರಣ್ಯಕ್ಕೆ ಹೋಗಿ ಶ್ರೀರಾಮನನ್ನು ಕಂಡು, ಅವನ ಪಾದುಕೆಗಳಿಗೆ ಪಟ್ಟಾಭಿಷೇಕಮಾಡಲು ಅನುಮತಿಯನ್ನು ಪಡೆದು ಪಾದುಕೆಗಳೊಡನೆ ಅಯೋಧ್ಯೆಗೆ ಹಿಂತಿರುಗುವನು.

ಐದನೆಯ ಅಂಕವು ಪ್ರಾರಂಭವಾಗುವುದು ದಶರಥನ ಶ್ರಾದ್ಧದ ಹಿಂದಿನ ದಿನ. ಶ್ರೀರಾಮನು ಲಕ್ಷ್ಮಣನನ್ನು ಕಾರ್ಯಾರ್ಥವಾಗಿ ಋಷ್ಯಾಶ್ರಮವೊಂದಕ್ಕೆ ಕಳುಹಿಸಿರುವನು. ಸೀತಾದೇವಿಯು ಆಶ್ರಮವೃಕ್ಷಗಳಿಗೆ ನೀರೆರೆಯುತ್ತಿರುವಳು. ಆಕೆಯ ಕಷ್ಟವನ್ನು ನೆನೆದು ವ್ಯಥೆಪಡುತ್ತ, ಆಕೆಯನ್ನು ಕಂಡಮೇಲೆ ರಾಮನು ತಮ್ಮ ತಂದೆಯ ಶ್ರಾದ್ಧಕ್ಕಾಗಿ ದರ್ಭೆಯಲ್ಲಿ ಫಲಗಳನ್ನು ರಚಿಸಿ ಪ್ರತ್ಯಾಮ್ನಾಯವಾಗಿ ಸಮರ್ಪಿಸುವ ಸ್ಥಿತಿಯೊದಗಿತೆಂದು ಮುಂತಾಗಿ ವ್ಯಥೆಪಡುವನು. ರಾಜಧಾನಿಯಲ್ಲಿ ಭರತನು ಉಚಿತ ರೀತಿಯಲ್ಲಿ ಶ್ರಾದ್ಧವನ್ನು ನೆರವೇರಿಸುವನೆಂದೂ, ಅರಣ್ಯವಾಸದ ಅವಸ್ಥಾನುರೂಪವಾಗಿ ರಾಮನು ಶ್ರಾದ್ಧವನ್ನು ನೆರವೇರಿಸಿದರೇ ಸಾಕೆಂದೂ ಸೀತಾದೇವಿಯು ಸಮಾಧಾನ ಹೇಳುವಳು. ಆ ವೇಳೆಗೆ ಸಂನ್ಯಾಸಿವೇಷದ ರಾವಣನು ಪ್ರವೇಶಿಸಿ, ಸೀತಾರಾಮರ ಸತ್ಕಾರವನ್ನು ಕೈಕೊಂಡು, ತಾನು ವ್ಯಾಸಂಗ ಮಾಡಿರುವ ವಿಷಯಗಳನ್ನು ತಿಳಿಸುವಲ್ಲಿ ಪ್ರಾಚೇತಸನ ಶ್ರಾದ್ಧಕಲ್ಪವನ್ನೂ ಸೂಚಿಸಿ, ರಾಮನ ಕೋರಿಕೆಯಂತೆ ಶ್ರಾದ್ಧದಲ್ಲಿ ಉಪಯೋಗಿಸಬೇಕಾದ ಶ್ರೇಷ್ಠವಸ್ತುಗಳನ್ನು ಒಕ್ಕಣಿಸುವನು. ಹಿಮವತ್ಪರ್ವತದ ಬಳಿಯಲ್ಲಿರುವ ಕಾಂಚನಪಾರ್ಶ್ವಮೃಗವು ಶ್ರೇಷ್ಠವಸ್ತುಗಳಲ್ಲೊಂದೆಂದು ಕೇಳಿದ ಶ್ರೀರಾಮನು ಸಂನ್ಯಾಸಿಯನ್ನು ಸೇವಿಸುತ್ತಿರುವಂತೆ ಸೀತಾದೇವಿಗೆ ತಿಳಿಸಿ ಅಷ್ಟರಲ್ಲಿ ಅಲ್ಲಿಗೆ ಬಂದ ಮೃಗವನ್ನು ತರಲು ಹೋಗುವನು. ಇತ್ತ, ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೊರಡುವನು. ಸೀತಾದೇವಿಯ ಆರ್ತಸ್ವರವನ್ನು ಕೇಳಿದ ಜಟಾಯುವು ರಾವಣನೊಡನೆ ಯುದ್ಧಮಾಡುವನು.

ಆರನೆಯ ಅಂಕದಲ್ಲಿ ಜಟಾಯುವಿಗೂ, ರಾವಣನಿಗೂ ನಡೆದ ಯುದ್ಧವೂ, ಸೀತಾಪಹರಣದ ದುಃಖವಾರ್ತೆಯನ್ನು ಕೇಳಿ ಭರತನು ಶ್ರೀರಾಮನ ಸಹಾಯಕ್ಕಾಗಿ ಲಂಕೆಗೆ ಹೋಗಬೇಕೆಂದು ನಿರ್ಧರಿಸುವುದೂ ಸಹ ವರ್ಣಿತವಾಗಿವೆ. ಏಳನೆಯ ಅಂಕದಲ್ಲಿ ಶ್ರೀರಾಮನು ರಾವಣನನ್ನು ಕೊಂದು ಸೀತಾದೇವಿಯನ್ನು ಕರೆದುಕೊಂಡು ಆಶ್ರಮಕ್ಕೆ ಬರುವನು. ಸೀತಾಪಹರಣದ ಸುದ್ದಿಯನ್ನು ಕೇಳಿದ್ದ ಭರತನು ತನ್ನ ಮಾತೆಯರೊಡನೆಯೂ, ಮಂತ್ರಿಪರಿವಾರದೊಡನೆಯೂ ಆತನ ಸಹಾಯಕ್ಕಾಗಿ ಹೊರಟು ಆವೇಳೆಗೆ ಅಲ್ಲಿಗೆ ಬರುವನು. ರಾಜ್ಯಾಭಿಷೇಕಕ್ಕಾಗಿ ಶತ್ರುಘ್ನನೂ ತೀರ್ಥೋದಕವನ್ನು

ತೆಗೆಸಿಕೊಂಡು ಅವರೊಡನೆ ಬಂದಿರುವನು. ಆಗ ಭರತನು ಸಂತೋಷ ದಿಂದ ರಾಜ್ಯಾಧಿಕಾರವನ್ನು ಅವನಿಗೆ ಒಪ್ಪಿಸುವನು. ಶ್ರೀರಾಮನಿಗೆ ಆಶ್ರಮ ದಲ್ಲಿಯೇ ಪಟ್ಟಾಭಿಷೇಕವು ನಡೆಯುವುದು. ಎಲ್ಲರೂ ಅಯೋಧ್ಯೆಗೆ ಹೊರ ಡುವರು. ಇದು ಈ ನಾಟಕದ ಮುಖ್ಯ ಸಾರಾಂಶ.

ಭಾಸಕವಿಯು ಈ ನಾಟಕದಲ್ಲಿ ಮುಖ್ಯವಾಗಿ ಧರ್ಮವೀರರಸವನ್ನು ಅಳವಡಿಸಿ ಆದರೊಡನೆ ಕರುಣಾರಸವನ್ನೂ ಸಮ್ಮಿಳಿತವಾಗಿ ಸೇರಿಸಿ, ಪ್ರೇಕ್ಷಕರ ಚಿತ್ತವನ್ನು ಮುಗ್ಧಗೊಳಿಸಿದ್ದಾನೆ.

## ೨. ವಿಮರ್ಶೆ

**ಸಂವಿಧಾನ:**—ಡಾಕ್ಟರ್ ಎ. ಬೆರಿಡೇಲ್ ಕೀತ್ ಎಂಬ ಪಂಡಿತರು ಸಂಸ್ಕೃತನಾಟಕಗಳ ವಿಷಯವಾಗಿ ತಾವು ಬರೆದಿರುವ ಪುಸ್ತಕದಲ್ಲಿ ರಾಮ ಕಥಾ ಸಂಬಂಧವಾದ ನಾಟಕಗಳಲ್ಲಿಯ ಸಂಗತಿಗಳೆಲ್ಲ ಹೆಚ್ಚು ಬದಲಾವಣೆ ಗಳಿಲ್ಲದೆ ಚರ್ವಿತ ಚರ್ವಣವಾಗಿ ವಾಲ್ಮೀಕಿರಾಮಾಯಣದಿಂದ ತೆಗೆದು ಕೊಂಡವುಗಳೆಂದೂ, ಪಾತ್ರರಚನೆಯೂ ಕೂಡ ಹುರುಳಿಲ್ಲದ ಪಡಿಯಚ್ಚಿ ನಂತಿದೆಯೆಂದೂ, ಅಭಿಪ್ರಾಯಪಟ್ಟಿದ್ದಾರೆ. ಅಭಿಷೇಕನಾಟಕದ ವಿಷಯದಲ್ಲಿ ಅವರಮಾತು ಬಹುಮಟ್ಟಿಗೆ ನಿಜವಾಗಿ ತೋರಬಹುದಾದರೂ, ಪ್ರತಿಮಾ ನಾಟಕಕ್ಕೆ ಮಾತ್ರ ಈ ಹೇಳಿಕೆಯು ಖಂಡಿತವಾಗಿಯೂ ಅನ್ವಯಿಸದು. ಇಷ್ಟಕ್ಕೂ ಅಭಿಷೇಕನಾಟಕದಲ್ಲಿ ಭಾಸನ ಅಮೋಘಚೈತನ್ಯದ ನಿದರ್ಶನಗಳೇ ಹೆಚ್ಚಾಗಿಲ್ಲದಿರುವುದನ್ನು ನೋಡಿದರೆ, ಅದು ಬಹುಶಃ ಅವನ ಆರಂಭ ಪ್ರಯತ್ನವಾಗಿರಬಹುದೆಂದು ತೋರುತ್ತದೆ. ಆದರೆ, ಪ್ರತಿಮಾ ನಾಟಕದ ನಿಜ ಸ್ಥಿತಿಯು ಡಾಕ್ಟರ್. ಕೀತ್‌ರವರಿಗೆ ಸರಿಯಾಗಿ ಗೋಚರಿಸಲಿಲ್ಲವೆಂಬುದು ಸಾಹಸದ ಮಾತಾಗಬಹುದಾದರೂ, ಇಂತಹ ದೊಡ್ಡ ಪಂಡಿತರಿಗೆ ಈ ಅಭಿ ಪ್ರಾಯವು ಹುಟ್ಟಿದುದು ಆಶ್ಚರ್ಯವೆಂದೇನೋ ಖಂಡಿತವಾಗಿ ಹೇಳಬಹು ದಾಗಿದೆ. ಭಾಸನು ಮುಖ್ಯಾಂಶಗಳನ್ನು ವಾಲ್ಮೀಕಿರಾಮಾಯಣದಿಂದ ಸಂಗ್ರಹಿಸಿರುವುದೇನೋ ನಿಜ. ಆದರೆ, ಷೇಕ್ಸ್‌ಪಿಯರ್ ಮಹಾಕವಿಯು ನಾರ್ತ್ ಮುಂತಾದವರ ಗ್ರಂಥಗಳಿಂದ ತಾನು ಸಂಗ್ರಹಿಸಿದ ಪ್ರಧಾನಾಂಶ ಗಳ ಜೊತೆಗೆ ತನ್ನ ಕಲಾಕೌಶಲದ ಮಹಿಮೆಯಿಂದ ಅನೇಕ ಹೊಸ ಸಂಗತಿ

ಗಳನ್ನು ಸೇರಿಸಿ, ತಾನು ಸಂಗ್ರಹಿಸಿದ ಸಂಗತಿಗಳನ್ನೂ ತನ್ನ ಉದ್ದೇಶಕ್ಕೆ ಸರಿಹೋಗುವಂತೆ ಬದಲಾಯಿಸಿ, ಉತ್ತಮ ಗ್ರಂಥಗಳನ್ನು ರಚಿಸಿ ಸಿದ್ಧ ಗೊಳಿಸುತ್ತಿದ್ದನೆಂಬುದು ಎಲ್ಲರಿಗೂ ತಿಳಿದ ವಿಷಯ. ಪ್ರತಿಮಾ ನಾಟಕವನ್ನು ಬರೆಯುವುದರಲ್ಲಿ ಭಾಸನೂ ಕೂಡ ಇದೇ ವಿಧವಾದ ಕಲಾಕೌಶಲವನ್ನು ತೋರಿಸಿದ್ದಾನೆ. ವಸ್ತುವಿನಲ್ಲಿಯೂ, ಪಾತ್ರರಚನೆಯಲ್ಲಿಯೂ, ಎರಡರಲ್ಲಿಯೂ ಅನೇಕ ಮಾರ್ಪಾಟುಗಳನ್ನು ಮಾಡಿ ತನ್ನ ಕೈವಾಡವನ್ನು ತೋರಿಸಿದ್ದಾನೆ. ಆದಕಾರಣ, ನಾಟಕಲೇಖಕರಲ್ಲಿ ಅತ್ಯುತ್ತಮರೆನಿಸಿದವರ ಸಹಪಙ್ತಿಗೆ ಭಾಸನೂ ಅರ್ಹನೆಂಬುದನ್ನು ನಿಸ್ಸಂದೇಹವಾಗಿ ಹೇಳಬಹುದಾಗಿದೆ.

ನಾವು ಮೊದಲೇ ತಿಳಿಸಿದಂತೆ ಪ್ರತಿಮಾ ನಾಟಕವೆಂಬ ಹೆಸರೇ ಭಾಸನ ಕಲ್ಪನಾಸಾಮರ್ಥ್ಯವನ್ನು ಸೂಚಿಸುತ್ತದೆ. ಶ್ರೀಮದ್ರಾಮಾಯಣ ದಲ್ಲಿ ದಶರಥನು ಮೃತಪಟ್ಟ ಸಂಗತಿಯು ಭರತನಿಗೆ ತಿಳಿಯುವ ವಿಷಯದಲ್ಲಿ ಕಲಾಸೌಂದರ್ಯದೃಷ್ಟಿಯಿಂದ ಅತಿಶಯವೇನೂ ಇಲ್ಲ. ಈ ವಿಷಯದಲ್ಲಿ ಭಾಸನ ಸಂವಿಧಾನವೇ ಬೇರೆ. ಕಲೋಪಾಸಕನ ಅಭಿಪ್ರಾಯದಲ್ಲಿ ಅದು ಕೇವಲ ಅಭಿನಂದನೀಯವೂ ಹೌದು. ಅಯೋಧ್ಯೆಗೆ ಸಮೀಪವಾದೊಂದು ತೋಪಿನಬಳಿಯಲ್ಲಿ ಒಂದು ಪ್ರತಿಮಾಗೃಹ. ಸೂರ್ಯವಂಶದ ಅರಸರಲ್ಲಿ ಮೃತಪಟ್ಟವರ ಪ್ರತಿಮೆಗಳನ್ನೆಲ್ಲ ಅಲ್ಲಿಡುವುದು ವಾಡಿಕೆ. ದಶರಥನು ಮೃತಪಟ್ಟಕೂಡಲೆ ಅವನ ಪ್ರತಿಮೆಯನ್ನೂ ಅಲ್ಲಿದ್ದ ರಘು, ದಿಲೀಪ, ಅಜ, ಈ ಮೂವರ ಪ್ರತಿಮೆಗಳವೃಂದಕ್ಕೆ ಸೇರಿಸುತ್ತಾರೆ. ರಾಮಲಕ್ಷ್ಮಣರು ವನವಾಸಕ್ಕೆ ತೆರಳಿರುವುದರಿಂದ ರಾಜ್ಯಸೂತ್ರವನ್ನು ಸ್ವೀಕರಿಸುವುದಕ್ಕಾಗಿ ಭರತನನ್ನು ಅಯೋಧ್ಯೆಗೆ ಕರೆದುಕೊಂಡುಬರಲು ರಥವನ್ನು ಕಳುಹಿಸು ತ್ತಾರೆ. ದಶರಥನ ಮರಣವೃತ್ತಾಂತವು ಅವನಿಗೆ ತಿಳಿದಿರುವುದಿಲ್ಲ ದಶರಥನು ಅಲ್ಪಸ್ವಲ್ಪ ಅಸ್ವಸ್ಥನಾಗಿರುವನೆಂದು ಮಾತ್ರವೇ ಅವನಿಗೆ ಹೇಳುತ್ತಾರೆ. ತಾನು ಹೋಗುವವೇಳೆಗೆ ತಮ್ಮ ತಂದೆಯು ಆರೋಗ್ಯವಾಗಿರುವನೆಂದು ಭರತನಿಗೆ ಪೂರ್ಣವಾಗಿ ನಂಬಿಕೆ. ಅವನು ತನ್ನ ಮನಸ್ಸಿನಲ್ಲಿಯೇ ಹಬ್ಬವನ್ನು ಮಾಡಿಕೊಂಡು ಮಂಡಿಗೆಗಳ ರಾಶಿಯನ್ನು ಮುಂದಿಟ್ಟು ಕೊಳ್ಳುತ್ತಾನೆ. ಶೋಕವೆಂಬ ಕಾಳಸರ್ಪವು ತನ್ನನ್ನು ಅಗಿಯುವುದನ್ನು ಕಾಣದೆ ಅವನು, ತಾನು ನಮಸ್ಕರಿಸಿದಾಗ ತನ್ನ ತಂದೆಯು ಪ್ರೇಮದಿಂದ

ತಕ್ಕೈಸಿ ಆಶೀರ್ವದಿಸಿ ಮೇಲಕ್ಕೆಬ್ಬಿಸುವುದನ್ನೂ, ತನ್ನ ಸಹೋದರರು ತ್ವರೆಗೊಂಡು ಓಡಿಬರುವುದನ್ನೂ, ಮಾತೆಯರು ಚಿರಕಾಲ ತನ್ನನ್ನು ಅಗಲಿದುದಕ್ಕಾಗಿ ಕಂಬನಿದುಂಬಿ ನಿಲ್ಲುವುದನ್ನೂ, ಭೃತ್ಯರೆಲ್ಲರೂ ತನ್ನನ್ನು ಕೊಂಡಾಡುವುದನ್ನೂ, ಲಕ್ಷ್ಮಣನು ತನ್ನನ್ನು ಹಾಸ್ಯಮಾಡಿ ಪ್ರೀತಿಯಿಂದ ನಗುವುದನ್ನೂ ಊಹಿಸಿಕೊಂಡು * ಉಲ್ಲಾಸಪಡುತ್ತ ತನ್ನ ಸೋದರಮಾವನ ಮನೆಯಿಂದ ಅಯೋಧ್ಯೆಗೆ ಪ್ರಯಾಣ ಮಾಡುತ್ತಾನೆ.

ಅದನ್ನು ನೋಡಿದರೆ ನಿಟ್ಟುಸಿರುಬಿಟ್ಟು ನಗುವಂತಾಗುವುದು. ಭರತನು ಅಯೋಧ್ಯೆಯ ಬಳಿಗೆ ಬಂದಾಗ ಪುರಪ್ರವೇಶಮಾಡಲು ಇನ್ನೂ ಮುಹೂರ್ತವು ಸಮೀಪಿಸಿರುವುದಿಲ್ಲ. ಆದುದರಿಂದ ಪ್ರತಿಮಾಗೃಹದ ಬಳಿಯಲ್ಲಿರುವ ತೋಪಿನ ಸಮೀಪದಲ್ಲಿ ಅವನು ಸ್ವಲ್ಪಹೊತ್ತು ನಿರೀಕ್ಷಿಸಬೇಕಾಗುವುದು. ಆಗ ಅವನು ಪ್ರತಿಮಾ ಗೃಹಕ್ಕೆ ಹೋಗುವನು. ಅಲ್ಲಿಯ ಪ್ರತಿಮೆಗಳೊಡನೆ ತಮ್ಮ ತಂದೆಯ ಪ್ರತಿಮೆಯನ್ನೂ ನೋಡಿ ಅಪ್ರತಿಭನಾಗುವನು. ಮನಸ್ಸಿಗೆ ಏನೋ ಕಳವಳವುಂಟಾಗುವುದು. ಅವನು ಕಾವಲುಗಾರನಾದ ದೇವಕುಲಿಕನನ್ನು ಕುರಿತು “ಬದುಕಿರುವವರ ಪ್ರತಿಮೆಯನ್ನು ಇಲ್ಲಿ ಇಡುವುದುಂಟೆ?” ಎಂದು ಕೇಳುವನು. ದೇವಕುಲಿಕನು ಇಲ್ಲವೆನ್ನುವನು. ದಾರುಣವಾದ ನಿಜಸ್ಥಿತಿಯನ್ನು ತಿಳಿಯಲು ಮತ್ತೇನುಬೇಕು? ಭರತನು ಶೋಕದ ಆವೇಗದಿಂದ—ತಾನು ಸುಖದ ಸ್ವಪ್ನಗಳನ್ನು ಕಾಣುತ್ತಿರುವಾಗ ಹಠಾತ್ತಾಗಿ ತನ್ನನ್ನು ಆಹತನನ್ನಾಗಿಮಾಡಿದ ಶೋಕದ ಆವೇಗದಿಂದ—ಕೂಡಿ, ತನ್ನ ದುರ್ದೈವವನ್ನು ಹಳಿದುಕೊಳ್ಳುವನು. ಇದೆಲ್ಲ ಕವಿಯೇ ಸ್ವಂತವಾಗಿ ಕಲ್ಪಿಸಿರುವ ಕಥಾಭಾಗ. ಭರತನಿಗೆ ಇನ್ನೂ ಹೆಚ್ಚಿನ ದುಃಖವು ಕಾದಿದೆ. ರಾಮಲಕ್ಷ್ಮಣರೂ, ಸೀತಾದೇವಿಯೂ ವನವಾಸಕ್ಕೆ ಹೋದುದಕ್ಕೆ ತನ್ನ ತಾಯಿಯಾದ ಕೈಕೆಯಿಯೇ ಕಾರಣಳೆಂಬುದು ಅವನಿಗೆ ದೇವ

---

* “ಪತಿತಮಿವ ಪಿತುಃಪಾದಯೋಃ ಸ್ನಿಹ್ಯತೇವಾಸ್ಮಿ ರಾಜ್ಞಾ ಸಮುತ್ಥಾಪಿತಃ
ತ್ವರಿತಮುಪಗತಾ ಇವ ಭ್ರಾತರಃ ಕ್ಲೇದಯನ್ತೀವ ಮಾಮಶ್ರುಭಿರ್ಮಾತರಃ ।
ಸದೃಶ ಇತಿ ಮಹಾನಿತಿ ವ್ಯಾಯತಶ್ಚೇತಿ ಭೃತ್ಯೈರಿವಾಹಂಸ್ತುತಃ ಸೇವಯಾ
ಪರಿಹಸಿತಮಿವಾತ್ಮನಸ್ತತ್ರ ಪಶ್ಯಾಮಿ ವೇಷಂ ಚ ಭಾಷಾಂ ಚ ಸೌಮಿತ್ರಿಣಾ ॥”

ಕುಲಿಕನಿಂದ ತಿಳಿಯುವುದು. ಅವನು ದುಃಖವನ್ನು ತಾಳಲಾರದೆ ಮೂರ್ಛಿತನಾಗಿ ಕೆಳಗೆಬೀಳುವನು. ಪ್ರತಿಮಾಗೃಹಕ್ಕೆ ಬಂದ ದೇವಿಯರು (ಕೌಸಲ್ಯೆ, ಸುಮಿತ್ರೆ, ಕೈಕೆಯಿ) ಅವನನ್ನು ಸಂತೈಸುವರು.

ಭಾಸನು ಸಿದ್ಧಿಹೊಂದಿದ ನಾಟಕ ಕಲೆಯ ಉಪಾಸಕನೆಂಬುದಕ್ಕೆ ಪ್ರತಿಮಾ ನಾಟಕದ ಮೊದಲನೆಯ ದೃಶ್ಯವೇ ತಕ್ಕಷ್ಟು ನಿದರ್ಶನವನ್ನೊದಗಿಸುವುದು. ಅದರಲ್ಲಿಯ ಸಂಗತಿಗಳೆಲ್ಲ ಭಾಸನಿಂದಲೇ ಕಲ್ಪಿತವಾದವುಗಳು. ಜ್ಯೂಲಿಯಸ್ ಸೀಸರ್ ನಾಟಕದಲ್ಲಿ ಮೊಟ್ಟಮೊದಲನೆಯ ದೃಶ್ಯಕ್ಕೆ (ಸೀನ್) ಎಷ್ಟು ಪ್ರಾಮುಖ್ಯತೆಯುಂಟೋ, ಇದಕ್ಕೂ ಅಷ್ಟೇ ಪ್ರಾಮುಖ್ಯತೆಯುಂಟೆನ್ನಬಹುದು. ಅವದಾತಿಕೆಯೆಂಬ ಚೇಟಿಯು ತಂದಿದ್ದ ವಲ್ಕಲವನ್ನು ತಾನು ಧರಿಸಿದರೆ ಹೇಗಿರುವುದೋ ನೋಡಬೇಕೆಂದು ಸೀತಾದೇವಿಗೆ ಕುತೂಹಲವಾಗಿ ಅವಳು ವಲ್ಕಲವನ್ನು ಧರಿಸುವುದನ್ನು ನೋಡಿದರೆ, ಆತಂಕ ಮಿಶ್ರವಾದ ಮತ್ತು ಅನಿರ್ವಚನೀಯವಾದ ಕಳವಳವುಂಟಾಗುತ್ತದೆ. ಅಂದು, ರಾಮನಿಗೆ ಪಟ್ಟಾಭಿಷೇಕವಾಗಬೇಕಾದ ಶುಭದಿವಸ. ಅಂತಹ ದಿವಸ ಸೀತಾದೇವಿಯು ವಲ್ಕಲವನ್ನುಡುವುದೆಂದರೆ ಕೇವಲ ಆತಂಕಕ್ಕೆ ಕಾರಣ. ಮುಂದೇನಾಗುವುದೋ ಎಂಬುದಾಗಿ ನಮ್ಮ ಮನಸ್ಸಿನಲ್ಲಿ ಭೀತಿಯೂ, ತವಕವೂ, ಉಂಟಾಗುವುವು. ವಲ್ಕಲವು ಮುನಿಜನೋಚಿತವಾದುದು. ಕಾಡಿನಲ್ಲಿದ್ದುಕೊಂಡು ತಪೋನಿಷ್ಠೆಯಿಂದಿರುವವರು ಧರಿಸಬೇಕಾದುದು. ಆದಕಾರಣ, ಸೀತಾದೇವಿಯು ವಲ್ಕಲವನ್ನು ಧರಿಸುವುದನ್ನು ನೋಡಿದರೆ, ಪರಿಣಾಮದಲ್ಲಿ ಅಭಿಷೇಕವು ನಡೆಯುವುದೋ ಇಲ್ಲವೋ ಏನೋ ಎಂಬುದಾಗಿ ನಮ್ಮ ಮನಸ್ಸಿನಲ್ಲಿ ಶಂಕೆಯುಂಟಾಗುವುದು. ಹೀಗೆ, ಮುಂದೆ ನಡೆಯುವುದರ ಅಂಕುರವೇ ಅತಿಸೂಕ್ಷ್ಮವಾಗಿ ಕಲಾಭಿಜ್ಞತೆಯಿಂದ ಸೂಚಿತವಾಗಿರುವುದು. ಇದರ ಮೇಲೋ, ಶ್ರೀರಾಮನಿಗೆ ಪಟ್ಟಾಭಿಷೇಕವಾಗುವುದೆಂಬ ಸುದ್ದಿಯು ಸೀತೆಯ ಕಿವಿಗೆ ಬಿದ್ದೊಡನೆಯೇ "ತಂದೆ ದಶರಥನು ಕ್ಷೇಮದಿಂದಿರುವನಷ್ಟೆ ?" (ಅವಿ ತಾದೋ ಕುಸಳೀ) ಎಂದು ಕೇಳುವಳು. ಇದರಿಂದ ವ್ಯಂಗ್ಯವಾಗಿ ದುಃಖಸೂಚನೆಯುಂಟಾಗುವುದು. ಶ್ರೀರಾಮನು ವನವಾಸಕ್ಕೆ ಹೊರಡಬೇಕೆಂಬುದು ಮುಂದೆ ನಮಗೆ

ತಿಳಿಯುತ್ತದೆ. ಸೀತೆಯೂ, ಲಕ್ಷ್ಮಣನೂ, ಅವನೊಡನೆ ಹೊರಡಲು ಸಿದ್ಧ ವಾಗುವರು. ರಾಮನು ವಲ್ಕಲವನ್ನು ಧರಿಸಬೇಕು. ಆ ವೇಳೆಗೆ ಸರಿಯಾಗಿ ಸಂಗೀತ ಶಾಲೆಯಿಂದ ಹೊಸ ವಲ್ಕಲವು ಬರುವುದು. ಇಲ್ಲಿಕೂಡ, ಭಾಸನ ತನ್ನ ಕಲಾಕೌಶಲವನ್ನು ತೋರಿಸಿಬಿಟ್ಟಿದ್ದಾನೆ. ಸೀತಾದೇವಿಯು ವಿಲಾಸಾರ್ಥವಾಗಿ ಹಳೆಯ ವಲ್ಕಲವನ್ನು ಧರಿಸಿದುದನ್ನು ಕೇಳಿ, ಆರ್ಯರೇವೆಯು ಅರಮನೆಯ ರಂಗಸ್ಥಳದಲ್ಲಿ ಯಾರೂ ಧರಿಸದೇ ಇದ್ದ ನೂತನ ವಲ್ಕಲವನ್ನು ಕಳುಹಿಸುವಳು. ಅದನ್ನು ರಾಮನು ಧರಿಸುವನು. ರಾಮಾಯಣದಲ್ಲಿ ಕೈಕೆಯಿಯೇ ವಲ್ಕಲಗಳನ್ನು ಕೊಡುವಂತೆ ಚಿತ್ರಿತವಾಗಿದೆ.

ಎರಡನೆಯ ಅಂಕದಲ್ಲಿ ದಶರಥನ ಶೋಕವನ್ನು ಚಿತ್ರಿಸುವುದರಲ್ಲಂತು, ಭಾಸನು ಕರುಣಾರಸದ ಚರಮಸೀಮೆಯನ್ನು ಮುಟ್ಟಿದ್ದಾನೆ. ರಾಮಾಯಣ ದಲ್ಲಿರುವ ಸಂಗತಿಗಳನ್ನೇ ತೆಗೆದುಕೊಂಡು ಭವ್ಯವಾದ ತನ್ನ ಕಲ್ಪನಾ ಸಾಮರ್ಥ್ಯದಿಂದ ಅವುಗಳ ಜೋಡಣೆಯಲ್ಲಿ ವಿಶೇಷ ಚಾತುರ್ಯವನ್ನು ತೋರಿಸಿ, ಹೊಸ ಸಂಗತಿಗಳನ್ನು ಸೇರಿಸುವುದರಲ್ಲಿ ತನ್ನ ಕೌಶಲವನ್ನು ಬೀರಿ, ಶೋಕರಸವನ್ನು ಪುಷ್ಟಿಗೊಳಿಸಿ, ಅದು ಪ್ರೇಕ್ಷಕರ ಮನಸ್ಸನ್ನಾವರಿಸುವಂತೆ ಮಾಡಿದ್ದಾನೆ. ಇದನ್ನು ರಂಗಸ್ಥಳದಲ್ಲಿ ಪ್ರದರ್ಶಿಸಿದರೆ ಮನಸ್ಸಿನ ಮೇಲೆ ಉಂಟಾಗುವ ಪರಿಣಾಮವು ಹಾಗಿರಲಿ. ನಾಟಕವನ್ನು ಸುಮ್ಮನೆ ಓದತೊಡಗಿದರೇ ಸಾಕು. ವಾಚಕರೆದುರಿಗೆ ದಶರಥನೇ ನಿಂತು ಪ್ರಲಾಪಿಸುತ್ತಿದ್ದಂತೆ ತೋರುತ್ತದೆ. ಈ ದೃಶ್ಯಕ್ಕೆ ಹೋಲಿಸುವ ದೃಶ್ಯವು ಪ್ರಪಂಚದ ಸಾಹಿತ್ಯ ದಲ್ಲಿದ್ದರೆ, ಅದು ಷೇಕ್ಸ್‌ಪಿಯರ್ ಕವಿಯ ಕಿಂಗ್ ಲಿಯರ್ ನಾಟಕದಲ್ಲಿಯ ಹೃದಯ ವಿದ್ರಾವಕವಾದ ದೃಶ್ಯವೊಂದೇ. ಲಿಯರ್ ದೊರೆಯು ಹುಚ್ಚ ನಾಗಿ, ತನ್ನ ಮಗಳಾದ ಕಾರ್ಡೀಲಿಯಳನ್ನು ನೋಡಿಯೂ, ಅವಳೇ ಕಾರ್ಡೀಲಿಯಳು ಹೌದೋ ಅಲ್ಲವೋ ಎಂದು ಸಂಶಯಪಡುವ ದೃಶ್ಯವನ್ನು ಮಾತ್ರವೇ ಅದಕ್ಕೆ ಹೋಲಿಸಬಹುದು. ದಶರಥನ ಶೋಕವು ಮಿತಿ ಮೀರಿರುವುದು. ಅವನಿಗೆ ಆಗಲೇ ಅರೆವಾಸಿ ಹುಚ್ಚು ಹಿಡಿದಿರುವುದು. ಅವನ ಬುದ್ಧಿಶಕ್ತಿಯೂ ಶೋಕಾಗ್ನಿಯಲ್ಲಿ ಬೆಂದುಹೋಗುವುದು. ಅವನು ತನ್ನ ಸುತ್ತಲೂ ಜನರು ಇರುವುದನ್ನು ನೋಡುವನು. ಆದರೆ, ಅವನಿಗೆ ಯಾರೊಬ್ಬರನ್ನು ಗುರುತಿಸುವುದಕ್ಕೂ ಆಗದು. ಅವನ ಈ ಸ್ಥಿತಿಯನ್ನು

ನೋಡಿದರೆ ನಮಗೆ ಕೀಟ್ಸ್ ಕವಿಯು ಇಸಾಬೆಲ್ಲಳ ಸ್ಥಿತಿಯನ್ನು ವರ್ಣಿಸಿರುವುದು ಜ್ಞಾಪಕಕ್ಕೆ ಬರುವುದು. ಪಾಪ! ತನ್ನ ಇನಿಯನು ಮೃತಪಟ್ಟುದಕ್ಕಾಗಿ ಅವಳು ವಿಶೇಷ ದುಃಖಪಟ್ಟು, ಸೂರ್ಯ ಚಂದ್ರರನ್ನು ನೋಡಿಯೂ ಗುರುತಿಸಲಾರದೆ ಹೋದಳಂತೆ. ದಶರಥನು ಕೌಸಲ್ಯೆಯನ್ನು ನೋಡಿ, "ನೀನು ಯಾರು?" * ಎಂದು ಕೇಳುವನು. ಅವಳು ತಾನು ಕೌಸಲ್ಯೆಯೆಂದು ತಿಳಿಸುವಳು. ಆಗ ಅವನು ಆಶ್ಚರಿಗೊಂಡು † "ಏನು, ಏನು, ಸಮಸ್ತಜನರ ಹೃದಯಕ್ಕೂ, ಕಣ್ಣುಗಳಿಗೂ, ಆಹ್ಲಾದಕರನಾದ ರಾಮನ ಜನನಿಯಾದ ಕೌಸಲ್ಯೆಯು ನೀನೇಯೆ?" ಎಂದು ಕೇಳುವನು. ಆ ಬಳಿಕ ಅವನು ಸುಮಿತ್ರೆಯನ್ನು ನೋಡಿ, ಅವಳನ್ನೂ ಗುರುತಿಸಲಾರದೆ, "ಇಲ್ಲಿರುವ ಮತ್ತೊಬ್ಬಳು, ಇವಳಾರು?" § ಎಂದು ಕೇಳುವನು, ಕೌಸಲ್ಯೆಯು ಅವಳು ಲಕ್ಷ್ಮಣನ ತಾಯಿಯಾದ ಸುಮಿತ್ರೆಯೆಂದು ಹೇಳತೊಡಗಿ "ಮಹಾರಾಜ! ವತ್ಸ ಲಕ್ಷ್ಮಣ............" ಎನ್ನುವಳು. ಅವಳು ಮುಂದಣ ಮಾತುಗಳನ್ನಾಡುವಷ್ಟರಲ್ಲಿಯೇ-ವತ್ಸ ಲಕ್ಷ್ಮಣನೆಂಬ ಮಾತು ಅವಳ ಬಾಯಿಂದ ಹೊರಟೊಡನೆಯೇ—ದಶರಥನು ಉತ್ಸಾಹಭರದಿಂದ "ಎಲ್ಲಿ ಅವನು—ಎಲ್ಲಿ ಅವನು—ಲಕ್ಷ್ಮಣನೆಲ್ಲಿ? ಲಕ್ಷ್ಮಣನು ಕಾಣಲೇ ಇಲ್ಲವಲ್ಲ. ಅಯ್ಯೋ ಕಷ್ಟ, ಕಷ್ಟ" ‡ ಎನ್ನುವನು. ಆಗ, ಕೌಸಲ್ಯೆಯು ತಾನು ಏನನ್ನು ಹೇಳಬೇಕೆಂದಿದ್ದಳೆಂಬುದನ್ನು ತಿಳಿಸುವಳು. ವನವಾಸಕ್ಕೆ ಹೊರಟ ರಾಮಲಕ್ಷ್ಮಣರನ್ನೂ, ಸೀತೆಯನ್ನೂ, ರಥದಲ್ಲಿ ಕುಳ್ಳಿರಿಸಿಕೊಂಡು ಹೋಗಲು ಅವರನ್ನು ಹಿಂಬಾಲಿಸಿದ್ದ ಸುಮಂತ್ರನು ಹಿಂತಿರುಗಿ ಬಂದಿರುವನೆಂದು ಅಷ್ಟರಲ್ಲ ವಾರ್ತೆಬರುವುದು. ದಶರಥನು ಎಷ್ಟೋ ಆಶೆಯಿಂದ "ರಾಮನೊಡನೆಯೆ?" ("ಅಪಿ ರಾಮೇಣ") ಎಂದು ಕೇಳುವನು. ಬರಿಯ ರಥವು ಬಂದಿರುವುದೆಂದು ಉತ್ತರವು ಬರುವುದು. ದಶರಥನ ಹೃದಯದಲ್ಲಿ ಶೋಕಜ್ವಾಲೆಯು ಏಳುವುದು. "ರಥವು ಬರಿದಾಗಿ ಬಂದಿದ್ದರೆ ನನ್ನ

---

* "ಕಾ ತ್ವಂ ಭೋಃ।"

† "ಕಿಂ, ಕಿಂ, ಸರ್ವಜನಹೃದಯ ನಯನಾಭಿರಾಮಸ್ಯ ರಾಮಸ್ಯ ಜನನೀ ತ್ವಮಸಿ ಕೌಸಲ್ಯಾ?"

§ "ಇಯಮಪರಾ ಕಾ?"

‡ "ಕ್ವಾಸೌ, ಕ್ವಾಸೌ ಲಕ್ಷ್ಮಣಃ। ನದೃಶ್ಯತೇ, ಭೋಃ ಕಷ್ಟಮ್!"

ಮನೋರಥವೂ ಭಗ್ನವಾಯಿತು. ನಿಜವಾಗಿಯೂ ಈ ರಥವು ದಶರಥನನ್ನು ಕರೆದುಕೊಂಡು ಹೋಗಲು ಯಮನು ಕಳುಹಿಸಿರುವ ರಥವೇ ಸರಿ'' * ಎನ್ನುವನು.

ಇದು ಎಷ್ಟು ಸಂತಾಪಕರವಾಗಿದೆ! ಸುಮಂತ್ರನು ತನ್ನ ಬಳಿಗೆ ಬಂದಮೇಲೆ ದಶರಥನು "ರಾಮ ಲಕ್ಷ್ಮಣ ವೈದೇಹಿಯರೆಲ್ಲಿ? ಮರಣ ಕಾಲವು ಸಮೀಪಿಸುತ್ತಿರುವ--ಸಕಲ ಜನರನ್ನೂ ದುಃಖಾರ್ಣವದಲ್ಲಿ ಮುಳುಗಿಸುವಂತಹ-ಸಮಾಚಾರವನ್ನೇನಾದರೂ ಅವರು ಹೇಳಿ ಕಳುಹಿಸಿರುವರೆ?'' ಎಂದು ಕೇಳುವನು. ಸುಮಂತ್ರನು "ಮಹಾರಾಜ, ಹೀಗೆ ಅಮಂಗಳ ವಚನಗಳನ್ನಾಡುವುದು ಯುಕ್ತವಲ್ಲ. ನೀನು ಸ್ವಲ್ಪ ಕಾಲದಲ್ಲಿಯೇ ಅವರನ್ನು ನೋಡುವೆ'' ಎನ್ನುವನು. ಇದಕ್ಕೆ ದಶರಥನು "ನೀನು ಹೇಳಿದುದು ನಿಜ; ಇದು ತಪಸ್ವಿಜನೋಚಿತವಾದ ಪ್ರಶ್ನೆಯಲ್ಲ. ಹಾಗಾದರೆ ಹೇಳು. ತಪಸ್ವಿಗಳ ತಪಸ್ಸು ವರ್ಧಿಸುತ್ತಿರುವುದೆ?.........'' ಎಂದು ಮುಂತಾಗಿ ಹೇಳುವ ಉತ್ತರವು ಕೇವಲ ದುಃಖಕರವಾದುದು. ಸುಮಿತ್ರೆಯು ಸುಮಂತ್ರನನ್ನು ಕುರಿತು "ವೈದೇಹಿಯು ತಮ್ಮನ್ನೂ, ಮಹಾರಾಜನನ್ನೂ ಸ್ಮರಿಸಿಕೊಂಡಳೆ?'' ಎಂದು ಕೇಳುವಳು. ಎಲ್ಲರೂ ಮಹಾರಾಜನನ್ನು ಸ್ಮರಿಸಿಕೊಂಡರೆಂದು ಅವನು ಉತ್ತರ ಹೇಳುವನು. ದಶರಥನು ಅವರ ಹೆಸರುಗಳನ್ನೇ ಹೇಳಿ ಶ್ರುತಪಡಿಸಬೇಕೆನ್ನುವನು. ಸುಮಂತ್ರನು ಆರೀತಿ ಮಾಡುವನು. ‡

---

* "ಶೂನ್ಯಃ ಪ್ರಾಪ್ತೋ ಯದಿ ರಥೋ ಮಮಭಗ್ನೋ ಮನೋರಥಃ।
ನೂನಂ ದಶರಥಂ ನೇತುಂ ಕಾಲೇನ ಪ್ರೇಷಿತೋ ರಥಃ॥"

‡ ಸುಮಂತ್ರ:—"ಆಯುಷ್ಮಾನ್ ರಾಮಃ"

ದಶರಥ:—"ರಾಮ ಇತಿ. ಅಯಂ ರಾಮಃ. ತನ್ನಾಮಶ್ರವಣಾತ್ ಸ್ಪೃಷ್ಟ ಇವ ಮೇ ಪ್ರತಿಭಾತಿ। ತತಸ್ತತಃ" (ರಾಮನೆಂದೋ. ಇದೋ ರಾಮ. ಅವನ ಹೆಸರನ್ನು ಕೇಳಿದುದರಿಂದ ಅವನು ನನ್ನನ್ನು ಸ್ಪರ್ಶಿಸಿದಂತೆ ತೋರುತ್ತದೆ. ಆಮೇಲೆ ಆಮೇಲೆ)

ಸುಮಂತ್ರ:—"ಆಯುಷ್ಮಾನ್ ಲಕ್ಷ್ಮಣಃ"

ದಶರಥ:—"ಅಯಂ ಲಕ್ಷ್ಮಣಃ। ತತಸ್ತತಃ।"

ಸುಮಂತ್ರ:—"ಆಯುಷ್ಮತೀ ಸೀತಾ ಜನಕ ರಾಜಪುತ್ರೀ."

ಸುಮಂತ್ರನು ರಾಮ ಲಕ್ಷ್ಮಣ ವೈದೇಹಿಯೆಂಬ ಕ್ರಮದಲ್ಲಿ ಅವರ ಹೆಸರುಗಳನ್ನು ಶ್ರುತಪಡಿಸಿದುದು ಸರಿಯಲ್ಲವೆಂದೂ, ಅರಣ್ಯವು ಕ್ರೂರಮೃಗಗಳೇ ಮುಂತಾದವುಗಳಿಂದ ಕೂಡಿ ಬಹು ದೋಷಯುಕ್ತವಾದುದರಿಂದ ವೈದೇಹಿಯು ಸುರಕ್ಷಿತವಾಗಿರಲನುಕೂಲಿಸುವಂತೆ ಅವಳು ರಾಮಲಕ್ಷ್ಮಣರ ಮಧ್ಯದಲ್ಲಿರಬೇಕೆಂದೂ, ಈ ಹೊಸಕ್ರಮದಲ್ಲಿ ಅವರುಗಳ ಹೆಸರನ್ನು ತಿಳಿಸಬೇಕೆಂದೂ, ದಶರಥನು ಅವನಿಗೆ ಹೇಳುವನು. ಆ ಬಳಿಕ ಸುಮಂತ್ರನು ಮತ್ತೆ ಹಾಗೆ ಮಾಡುವನು; ಮೊದಲು ರಾಮನ ಹೆಸರನ್ನೂ, ಆಬಳಿಕ ಸೀತೆಯ ಹೆಸರನ್ನೂ, ಕೊನೆಗೆ ಲಕ್ಷ್ಮಣನ ಹೆಸರನ್ನೂ ತಿಳಿಸುವನು. ಆ ವೇಳೆಗೆ ಅವರು ಮೂವರೂ ತನ್ನೆದುರಿಗಿರುವಂತೆ ಭಾವಿಸಿಕೊಂಡು ದಶರಥನು ಅವರು ನನ್ನನ್ನು ಆಲಿಂಗಿಸಿಕೊಳ್ಳುವಂತೆ ಕೇಳಿ, "ಅಯಂ ಲಕ್ಷ್ಮಣಃ, ರಾಮ, ವೈದೇಹಿ, ಲಕ್ಷ್ಮಣ, ಪರಿಷ್ವಜಧ್ವಂ ಮಾಂ ಪುತ್ರಕಾಃ" ಎಂದು ಹೇಳುವುದನ್ನು ನೋಡಿ ವಾಚಕರ (ಅಥವಾ ಪ್ರೇಕ್ಷಕರ) ಹೃದಯವೇ ಕಲಕಿ ಹೋಗುವುದು.

ಅಂತು, ಎರಡನೆಯ ಅಂಕದಲ್ಲಿ ಪ್ರತಿಯೊಂದು ಪಙ್ಕ್ತಿಯೂ ಭಾಸನ ಕಲ್ಪನಾಸಾಮರ್ಥ್ಯವನ್ನೂ, ನಾಟಕ ಲೇಖನಾ ವೈಖರಿಯನ್ನೂ ತೋರಿಸುವುದು. ಅಂಕವು ಮುಗಿಯುತ್ತ ಬರುವವೇಳೆಗೆ ದಶರಥನ ಸ್ಥಿತಿಯು ಪ್ರತೀಕಾರಕ್ಕೆ ಸಾಧ್ಯವಿಲ್ಲದೆ ಕೈಮೀರುವುದು. ಅವನು ತನ್ನನ್ನು ಸಮಾಧಾನ ಮಾಡಲು ತನ್ನ ಪಿತೃಗಳು ಬಂದಿರುವರೆಂದು ಭಾವಿಸಿಕೊಂಡು "ಅದೋ! ರಾಮ ಕಥಾಶ್ರವಣ ಸಂದಗ್ಧ ಹೃದಯನಾದ ನನ್ನನ್ನು ಸಂತೈಸಲು ಪಿತೃಗಳು ಬಂದಿರುವರು" * ಎಂದು ಹೇಳುವನು.

ಇದು ಅವನ ಮನಸ್ಸಿನ ಭ್ರಾಂತಿಯ ಮಾತ್ರವೇ. ಷೇಕ್ಸ್‌ಪಿಯರ್ ಕವಿಯ ನಾಟಕದಲ್ಲಿ ಮ್ಯಾಕ್ಬೆತ್ ಡಂಕನನೆಂಬವನನ್ನು ಕೊಲ್ಲಲಾರದೆಯೂ, ಕೊಲ್ಲದೆ ಇರಲಾರದೆಯೂ, ಕಳವಳಪಡುತ್ತಿರುವಾಗ ಕಠಾರಿಯನ್ನು ಕಂಡಂತೆ ಭಾವಿಸಿಕೊಳ್ಳುವಂತೆಯೇ, ದಶರಥನು ಪಿತೃಗಳನ್ನು ಕಂಡಂತೆ

---

* "ಅಯೇ ರಾಮ ಕಥಾಶ್ರವಣ ಸಂದಗ್ಧಹೃದಯಂ ಮಾಮಾಶ್ವಾಸಯಿತು ಮಾಗತಾಃ ಪಿತರಃ।"

ಭಾವಿಸಿಕೊಂಡು, ಶುದ್ಧಾಚಮನಮಾಡಿ “ ಇದೋ, ಇಂದ್ರಸಖನಾದ ದಿಲೀಪನು (ಇಲ್ಲಿರುವನು); ಇದೋ ರಘುಮಹಾರಾಜನು (ಇಲ್ಲಿರುವನು) ; ನನ್ನ ತಂದೆಯಾದ ಪೂಜ್ಯನಾದ ಅಜನು ಇದೋ, (ಇಲ್ಲಿರುವನು); ನೀವುಗಳೆಲ್ಲರೂ ಇಲ್ಲಿಗೆ ಬಂದ ಕಾರಣವೇನು? ನಾನು ತಮ್ಮೊಡನೆ ಸೇರಿಕೊಳ್ಳುವ ಕಾಲವೂ ಬಂದಿದೆ.” § ಎಂದು ಹೇಳುವನು. ಒಡನೆಯೇ ರಾಮ, ವೈದೇಹಿ, ಲಕ್ಷ್ಮಣ, ನಾನು ಇಲ್ಲಿಂದ ಪಿತೃಗಳ ಬಳಿಗೆ ಹೋಗುವೆನು. ಎಲೈ ಪಿತೃಗಳಿರಾ! ಇದೋ, ಇದೋ, ಬಂದೆ.” † ಎಂದು ಹೇಳಿ ಮೂರ್ಛಿತನಾಗುವನು. ಅಭಿನಯ ದೃಷ್ಟಿಯಿಂದಲೂ, ಭಾವಪುಷ್ಟಿಯ ದೃಷ್ಟಿಯಿಂದಲೂ, ಈ ಅಂಕವನ್ನು ಷೇಕ್ಸ್‌ಪಿಯರ್ ಕವಿಯ ನಾಟಕಗಳಲ್ಲಿಯ ಉತ್ತಮ ದೃಶ್ಯಗಳೊಡನೆ, ಅದರಲ್ಲಿಯೂ ಮುಖ್ಯವಾಗಿ ನಾವು ಮೊದಲೇ ಅರಿಕೆಮಾಡಿರುವಂತೆ ಲಿಯರ್ ದೊರೆಯು ಹೃದಯ ವಿದಾರಕವಾದ ನುಡಿಗಳನ್ನಾಡುತ್ತ ‡ ತನ್ನ ಮಗಳಾದ ಕಾರ್ಡೀಲಿಯಳನ್ನು ನೋಡುವ ದೃಶ್ಯದೊಡನೆ ಹೋಲಿಸ ಬಹುದಾಗಿದೆ. ಈ ಅಂಕವು ಮುಗಿದೊಡನೆಯೇ ಶೋಕದಿಂದ ಕುಗ್ಗಿದ ಪ್ರೇಕ್ಷಕರ ಮನಸ್ಸನ್ನು ಸ್ವಲ್ಪ ಉಲ್ಲಾಸಗೊಳಿಸಲು, ಸುಧಾಕಾರನಿಗೂ ಅವನ ಯಜಮಾನನಾದ ಭಟನಿಗೂ ನಡೆಯುವ ಹಾಸ್ಯರಸಯುಕ್ತವಾದ ಸಂಭಾಷಣೆಯು ಚಿತ್ರಿತವಾಗಿದೆ. ಮೂರನೆಯ ಅಂಕದಲ್ಲಿ ಮುಖ್ಯವಾಗಿ ಭರತನು ಪ್ರತಿಮಾಗೃಹಕ್ಕೆ ಹೋದ ವಿಚಾರವೇ ವರ್ಣಿತವಾಗಿದೆ. ಅದರ ವಿಷಯದಲ್ಲಿ ನಾವು ಕೆಲವು ಸಂಗತಿಗಳನ್ನು ಈ ಮೊದಲೇ ಬಿನ್ನವಿಸಿದ್ದೇವೆ. ಭಾಸನು

---

§ “ ಅಯಮಮರಪತೇಃ ಸಖಾ ದಿಲೀಪೋ, ರಘುರಯಮತ್ರಭವಾನಜಃ ಪಿತಾಮೇ |
ಕಿಮಭಿಗಮನಕಾರಣಂ ಭವದ್ಭಿಃ ಸಹವಸನೇ ಸಮಯೋ ಮಮಾಪಿ ತತ್ರ ||”

† “ ರಾಮ ವೈದೇಹಿ ಲಕ್ಷ್ಮಣ ಅಹಮಿತಃ ಪಿತೄಣಾಂ ಸಕಾಶಂ ಗಚ್ಛಾಮಿ | ಹೇ ಪಿತರಃ ಅಯಮಯಮಾಗಚ್ಛಾಮಿ ||

‡ .......... Do not laugh at me,
For as I am a man
I think this lady to be my child Cordelia.”

ಮುಖ್ಯ ಸಂಗತಿಗಳನ್ನು ವಾಲ್ಮೀಕಿ ರಾಮಾಯಣದಿಂದ ಸ್ವೀಕರಿಸುವ ಸನ್ನಿವೇಶಗಳಲ್ಲಿಯೂ ಕೂಡ, ಅವುಗಳನ್ನು ಚಿತ್ರಿಸುವುದರಲ್ಲಿ ಒಂದು ನವೀನ ರೀತಿಯನ್ನನುಸರಿಸಿ ನಮ್ಮ ಮನಸ್ಸನ್ನೇ ಮುಗ್ಧಗೊಳಿಸಿದ್ದಾನೆ.

ಸೀತಾಪಹರಣವು ರಾಮಾಯಣದಲ್ಲಿಯೂ ಹೇಳಿದೆ; ಪ್ರತಿಮಾ ನಾಟಕದಲ್ಲಿಯೂ ಹೇಳಿದೆ. ಆದರೆ ಯಾವ ಸಂದರ್ಭಗಳಲ್ಲಿ ಅದು ನಡೆಯಿತೆಂಬ ವಿಷಯದಲ್ಲಿ ಭಾಸನು ಮನೋಜ್ಞವಾದ ಮಾರ್ಪಾಡುಗಳನ್ನು ಮಾಡಿದ್ದಾನೆ. ರಾಮಾಯಣದಲ್ಲಿ ರಾವಣನ ಕೋರಿಕೆಯ ಪ್ರಕಾರ ಅವನ ಸೋದರಮಾವನಾದ ಮಾರೀಚನು ಸುವರ್ಣಮೃಗದ ರೂಪವನ್ನು ತಾಳಿ, ರಾಮನ ಪರ್ಣಶಾಲೆಯ ಬಳಿಯಲ್ಲಿ ಸುಳಿದಾಡುತ್ತಾನೆ. ಸೀತೆಯು ಅದನ್ನು ತನಗೆ ತಂದುಕೊಡಬೇಕೆಂದು ಕೇಳುತ್ತಾಳೆ. ರಾಮನು, ಆಶ್ರಮದಲ್ಲಿ ಲಕ್ಷ್ಮಣನನ್ನು ಕಾವಲಿಟ್ಟು, ತಾನು ಜಿಂಕೆಯನ್ನು ಹಿಂಬಾಲಿಸಿಕೊಂಡು ಹೊರಡುತ್ತಾನೆ. ಮಾರೀಚನು ಬಹುದೂರ ರಾಮನನ್ನು ಸೆಳೆದೊಯ್ದು, ಕೊನೆಗೆ ರಾಮಬಾಣದಿಂದ ಗಾಯಹೊಂದಿ 'ಹಾ ಸೀತೆ! ಹಾ ಲಕ್ಷ್ಮಣ!' ಎಂದು ಕೂಗಿ ಮೃತಪಡುತ್ತಾನೆ. ಸೀತೆಯು ಆ ಧ್ವನಿಯನ್ನು ಕೇಳಿ, ರಾಮನಿಗೆ ವಿಪತ್ತು ಸಂಭವಿಸಿರುವಂತೆ ಬಗೆದು, ಅವನ ಸಹಾಯಾರ್ಥವಾಗಿ ಲಕ್ಷ್ಮಣನು ಹೋಗಬೇಕೆಂದು ಬಯಸುತ್ತಾಳೆ. ಲಕ್ಷ್ಮಣನು ರಾಮನ ಪರಾಕ್ರಮವನ್ನು ವರ್ಣಿಸಿ, ಅವನಿಗೆಂದಿಗೂ ವಿಪತ್ತುಂಟಾಗಿಲ್ಲವೆಂದೂ, ತಾನು ಅಣ್ಣನ ಆಜ್ಞೆಯನ್ನು ಮೀರಲೊಲ್ಲೆನೆಂದೂ, ತಿಳಿಸುತ್ತಾನೆ. ಸೀತೆಯು ಕುಪಿತಳಾಗಿ ಅವನನ್ನು ಮನಸ್ಸುಬಂದಂತೆ ದೂಷಿಸಿ, ಅವನು ದುರುದ್ದೇಶದಿಂದ ಹಾಗೆ ಹೇಳಿದುದಾಗಿ ಹಳಿಯುತ್ತಾಳೆ. ಕೊನೆಗೆ, ನಿರ್ವಾಹವಿಲ್ಲದೆ, ಲಕ್ಷ್ಮಣನು ಆಶ್ರಮದಿಂದ ಹೊರಟುಹೋಗುತ್ತಾನೆ. ರಾವಣನು ಈ ಸಮಯವು ಸಿಕ್ಕಿದರೆ ಸಾಕೆಂದಿದ್ದು, ಆಶ್ರಮಕ್ಕೆ ಸಂನ್ಯಾಸಿ ವೇಷದಲ್ಲಿ ಬಂದು ಸೀತೆಯನ್ನು ಹೊತ್ತುಕೊಂಡು ಓಡಿಹೋಗುತ್ತಾನೆ. ಸೀತಾಪಹರಣ ಸಂಬಂಧವಾಗಿ ಪ್ರತಿಮಾ ನಾಟಕದಲ್ಲಿ ಭಾಸನು ಚಿತ್ರಿಸಿರುವ ಸನ್ನಿವೇಶಗಳೇಬೇರೆ. ಸೀತಾಪಹರಣವು ಚಿತ್ರಿತವಾಗಿರುವ ಅಂಕವು ಆರಂಭವಾದಾಗ, ಸೀತೆಯು ಆಶ್ರಮವನ್ನು ಗುಡಿಸಿ ಸಾರಿಸಿ ರಂಗವಲ್ಲಿಯಿಂದ ಅಲಂಕರಿಸುತ್ತಿರುತ್ತಾಳೆ. ಮರುದಿನ ದಶ

ರಥನ ಶ್ರಾದ್ಧವು ನೆರವೇರಬೇಕು. ರಾಮನು ಲಕ್ಷ್ಮಣನನ್ನು ಕೆಲಸದ ಮೇಲೆ ಕಳುಹಿಸಿರುತ್ತಾನೆ. ತಾನೂ ಎಲ್ಲಿಯೋ ಹೋಗಿದ್ದು ಆಶ್ರಮಕ್ಕೆ ಬರುತ್ತಾನೆ. ಆವೇಳೆಗೆ ಸೀತೆಯು ತಾನು ಮಕ್ಕಳಂತೆ ಪೋಷಿಸುತ್ತಿರುವ ತರುಲತೆಗಳಿಗೆ ನೀರೆರೆಯುತ್ತಿರುತ್ತಾಳೆ. ಕೆಲವು ಗಿಡಗಳಿಗೆ ನೀರು ಹಾಕಿ, ಅವಳು ಮತ್ತೆ ಕೊಡದಲ್ಲಿ ನೀರನ್ನು ತರಲು ಹೋಗಿರುತ್ತಾಳೆ. * ರಾಮನು ಅವಳ ಸ್ಥಿತಿಗೆ ಮನಮರುಗಿ, ಯಾವಳ ಕೈಯು ಕನ್ನಡಿಯನ್ನು ಹಿಡಿಯುವುದರಿಂದಲೂ ಸೋತುಹೋಗುತ್ತಿದ್ದಿತೋ, ಅಂಥಾ ಸುಕುಮಾರಿಯಾದ ಸೀತೆಯು ಬಿಂದಿಗೆಯಲ್ಲಿ ನೀರನ್ನು ತರುವ ಆಯಾಸವನ್ನೂ ಸಹಿಸುವಂತಾಗಿದೆಯೆಂದು ಮುಂತಾಗಿ ಹೇಳಿ ಪೇಚಾಡುತ್ತಾನೆ. § ಆ ಬಳಿಕ, ತಾವು ಆರಣ್ಯದಲ್ಲಿರುವುದರಿಂದ ಉಚಿತ ರೀತಿಯಲ್ಲಿ ದಶರಥನ ಶ್ರಾದ್ಧವನ್ನು ಮಾಡುವುದಕ್ಕೆ

---

* ಸೀತಾದೇವಿಯು ಗಿಡಗಳಿಗೆ ನೀರೆರೆದಿರುವ ಸನ್ನಿವೇಶವನ್ನು ಕವಿಯು ಮನೋಹರವಾಗಿ ವರ್ಣಿಸಿದ್ದಾನೆ. ವರ್ಣನೆಯು ನೈಸರ್ಗಿಕವಾಗಿದೆ. ದೇವಿಯು ನಾಲ್ಕು ಪಾತಿಗಳಿಗೆ ನೀರೆರೆದಿದ್ದಾಳೆ. ಅವುಗಳಲ್ಲಿ ಆಗ ತಾನೆ ನೀರೆರೆದುಹೋದ ಪಾತಿಯಲ್ಲಿ ನೊರೆಯಿಂದ ಕೂಡಿ ಬೊಗ್ಗಡ ಕದಡಿಕೊಂಡು ಇನ್ನೂ ನೀರು ಗರಗರನೆ ಸುತ್ತುತ್ತಿದೆ. ಅದಕ್ಕಿಂತ ಹಿಂದೆ ನೀರೆರೆದ ಪಾತಿಯಲ್ಲಿ ನೀರು ಸ್ವಲ್ಪ ತಿಳಿಯಾಗಿರುವುದರಿಂದ ಹಕ್ಕಿಗಳು ನೀರನ್ನು ಕುಡಿಯುತ್ತಿವೆ. ಅದಕ್ಕಿಂತ ಹಿಂದೆ ನೀರೆರೆದ ಪಾತಿಯಲ್ಲಿ ಬಿಲಕ್ಕೆ ನೀರು ತುಂಬಿದ ಕಾರಣ ಕೀಟಗಳು ಮೇಲಕ್ಕೆ ಬರುತ್ತಿವೆ ಅದಕ್ಕೂ ಮೊದಲು ನೀರೆರೆದ ಪಾತಿಯಲ್ಲಿ ನೀರೆಲ್ಲ ಇಂಗಿಹೋಗಿರುವುದರಿಂದ ಮರದ ಸುತ್ತಲೂ ನೀರುನಿಂತಿದ್ದ ಗುರುತಿನ ಗೆರೆಯು ಮಾತ್ರ ಕಾಣುತ್ತಿದೆ:—

(ಭ್ರಮತಿ ಸಲಿಲಂ ವೃಕ್ಷಾರ್ತೇ ಸಫೇನಮವಸ್ಥಿತಂ
ತೃಷಿತ ಪತಿತಾ ನೈತೇ ಕ್ಲಿಷ್ಟಂ ಪಿಬಂತಿ ಜಲಂ ಖಗಾಃ ।
ಸ್ಥೂಲಮಭಿಪತಂತ್ಯಾರ್ದ್ರಾಃ ಕೀಟಾ ಬಿಲೇ ಜಲಪೂರಿತೇ ।
ನವವಲಯಿನೋ ವೃಕ್ಷಾ ಮೂಲೇ ಜಲಕ್ಷಯರೇಖಯಾ ॥)

§ " ಯೋಽಸ್ಯಾಃ ಕರಃ ಶಾಮ್ಯತಿ ದರ್ಪಣೇಽಪಿ
ಸ ನೈತಿ ಖೇದಂ ಕಲಶಂ ವಹನ್ತ್ಯಾಃ ।
ಕಷ್ಟಂ ವನಂ ಸ್ತ್ರೀಜನ ಸೌಕುಮಾರ್ಯಂ
ಸಮಂ ಲತಾಭಿಃ ಕಠಿನೀ ಕರೋತಿ ॥ "

ಸಾಮರ್ಥ್ಯವಿಲ್ಲದೆ ಹೋಯಿತೇ ಎಂಬುದಾಗಿ ವ್ಯಸನಪಡುತ್ತಾನೆ. ಭರತನು ಸರಿಯಾಗಿ ಅದನ್ನು ನಡೆಸುವನೆಂದೂ, ತಮ್ಮ ಅವಸ್ಥೆಗನುರೂಪವಾಗಿ ರಾಮನು ನಡೆಸುವ ಶ್ರಾದ್ಧದಿಂದಲೇ ದಶರಥನು ತೃಪ್ತನಾಗುವನೆಂದೂ ಸೀತೆಯು ಸಮಾಧಾನ ಹೇಳುತ್ತಾಳೆ. ಆಗ, ' ನಾನು ದರ್ಭೆಯಲ್ಲಿ ರಚಿಸುವ ಫಲಗಳನ್ನು ನೋಡಿ ನಮ್ಮ ವನವಾಸವನ್ನು ಸ್ಮರಿಸಿಕೊಂಡು ತಂದೆಯು ಸ್ವರ್ಗದಲ್ಲಿ ಕೂಡ ರೋದನ ಮಾಡುವನು ' ಎಂದು ಪೇಚಾಡುತ್ತಾನೆ ‡ ಎಂದು ಅವನು ಹೇಳುವ ಶ್ಲೋಕದಿಂದ ನಮ್ಮ ಹೃದಯವು ಕರಗಿ ನೀರಾಗುವುದು. ರಾವಣನು ಸಂನ್ಯಾಸಿಯ ವೇಷವನ್ನು ತಾಳಿ, ತಾನೊಬ್ಬ ಅತಿಥಿಯೆಂದು ಹೇಳುವನು. ರಾಮನೂ, ಸೀತೆಯೂ, ಅವನನ್ನು ಆದರದಿಂದ ಬರಮಾಡಿಕೊಂಡು ಉಪಚರಿಸುವರು. ಅವನು ತಾನು ವೇದಾಧ್ಯಯನ ಸಂಪನ್ನನೆಂದು ಹೇಳಿಕೊಳ್ಳುವನು. ಶ್ರಾದ್ಧದಲ್ಲಿ ಯಾವ ಆಹಾರ ವಸ್ತುಗಳನ್ನುಪಯೋಗಿಸುವುದು ಉತ್ತಮವೆಂದು ರಾಮನು ಅವನನ್ನು ಕೇಳುವನು. ರಾವಣನು ಕೆಲವು ಪದಾರ್ಥಗಳನ್ನು ಹೇಳಿ, ಆಬಳಿಕ ಕಾಂಚನಪಾರ್ಶ್ವ ಮೃಗವನ್ನು ತಂದು ಅದರ ಮಾಂಸವನ್ನುಪಯೋಗಿಸುವುದು ಸರ್ವೋತ್ತಮವೆಂದು ತಿಳಿಸುವನು. ಅಷ್ಟರಲ್ಲಿ ಅಲ್ಲಿಗೇ ಕಾಂಚನಪಾರ್ಶ್ವ ಮೃಗವು ಬರುವುದು. ರಾವಣನು " ನಿನ್ನ ಸೇವೆಗಾಗಿ ಇಲ್ಲಿಗೇ ಹಿಮವಂತನು ಮೃಗವನ್ನು ಕಳುಹಿಸಿರುವನು " ಎಂದು ರಾಮನಿಗೆ ಹೇಳುವನು. ರಾಮನು ತಾನು ಬರುವವರೆಗೂ ಪೂಜ್ಯನಾದ ಅತಿಥಿಯನ್ನು ಸೀತೆಯು ಉಪಚರಿಸುತ್ತಿರುವಂತೆ ಕಟ್ಟುಮಾಡಿ ತಾನು ಮೃಗವನ್ನು ಅಟ್ಟಿಕೊಂಡು ಹೋಗುವನು. ಭಾಸನು ಮಾಡಿರುವ ಈ ಬದಲಾವಣೆಯು ಎಷ್ಟು ರಮಣೀಯವಾಗಿದೆ ! ರಾಮನೂ, ವೈದೇಹಿಯೂ, ತನ್ನನ್ನು ಬಹಳ ಆದರದಿಂದ ಸತ್ಕರಿಸಿ ಗೌರವಿಸಿದ್ದರೆಂಬುದನ್ನು ಮರೆತು, ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋಗುವನು.

ಸೀತಾಪಹರಣದ ಸುದ್ದಿಯು ಭರತನಿಗೆ ತಿಳಿಯಬರುವಂತೆಯೂ, ಆಶ್ರಮದಲ್ಲಿ ಕಿರೀಟಧಾರಣೆಯು ಆಗುವಂತೆಯೂ, ಆಗ್ಗೆ ಭರತನು

---

‡ " ಫಲಾನಿ ದೃಷ್ಟ್ವಾ ದರ್ಭೇಷು ಸ್ವಹಸ್ತರಚಿತಾನಿ ನಃ ।
ಸ್ಮಾರಿತೋ ವನವಾಸಂ ಚ ತಾತಸ್ತತ್ರಾಪಿ ರೋದತಿ ॥ "

ಸಪರಿವಾರವಾಗಿ ಅಲ್ಲಿಗೆ ಹೋಗುವಂತೆಯೂ ಚಿತ್ರಿಸಿರುವುದು ಭಾಸನ ಕಲ್ಪನಾಚಾತುರ್ಯವನ್ನು ಸೂಚಿಸುವುದು. ಇವುಗಳಿಂದ ವಿಶೇಷ ಪ್ರಯೋಜನವೂ ಉಂಟು. ಕರುಣಾರಸವು ಮತ್ತಷ್ಟು ಉಕ್ಕಿಹರಿಯಲೆಂಬ ಉದ್ದೇಶದಿಂದ ಭರತನಿಗೆ ಸೀತಾಪಹರಣದ ಸುದ್ದಿಯು ತಿಳಿಯುವಂತೆಯೂ, ರಾಮನಿಗೆ ಚಿರಪರಿಚಿತರಾದ ಮುನಿಗಳ ಮನಸ್ಸಿಗೆ ಹರುಷವುಂಟಾಗಲೆಂಬ ಉದ್ದೇಶದಿಂದ ಋಷ್ಯಾಶ್ರಮದಲ್ಲಿ ಅವನ ಪಟ್ಟಾಭಿಷೇಕವು ನಡೆಯುವಂತೆಯೂ, ಭಾಸನು ಚಿತ್ರಿಸಿರುವನೆಂದು ಡಾಕ್ಟರ್. ಟಿ. ಗಣಪತಿಶಾಸ್ತ್ರಿಯವರು ತಿಳಿಸಿದ್ದಾರೆ. ರಾಮನ ಪಟ್ಟಾಭಿಷೇಕವು ತಪೋವನದಲ್ಲಿ ನಡೆದುದರಿಂದ ಮತ್ತೊಂದು ವಿಶೇಷವೂ ಉಂಟೆಂದು ತೋರುತ್ತದೆ. ತ್ಯಾಗಭೋಗಗಳೆರಡಕ್ಕೂ ಆದರ್ಶವೆನಿಸುವ ರಾಮರಾಜ್ಯವು ಆರಂಭವಾಗುವುದರಲ್ಲಿದ್ದುದರಿಂದ, ತಪಸ್ವಿವೃತ್ತಿಗೂ, ಗೃಹಸ್ಥ ಧರ್ಮಕ್ಕೂ ಇರುವ ಸಾಮರಸ್ಯವನ್ನೂ, ಈ ಸಾಮರಸ್ಯವಿದ್ದರೆ ಸುಖೋತ್ಕರ್ಷವು ತಾನಾಗಿಯೇ ಉಂಟಾಗುವುದನ್ನೂ, ಸೂಚಿಸುವುದಕ್ಕಾಗಿ ಭಾಸನು ಹೀಗೆ ಮಾಡಿದ್ದರೂ ಮಾಡಿರಬಹುದು.

**ಪಾತ್ರರಚನಾ ಕೌಶಲ:**— ಪ್ರತಿಮಾ ನಾಟಕವು ಅತ್ಯುತ್ತಮವಾದ ನಾಟಕಗಳ ಗುಂಪಿಗೆ ಸೇರಿದುದೆಂಬುದಕ್ಕೆ ಅದರಲ್ಲಿಯ ಪಾತ್ರರಚನೆಯೂ ಒಂದು ಮುಖ್ಯವಾದ ಕಾರಣವಾಗಿದೆ. ಈ ನಾಟಕದಲ್ಲಿಯ ಪಾತ್ರಗಳೆಲ್ಲರೂ ಮಾನವ ಪ್ರಕೃತಿಗನುವಾದ ಲಕ್ಷಣಗಳಿಂದ ಕೂಡಿ, ತಮ್ಮ ಸ್ಥಿತಿಗತಿಗನುರೂಪವಾದ ರೀತಿಯಲ್ಲಿ ಮಾತನಾಡುತ್ತಾರೆ. ಇದರಿಂದ ಪ್ರೇಕ್ಷಕರ ಮನಸ್ಸಿಗೆ ಆನಂದವುಂಟಾಗುತ್ತದೆ.

ರಾಮಾಯಣದಲ್ಲಿರುವ ಪಾತ್ರಗಳೇ ಪ್ರತಿಮಾ ನಾಟಕದಲ್ಲಿಯೂ ಇದ್ದಾಗ್ಗೂ, ಪಾತ್ರರಚನೆಯಲ್ಲಿ ನಾಟಕಕ್ಕೆ ಉಚಿತವೆನಿಸುವಂತೆ ಭಾಸನು ಅಮೋಘವಾದ ಶಕ್ತಿಯನ್ನು ತೋರ್ಪಡಿಸಿದ್ದಾನೆ. ಅನೇಕ ಬದಲಾವಣೆಗಳನ್ನು ಮಾಡಿದ್ದಾನೆ. ಅವನು ಸೃಷ್ಟಿಸಿರುವ ಪಾತ್ರಗಳೆಂದಿಗೂ ರಾಮಾಯಣದ ಪಾತ್ರಗಳ ಪಡಿಯಚ್ಚುಗಳಲ್ಲ. ಡಾಕ್ಟರ್ ಕೀತ್‌ರವರು ಈ ವಿಷಯವನ್ನೇ ಗಮನಿಸದೆ, ಇಲ್ಲದ ಸಲ್ಲದ ದೋಷಾರೋಪಣೆಗಳನ್ನು ಮಾಡಿದ್ದಾರೆ. ಪಾತ್ರರಚನೆಯಲ್ಲಿ ಭಾಸನು ತೋರಿಸಿರುವ ಅಸ್ವಾದೃಶವಾದ ಕೌಶಲವನ್ನು ಪೂರ್ತಿ

ಯಾಗಿ ವಿವರಿಸಲು ಇಲ್ಲಿ ಸಾಧ್ಯವಿಲ್ಲ. ಕೆಲವು ಸಂಗತಿಗಳನ್ನು ಮಾತ್ರವೇ ತಿಳಿಸಿ ತೃಪ್ತಿಗೊಂಡಬೇಕಾಗಿದೆ:—

ವಾಲ್ಮೀಕಿ ರಾಮಾಯಣದಲ್ಲಿ ಶ್ರೀರಾಮಚಂದ್ರನು ಆದರ್ಶತೆಯ ನೆಲೆ; ಘನತೆಯ ಗಣಿ. ರಾಮನು ವಿಷ್ಣುವಿನ ಅವತಾರವೆಂದು ಇಂದಿಗೂ ಅವನಿಗೆ ಜಾತಿಮತ ಭೇದವಿಲ್ಲದೆ ಸಮಸ್ತ ಹಿಂದುಗಳಿಂದಲೂ, ಪೂಜೆಯು ನಡೆಯುತ್ತಿದೆ. ಭಾಸನ ಪ್ರತಿಮಾ ನಾಟಕದಲ್ಲಿ ಶ್ರೀರಾಮನ ಪಾತ್ರವು ಮತ್ತಷ್ಟು ಘನತೆಯಿಂದ ಶೋಭಿಸುತ್ತಿದೆ. ರಾಜ್ಯಾಭಿಷೇಕವು ನಿಂತುಹೋಗಿ, ತನಗೆ ರಾಜ್ಯಭೋಗವು ತಪ್ಪಿಹೋದುದಕ್ಕಾಗಿ ಅವನು ಲೇಶವೂ ಚಿಂತಿಸುವುದಿಲ್ಲ. ಅಭಿಷೇಕವು ನಿಂತುಹೋದುದೇ ಅವನಿಗೊಂದು ಸಂತೋಷ. ತಂದೆಯು ವನಕ್ಕೆ ಹೋಗಿ ವಾನಪ್ರಸ್ಥಾಶ್ರಮಿಯಾಗುವುದು ತಪ್ಪಿತೆಂಬುದೇ ಅದಕ್ಕೆ ಕಾರಣ.

**ಶ್ರೀರಾಮ**

ಕಾಂಚುಕೀಯನಿಗೂ, ರಾಮನಿಗೂ ನಡೆಯುವ ಸಂಭಾಷಣೆಯನ್ನು ನೋಡಿದರೆ, ರಾಮನ ಉದಾತ್ತ ಸ್ವಭಾವವೂ, ಸಾತ್ವಿಕ ಪ್ರೇಮವೂ ವ್ಯಕ್ತವಾಗುವುವು. ಅಭಿಷೇಕೋತ್ಸವವು ನಿಂತುಹೋದುದಕ್ಕೆ ಕೈಕೆಯಿಯೇ ಕಾರಣವೆಂದು ಕಾಂಚುಕೀಯನು ಹೇಳಿದುದಕ್ಕೆ "ಆರ್ಯ, ಗುಣಾಃ ಖಲ್ವತ್ರ" (ಆರ್ಯ, ಹೀಗಾದುದು ಒಳ್ಳೆಯದೇ ಆಯಿತು.) ಎಂದು ಉತ್ತರಕೊಡುತ್ತಾನೆ. ಇದು ಕಾಂಚುಕೀಯನ ಮನಸ್ಸಿಗೆ ಹಿಡಿಯಲೊಲ್ಲದು. ಆದಕಾರಣ, ಅವನು ಈ ಉತ್ತರಕ್ಕೆ ಕಾರಣವನ್ನು ಕೇಳುವನು. ಆಗ ರಾಮನು, ತಂದೆಯು ವಾನಪ್ರಸ್ಥಾಶ್ರಮಿಯಾಗಿ ವನಕ್ಕೆ ಹೋಗುವುದು ತಪ್ಪಿತೆಂದೂ, ತಂದೆಯ ಪೋಷಣೆಯಲ್ಲಿ ತಾನು ಬಾಲಭಾವದಿಂದಲೇ ಇರುವ ಅನುಕೂಲವು ಉಳಿಯಿತೆಂದೂ, ಹೊಸದೊರೆಯ ಆಡಳಿತವು ಹೇಗೋ ಏನೋ ಎಂಬ ಶಂಕೆಯು ಪ್ರಜೆಗಳಿಗೆ ತಪ್ಪಿತೆಂದೂ, ರಾಜ್ಯಭೋಗದಿಂದ ಸಹೋದರರು ವಂಚಿತರಾಗುತ್ತಿದ್ದುದು ತಪ್ಪಿತೆಂದೂ ಹೇಳುವನು. * ದಶರಥನ ಕೋರಿಕೆ

---

* ವನಗಮನನಿವೃತ್ತಿಃ ಪಾರ್ಥಿವಸ್ಯೈವ ತಾವ
ನ್ಮಮ ಪಿತೃಪರವತ್ತಾ ಬಾಲಭಾವಸ್ಸ ಏವ ।
ನವನೃಪತಿ ವಿಮರ್ಶೇ ನಾಸ್ತಿ ಶಂಕಾ ಪ್ರಜಾನಾ
ಮಥ ಚ ಪರಿಭೋಗೈರ್ವಂಚಿತಾ ಭ್ರಾತರೋ ಮೇ ॥ "

ಯಂತೆ ತಾನು ಪಟ್ಟಾಭಿಷಿಕ್ತನಾಗಿದ್ದರೆ, ತಾನು ತನ್ನ ತಮ್ಮಂದಿರಿಗೆ ವಂಚನೆ ಮಾಡಿದಹಾಗಾಗುತ್ತಿದ್ದಿತೆಂಬ ಮನೋಭಾವವು ಅನನ್ಯಸಾಧಾರಣವಾದುದು. ಅವನು ಜ್ಯೇಷ್ಠಪುತ್ರನಾದುದರಿಂದ ಅವನಿಗೆ ರಾಜ್ಯವು ಸಲ್ಲಬೇಕು. ಅದರಮಾತು ಹಾಗಿರಲಿ. ಅವನ ಈ ವಿಧವಾದ ಮನೋಭಾವವನ್ನು ಮಾತ್ರ ಎಷ್ಟು ಕೊಂಡಾಡಿದರೂ ಸಾಲದು. ಕಾಂಚುಕೀಯನು ಆ ಬಳಿಕ "ಕೈಕೆಯಿಯು ಅಪ್ರಾರ್ಥಿತವಾಗಿ ರಾಜನ ಬಳಿಗೆ ಹೋಗಿ ಭರತನಿಗೆ ರಾಜ್ಯಾಭಿಷೇಕವಾಗಬೇಕೆಂದು ಬೇಡಿದಳು. ಇದಾದರೂ ರಾಜ್ಯ ಲೋಭವೆನಿಸುವುದಿಲ್ಲವೆ?" ಎಂದು ಕೇಳುವನು. ಅದಕ್ಕೆ ಶ್ರೀರಾಮನು ಹೇಳುವ "ಆರ್ಯ? ನನ್ನ ಮೇಲಣ ಪಕ್ಷಪಾತದಿಂದ ಹೀಗೆ ನಿಜವನ್ನು ಹೇಳಲಿಚ್ಛಿಸದೆ ಸುಮ್ಮನಿರುವೆ. ಶುಲ್ಕದತ್ತವಾಗಿದ್ದ ರಾಜ್ಯವನ್ನು ತನ್ನ ಪುತ್ರನಿಗಾಗಿ ಕೇಳಿದರೆ ಅದು ಲೋಭ. ನಾನು ಭ್ರಾತೃರಾಜ್ಯಾಪಹಾರ ಮಾಡಿದರೆ ಅದು ಲೋಭವಲ್ಲ ಅಲ್ಲವೆ?" * ಎಂಬ ಉತ್ತರವನ್ನು ನೋಡಿದರೆ, ಅವನ ಸಂಸ್ಕೃತಿಯನ್ನೂ ಸಮಭಾವನೆಯನ್ನೂ, ಹೊಗಳಲು ನಮಗೆ ಹತ್ತು ಬಾಯಿಗಳಿದ್ದರೂ ಸಾಲುವಂತಿಲ್ಲ.

ಈ ಸಂದರ್ಭದಲ್ಲಿ ವಾಲ್ಮೀಕಿ ರಾಮಾಯಣದಲ್ಲಿಯ ಶ್ರೀರಾಮನ ಮನೋಭಾವವೇ ಬೇರೆ. ಭರತನಿಗೆ ರಾಜ್ಯವಾಗಬೇಕೆಂದು ತಾನು ದಶರಥನನ್ನು ಕೇಳಿದುದಾಗಿಯೂ ರಾಮನು ಕಾಡಿಗೆ ಹೋಗಬೇಕೆಂದೂ ಕೈಕೆಯಿಯು ತಿಳಿಸಿದಾಗ ಅವನು ಶೋಕ ಭರವನ್ನು ತಾಳಲಾರದೆ, ಆತ್ಮಸಂಯಮವನ್ನೂ ಕಳೆದುಕೊಂಡು ಸೀತೆಯ ಅಂತಃಪುರಕ್ಕೆ ಹೋಗುವನು.†

---

* " ಆರ್ಯ! ಭವಾನ್ ಖಲ್ವಸ್ಮತ್ಪಕ್ಷಪಾತಾದೇವ ನಾರ್ಥಮವೇಕ್ಷತೇ।
ಕುತಃ।
ಶುಲ್ಕೇ ವಿಪಣಿತಂ ರಾಜ್ಯಂ ಪುತ್ರಾರ್ಥೇ ಯದಿ ಯಾಚ್ಯತೇ।
ತಸ್ಯಾ ಲೋಭೋತ್ರ ನಾಸ್ಮಾಕಂ ಭ್ರಾತೃರಾಜ್ಯಾಪಹಾರಿಣಾಮ್ ॥"

† ಆಗ ಅವನ ಸ್ಥಿತಿಯನ್ನು ವಾಲ್ಮೀಕರು ವರ್ಣಿಸಿರುವುದನ್ನು ನೋಡಿ:—
" ಅಥ ಸೀತಾ ಸಮುತ್ಪತ್ಯ ವೇಪಮಾನಾ ಚ ತಂ ಪತಿಮ್।
ಅಪಶ್ಯಚ್ಛೋಕಸಂತಪ್ತಂ ಚಿಂತಾವ್ಯಾಕುಲಿತೇಂದ್ರಿಯಮ್ ॥
ತಾಂ ದೃಷ್ಟ್ವಾ ಸ ಹಿ ಧರ್ಮಾತ್ಮಾ ನ ಶಶಾಕ ಮನೋಗತಮ್।
ತಂ ಶೋಕಂ ರಾಘವಃ ಸೋಢುಂ ತತೋ ವಿವೃತತಾಂ ಗತಃ ॥"

ಅವನು ಶೋಕಸಂತಪ್ತನಾಗಿರುವ ರೀತಿಯನ್ನು ನೋಡಿ ಸೀತೆಯು ನಡುಗುವಳು. ಪಿತೃಭಕ್ತಿ ಪರಾಯಣನೆಂಬುದು ನಿಜವಾದರೂ ರಾಮನಿಗೆ ತಂದೆಯ ವಿಷಯದಲ್ಲಿ ಕೂಡ ಸ್ವಲ್ಪ ಅಸಮಾಧಾನ. ತಾನು ಕಾಡಿಗೆ ಹೋಗುವಂತೆ ಹೇಳಿದುದರಲ್ಲಿ ದಶರಥನು ಅನ್ಯಾಯಮಾಡಿದನೆಂದೂ ಲಕ್ಷ್ಮಣನಿಗೆ ತಿಳಿಸುವನು. † ಆದರೆ, ಪ್ರತಿಮಾ ನಾಟಕದಲ್ಲಾದರೋ, ರಾಮನು "ನನ್ನ ಧೈರ್ಯವನ್ನು ನೋಡಿ ಜನರು ವಿಸ್ಮಯಪಡುತ್ತಿದ್ದಾರೆ. ಮಗನು ತಂದೆಯ ಮಾತಿನಂತೆ ನಡೆದರೆ ಅದರಲ್ಲಿ ಆಶ್ಚರ್ಯವೇನು" § ಎಂದು ಹೇಳುವನು. ರಾಮಾಯಣದಲ್ಲಿ ರಾಮನು ಕೈಕೆಯಿಯ ವಿಷಯದಲ್ಲಿ "ನನ್ನ ಪ್ರಯಾಣದಿಂದ ಉದ್ದೇಶ ಸಿದ್ಧಿಯನ್ನು ಕಾಣುವ ಆ ನೃಪಾತ್ಮಜೆಯು ನಾನು ವನಕ್ಕೆ ಹೋದಮೇಲೆ ತನ್ನ ಮಗ ಭರತನಿಗೆ ನಿರಾತಂಕವಾಗಿ ರಾಜ್ಯಾಭಿಷೇಕ ಮಾಡಿಸಲಿ" ‡ ಎಂಬ ಬಿರುನುಡಿಗಳನ್ನಾಡುವನು. ಆಬಳಿಕ ಅವನು ತನ್ನ ದುರದೃಷ್ಟವನ್ನು ಹಳಿದುಕೊಂಡು ಸುಮ್ಮನಾಗುವನು. ಪ್ರತಿಮಾ ನಾಟಕದಲ್ಲಿ, ರಾಮನಿಗೆ ಕೈಕೆಯಿಯಲ್ಲಿ ಬಹಳ ಪ್ರೀತಿ. ತಾನೇ ಅವಳ ವಿಷಯದಲ್ಲಿ ಬಿರುನುಡಿಗಳನ್ನಾಡುವುದಿರಲಿ. ಕಾಂಚುಕೀಯನು ಅವಳ ಮೇಲೆ ದೋಷಾರೋಪಣೆ ಮಾಡುತ್ತಿರುವುದನ್ನು ಕೂಡ ಅವನು ಸಹಿಸಲಾರದೆ, "ಅತಃ ಪರಂ ನ ಮಾತುಃ ಪರಿವಾದಂ ಶ್ರೋತುಮಿಚ್ಛಾಮಿ।" (ಇನ್ನು ಈ ಮಾತೃ ನಿಂದೆಯನ್ನು ನಾನು ಕೇಳತಕ್ಕವನಲ್ಲ) ಎಂದು ಖಂಡಿತವಾಗಿ ಹೇಳಿಬಿಡು

---

† "ಗುರುಶ್ಚ ರಾಜಾ ಚ ಪಿತಾ ಚ ವೃದ್ಧಃ ಕ್ರೋಧಾತ್ಪ್ರಹರ್ಷಾದಥವಾಪಿ ಕಾಮಾತ್ ।
ಯದ್ವ್ಯಾದಿಶೇತ್ ಕಾರ್ಯಮವೇಕ್ಷ್ಯ ಧರ್ಮಂ ಕಸ್ತಂ ನ ಕುರ್ಯಾದನೃಶಂಸವೃತ್ತಿಃ ॥"

§ "........................................ .ಧೈರ್ಯೇಣ ಮೇ ವಿಸ್ಮಿತಃ
ಸ್ವಃ ಪುತ್ರಃ ಕುರುತೇ ಪಿತುರ್ಯದಿ ವಚಃ ಕಸ್ತತ್ರ ಭೋ! ವಿಸ್ಮಯಃ ॥"

‡ "ಮಮ ಪ್ರವ್ರಜನಾದದ್ಯ ಕೃತಕೃತ್ಯಾ ನೃಪಾತ್ಮಜಾ ।
ಸುತಂ ಭರತಮವ್ಯಗ್ರಮಭಿಷೇಚಯಿತಾಂ ತತಃ ॥"

ವನು. ಪ್ರತಿಮಾ ನಾಟಕದಲ್ಲಿ ರಾಮನ ಮನಸ್ಸಿಗೆ ಯಾವ ವಿಧವಾದ ಭೇದಭಾವವೂ ತೋರುವುದಿಲ್ಲ. ತಾನು ರಾಜನಾದರೂ ಒಂದೇ, ಭರತನು ರಾಜನಾದರೂ ಒಂದೇ,—ಎಂಬುದು ಅವನ ಅಭಿಪ್ರಾಯ. ಆದುದರಿಂದಲೇ ತಂದೆಯ ವರ್ತನೆಯನ್ನು ಕಂಡು ಕೋಪದಿಂದ ಕಿಡಿಕಿಡಿಯಾಗಿರುವ ಲಕ್ಷ್ಮಣನೊಡನೆ ಅವನು "ಭರತನು ರಾಜನಾದರೂ, ನಾನು ರಾಜನಾದರೂ ಒಂದೇ ಅಲ್ಲವೆ? ನಿನಗೆ ಧನುರ್ವಿದ್ಯಾ ಸಾಮರ್ಥ್ಯವಿದ್ದರೆ ರಾಜನಾದ ಭರತನಿಗೇ ಬೆಂಬಲವಾಗಿ ನಿಂತು ರಕ್ಷಿಸು." * ಎಂದು ಹೇಳುವನು. ಕೈಕೆಯಿಯಲ್ಲಿ ಅವನಿಗೆ ಪೂರ್ಣಗೌರವವೂ, ಪ್ರೀತಿಯೂ ಇರುವುವು. ಇಷ್ಟೇ ಅಲ್ಲ. ರಾಜಪದವಿಯು ತನಗೆ ದೊರೆಯದಂತೆ ಮಾಡಿದುದರಲ್ಲಿ ಕೈಕೆಯಿಯು ತನಗೇನೂ ಕೆಡಕುಮಾಡಿದಂತಾಗಲಿಲ್ಲವೆಂಬುದು ಅವನ ಭಾವನೆ. ರಾಮನ ತಾಳ್ಮೆಯು ಅನುಚಿತವೆಂದು ಬಗೆದು ಲಕ್ಷ್ಮಣನು ಕೋಪೋಕ್ತಿಗಳನ್ನಾಡಿದಾಗ "ಸತ್ಯಪಕ್ಷಪಾತಿಯಾದ ತಂದೆಯ ಮೇಲೆ ಬಾಣವನ್ನು ಬಿಡಲೆ? ಸ್ವಧನವನ್ನು ಸ್ವೀಕರಿಸಿದ ತಾಯಿಯಮೇಲೆ ಬಾಣವನ್ನು ಬಿಡಲೆ? ದೋಷಬಾಹಿರನಾಗಿ ದೂರದಲ್ಲಿರುವ ಅನುಜ ಭರತನನ್ನು ಕೊಲ್ಲಲೆ? ಈ ಮೂರು ಪಾತಕಗಳಲ್ಲಿ ಯಾವುದನ್ನು ಮಾಡಬೇಕೆಂಬುದು ಕುಪಿತನಾಗಿರುವ ನಿನ್ನ ಮನಸ್ಸಿಗೆ ಯೋಗ್ಯವಾಗಿ ಕಾಣುವುದು?" ‡ ಎಂದು ಹೇಳುವನು. ಕೈಕೆಯಿಯು ತನ್ನ ಸ್ವತ್ತನ್ನು ತಾನು ತೆಗೆದುಕೊಂಡಳೆಂಬ ಮನೋಭಾವಕ್ಕೂ, ವಾಲ್ಮೀಕಿ ರಾಮಾಯಣದ ರಾಮನಿಗೂ ಬಲುದೂರ.

---

* "ಭರತೋ ವಾ ಭವೇದ್ರಾಜಾ ವಯಂ ವಾ ನನು ತತ್ಸಮಮ್ |
ಯದಿ ತೇಽಸ್ತಿ ಧನುಃಶ್ಲಾಘಾ ಸ ರಾಜಾ ಪರಿಪಾಲ್ಯತಾಮ್ ||"

‡ "ತಾತೇ ಧನುರ್ನಮಯಿ ಸತ್ಯಮವೇಕ್ಷ್ಯಮಾಣೇ
ಮುಂಚಾನಿ ಮಾತರಿ ಶರಂ ಸ್ವಧನಂ ಹರನ್ತ್ಯಾಮ್ |
ದೋಷೇಷು ಬಾಹ್ಯಮನುಜಂ ಭರತಂ ಹನಾನಿ
ಕಿಂ ರೋಷಣಾಯ ರುಚಿರಂ ತ್ರಿಷು ಪಾತಕೇಷು ||

ರಾಮಾಯಣದಲ್ಲಿ ಸೀತಾದೇವಿಯ ಚಾರಿತ್ರವು ಅತಿ ಶುದ್ಧವಾದುದೂ, ಸಾತ್ವಿಕತೆಯುಳ್ಳುದೂ, ಆಗಿದೆ. ಅದರಲ್ಲಿ ಲೇಶಮಾತ್ರವೂ ಸಂಶಯವಿಲ್ಲ.

**ಸೀತಾದೇವಿ**

ಆದರೂ, ಅವಳು ಎರಡು ತಡವೆ ತಾಳ್ಮೆತಪ್ಪಿ ಬಿರುನುಡಿಗಳನ್ನಾಡಿ ಗರ್ಜಿಸುವಳು. ರಾಮನು ಕಾಡಿಗೆ ಹೊರಡುವಾಗ, ಸೀತೆಯು ತಾನೂ ಅವನನ್ನು ಹಿಂಬಾಲಿಸುವುದಾಗಿ ಹೇಳುವಳು. ಅದಕ್ಕೆ ಅವನು ಸಮ್ಮತಿಸದಿರುವುದನ್ನು ಕಂಡು "ಹೊರಗೆ ನೋಡಲು ಪುರುಷಾಕಾರವಿದ್ದರೂ ವಾಸ್ತವ್ಯವಾಗಿ ಸ್ತ್ರೀಯಾಗಿರುವ ನಿನ್ನನ್ನು ನಮ್ಮ ತಂದೆಯಾದ ಜನಕನು ಅಳಿಯನನ್ನಾಗಿ ಮಾಡಿಕೊಂಡಾಗ, ನಿನ್ನಂಥವನನ್ನು ಹೇಗೆ ಅನುಮೋದಿಸಿ ಸ್ವೀಕಾರ ಮಾಡಿದನೋ ತಿಳಿಯದು" * ಎಂದು ಮೂದಲಿಸುವಳು. ಅವಳ ತರ್ಜನೆಯು ಅಲ್ಲಿಗೇ ನಿಲ್ಲುವುದಿಲ್ಲ. ಅವಳು "ರಾಮ! ನಿನ್ನನ್ನೇ ನಂಬಿಕೊಂಡು ಬಹು ಕಾಲದಿಂದಲೂ ಆಶ್ರಯಿಸಿಕೊಂಡಿರುವ ಚಿಕ್ಕ ವಯಸ್ಸಿನ ಹೆಂಡತಿಯಾದ ನನ್ನನ್ನು ನಟುವನಂತೆ ಪರರಿಗೀಡುಮಾಡಲಿಚ್ಛಿಸುತ್ತೀಯೆ" ‡ ಎಂದು ಕೂಡ ಹೇಳಿಬಿಡುವಳು. ರಾಮನು ಸುವರ್ಣಮೃಗವನ್ನು ಓಡಿಸಿಕೊಂಡು ಹೋದಬಳಿಕ, ವೇಷಧಾರಿಯಾದ ಮಾರೀಚನು ರಾಮಬಾಣದಿಂದ ಮೃತಪಡುವಾಗ "ಹಾ ಸೀತೆ! ಹಾ ಲಕ್ಷ್ಮಣ!" ಎಂದು ಕೂಗುವನಷ್ಟೆ. ಸೀತೆಯು ಆ ಧ್ವನಿಯನ್ನು ಕೇಳಿ, ತನ್ನ ಗಂಡನ ಸಹಾಯಕ್ಕೆ ಹೋಗುವಂತೆ ಲಕ್ಷ್ಮಣನಿಗೆ ಅಪ್ಪಣೆ ಮಾಡುವಳು. ಅವನು ತನ್ನ ಅಣ್ಣನ ಆಜ್ಞೆಗೆ ವಿರೋಧವಾಗಿ ಆಶ್ರಮವನ್ನು ಬಿಟ್ಟು ಹೋಗಲು ಸಮ್ಮತಿಸದಿರುವುದನ್ನು ಕಂಡು, ಸೀತೆಯು ಕೋಪದಿಂದ ಗರ್ಜಿಸುತ್ತ ಕರ್ಣಕಠೋರವಾಗಿ ನುಡಿಯುತ್ತಾಳೆ; ಇದೊಂದು ಹೊರತು ಸೀತೆಯಲ್ಲಿ ಮತ್ತಾವ ದೋಷವೂ ಇಲ್ಲ; ಉಳಿದ ಸಮಸ್ತ ವಿಷಯಗಳಲ್ಲಿಯೂ ಅವಳು ಪಾವನ

---

* " ಕಿಂ ತ್ವಾ ಮನ್ಯತ ವೈದೇಹಃ ಪಿತಾ ಮೇ ಮಿಥಿಲಾಧಿಪಃ ।
ರಾಮ ಜಾಮಾತರಂ ಪ್ರಾಪ್ಯ ಸ್ತ್ರಿಯಂ ಪುರುಷ ವಿಗ್ರಹಂ ॥ "

‡ " ಸ್ವಯಂ ತು ಭಾರ್ಯಾಂ ಕೌಮಾರೀಂ ಚಿರಮಧ್ಯುಷಿತಾಂ ಸತೀಮ್ ।
ಶೈಲೂಷ ಇವ ಮಾಂ ರಾಮ ಪರೇಭ್ಯೋ ದಾತುಮಿಚ್ಛಸಿ ॥ "

ಸ್ವರೂಪಳಾದ ಸಾಧ್ವಿ; ಪತಿವ್ರತಾಶಿರೋಮಣಿ.* ಸ್ತ್ರೀಯರೆಲ್ಲರಿಗೂ ಆದರ್ಶ ಸ್ವರೂಪಳಾದ ಪತಿಪರಾಯಣೆ. ಭಾಸನ ಪ್ರತಿಮಾ ನಾಟಕದಲ್ಲಿ ಸೀತಾ ದೇವಿಯು ಕೋಪಿಸಿಕೊಳ್ಳದೆ ಇರುವುದಕ್ಕೆ ನಾಟಕದಲ್ಲಿಯ ಸಂವಿಧಾನವೂ ಕಾರಣ. ಭಾಸನು ಕಥಾವಸ್ತುವನ್ನು ಬದಲಾಯಿಸಿರುವುದರಿಂದ ಇದಕ್ಕೆ ಅವಕಾಶವೇ ಇಲ್ಲ. ಆದರೂ, ಭರತನಲ್ಲಿಯೂ, ಲಕ್ಷ್ಮಣನಲ್ಲಿಯೂ, ಅವಳಿಗೆ ವಿಶೇಷ ವಾತ್ಸಲ್ಯವುಂಟೆಂಬುದನ್ನು ತೋರಿಸಲು ಪ್ರತಿಮಾ ನಾಟಕದಲ್ಲಿ ಅನೇಕ ನಿದರ್ಶನಗಳಿವೆ. ಭರತಲಕ್ಷ್ಮಣರಲ್ಲಿ ಅವಳು ಮಾತೆಯಂತೆ ವರ್ತಿಸುತ್ತಾಳೆ. ಭರತನು ಪಾದುಕೆಗಳನ್ನು ಬೇಡಲು ಬಂದಾಗ ಅವಳು ಅವನಲ್ಲಿ ತಾಯಿಯಂತೆ ಪ್ರೇಮವನ್ನು ತೋರಿಸುತ್ತಾಳೆ. ಭರತನು ಹೊರಡುವ ವಾರ್ತೆಯನ್ನು ಕೇಳಿ "ಭರತನು ಈದಿನವೇ ಹೊರಡಬೇಕೆ?" ಎಂದು ವಾತ್ಸಲ್ಯ ಪೂರಿತೆಯಾಗಿ ಪ್ರಶ್ನೆಮಾಡುತ್ತಾಳೆ. ರಾಜ್ಯಭಾರವು ಕ್ಷಣಮಾತ್ರವೂ ಉಪೇಕ್ಷಣೀಯವಲ್ಲವಾದಕಾರಣ, ಭರತನು ಅಯೋಧ್ಯೆಗೆ ಹಿಂತಿರುಗಲು ಸಮ್ಮತಿಸಬೇಕೆಂದು ರಾಮನು ಅವಳಿಗೆ ಹೇಳಿದ ಮೇಲೆ, ಅತಿಕಷ್ಟದಿಂದ ಅವಳು ಅದಕ್ಕೆ ಸಮ್ಮತಿಸುತ್ತಾಳೆ. ಅವಳ ಪಂಚಪ್ರಾಣಗಳೂ ರಾಮನಲ್ಲಿ ನೆಲಸಿಹೋಗಿವೆ. ಆವರಿಬ್ಬರಿಗೂ, ದೇಹಗಳು ಎರಡು. ಆದರೆ ಆತ್ಮವು ಮಾತ್ರ ಒಂದೇ ಆಗಿದೆ. ಭಾಸನು ಚಿತ್ರಿಸಿರುವ ನಾಯಕಿಯರಲ್ಲೆಲ್ಲ ಸೀತೆಯೇ ಅತ್ಯುತ್ತಮಳು.

---

* "ಅನಾರ್ಯೆ ಕರುಣಾರಂಭ ನೃಶಂಸ ಕುಲಪಾಂಸನ ||

..............................................

ಅಹಂ ತವ ಪ್ರಿಯಂ ಮನ್ಯೇ ರಾಮಸ್ಯ ವ್ಯಸನಂ ಮಹತ್ |

..............................................

ನೈವ ಚಿತ್ರಂ ಸಪತ್ನೀಷು ಪಾಪಂ ಲಕ್ಷ್ಮಣ ಯದ್ಭವೇತ್ |
ತ್ವದ್ವಿಧೇಷು ನೃಶಂಸೇಷು ನಿತ್ಯಂ ಪ್ರಚ್ಛನ್ನಚಾರಿಷು ||
ಸುದುಷ್ಟಸ್ತ್ವಂ ವನೇ ರಾಮಮೇಕ ಮೇಕೋನುಗಚ್ಛಸಿ |
ಮಮ ಹೇತೋಃ ಪ್ರತಿಚ್ಛನ್ನಃ ಪ್ರಯುಕ್ತೋ ಭರತೇನ ವಾ |

..............................................

ಕಥಮಿಂದೀವರ ಶ್ಯಾಮಂ ರಾಮಂ ಪದ್ಮನಿಭೇಕ್ಷಣಂ |
ಉಪಸಂಶ್ರಿತ್ಯ ಭರ್ತಾರಂ ಕಾಮಯೇಯಂ ಪೃಥಗ್ಜನಂ |
ಸಮಕ್ಷಂ ತವ ಸೌಮಿತ್ರೇ ಪ್ರಾಣಾಂಸ್ತ್ಯಕ್ಷ್ಯೇ ನ ಸಂಶಯಃ ||"

ಕೌಸಲ್ಯೆಯ ಪಾತ್ರವು ರಾಮಾಯಣದಲ್ಲಿರುವುದಕ್ಕಿಂತಲೂ ಹೆಚ್ಚು ಘನತೆ ಗಾಂಭೀರ್ಯಗಳಿಂದೊಡಗೂಡಿರುವುದು, ಪ್ರತಿಮಾ ನಾಟಕದ ಮತ್ತೊಂದು ಮುಖ್ಯಲಕ್ಷಣವಾಗಿದೆ. ರಾಮನನ್ನು ಕಾಡಿಗೆ

**ಕೌಸಲ್ಯೆ**

ಕಳುಹಿಸಿದುದಕ್ಕಾಗಿ ರಾಮಾಯಣದಲ್ಲಿ ಕೌಸಲ್ಯೆಯು ದಶರಥನನ್ನು ಮನಸ್ವಿಯಾಗಿ ನಿಂದಿಸುವಳು. § ಪಾಪ! ದಶರಥನು ದಿಕ್ಕುಕಾಣದೆ ತನ್ನಲ್ಲಿ ಕರುಣೆಯನ್ನು ತೋರಿಸಬೇಕೆಂದು ಹೇಳಿ ಅವಳ ಕಾಲಿಗೆರಗುವನು. ಆಗ ಕೌಸಲ್ಯೆಗೆ ಪಶ್ಚಾತ್ತಾಪವುಂಟಾಗಿ ಅವಳು ಅವನ ಕ್ಷಮೆಯನ್ನು ಬೇಡಿ ಸ್ತುತ್ಯವಾದ ರೀತಿಯಲ್ಲಿ ವರ್ತಿಸುವಳು. ಪ್ರತಿಮಾ ನಾಟಕದಲ್ಲಾದರೋ ಕೌಸಲ್ಯೆಯು ಕ್ಷಮಾಮಯಿಯಾಗಿ ನಡೆಯುವ ಸುರಲೋಕದ ರಮಣಿಯೆಂದು ತೋರುವುದು. ತನ್ನ ಹೃದಯವನ್ನೇ ಹಿಂಡುತ್ತಿರುವ ಶೋಕವನ್ನೂ ಸಹಿಸಿಕೊಂಡು, ಅವಳು ಸುಮಿತ್ರೆಯೊಡನೆ ದಶರಥನನ್ನು ಸಂತೈಸಿ ಸಮಾಧಾನಹೇಳುವಳು, ಅವನ ದುಃಖದಲ್ಲಿ ಸಮಭಾಗಿನಿಯಾಗಿ ಸಹಾಯಕಳಾಗಿರುವಳು. ರಾಮಾಯಣದಲ್ಲಿ ಕೌಸಲ್ಯೆಯು ನಿರಪರಾಧಿಯಾದ, ರಾಜ್ಯಲೋಭದ ಲವಲೇಶವನ್ನೂ ಕಾಣದ ಭರತನ ಮೇಲೆ ಆಗ್ರಹಗೊಂಡು "ಕ್ರೂರಕರ್ಮದಿಂದ ಕೈಕೆಯಿಯು ಕೊಡಿಸಿರುವ ನಿಷ್ಕಂಟಕವಾದ ಈ ರಾಜ್ಯವು ರಾಜ್ಯಕಾಮಿಯಾದ ನಿನಗೆ ದೊರೆತಿದೆ." * ಎಂದು ಕಠಿನೋಕ್ತಿಯನ್ನಾಡುವಳು. ಪ್ರತಿಮಾ ನಾಟಕದಲ್ಲಿ ಕೌಸಲ್ಯೆಯು ವರ್ತಿಸುವ ರೀತಿಯನ್ನಾದರೂ ನೋಡಿ: ಅಭಿವಾದನ ಕ್ರಮವನ್ನು ತಿಳಿಸಲು ಸುಮಂತ್ರನು ಕೌಸಲ್ಯೆಯ ಕಡೆಗೆ ತೋರಿಸಿ ಅವಳು ರಾಮನ ಜನನಿಯಾದ ಕೌಸಲ್ಯಾದೇವಿಯೆಂದು ಹೇಳುವನು. ಆಗ ಭರತನು "ಅಮ್ಮ! ನಿರಪರಾಧಿಯಾದ ನಾನು ಅಭಿವಂದಿಸುವೆನು" ("ಅಂಬ!

---

§ " ಗತಿರೇಕಾ ಪತಿರ್ನಾರ್ಯಾ ದ್ವಿತೀಯಾ ಗತಿರಾತ್ಮಜಃ ।
ತೃತೀಯಾ ಜ್ಞಾತಯೋ ರಾಜಂಶ್ಚತುರ್ಥೀ ನೈವವಿದ್ಯತೇ ॥
ತತ್ರ ತ್ವಂ ಮಮ ನೈವಾಸಿ ರಾಮಶ್ಚ ವನಮಾಹಿತಃ ।
ನ ವನಂ ಗಂತುಮಿಚ್ಛಾಮಿ ಸರ್ವಥಾ ಹಾ ಹತಾ ತ್ವಯಾ ॥"

* " ಇದಂ ತೇ ರಾಜ್ಯಕಾಮಸ್ಯ ರಾಜ್ಯಂ ಪ್ರಾಪ್ತಮಕಂಟಕಮ್ ।
ಸಂಪ್ರಾಪ್ತಂ ಬತ ಕೈಕೇಯ್ಯಾ ಶೀಘ್ರಂ ಕ್ರೂರೇಣ ಕರ್ಮಣಾ ॥ "

ಅನಪರಾದ್ಧೋಽಹಮಭಿವಾದಯೇ ”) ಎನ್ನುವನು. ಅದನ್ನು ಆ ಸನ್ನಿವೇಶದ ಮಧ್ಯದಲ್ಲಿ ಓದಿದರೆ ಕಣ್ಣಿನಲ್ಲಿ ನೀರು ಬರುವಂತಾಗುವುದು. ಕೌಸಲ್ಯೆಯು ಮಾತೃವಾತ್ಸಲ್ಯದಿಂದ ಕೂಡಿ “ವತ್ಸ! ನಿಸ್ಸಂತಾಪನಾಗು” (“ಜಾದ! ನಿಸ್ಸಂದಾವೋ ಹೋಹಿ”) ಎಂದು ಆಶೀರ್ವದಿಸುವಳು. ಸುಮಂತ್ರನು ಆ ಬಳಿಕ ಸುಮಿತ್ರೆಯನ್ನು ತೋರಿಸುವನು. ಭರತನು ಅವಳಿಗೆ ಅಭಿವಂದಿಸುವನು. ಆ ಬಳಿಕ ಸುಮಂತ್ರನು ಕೈಕೆಯಿಯನ್ನು ತೋರಿಸಿ ಅವಳು ನಿನ್ನ ಜನನಿಯೆಂದು ಸೂಚಿಸುವನು. ಭರತನು ಅವಳಿಗೆ ನಮಸ್ಕಾರವನ್ನೇ ಮಾಡದೆ, ಕಠಿನೋಕ್ತಿಗಳನ್ನಾಡುವನು. ಆಗ ಕೌಸಲ್ಯೆಯು ಅಡ್ಡಬಂದು “ಸರ್ವಸಮುದಾಚಾರವನ್ನೂ ಅರಿತ ನೀನು ಮಾತೆಗೆ ನಮಸ್ಕರಿಸುವುದಿಲ್ಲವೇಕೆ?” ಎಂದು ಕೇಳುವಳು. ಆಗ ಭರತನು “ತಾಯಿಯೆಂದೆಯೋ! ಅಮ್ಮ, ನೀನೇ ನನ್ನ ತಾಯಿ. ಅಮ್ಮ, ನಮಸ್ಕರಿಸುವೆನು” (“ಮಾತರಮಿತಿ! ಅಂಬ, ತ್ವಮೇವ ಮೇ ಮಾತಾ. ಅಂಬ, ಅಭಿವಾದಯೇ”) ಎಂದು ಹೇಳಿ ಮತ್ತೆ ಅವಳಿಗೇ ನಮಸ್ಕರಿಸುವನು. ಅದಕ್ಕೆ ಕೌಸಲ್ಯೆಯು ಅವನು ಕೈಕೆಯಿಗೆ ನಮಸ್ಕಾರ ಮಾಡುವುದು ಯುಕ್ತವೆಂದು ಧ್ವನಿಬರುವಂತೆ “ಅಲ್ಲ ಅಲ್ಲ. ಇವಳು ನಿಮ್ಮ ತಾಯಿ” (“ಣಹಿ ಣಹಿ! ಇಅಂ ದೇ ಜಣಣೀ”) ಎಂದು ಹೇಳುವಳು. ಅಪರಾಧಿನಿಯಾದ ಕೈಕೆಯಿಯಲ್ಲಿ ಕೂಡ ಅವಳಿಗೆ ಸೋದರಿಯಂತೆ ಪ್ರೇಮ. ಕೌಸಲ್ಯೆಯ ಗುಣವೂ, ನಡತೆಯೂ, ಅಮೋಘವಾದವುಗಳೆಂಬುದನ್ನು ಮತ್ತೆ ಬಿಚ್ಚಿಹೇಳಲೂಬೇಕೆ?

**ಕೈಕೆಯಿ**

ಕೈಕೆಯಿಯ ಪಾತ್ರವನ್ನು ಕೂಡ ಭಾಸನು ರಮ್ಯವಾಗಿ ರಚಿಸಿದ್ದಾನೆ. ವಾಲ್ಮೀಕಿ ರಾಮಾಯಣದ ಸನ್ನಿವೇಶವನ್ನು ಬದಲಾಯಿಸಿ, ಕೈಕೆಯಿಯ ವರ್ತನೆಯು ಸಂಪೂರ್ಣವಾಗಿ ಕ್ಷಮೆಗೆ ಅರ್ಹವಾದುದಾಗಿ ತೋರುವಂತೆ ಮಾಡಿದ್ದಾನೆ. ರಾಮಾಯಣದಲ್ಲಿ ರಾಮನನ್ನು ಹದಿನಾಲ್ಕುವರುಷಗಳ ಕಾಲ ವನವಾಸಕ್ಕೆ ಕಳುಹಿಸಿ, ಭರತನಿಗೆ ಪಟ್ಟವನ್ನು ಕಟ್ಟಬೇಕೆಂದು ಕೈಕೆಯಿಯು ಉದ್ದೇಶಪೂರ್ವಕವಾಗಿ ದಶರಥನನ್ನು ಕೇಳಿಕೊಳ್ಳುತ್ತಾಳೆ. ಪ್ರತಿಮಾನಾಟಕದಲ್ಲಿಯ ಸಂವಿಧಾನವೇ ಬೇರೆ. ಕೈಕೆಯಿಗೆ ರಾಮನಲ್ಲಿ ಅತ್ಯಂತ ಪ್ರೇಮ ಆದರೆ, ಅವಳೊಂದನ್ನು ಎಣಿಸಿದರೆ ದೈವವು ತಾನೊಂದನ್ನು ಎಣಿಸುತ್ತದೆ. ರಾಮನ ಪಟ್ಟಾಭಿಷೇಕಕ್ಕಾಗಿ

ಸಕಲ ಸಂರಂಭಗಳೂ ಸಿದ್ಧವಾಗುತ್ತವೆ. ಮಂಗಳ ವಾದ್ಯಗಳು ಭೋರ್ಗರೆ ಯುತ್ತವೆ. ಆ ಅಟ್ಟಹಾಸವನ್ನು ನೋಡಿ ತನ್ನ ಮಗ ಭರತನೂ ಸ್ವಲ್ಪಕಾಲ ರಾಜನಾಗಬೇಕೆಂದು ಅವಳಿಗೆ ಆಸೆಯುಂಟಾಗುತ್ತದೆ. ಅವಳು ಹದಿನಾಲ್ಕು ದಿನಗಳ ಕಾಲ ಭರತನಿಗೆ ರಾಜ್ಯಭಾರವನ್ನು ವಹಿಸುವಂತೆ ದಶರಥನನ್ನು ಕೇಳಬೇಕೆಂದು ಉದ್ದೇಶಿಸುತ್ತಾಳೆ. ತಾಯಿಯೆನಿಸಿದ ಯಾವಳಲ್ಲಿ ತಾನೆ ಇದು ಅಕ್ಷಮ್ಯವಾದ ಅಪರಾಧವೆನಿಸುತ್ತದೆ? ಆದರೆ, ದಶರಥನಮೇಲೆ ಹೊತ್ತಿರುವ ಒಂದು ಶಾಪದ ಮಹಿಮೆಯಿಂದ ಹದಿನಾಲ್ಕು ದಿನಗಳೆಂದು ಹೇಳಹೊರಟವಳು—ಅದನ್ನು ಹೇಳುವುದರಲ್ಲಿಯೂ ಪರ್ಯಾಕುಲಹೃದಯೆ ಯಾಗಿ ಹೇಳಹೊರಟವಳು—ಬಾಯಿತಪ್ಪಿ ಹದಿನಾಲ್ಕು ವರುಷಗಳೆಂದು ಹೇಳಿಬಿಡುತ್ತಾಳೆ. ರಾಮನ ವನವಾಸದ ವಿಷಯದಲ್ಲಿಯೂ ಶಾಪದ ಮಹಿಮೆಯಿಂದ ಅಚಾತುರ್ಯವು ನಡೆದುಹೋಗುತ್ತದೆ. ಭರತನು ಈ ವಿಷಯವಾಗಿ ಆರನೆಯ ಅಂಕದಲ್ಲಿ ಅವಳನ್ನು ಬಹು ಚೆನ್ನಾಗಿ ಪ್ರಶ್ನೆ ಮಾಡುತ್ತಾನೆ. ಪುತ್ರವಿಪ್ರವಾಸದ ದೆಸೆಯಿಂದ ಶೋಕಸಂತಪ್ತನಾಗಿ ದಶರಥನು ಮರಣಹೊಂದಬೇಕಾಗಿದ್ದರೆ, ನಾನೇ ವಿಪ್ರವಾಸ ಹೊರಡಬಹು ದಾಗಿದ್ದಿತಲ್ಲವೆ—ಎಂದು ಭರತನು ಕೇಳಿದಾಗ, ಕೈಕೆಯಿಯು ನೀನು ಸೋದರ ಮಾವನ ಮನೆಯಲ್ಲಿಯೇ ಪರಸ್ಥಳದಲ್ಲಿದ್ದುದರಿಂದ ವಿಪ್ರವಾಸವು ನಿನಗೆ ಪ್ರಕೃತೀಭೂತವಾಗಿದ್ದಿತೆಂದು ಉತ್ತರ ಹೇಳುವಳು. ಇದೂ ಹಾಗಿರಲಿ. ಅವಳು ತಾನುಮಾಡಿದ ಅಪರಾಧಕ್ಕಾಗಿ ಬಹುವಾಗಿ ಪಶ್ಚಾತ್ತಾಪಪಡುವಳು. ಭರತನು ಆಡುವ ಪರುಷವಾಕ್ಯಗಳಿಗೆಲ್ಲ ತಲೆಯೊಡ್ಡಿ ನಿಲ್ಲುವಳು. ನಿಜಸ್ಥಿತಿಯನ್ನರಿಯದ ಭರತನು ಕೋಪದಿಂದ ಕೆರಳಿ ಕೌಸಲ್ಯಾ ಸುಮಿತ್ರೆ ಯರ ಮಧ್ಯದಲ್ಲಿ ಗಂಗಾ ಯಮುನಾನದಿಗಳ ಮಧ್ಯದ ಕುನದಿಯಂತೆ ಕೈಕೆಯಿಯು ಪ್ರವೇಶಿಸಿದ್ದುದಾಗಿ ಗರ್ಜಿಸಿದಾಗ ಕೂಡ, ಅವಳು ಸುಮ್ಮನಿರು ವಳು. ಮುಂದೆ ನಿರ್ದೋಷಿಯೆಂದು ತಿಳಿದಾಗ ಭರತನು (ಆರನೆಯ ಅಂಕದಲ್ಲಿ) ಅವಳ ಕ್ಷಮೆಯನ್ನು ಬೇಡುವನು. ಅವಳ ಮನಸ್ಸಿಗೆ ಶಾಂತಿ ಯಿಲ್ಲ. ರಾಮನು ರಾಜ್ಯಸೂತ್ರವನ್ನು ಸ್ವೀಕರಿಸುವ ದಿನವನ್ನು ಕಂಡೇನೇ ಎಂದು ಹಾರೈಸುತ್ತಿರುವಳು. ಆಶ್ರಮದಲ್ಲಿ ಅವನಿಗೆ ಪಟ್ಟಾಭಿಷೇಕವಾದಾಗ "ವತ್ಸ, ಈ ಮನೋರಥವು ಚಿರಾಭಿಲಕ್ಷಿತವಾದುದು." ("ಜಾದ, ಚಿರಾಹಿಳಸಿಜೋಖು ಸೋ ಮಣೋರಹೋ.") ಎಂದು ಹೇಳುವುದರಿಂದ

ಈ ಅಂಶವು ವ್ಯಕ್ತವಾಗುವುದು. ಇವು ಔಪಚಾರಿಕವಾಗಿ ಹೇಳಿದ ಮಾತು ಗಳಲ್ಲ. ಚಿರಕಾಲ ಪಶ್ಚಾತ್ತಾಪಪಟ್ಟು ಶೋಕದಿಂದ ಜರ್ಝರಿತವಾದ ದೀರ್ಘ ಹೃದಯದಿಂದ ಈಚೆಗೆ ಬಂದ ನಿಶ್ಚಲವಾದ ಪ್ರೇಮದ ನುಡಿಗಳಿವು! ಅದಕ್ಕೆ ಮುಂದೆ ನಿದರ್ಶನಗಳು ದೊರೆಯುತ್ತವೆ: ರಾಮನಿಗೆ ಪಟ್ಟಾಭಿಷೇಕವಾದಾಗಿನ ವಿಜಯಘೋಷವನ್ನು ಕೇಳಿ ಅವಳು ಆನಂದಪಡುತ್ತಾಳೆ. ಕಾಂಚುಕೀಯನು ರಾಮನನ್ನು "ಮಹಾರಾಜ" ಎಂದು ಸಂಬೋಧಿಸುವುದನ್ನು ಕಂಡು ಅವಳು ಸಂತೋಷದಿಂದ ಉಬ್ಬಿಹೋಗುವಳು. ಆಶ್ರಮದಲ್ಲಿ ರಾಮನಿಗೆ ಕಿರೀಟಧಾರಣೆಯಾದಮೇಲೆ ಅವಳು ಮಾತೃವಾತ್ಸಲ್ಯದಿಂದ, "ಧನ್ಯೆಯಾದೆ. ಈ ಕಿರೀಟಧಾರಣೆಯ ಉತ್ಸವವನ್ನು ಅಯೋಧ್ಯೆಯಲ್ಲಿಯೂ ನೋಡ ಲಿಚ್ಛಿಸುವೆನು" ("ಧಣ್ಣಾ ಖುಹ್ಮಿ। ಇದಂ ಅಬ್ಭುದಅಂ ಅಓಜ್ಝಾಅಂ ಪೇಕ್ಖಿದುಂ ಇಚ್ಛಾಮಿ.") ಎಂದು ಹೇಳುವಳು. ರಾಮನ ಪಟ್ಟಾಭಿಷೇಕವು ವಿಶೇಷ ಅಟ್ಟಹಾಸದಿಂದ ಮತ್ತೊಮ್ಮೆ ಅಯೋಧ್ಯೆಯಲ್ಲಿ ನಡೆಯಬೇಕೆಂದು ಅವಳು ಆಂತರವಾಗಿ ಬಯಸಿ ಹೀಗೆ ಹೇಳುವಳು. ರಾಮಾಯಣದಲ್ಲಿ ಕೈಕೆಯಿಯು ಸ್ವಲ್ಪಮಟ್ಟಿಗೆ ಕಠೋರಹೃದಯಳೇ ಸರಿ. ರಾಮ ಲಕ್ಷ್ಮಣರಿಗೆ ನಾರು ಮಡಿಗಳನ್ನು ಕೊಡುವುದೇ ಅವಳಿಗೊಂದು ಸಂತೋಷ. ಸೀತೆಗೆ ಕೂಡ ಅವಳು ಉತ್ಸಾಹದಿಂದ ನಾರುಮಡಿಯನ್ನು ಕೊಡಹೋಗುವಳು. ಆದರೆ ವಸಿಷ್ಠರು ಅದನ್ನು ತಪ್ಪಿಸುವರು. ಭಾಸನ ಸಂವಿಧಾನ ಕೌಶಲದಿಂದ ವನವಾಸಕ್ಕೆ ಹೊರಡುವ ಯೋಚನೆಯು ತನ್ನ ಮನಸ್ಸಿಗೆ ಬರುವುದಕ್ಕೆ ಮೊದಲೇ ಪ್ರತಿಮಾ ನಾಟಕದಲ್ಲಿ ಸೀತೆಯು ವಲ್ಕಲವನ್ನು ಧರಿಸಿರುವಳು. ರಾಮನು ವಲ್ಕಲವನ್ನಪೇಕ್ಷಿಸುವ ವೇಳೆಗೆ ಸರಿಯಾಗಿ ಆರ್ಯರೇವೆಯು ವಲ್ಕಲಗಳನ್ನು ಕಳುಹಿಸುವಳು. ರಾಮನು ಅದನ್ನು ಧರಿಸುವನು. ಕೈಕೆ ಯಿಯ ಪಾತ್ರವನ್ನು ಕಡೆದು ಸಿದ್ಧಗೊಳಿಸುವಲ್ಲಿ ಭಾಸನು ಬಹು ಜಾಣ್ಮೆ ಯನ್ನು ತೋರಿಸಿರುವನು.

**ಲಕ್ಷ್ಮಣ**

ಲಕ್ಷ್ಮಣನ ಪಾತ್ರವೂ ಮನೋಹರವಾಗಿದೆ. ಕೋಪಬಂದರೂ ಅದು ಕ್ಷಣಿಕವಾಗಿರುವುದು ಉತ್ತಮರ ಲಕ್ಷಣ. ಲಕ್ಷ್ಮಣನೂ ಇದೇ ಗುಂಪಿಗೆ ಸೇರಿದವನು. ಅವನ ಕೋಪವೆಂದರೆ ಕೈಯಲ್ಲಿ ಭಾಗಮಾಡಿದ ನೀರು ಸರೋವರದಲ್ಲಿ ಕೈಯೆತ್ತಿ

ದೊಡನೆಯೇ ಮತ್ತೆ ಸೇರುವಂತೆ ಮೊದಲು ಕೋಪಗೊಂಡಿದ್ದ ಲಕ್ಷ್ಮಣನು ರಾಮನು ಸಮಾಧಾನ ಹೇಳಿದೊಡನೆಯೇ ಶಾಂತನಾಗಿ ಹೊರಟುಹೋಗುವನು. ಆಬಳಿಕ ಅವನ ಚಿತ್ತವೆಂದಿಗೂ ಕ್ಷೋಭೆಹೊಂದದು. ಅವನ ಶಾಂತಿಯು ಅಂದಗೆಡದು. ವಾಲ್ಮೀಕಿ ರಾಮಾಯಣದಲ್ಲಿ ಲಕ್ಷ್ಮಣನು ಕಾಡಿಗೆ ಹೋದಮೇಲೆ ದಶರಥನಿಗೆ ಬಿರುನುಡಿಯ ಬಿನ್ನಹವನ್ನು ಕಳುಹಿಸುವಂತೆ ಪ್ರತಿಮಾ ನಾಟಕದಲ್ಲಿ ಲಕ್ಷ್ಮಣನು ಕಳುಹಿಸಿಲ್ಲ. ಭರತನು ಆಶ್ರಮಕ್ಕೆ ಬಂದಾಗ, ಅವನು ತಮ್ಮಮೇಲೆ ದಂಡೆತ್ತಿಬಂದನೆಂದೂ, ಅವನಿಗೆ ತಮ್ಮಲ್ಲಿ ದ್ವೇಷವೆಂದೂ, ರಾಮಾಯಣದಲ್ಲಿ ಲಕ್ಷ್ಮಣನು ರಾಮನಿಗೆ ಹೇಳುತ್ತಾನೆ. ಪ್ರತಿಮಾ ನಾಟಕದಲ್ಲಿ ಲಕ್ಷ್ಮಣನ ಪ್ರೇಮಪೂರಿತವಾದ ಸರಳ ಹೃದಯದಲ್ಲಿ ಇದಕ್ಕೆ ಅವಕಾಶವೇ ಇಲ್ಲ.

**ರಾವಣ**

ಪ್ರತಿಮಾ ನಾಟಕದ ರಾವಣನು ರಾಮಾಯಣದ ರಾವಣನಿಗಿಂತಲೂ, ಜಘನ್ಯವೃತ್ತಿಯ ನೃಶಂಸಕ. ಕೃತಘ್ನನಾದ ಹುಟ್ಟುಕೇಡಿಗ. ರಾಮನೂ, ಸೀತೆಯೂ ತನ್ನನ್ನು ಗೌರವಿಸಿ ಪೂಜಿಸಿದ ಮೇಲೆ—ರಾಮನು ತನ್ನನ್ನು ನಂಬಿ ಸೀತೆಗೆ "ಶುಶ್ರೂಷಸ್ವ ಭಗವಂತಂ" ಎಂದುಹೇಳಿ ಅವಳು ತನ್ನನ್ನು ಸೇವಿಸುತ್ತಿರಬೇಕೆಂದು ಬೆಸಸಿ ಹೊರಟುಹೋದುದನ್ನು ನೋಡಿಯೂ—ಅವನು ಸೀತೆಯನ್ನು ಅಪಹರಿಸಿಕೊಂಡು ಹೋಗುವನು. ರಾಮಾಯಣದಲ್ಲಿ ರಾವಣನು ರಾಮನಿಗೆ ಕೃತಜ್ಞನಾಗಿರಬೇಕಾದ ಆವಶ್ಯಕತೆಯೇ ಇಲ್ಲ.

**ಭರತ**

ಭರತನ ಪಾತ್ರವು ರಾಮಾಯಣದಲ್ಲಿರುವುದಕ್ಕಿಂತಲೂ ಉಜ್ಜ್ವಲವಾಗಿ ಶೋಭಿಸುತ್ತಿದೆ. ದಶರಥನ ಮರಣಕ್ಕಾಗಿಯೂ ರಾಮಚಂದ್ರನ ವನವಾಸಕ್ಕಾಗಿಯೂ ಮುನಿಸೊಂದ ಭರತನು ಮಂಥರೆ ಮುಂತಾದವರನ್ನು ಪ್ರಹರಿಸಿದಂತೆ ರಾಮಾಯಣದಲ್ಲಿ ಚಿತ್ರಿತವಾಗಿದೆ. ಪ್ರತಿಮಾ ನಾಟಕದ ಭರತನ ದುಃಖ ಸಂತಾಪಗಳೂ ಕಡಮೆಯಾಗಿಲ್ಲ. ಆದಾಗ್ಯೂ ಅವನಲ್ಲಿ ಚಿತ್ತದಮನ ಸಾಮರ್ಥ್ಯವು ಹೆಚ್ಚಾಗಿದೆ. ಅವನು ಖತಿಗೊಂಡು ತಾಯಿಯನ್ನು ನಿಂದಿಸುವನಾದರೂ, ಯಾರೊಬ್ಬರನ್ನು ಪ್ರಹರಿಸುವ ಯೋಚನೆಯೂ ಅವನಿಗಿಲ್ಲ. ಅವನು ತನ್ನ

ತಾಯಿಯು ಮಾಡಿದ ಅಪರಾಧವನ್ನು ತಾನೇ ಮಾಡಿದ್ದಂತೆ ಭಾವಿಸಿಕೊಂಡು ಸಂಕಟಪಡುವನು. ಅವಳ ರಾಜ್ಯಲೋಭದ ದೆಸೆಯಿಂದ ಅನರ್ಥಗಳುಂಟಾದುದಕ್ಕೆ ಸಂಕಟಪಡುವನು. ಪ್ರಜೆಗಳೊಡನೆ ರಾಮನೆಡೆಗೆ ಹೊರಡಲು ಸಿದ್ಧನಾದ ಭರತನನ್ನು ಕುರಿತು ಸುಮಂತ್ರನು “ರಾಜ್ಯಾಭಿಷೇಕವನ್ನು ಪರಿತ್ಯಜಿಸಿ ನೀನೆಲ್ಲಿಗೆ ಹೊರಡುವೆ?” ಎಂದು ಕೇಳಿದಾಗ ಅವನು ಹೇಳುವ “ರಾಜ್ಯಾಭಿಷೇಕವೆ? ಈ ಪೂಜ್ಯಳಿಗೆ ರಾಜ್ಯಾಭಿಷೇಕಮಾಡಿ” ಎಂಬ ಉತ್ತರದಿಂದ ಅವನ ಮನಸ್ಸಿನ ಯಾತನೆಯೂ, ತನ್ನ ಮಾತೆಯಾದರೂ—ಅಪರಾಧಿನಿಯೆಂದು ತಾನು ಭಾವಿಸಿರುವ—ಕೈಕೆಯಿಯಲ್ಲಿ ಅವನಿಗಿರುವ ತಿರಸ್ಕಾರಬುದ್ಧಿಯೂ ವ್ಯಕ್ತವಾಗುವುವು. ಸುಮಂತ್ರನು ಆ ಬಳಿಕ “ನೀನು ಎಲ್ಲಿಗೆ ಹೋಗುವೆ?” ಎಂದು ಕೇಳಿದಾಗ ಭರತನು ಹೇಳುವ ಉತ್ತರವು ರಾಘವನಲ್ಲಿ ಅವನಿಗಿರುವ ಪ್ರೇಮವನ್ನು ವ್ಯಕ್ತಪಡಿಸುವುದು. “ಲಕ್ಷ್ಮಣಪ್ರಿಯನಾದ ರಾಘವನಿರುವೆಡೆಗೆ ಹೋಗುವೆನು. ಅವನಿಲ್ಲದ ಬಳಿಕ ಅಯೋಧ್ಯೆಯು ಅಯೋಧ್ಯೆಯಲ್ಲ, ಆತನಿರುವೆಡೆಯೇ ಅಯೋಧ್ಯಾನಗರ”* ಎಂಬುದೇ ಅವನ ಉತ್ತರ.

ಮುಂದೆ ಅರಣ್ಯಪ್ರವೇಶಮಾಡಿದಾಗ ಭರತನು ಸುಮಂತ್ರನನ್ನು ಕುರಿತು “ರಾಜ್ಯಲುಬ್ಧೆಯಾದ ಕೈಕೆಯಿಯ ಪುತ್ರ ಭರತನು ಬಂದಿದ್ದಾನೆಂದು (ರಾಮನಿಗೆ) ಅರಿಕೆಮಾಡು” ಎನ್ನುವನು. ಕುಮಾರನ ಸಂಕಟವನ್ನರಿತ ಸುಮಂತ್ರನು ಆಕೆಯ ಮೇಲಣ ಆ ಅಪವಾದವನ್ನು ಸೂಚಿಸುವುದು ಅನುಚಿತವೆಂದು ಸಮಾಧಾನ ಹೇಳಿದಾಗ, ಅವನು “ನಿಜ; ಪರದೋಷವನ್ನು ಹೇಳುವುದು ಯುಕ್ತವಲ್ಲ. ಆದಕಾರಣ, ಇಕ್ಷ್ವಾಕುಕುಲಕ್ಕೆ ಕಳಂಕಪ್ರಾಯನಾದ ಭರತನು ದರ್ಶನವನ್ನಪೇಕ್ಷಿಸುವನೆಂದು ಹೇಳು” ಎನ್ನುವನು. ಸುಮಂತ್ರನು “ಕುಮಾರ! ನಾನು ಹೀಗೆ ಹೇಳಲಾರೆ. ಭರತನು ಬಂದಿರುವನೆಂದು ಮಾತ್ರವೇ ಹೇಳುವೆನು.” ಎಂದು ಉತ್ತರ ಕೊಡುವನು. ಭರತನು “ಕೂಡದು, ಕೂಡದು. ಬರಿಯ ಹೆಸರನ್ನೇ ಹೇಳಿದರೆ ಪ್ರಾಯಶ್ಚಿತ್ತ

---

* “ತತ್ರ ಯಾಸ್ಯಾಮಿ ಯತ್ರಾಸೌ ವರ್ತತೇ ಲಕ್ಷ್ಮಣಪ್ರಿಯಃ
ನಾಯೋಧ್ಯಾ ತಂ ವಿನಾಯೋಧ್ಯಾ ಸಾಯೋಧ್ಯಾ ಯತ್ರ ರಾಘವಃ”

ಮಾಡಿಕೊಂಡಂತಾಗುವುದಿಲ್ಲವೆಂದು ತೋರುವುದು. ಇಷ್ಟಕ್ಕೂ ಬ್ರಹ್ಮಹತ್ಯ ಮಾಡಿದವರ ಹೆಸರನ್ನು ಇತರರು ತಿಳಿಸಬಹುದೆ? ಆದಕಾರಣ ನೀನು ಸುಮ್ಮನಿರು, ನಾನೇ ಅರಿಕೆಮಾಡಿಕೊಳ್ಳುವೆನು. ಎಲ್ಲೈ ಎಲ್ಲೈ! ನಿರ್ಘೃಣನೂ, ಕೃತಘ್ನನೂ, ಪಾಮರನೂ, ದುಷ್ಟನೂ—ಆದರೂ ಭಕ್ತಿಯುಳ್ಳವನೂ—ಆದವನೊಬ್ಬನು ಬಂದಿದ್ದಾನೆ. ಇರಬಹುದೋ ಹೊರಡಬೇಕೋ ಎಂದು ಪೂಜ್ಯನೂ ಪಿತೃವಾಕ್ಯಪರಿಪಾಲಕನೂ ಆದ ರಾಘವನಿಗೆ ತಿಳಿಸಿ'' ಎನ್ನುವನು. ಅವನ ದೈನ್ಯಕ್ಕೆ ಪರಿಮಿತಿಯೇ ಇಲ್ಲ.

ಭರತನು ಸರಳಹೃದಯನಾದ ಭ್ರಾತೃಪ್ರೇಮಿ. ರಾಮನು ನೀರು ಬೇಕೆಂದು ಕೇಳಿದಾಗ ನೀರನ್ನು ತರಲು ಹೊರಟ ಲಕ್ಷ್ಮಣನೊಡನೆ ಭರತನು "ಆರ್ಯ, ಇದು ನ್ಯಾಯವಲ್ಲ. ಶುಶ್ರೂಷೆಮಾಡಬೇಕಾದುದು ಕಿರಿಯನಾದ ನನ್ನ ಕೆಲಸ. ನಾನೇ ಹೋಗುತ್ತೇನೆ'' ಎಂದು ಹೇಳಿ ನೀರನ್ನು ತರುವನು. ಅವನ ಸರಳತೆಯನ್ನು ಕಂಡು ಮೆಚ್ಚದವರಾರು? ಕೊನೆಗೆ, ರಾಮನು ತಾನು ಊರಿಗೆ ಹಿಂತಿರುಗುವುದಿಲ್ಲವೆಂದೂ, ತಾಯಿಯು ಕೋರಿದಂತೆ ಭರತನಿಗೇ ರಾಜ್ಯಾಭಿಷೇಕವಾಗಬೇಕೆಂದೂ ಸೂಚಿಸಿದಾಗ ಭರತನು "ಆರ್ಯನು ಪ್ರಸನ್ನನಾಗಬೇಕು. ಆರ್ಯ, ಹುಣ್ಣಿನಮೇಲೆ ಹೊಡೆಯುವುದು ಉಚಿತವಲ್ಲ. ನಿನ್ನ ವಂಶವೇ ನನ್ನ ವಂಶವೂ ಆಗಿದೆ. ನಿನ್ನ ತಂದೆಯೇ ನನ್ನ ತಂದೆಯೂ ಹೌದು. ಎಲೈ ಸತ್ಪುರುಷನೆ, ಮಾತೃದೋಷವನ್ನು ದೋಷವಾಗಿ ಯಾರೂ ಎಣಿಸರು. ಆರ್ತನಾದ ಭರತನಲ್ಲಿ ದಯೆಮಾಡಿ ನಿಜಸ್ಥಿತಿಯನ್ನು ನೋಡು'' ಎಂದು ಹೇಳುವ ದೈನ್ಯವಾಣಿಗಳಲ್ಲಿ ಕರುಣಾರಸವು ಉಕ್ಕಿ ಹರಿಯುತ್ತಿದೆ. ಆ ಮಾತುಗಳನ್ನು ಕೇಳಿ ರಾಮನು ಮುಗ್ಧನಾಗಿ ಆಲೋಚನಾ ಪರವಶನಾಗುವನು. ಸೀತಾದೇವಿಯು ಅದಕ್ಕೆ ಕಾರಣವನ್ನು ಕೇಳಿದಾಗ ಗುಣನಿಧಿಯಾದ ಭರತನ ಆ ಸದ್ಗುಣಗಳನ್ನು ನೋಡಿ ತಮ್ಮ ತಂದೆಯು ಸಂತೋಷಿಸಲಿಲ್ಲವಲ್ಲಾ ಎಂದು ಚಿಂತಿಸುತ್ತಿದ್ದುದಾಗಿ ತಿಳಿಸುವನು. ಭರತನ ಭಕ್ತಿಗೂ, ರಾಮಚಂದ್ರನ ಪ್ರೇಮಕ್ಕೂ ವಾಚಕರ ಮನಸ್ಸು ಕರಗಿ ಕಣ್ಣೀರಿನ ರೂಪದಲ್ಲಿ ಹೊರಸೂಸುವುದು. ಭರತನ ಸರಳತೆಯೂ ಭ್ರಾತೃಪ್ರೇಮವೂ ಅಲ್ಲಿಗೇ ಮುಗಿಯುವುದಿಲ್ಲ. ಹದಿನಾಲ್ಕು ವರ್ಷಗಳ ಅವಧಿಯು ಕಳೆದ ಬಳಿಕ ರಾಘವನು ರಾಜ್ಯವನ್ನು ಸ್ವೀಕರಿಸ

ಬೇಕೆಂದು ತಾನು ಬೇಡಿದುದಕ್ಕೆ ಅಣ್ಣನು ಒಪ್ಪಿದುದೇ ಮನಸ್ಸಿಗೊಂದು ಆನಂದ. ಮುಂದೆ ರಾಮನೆಲ್ಲಿ ಅದನ್ನು ಮರೆಯುವನೋ ಎಂಬ ಶಂಕೆಯಿಂದಲೋ—ಎಂಬಂತೆ ಭರತನು "ಆರ್ಯೆ, ಕೇಳಿದೆಯೋ? ಆರ್ಯ ಲಕ್ಷ್ಮಣ, ಕೇಳಿದೆಯೋ? ತಾತ, ಸುಮಂತ್ರ ಕೇಳಿದೆಯೋ?" ಎಂದು ಕೇಳಿ ತನ್ನ ಆನಂದೋತ್ಸಾಹಗಳನ್ನು ತೋರಿಸುವನು. ತಾವೆಲ್ಲರೂ ಅದನ್ನು ಕೇಳಿದುದಾಗಿ ಅವರು ನುಡಿಯುವರು. ಬಳಿಕ ಭರತನು "ಆರ್ಯ! ಮತ್ತೊಂದು ವರವನ್ನು ಪಡೆಯಲಿಚ್ಛಿಸುವೆನು" ಎನ್ನುವನು. ಅವನ ಸೌಜನ್ಯಕ್ಕೆ ಬೆರಗಾದ ಶ್ರೀರಾಮಚಂದ್ರನು "ವತ್ಸ, ಏನನ್ನಿಚ್ಛಿಸುವೆ? ಏನನ್ನು ಕೊಡಲಿ? ನಾನೇನನ್ನು ನಡೆಯಿಸಿಕೊಡಲಿ?" ಎಂದು ಕೇಳುವನು. ಇಲ್ಲಿ ಮೂರು ಪ್ರಶ್ನೆಗಳನ್ನು ಕೇಳಿಸಿರುವುದರಲ್ಲಿ ರಮ್ಯತೆಯುಂಟು. ಆಗಿನ ಸ್ಥಿತಿಯಲ್ಲಿ ಒಂದು ಪ್ರಶ್ನೆಯಿಂದ ರಾಮಚಂದ್ರನ ಮನಸ್ಸಿಗೆ ತೃಪ್ತಿಯಾಗುವಂತಿಲ್ಲ. ಪ್ರೇಮಾರ್ದ್ರ ಹೃದಯನಾದ ಆತನು ಭರತನ ಸೌಜನ್ಯಕ್ಕೆ ಪ್ರತಿಯಾಗಿ ಅದಕ್ಕೆ ಸರಿದೂಗುವಷ್ಟನ್ನು ತಾನೇನನ್ನು ಮಾಡಬಲ್ಲೆನೆಂಬ ತವಕದಿಂದಲೂ ಆತುರದಿಂದಲೂ ಆ ರೀತಿ ಪ್ರಶ್ನೆಯಮೇಲೆ ಪ್ರಶ್ನೆಯನ್ನು ಕೇಳುತ್ತಾನೆ. ಭರತನು ರಾಮನಿಂದ ಪಾದುಕೆಗಳನ್ನು ಬೇಡಿ ರಾಮನು ಹಿಂತಿರುಗುವವರೆಗೂ ತಾನು ರಾಜ್ಯಾಧಿಕಾರವನ್ನು ಅವಕ್ಕೆ ವಹಿಸಿ ವಿಧೇಯನಾಗಿ ನಡೆದುಕೊಳ್ಳುವುದಾಗಿ ಹೇಳುವನು. ಅದನ್ನು ಕೇಳಿ ವಿಸ್ಮಿತನಾದ ಶ್ರೀರಾಮನು "ಇದುವರೆಗಿನ ಇಷ್ಟು ದೀರ್ಘಕಾಲದಲ್ಲಿ ನಾನು ಆರ್ಜಿಸಿದಷ್ಟು ಯಶಸ್ಸನ್ನು ಭರತನು ಈಗ ಕ್ಷಣಕಾಲದಲ್ಲಿಯೇ ಗಳಿಸಿಬಿಟ್ಟನು" ಎಂದು ತನ್ನಲ್ಲಿ ತಾನೆ ಹೇಳಿಕೊಂಡು ಸಂತೋಷಿಸುವನು.

ರಾಮಾಯಣದಲ್ಲಿಲ್ಲದ ಘಟನೆಯೊಂದನ್ನು ಕವಿಯು ಆರನೇ ಅಂಕದಲ್ಲಿ ಚಿತ್ರಿಸಿರುವುದೂ ಸಹ, ಭರತನ ಬಂಧುಪ್ರೇಮವನ್ನೂ ಹೃದಯಮಾರ್ದವವನ್ನೂ ತೋರ್ಪಡಿಸಿ ಪಾತ್ರಪೋಷಣೆ ಮಾಡುವುದಕ್ಕಾಗಿಯೇ. ಭರತನು ತಾನು ಅಯೋಧ್ಯೆಗೆ ಹಿಂತಿರುಗಿದ ಬಳಿಕ ಸ್ವಲ್ಪಕಾಲದ ಮೇಲೆ ಸೀತಾ ಲಕ್ಷ್ಮಣ ಸಮೇತನಾದ ಶ್ರೀರಾಮಚಂದ್ರನ ಕುಶಲವನ್ನು ವಿಚಾರಿಸಿಕೊಂಡು ಬರಲು ಸುಮಂತ್ರನನ್ನು ಜನಸ್ಥಾನಕ್ಕೆ ಕಳುಹಿಸುವನು. ಈ ಘಟನೆಯು

ರಾಮಾಯಣದಲ್ಲಿಲ್ಲ. ಸುಮಂತ್ರನು ಸೀತಾಪಹರಣದ ವಾರ್ತೆಯನ್ನು ತರುವನು. ಆದರೆ ಕುಮಾರನ ಹೃದಯವೆಷ್ಟು ಕೋಮಲವೆಂಬುದನ್ನರಿತ ಸುಮಂತ್ರನು ಅವನಿಗೆ ಆ ದಾರುಣವಾರ್ತೆಯನ್ನರುಹದೆ ಅಡ್ಡಮಾತುಗಳನ್ನಾಡುವನು. ಅವನ ಅನುಮಾನದ ಮಾತುಗಳಿಂದ ಭರತನು ಅನಿಷ್ಟವನ್ನು ಶಂಕಿಸಿ ದಶರಥನ ಪಾದಸಾಕ್ಷಿಯಾಗಿ ಸತ್ಯವನ್ನು ಹೇಳಬೇಕೆಂದು ಕೋರಲು, ಸುಮಂತ್ರನು ನಿರುಪಾಯನಾಗಿ ನಿಜಸ್ಥಿತಿಯನ್ನು ತಿಳಿಸುವನು. ಅದನ್ನು ಕೇಳಿ ಭರತನು ಮೂರ್ಛಿತನಾಗುವನು. ತರುವಾಯ ಸುಮಂತ್ರನೊಡನೆ ಅವನು ತನ್ನ ತಾಯಿಯ ಬಳಿಗೆ ಹೋಗಿ ಅವಳಿಗೆ ನಮಸ್ಕಾರವನ್ನೇ ಮಾಡದೆ ನಿಲ್ಲುವನು. ವಿಜಯೆಯೆಂಬ ಚೇಟಿಯೊಡನೆ ಅವನು ತನ್ನ ಆಗಮನವನ್ನು ತಿಳಿಸಿದಾಗಲೇ ಮತ್ತಾವ ಬಿರುನುಡಿಗಳನ್ನಾಡಲು ಭರತನು ಬಂದಿದ್ದಾನೋ ಎಂದು ಕಳವಳಪಟ್ಟುಕೊಂಡಿದ್ದ ಕೈಕೆಯಿಯೇ ಮೊದಲು ಮಾತನಾಡಿ "ರಾಮನ ಬಳಿಯಿಂದ ಸುಮಂತ್ರನು ಬಂದನೆಂದು ವಿಜಯೆ ಹೇಳಿದಳು" ಎನ್ನುವಳು. ಭರತನು "ಪೂಜ್ಯಳಾದ ನಿನಗೆ ಪ್ರಿಯವಾರ್ತೆಯನ್ನರುಹುವೆನು." ಎಂದುದನ್ನು ಕೇಳಿ "ಮಗು! ಕೌಸಲ್ಯಾ ಸುಮಿತ್ರೆಯರಿಗೂ ಹೇಳಿಕಳುಹಿಸಲೆ?" ಎಂದು ಪ್ರಶ್ನೆಮಾಡುವಳು. ವಿಧಿವಶದಿಂದ ಅವಳು ಅಕಾರ್ಯವನ್ನಾಚರಿಸಿದ್ದರೂ, ಅವಳಿಗೆ ಸವತಿ ಮಾತ್ಸರ್ಯವಿರಲಿಲ್ಲವೆಂಬುದೂ, ತನ್ನ ಸಂತೋಷದಲ್ಲಿ ಕೌಸಲ್ಯಾಸುಮಿತ್ರೆಯರೂ ಭಾಗಿನಿಯರಾಗುವುದು ಅವಳಿಗೆ ಇಷ್ಟವೆಂಬುದೂ ಇದರಿಂದ ವ್ಯಕ್ತವಾಗುತ್ತವೆ. ಭರತನು "ಅವರು ಕೇಳತಕ್ಕುದಲ್ಲ" ಎಂದುದನ್ನು ಕೇಳಿ; ಅವಳು ಅದೇನಿರಬಹುದೆಂದು ತನ್ನಲ್ಲಿ ತಾನೆ ಹೇಳಿಕೊಂಡು ಕೊನೆಗೆ "ಹೇಳು, ಮಗು" ಎನ್ನುವಳು. ಭರತನು "ನಿನ್ನ ಅಪ್ಪಣೆಯ ಮೇಲೆ ತನ್ನ ರಾಜ್ಯವನ್ನು ಬಿಟ್ಟು ವನಕ್ಕೆ ತೆರಳಿದ ರಾಮನ ಭಾರ್ಯೆಯಾದ ಸೀತೆಯು ಅಪಹೃತಳಾಗಿದ್ದಾಳೆ. ನಿನ್ನ ಮನೋರಥವು ಪೂರ್ತಿಯಾಯಿತು" ಎಂದುದನ್ನು ಕೇಳಿ ಕೈಕೆಯಿಯು ನಿಟ್ಟುಸಿರು ಬಿಟ್ಟು ತನ್ನ ಅನುತಾಪವನ್ನು ಸೂಚಿಸಿ ಸುಮ್ಮನಾಗುವಳು. ಭ್ರಾತೃಸ್ನೇಹಪರವಶನಾದ ಭರತನು "ಅಯ್ಯೋ! ವೀರರಾದ ಇಕ್ಷ್ವಾಕುವಂಶೀಯರು ಪೂಜ್ಯೆಯಾದ ನಿನ್ನನ್ನು ವಧುವಾಗಿ ಪಡೆದುದರ ಫಲವಾಗಿ ಈಗ ವಧುವಿನ ಅಪಮಾನವನ್ನು ಕಾಣಬೇಕಾಯಿತು"

ಎನ್ನುವನು. ಸರಳವಾದರೂ ಸಬಳದ ಮೊನೆಯಂತಿರುವ ಮಾತುಗಳಿವು! ಆ ಬಳಿಕ ಕೈಕೆಯಿಯು ದಶರಥನಿಗೆ ಶಾಪ ಬಂದಿದ್ದುದೇ ಮುಂತಾದ ಸಂಗತಿಗಳನ್ನರುಹಿ ಅವು ವಸಿಷ್ಠರೇ ಮುಂತಾದವರಿಗೆಲ್ಲ ತಿಳಿದಿವೆಯೆಂದು ಸಮಾಧಾನ ಹೇಳುವಳು. ಹಿಂದೆ ಅವಳ ವಿಚಾರದಲ್ಲಿ "ಇವಳು ಮೊದಲು ತಾಯಿಯಾಗಿದ್ದಳು. ಈಗಲ್ಲ" ಎಂದು ಹೇಳಿದ್ದ ಭರತನೇ ಭ್ರಾತೃಸ್ನೇಹದ ದೆಸೆಯಿಂದ ತಾನು ಮಾತೆಯಾದ ಆಕೆಯಲ್ಲಿ ಬಿರುನುಡಿಗಳನ್ನಾಡಿದ್ದುದಾಗಿ ತಿಳಿಸಿ ಅವಳಿಗೆ ನಮಸ್ಕರಿಸಿ ಕ್ಷಮೆಬೇಡುವನು. ಕೈಕೆಯಿಯೂ ಸಹ ಸರಳ ಹೃದಯನಾದ ಭರತನ ಮಾತೆಗುಚಿತವಾದ ರೀತಿಯಲ್ಲಿ "ಮಗು! ಮಾತೆಯೆನಿಸಿದವಳು ಯಾವಳು ತಾನೆ ಪುತ್ರನ ಅಪರಾಧವನ್ನು ಮನ್ನಿಸಳು? ಏಳು, ಏಳು. ನೀನು ಮಾಡಿರುವ ತಪ್ಪು ತಾನೆ ಏನು?" ಎಂದು ಹೇಳುವಳು. ಬಂಧುಪ್ರೇಮಿ ಭರತನು "ಅನುಗೃಹೀತನಾದೆನು" ಎಂದು ಹೇಳಿ ರಾವಣ ನಿಧನಕ್ಕಾಗಿ ಸೈನ್ಯ ಸಮೇತನಾಗಿ ಅಂದೇ ಹೊರಡಲು ಅನುಜ್ಞೆಯನ್ನು ಬೇಡಿ ವೀರವಾಣಿಯನ್ನು ಮೆರೆಯುವನು.

——o——

# ಅಭಿಷೇಕ ನಾಟಕ

---

## ೧. ಕಥಾಸಾರಾಂಶ

ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡ, ಸುಂದರಕಾಂಡ ಮತ್ತು ಯುದ್ಧಕಾಂಡಗಳ ಕಥಾಭಾಗಗಳು ಈ ನಾಟಕದಲ್ಲಿ ಚಿತ್ರಿತವಾಗಿವೆ. ವಾಲಿಯ ವಧೆ, ಸೀತಾನ್ವೇಷಣ, ಲಂಕಾದಹನ, ರಾವಣ ಕುಂಭಕರ್ಣಾದಿ ರಾಕ್ಷಸರ ವಧೆ, ಸೀತಾಮಾತೆಯ ಅಗ್ನಿಪ್ರವೇಶ, ಅಗ್ನಿಶುದ್ಧೆಯಾದ ದೇವಿಯನ್ನು ಶ್ರೀರಾಮನು ಪರಿಗ್ರಹಿಸುವುದು—ಇವು ಈ ನಾಟಕದಲ್ಲಿ ವರ್ಣಿತವಾಗಿರುವ ಮುಖ್ಯ ಸಂಗತಿಗಳು. ಮೊದಲನೆಯ ಅಂಕದಲ್ಲಿ, ವಾಲಿಯನ್ನು ವಧಿಸುವುದಾಗಿ ಶ್ರೀರಾಮನು ಸುಗ್ರೀವನಿಗೆ ವಾಗ್ದಾನಮಾಡುವನು. ಸುಗ್ರೀವನು ವಾಲಿಯನ್ನು ಕಾಳಗಕ್ಕೆ ಕರೆಯುವನು. ತಾರೆಯು ಬಗೆಬಗೆಯಾಗಿ ನಿಷೇಧಿಸಿದರೂ ಕೇಳದೆ ಸಮುದ್ರಮಥನಕಾಲದಲ್ಲಿ ದೇವಾಸುರರನ್ನು ಹಾಸ್ಯಮಾಡಿ ವಾಸುಕಿಯನ್ನು ದರದರನೆ ಎಳೆದು ಅವರನ್ನು ಬೆರಗುಮಾಡಿದ ಶೂರನು ತಾನೆಂದುಹೇಳಿ ಅವಳನ್ನು ಅಂತಃಪುರಕ್ಕೆ ಕಳುಹಿಸಿ ವಾಲಿಯು ಯುದ್ಧಕ್ಕೆ ಬರುವನು. ವಾಲಿಸುಗ್ರೀವರು ಹೊಡೆದಾಡುವರು. ಶ್ರೀರಾಮನ ಬಾಣಪ್ರಯೋಗದಿಂದ ಆಹತನಾದ ವಾಲಿಯು, ಮೋಸದಿಂದ ತನ್ನಮೇಲೆ ಬಾಣಪ್ರಯೋಗಮಾಡಿದುದು ಉಚಿತವಲ್ಲವೆಂದು ರಾಮನನ್ನು ಆಕ್ಷೇಪಿಸುವನು. ವಾಲಿಯು ಮೃತನಾಗುವನು; ಬಳಿಕ ಶ್ರೀರಾಮನು ವಾಲಿಗೆ ಕರ್ಮಾಂತರಗಳನ್ನು ಮಾಡೆಂದು ಸುಗ್ರೀವನಿಗೆ ಅಪ್ಪಣೆಮಾಡಿ ಸುಗ್ರೀವನ ಪಟ್ಟಾಭಿಷೇಕಕ್ಕೆ ಏರ್ಪಾಡುಮಾಡುವಂತೆ ಲಕ್ಷ್ಮಣನಿಗೆ ಬೆಸಸುವನು.

ಎರಡನೆಯ ಅಂಕದಲ್ಲಿ ಸೀತೆಯು ರಾಮನನ್ನು ನೆನೆದು ಅಶೋಕವನದಲ್ಲಿ ಹಂಬಲಿಸುತ್ತಿರುವಳು. ಆಗ ಹನುಮಂತನು ಅಲ್ಲಿಗೆ ಪ್ರವೇಶಿಸುವನು. ಅಷ್ಟರಲ್ಲಿ ಪಂಜುಗಳನ್ನು ಹಿಡಿದುಕೊಂಡು ಬರುತ್ತಿರುವ ರಾವಣನನ್ನು ನೋಡಿ ಹನುಮಂತನು ವೃಕ್ಷವನ್ನೇರಿ ಮರೆಯಾಗುವನು. ತನ್ನೊಡನೆ ಪ್ರೇಮಾಲಾಪವಾಡಲು ಪ್ರಾರಂಭಿಸಿದ ರಾವಣನನ್ನು ಸೀತಾದೇವಿಯು

ಶಪಿಸುವಳು. ದೇವದಾನವರನ್ನು ಗೆದ್ದ ತಾನು ಕೂಡ ಆ ಪತಿವ್ರತೆಯ ರೋಷ ಭೀಷಣವಾದ ಶಾಪದ ನುಡಿಗಳಿಂದ ಚಕಿತನಾದುದನ್ನು ರಾವಣನು ತನ್ನಲ್ಲಿ ತಾನು ಒಪ್ಪಿಕೊಂಡು ಅವಳ ಪಾತಿವ್ರತ್ಯದ ಘನತೆ ಗಾಂಭೀರ್ಯ ಗಳನ್ನು ಕೊಂಡಾಡುವನು. ಅಷ್ಟರಲ್ಲಿ ಸ್ನಾನದ ವೇಳೆಯು ಸನ್ನಿಹಿತವಾಗಿದೆ ಯೆಂಬ ಸೂಚನೆಯನ್ನು ಕೇಳಿ ಅವನು ಅರಮನೆಗೆ ತೆರಳುವನು. ಆಬಳಿಕ ಹನುಮಂತನು ಸೀತೆಯನ್ನು ಕಂಡು, ತಾನು ರಾವಣನಕಡೆಯ ರಾಕ್ಷಸ ನಲ್ಲವೆಂದೂ, ರಾಮನಕಡೆಯವನೆಂದೂ ತಿಳಿಸುವನು. ಸೀತಾವೃತ್ತಾಂತ ವನ್ನು ರಾಮನಿಗೆ ಹೇಳಲು ಹಿಂತಿರುಗುವುದಕ್ಕೆ ಹನುಮಂತನು ಅಪ್ಪಣೆ ಬೇಡುವನು.

ಮೂರನೆಯ ಅಂಕದಲ್ಲಿ, ಹನುಮಂತನಿಂದ ಅಶೋಕವನನಾಶವೂ, ಅಕ್ಷಕುಮಾರನ ಮರಣವೂ ನಡೆಯುವುವು. ಹನುಮಂತನನ್ನು ಹಿಡಿದು ತರಲು ಇಂದ್ರಜಿತುವು ಹೊರಡುವನು. ರಾವಣನನ್ನು ನೋಡಲು ಕುತೂಹಲಪಡುತ್ತಿರುವ ಹನುಮಂತನು ತಾನಾಗಿಯೇ ಇಂದ್ರಜಿತುವಿಗೆ ಸೆರೆಸಿಕ್ಕುವನು. ರಾಕ್ಷಸರು ತನ್ನೆಡೆಗೆ ಕರೆದುತಂದ ಹನುಮಂತನನ್ನು ನೋಡಿದಾಗ ಅಷ್ಟು ಹಾವಳಿಯೂ ಆ ಕಪಿಯಿಂದ ನಡೆಯಿತೆಂಬುದನ್ನೇ ರಾವಣನು ನಂಬಲಾರದೆ ಹೋಗುವನು. ವಿಭೀಷಣನ ಮಾತಿನಲ್ಲಿಯೂ ಅವನಿಗೆ ನಂಬಿಕೆಯಿಲ್ಲ. ಅದು ಸಾಧ್ಯವೇ, ವಿಭೀಷಣನೇ ನೋಡಿ ಬಂದಿದ್ದನೇ—ಎಂಬುದು ಅವನ ಸಂಶಯ. ಕೊನೆಗೆ ಹನುಮಂತ ನಾರೆಂಬುದನ್ನು ಅವನನ್ನೇ ಕೇಳಬಹುದೆಂದು ವಿಭೀಷಣನು ಸಲಹೆ ಮಾಡುವನು. ಹನುಮಂತನು ತನ್ನ ಪರಿಚಯವನ್ನು ಹೇಳಿದಮೇಲೆ "ರಾಮಶಾಸನವನ್ನು ಕೇಳಿ" ಎನ್ನುವನು. ರಾವಣನು ರೋಷಪೂರಿತನಾಗಿ "ರಾಮಶಾಸನವೆಂದನೆ? ಆಃ! ಈ ವಾನರನನ್ನು ಕೊಲ್ಲಿರಿ" ಎನ್ನುವನು. ವಿಭೀಷಣನು ದೂತವಧೆಯು ನಿಷಿದ್ಧಕಾರ್ಯವೆಂದು ತಿಳಿಸುವನು. ದುರ್ಗವನ್ನು ಹೊಕ್ಕರೂ, ಶಂಕರನನ್ನು ಮರೆಹೊಕ್ಕರೂ, ಪಾತಾಳಕ್ಕೆ ಹೋದರೂ ಬಿಡದೆ ತನ್ನ ಶರವರ್ಷದಿಂದ ರಾವಣನನ್ನು ತುಂಡುತುಂಡು ಮಾಡಿ ಯಮಲೋಕಕ್ಕೆ ಕಳುಹಿಸುವುದಾಗಿ ರಾಮನು ಹೇಳಿದನೆಂದು ಹನುಮಂತನು ತಿಳಿಸುವನು. ಅದನ್ನು ಕೇಳಿ ರಾವಣನು ಗಹಗಹಿಸಿ ನಕ್ಕು

ತಾನು ದೇವದಾನವರನ್ನು ಗೆದ್ದು ಕುಬೇರನ ಪುಷ್ಪಕ ವಿಮಾನವನ್ನು ಕೂಡ ಕಸಿದುಕೊಂಡ ಪರಾಕ್ರಮಿಯೆಂದು ಹೇಳಲು, ಹಾಗಾದರೆ ಅವನು ಸೀತೆಯನ್ನು ಕದ್ದು ತಂದುದೇಕೆಂದು ಹನುಮಂತನು ಕೇಳುವನು. ವಿಭೀಷಣನು "ಹನುಮಂತನು ಚೆನ್ನಾಗಿ ಹೇಳಿದ. ರಾಕ್ಷಸೇಂದ್ರ! ನೀನು ಸಂನ್ಯಾಸಿ ವೇಷದಿಂದ ಹೋಗಿ ರಾಮನನ್ನು (ಕಾಂಚನಪಾರ್ಶ್ವ ಮೃಗವನ್ನು ತರಲು ಕಳುಹಿಸಿ) ಸೀತೆಯನ್ನು ಮೋಸದಿಂದ ಕದ್ದು ತಂದೆ" ಎನ್ನುವನು. ಆಗ ರಾವಣನು ಮುನಿದು ವಿಭೀಷಣನನ್ನು ಶತ್ರುಪಕ್ಷದವನೆಂದು ಮೂದಲಿಸುವನು. ಕೊನೆಗೆ ಹನುಮಂತನನ್ನು ಕುರಿತು ಪೌರುಷವಿದ್ದರೆ ಯುದ್ಧಕ್ಕೆ ಬರುವಂತೆ ರಾಮನಿಗೆ ತಿಳಿಸಬೇಕೆಂದು ಹೇಳಿ ಅಬಳಿಕ ಅವನನ್ನು ಅಟ್ಟಿಬಿಡುವಂತೆ ತನ್ನವರಿಗೆ ಅಪ್ಪಣೆಮಾಡುವನು. ವಿಭೀಷಣನು ರಾವಣನಿಗೆ ಬುದ್ಧಿಹೇಳುವನು. ಅವನು ರಾಮ ಪಕ್ಷಪಾತಿಯಾದುದರಿಂದ ಅವನನ್ನೂ ಅಟ್ಟಿಬಿಡುವಂತೆ ರಾವಣನು ಅಪ್ಪಣೆಮಾಡುವನು. ವಿಭೀಷಣನು ತಾನೇ ಲಂಕೆಯನ್ನು ಬಿಟ್ಟು ಹೋಗುವುದಾಗಿ ಹೇಳಿ ಹೊರಟುಹೋಗುವನು.

ನಾಲ್ಕನೆಯ ಅಂಕದಲ್ಲಿ, ಸೈನ್ಯಸಮೇತನಾಗಿ ಸಮುದ್ರದ ಬಳಿಗೆ ಬಂದ ರಾಮನಲ್ಲಿಗೆ ಹೋಗಿ ವಿಭೀಷಣನು ಶರಣಾಗತನಾಗುವನು. ರಾಮಬಾಣ ಪ್ರಯೋಗವಾಗುವುದೆಂಬ ಭೀತಿಯಿಂದ ಸಮುದ್ರರಾಜನು ಬಂದು ರಾಮನನ್ನು ಸ್ತುತಿಸಿ ಸೈನ್ಯಕ್ಕೆ ದಾರಿಕೊಡುವುದಾಗಿ ಹೇಳುವನು. ಸೇತುಬಂಧನವಿಲ್ಲದೆಯೇ ರಾಮನೂ ಅವನ ಕಡೆಯವರೂ ಸಮುದ್ರನನ್ನು ದಾಟಿ, ಲಂಕೆಯನ್ನು ಸೇರುವರು. ವೇಷಧಾರಿಗಳಾಗಿ ಬಂದಿದ್ದ ರಾವಣನ ಕಡೆಯ ಇಬ್ಬರು ಗೂಢಚಾರರನ್ನು ಹಿಡಿದು ವಾನರರು ಅಟ್ಟಿಬಿಡುವರು. ಅಂತಹ ಗೂಢಚಾರರು ಮತ್ತಾರಾದರೂ ಇದ್ದರೂ ಇರಬಹುದೆಂಬ ಶಂಕೆಯಿಂದ ರಾಮನು ಸೈನ್ಯವನ್ನು ಪರೀಕ್ಷಿಸುವುದಾಗಿ ಹೇಳುವನು.

ಐದನೆಯ ಅಂಕದಲ್ಲಿ ಕಾಮಪೀಡಿತನಾದ ರಾವಣನು ಸೀತಾದೇವಿಯ ಬಳಿಗೆ ಹೋಗಿ, ತಾನು ರಾಮಲಕ್ಷ್ಮಣರನ್ನು ಅಂದು ಕೊಲ್ಲುವುದಾಗಿ ಹೇಳುವನು. ಅದು ಮಂದರಪರ್ವತವನ್ನು ಕೈಯಲ್ಲಿ ಹಿಡಿಯುವಂತೆ ಅಸಾಧ್ಯಕಾರ್ಯವೆಂದು ಸೀತಾದೇವಿಯು ಮೂದಲಿಸುವಳು. ಅಷ್ಟರಲ್ಲಿ ರಾಕ್ಷಸನೊಬ್ಬನು ರಾಮಲಕ್ಷ್ಮಣರ ಮಾಯಾಶಿರಸ್ಸುಗಳನ್ನು ತಂದುತೋರಿಸುವನು.

ಸೀತಾದೇವಿಯು ಮೂರ್ಛಿತೆಯಾಗುವಳು. ಅವಳು ಮೂರ್ಛೆಯಿಂದೆಚ್ಚೆತ್ತ ಬಳಿಕ ರಾವಣನು ಅವಳಿಗೆ ಸಮಾಧಾನಹೇಳಿ ತನ್ನನ್ನು ವರಿಸುವಂತೆ ಕೇಳುವನು. ಸೀತಾದೇವಿಯು ಸಂಕಟಪಡುತ್ತ ತನ್ನನ್ನೂ ಕೊಲ್ಲ ಬೇಕೆಂದು ಕೇಳಿಕೊಳ್ಳುವಳು. ರಾವಣನು "ಇಂದ್ರಜಿತುವು ರಾಮ ಲಕ್ಷ್ಮಣರನ್ನು ವಧೆಮಾಡಿದನು. ನಿನ್ನನ್ನಾರು ರಕ್ಷಿಸುವರು?" ಎಂದು ಕೇಳುವನು. ಆ ಸಮಯಕ್ಕೆ ಸರಿಯಾಗಿ "ರಾಮನು, ರಾಮನು" ("ರಾಮಃ, ರಾಮಃ") ಎಂದುಕೊಂಡು ರಾಕ್ಷಸನೊಬ್ಬನು ಪ್ರವೇಶಿಸು ವನು. ಕಲಾದೃಷ್ಟಿಯಿಂದ ಇದು ರಮಣೀಯವಾಗಿದೆ. ರಾವಣನು ಕ್ರುದ್ಧನಾಗಿ "ಏನದು! ರಾಮನು ರಾಮನು ಎಂದೆ!" ಎಂದು ಗರ್ಜಿಸುವನು. ಆಗಂತುಕನು ರಾವಣನ ಕ್ಷಮೆಯನ್ನು ಬೇಡಿ ರಾಮನು ಇಂದ್ರಜಿತುವನ್ನು ವಧಿಸಿದನೆಂದು ಹೇಳುವನು. ರಾವಣನು ಮೂರ್ಛಿತನಾಗಿ ಬೀಳುವನು. ಅವನು ಮೂರ್ಛೆಯಿಂದೆಚ್ಚೆತ್ತಬಳಿಕ ಇಂದ್ರಜಿತುವನ್ನು ನೆನೆದು ಹಲು ಬುತ್ತ, ಮತ್ತೆಮತ್ತೆ ಮೂರ್ಛಿತನಾಗಿ, ಆಕ್ರೋಶಭರದಲ್ಲಿ ಸೀತಾದೇವಿಯನ್ನು ಕೊಲ್ಲಲು ಪ್ರಯತ್ನಿಸಿ ಸ್ತ್ರೀಯನ್ನು ಕೊಂದು ಪ್ರಯೋಜನವಿಲ್ಲವೆಂಬ ತನ್ನ ಸೇವಕನ ಮಾತಿಗೆ ಬೆಲೆಕೊಟ್ಟು, ಲಂಕೆಗೆ ನುಗ್ಗುತ್ತಿರುವ ರಾಮಲಕ್ಷ್ಮಣ ರನ್ನು ಎದುರಿಸಲು ರಥವನ್ನೇರಿ ಹೊರಟುಹೋಗುವನು.

ಆರನೆಯ ಅಂಕದಲ್ಲಿ, ರಾವಣವಧೆಯಾದ ನಂತರ ಸೀತಾದೇವಿಯು ಅಗ್ನಿಪ್ರವೇಶಮಾಡುವಳು. ಅವಳು ಪರಿಶುದ್ಧಳೆಂದು ಹೇಳಿ ಅವಳನ್ನು ಅಗ್ನಿಯು ರಾಮನಿಗೆ ಒಪ್ಪಿಸುವನು. ತಾನು ಆ ವಿಷಯವನ್ನು ತಿಳಿದಿದ್ದರೂ ಜನರಿಗೆ ಅದನ್ನು ಗೋಚರಪಡಿಸುವುದಕ್ಕಾಗಿ ಆರೀತಿ ಮಾಡಿದುದಾಗಿ ರಾಮನು ಹೇಳುವನು. ಅಗ್ನಿಯ ಕೋರಿಕೆಯಂತೆ ಶ್ರೀರಾಮನು ಪಟ್ಟಾಭಿ ಷೇಕಕ್ಕಾಗಿ ಸೀತಾದೇವಿಯೊಡನೆ ತೆರಳಿ, ಪಟ್ಟಾಭಿಷಿಕ್ತನಾಗಿ ಅವಳೊಡನೆ ಪ್ರವೇಶಿಸುವನು. ಇಂದ್ರಾದಿ ದೇವತೆಗಳು ಬರುವರು.

## ೨. ವಿಮರ್ಶೆ

**ಸಂವಿಧಾನ:**—ಭಾವರಸಪುಷ್ಟಿಯಲ್ಲಾಗಲಿ, ಪಾತ್ರರಚನಾ ಕೌಶಲದ ಲ್ಲಾಗಲಿ, ಸಂವಿಧಾನ ವೈಖರಿಯಲ್ಲಾಗಲಿ ಈ ನಾಟಕವು ಲೇಶಮಾತ್ರವೂ

ಪ್ರತಿಮಾನಾಟಕವನ್ನು ಹೋಲುವುದಾಗಿಲ್ಲ. ಈ ನಾಟಕವೂ, ಅವಿಮಾರಕವೂ, ಕವಿಯ ಆರಂಭ ಪ್ರಯತ್ನಗಳೆಂದರೂ ಬಹುಶಃ ತಪ್ಪಾಗಲಾರದು. ಇತರ ರೂಪಕಗಳಲ್ಲಿ ತೋರಿಸಿರುವ ಅದ್ಭುತ ಸಾಮರ್ಥ್ಯವನ್ನು ಕವಿಯು ಇವುಗಳಲ್ಲಿ ತೋರಿಸಿಲ್ಲ. ಹೀಗೆಂದ ಮಾತ್ರವೇ ಅಭಿಷೇಕ ನಾಟಕವು ಸ್ವಲ್ಪವೂ ಚೆನ್ನಾಗಿಲ್ಲವೆಂದು ಅರ್ಥವಲ್ಲ. ರಾಮಾಯಣದಂತಹ ಅದ್ಭುತ ಗ್ರಂಥದಿಂದ ಆರಿಸಿದ ಕಥೆಯನ್ನು ಅಷ್ಟು ದೊಡ್ಡ ಕವಿಯು ನಾಟಕರೂಪದಲ್ಲಿ ಬರೆದನೆಂದಮೇಲೆ ಅದರಲ್ಲಿ ಸ್ವಾರಸ್ಯವಿಲ್ಲದೆ ಹೋದೀತೆ? ಸಂಭಾಷಣೆಯಲ್ಲಿ ಕವಿಯು ಸೊಬಗನ್ನು ತುಂಬಿದ್ದಾನೆ. ಘಟನೆಗಳು ಬೇಗಬೇಗ ಓಡುತ್ತವೆ. ಹನುಮಂತನು ಲಂಕಾನಗರವನ್ನೂ, ರಾಮನು ಸಮುದ್ರವನ್ನೂ ವರ್ಣಿಸುವ ಬಗೆಯು ಮನೋಹರವಾಗಿದೆ. ಸೀತಾದೇವಿಯ ಅಗ್ನಿಪ್ರವೇಶಕ್ಕೆ ಚಿತಿಯನ್ನು ಕಲ್ಪಿಸಬೇಕೆಂದು ರಾಮನು ಆಜ್ಞಾಪಿಸಿದಾಗ ಲಕ್ಷ್ಮಣನು "ದೇವಿಯ ಸೌಶೀಲವನ್ನೂ ತಿಳಿದು ಆರ್ಯನ ಅಪ್ಪಣೆಯನ್ನೂ ಕೇಳಿರುವ ನನ್ನ ಮನಸ್ಸು ಧರ್ಮ ಸ್ನೇಹಗಳ ಮಧ್ಯದಲ್ಲಿ ಡೋಲಾಯಮಾನವಾಗಿದೆ" * ಎನ್ನುತ್ತಾನೆ. ಅವನ ಮನಸ್ಸಿನ ಸ್ಥಿತಿಯ ಈ ವರ್ಣನೆಯು ರಮಣೀಯವಾಗಿದೆ.

ರಾಮಾಯಣದಲ್ಲಿರುವ ಸೇತುಬಂಧನ ವಿಚಾರವನ್ನೇ ಇಲ್ಲಿತರದೆ ಕವಿಯು ಅದನ್ನು ಕೈಬಿಟ್ಟಿದ್ದಾನೆ. ಸಮುದ್ರರಾಜನ ಸಮ್ಮತಿಯಿಂದ ಸಮುದ್ರವು ರಾಮ ಸೈನ್ಯಕ್ಕೆ ದಾರಿಕೊಡುವಂತೆ ಚಿತ್ರಿಸಿದ್ದಾನೆ. ಹನುಮಂತನು ಸೀತಾದೇವಿಯನ್ನು ಕಂಡಾಗ ರಾಮಾಯಣದಲ್ಲಿರುವಂತೆ ಮುದ್ರಿಕಾಪ್ರದಾನವೂ ಈ ನಾಟಕದಲ್ಲಿ ನಡೆಯುವುದಿಲ್ಲ. ಬ್ರಹ್ಮಾಸ್ತ್ರ ಪ್ರಯೋಗಮಾಡಿದ ಇಂದ್ರಜಿತುವಿಗೆ ಅವನು ಸೆರೆಸಿಕ್ಕುವಲ್ಲಿ, ಬ್ರಹ್ಮಾಸ್ತ್ರವೆಂಬ ಗೌರವದಿಂದ ಹಾಗೆ ಮಾಡಿದುದಾಗಿ ರಾಮಾಯಣದಲ್ಲಿದೆ. ರಾವಣನನ್ನು ನೋಡಬೇಕೆಂಬ ಕುತೂಹಲದಿಂದ ಅವನು ಇಂದ್ರಜಿತುವಿಗೆ ವಶನಾದಂತೆ ಅಭಿಷೇಕ ನಾಟಕದಲ್ಲಿದೆ.

---

* "ವಿಜ್ಞಾಯ ದೇವ್ಯಾಃ ಶೌಚಂ ಚ ಶ್ರುತ್ವಾಚಾರ್ಯಸ್ಯ ಶಾಸನಂ |
ಧರ್ಮಸ್ನೇಹಾಂತರೇ ನ್ಯಸ್ತಾ ಬುದ್ಧಿರ್ದೋಲಾಯತೇ ಮಮ ||

**ಪಾತ್ರರಚನೆ:**—ಇನ್ನು ಪಾತ್ರರಚನೆಯ ವಿಚಾರದಲ್ಲಿ ಒಂದೆರಡು ಮಾತು. ಈ ನಾಟಕದಲ್ಲಿ ರಾಮನು ಪ್ರತಿಮಾ ನಾಟಕದ ವೀರನೂ ಪ್ರೇಮ ನಿಧಿಯೂ ಆದ ರಾಮನಲ್ಲ; ಶೌರ್ಯಾದಿ ಸದ್ಗುಣಗಳಿಗೆ ನೆಲೆಯಾಗಿದ್ದರೂ ರಾಮನ ಪಾತ್ರವು ನಮ್ಮ ಮನಸ್ಸನ್ನು ಮುಗ್ಧಗೊಳಿಸುವುದಿಲ್ಲ. ಸೀತಾ ದೇವಿಯ ಪಾತ್ರವು ಮನೋಹರವಾಗಿದೆ. ವಾಲಿಯ ಪಾತ್ರವೂ ರಾವಣನ ಪಾತ್ರವೂ ಬಹುಚೆನ್ನಾಗಿ ಸ್ಫುಟಗೊಂಡಿವೆ. ವಾಲಿರಾವಣರ ಅಪರಾಧಗಳನ್ನು ಕವಿಯು ತೋರಿಸಿರುವನಾದರೂ, ಅವರಿಬ್ಬರೂ ಸಕಲ ದುರ್ಗುಣಗಳಿಗೂ ನೆಲೆಯೆಂದು ಅವನು ರೂಪಿಸಿಲ್ಲ. ವಾಲಿಯು ರಾಮನು ಹೇಳಿದ ಸಮಾಧಾನ ದಿಂದ ತೃಪ್ತನಾಗಿ ತನ್ನ ಪಾಪಕ್ಕಾಗಿ ಪಶ್ಚಾತ್ತಾಪಪಟ್ಟು, ಸುಗ್ರೀವನಲ್ಲಿ ಕ್ಷಮೆಬೇಡಿ ತನ್ನ ಕೊರಳಿನ ಚಿನ್ನದ ಹಾರವನ್ನೊಪ್ಪಿಸಿ, ತನ್ನ ಮಗನಾದ ಅಂಗದನನ್ನು ರಕ್ಷಿಸಬೇಕೆಂದು ಸುಗ್ರೀವನನ್ನು ಕೇಳಿಕೊಂಡು ಮರಣ ಹೊಂದುವುದನ್ನು ನೋಡಿ ಮನಕರಗದವರಾರು ? ವೀರನಾದ ತಾನು ರಾಮಬಾಣದಿಂದ ಆಹತನಾಗಿ ಕೆಳಗೆ ಬಿದ್ದಿರುವಾಗ ಆ ದುರವಸ್ಥೆಯಲ್ಲಿ ತಾರೆ ಮುಂತಾದ ಸ್ತ್ರೀಯರಾರೂ ನೋಡಕೂಡದೆಂದು ಸೂಚಿಸುವ ಮಾನ ಧನನಾದ ಅವನನ್ನು ಮೆಚ್ಚದವರಾರು ? ತನ್ನನ್ನು ಕರೆದೊಯ್ಯಲು ವಿಮಾನವು ಬಂದಿತೆಂದು ಅವನು ಸೂಚಿಸಿದಾಗ, ಅವನ ಪಶ್ಚಾತ್ತಾಪಕ್ಕಾಗಿ ಬೆರಗಾಗಿ, ಅವನ ಪಾತಕವನ್ನು ಮರೆತು, ವಿಮಾನವು ಬಂದುದರಲ್ಲಿ ಔಚಿತ್ಯ ವುಂಟೆಂದು ತಲೆದೂಗದವರಾರು ? ಪಶ್ಚಾತ್ತಾಪದಿಂದ (ಪಾತಕಿಯೂ) ಶುದ್ಧನಾಗುವನೆಂದು ("ಪಶ್ಚಾತ್ತಾಪೇನ ಶುಧ್ಯತೇ" ಎಂದು) ಸುಂದರ ಕಾಂಡದಲ್ಲಿ ವಾಲ್ಮೀಕಿ ಮಹರ್ಷಿಗಳೇ ಬರೆದಿಲ್ಲವೆ ?

ರಾವಣನು ಸೀತಾಪಹರಣಮಾಡಿದ ಜಘನ್ಯವೃತ್ತಿಯವನೆಂಬುದು ನಿಜ. ಆದರೆ ಸಹಾನುಭೂತಿ ಸಂಪನ್ನನಾದ ಕವಿಯು ಅವನಲ್ಲಿ ಕೆಲವು ಸದ್ಗುಣಗಳನ್ನೂ ನೆಲೆಗೊಳಿಸಿ ಒಟ್ಟಿನಲ್ಲಿ ರಾವಣನಂತಹ ದುಷ್ಟಪಾತ್ರವೂ ಚಿತ್ತಾಕರ್ಷಕವಾಗಿರುವಂತೆ ಜೀವಕಳೆಯನ್ನು ತುಂಬಿದ್ದಾನೆ. ಸೀತಾದೇವಿ ಯು ತನ್ನನ್ನು ಶಪಿಸಿದಾಗ ಅವನು ಸ್ಥೈರಣೆಯನ್ನು ಕಳೆದುಕೊಳ್ಳದೆ ಆ ಪತಿ ವ್ರತೆಯ ಚಿತ್ತವೃತ್ತಿಯನ್ನು ಬಣ್ಣಿಸಿ ದೇವದಾನವರನ್ನು ಗೆದ್ದ ತನ್ನ ಮನಸ್ಸಿನ

ಮೇಲೆ ಕೂಡ ಅದರ ಪ್ರಾಭವವು ಮೆರೆದುದನ್ನು ಸೂಚಿಸಿ ಸ್ವಗತ ಭಾಷಣಮಾಡುವನು. ಸ್ನಾನದ ವೇಳೆಯು ಸನ್ನಿಹಿತವಾಯಿತೆಂಬ ಮಾತು ಕಿವಿಗೆ ಬಿದ್ದೊಡನೆಯೇ ಕಾಮವಾಸನೆಯನ್ನು ಹೃದಯದಿಂದಟ್ಟಿ ನಿಯಮ ಸ್ಪೃಹೆಯಿಂದ ಹೊರಟುಹೋಗುವನು. ರಾತ್ರಿಯವೇಳೆಯ ಆ ಸ್ನಾನವು ಪೂಜಾದಿ ಕರ್ಮಗಳಿಗಾಗಿಯೇ ನಡೆದಿರಬೇಕೆಂದು ತೋರುವುದು. ದೂತ ವಧೆಯು ಕೂಡದೆಂಬ ವಿಭೀಷಣೋಕ್ತಿಯನ್ನು ಲಾಲಿಸಿ, ಕೋಪವನ್ನು ದಮನ ಮಾಡಿ ಅವನು ಹನುಮಂತನನ್ನು ಅಟ್ಟಿಸಿಬಿಡುವನು. ಅಶೋಕವನದಲ್ಲಿ ಅವನಿಗೆ ಬಹಳ ಪ್ರೀತಿ. ಪಟ್ಟಮಹಿಷಿಯಾದ ಮಂಡೋದರಿಯು ಕೂಡ—ಅಲಂಕಾರ ಪ್ರಿಯೆಯಾಗಿದ್ದೂ—ಹೂಗೊಂಚಲುಗಳನ್ನು ಕೀಳುತ್ತಿರ ಲಿಲ್ಲವಂತೆ. ದಂಪತಿಗಳಿಗೆ ಅಶೋಕವನದಲ್ಲೆಷ್ಟು ಪ್ರೇಮವಿರಬೇಕು! ರಾವಣನು ಸೀತೆಯನ್ನು ಕೊಲ್ಲಲುದ್ಯುಕ್ತನಾದಾಗ ತನ್ನ ಅನುಚರನ ಮಾತನ್ನು ಕೂಡ ಲಾಲಿಸಿ, ಅವಳನ್ನು ಕೊಲ್ಲದೆಯೇ ರಥವನ್ನು ತರಿಸಿ ಕೊಂಡು ರಣರಂಗಕ್ಕೆ ಪ್ರಯಾಣಮಾಡುವುದನ್ನು ಕಂಡು, ಅದೊಂದು ಕ್ಷಣ ಕಾಲವಾದರೂ ಅವನ ಅಪರಾಧವನ್ನು ಮರೆಯದಿರಲು ಸಾಧ್ಯವಿಲ್ಲ. ಇಂದ್ರ ಜಿತುವಿನಲ್ಲಿ ಅವನಿಗಿದ್ದ ಪ್ರೇಮವು ಅಪಾರವಾದುದು.

**ಮೌನದ ಸದುಪಯೋಗ** :—ಅಭಿಷೇಕ ನಾಟಕದಲ್ಲಿ ಕವಿಯು ಪ್ರದರ್ಶಿಸಿರುವ ಅದ್ಭುತ ಸಾಮರ್ಥ್ಯವು ಮೌನದ ಸದುಪಯೋಗದಲ್ಲಿ. ಇದು ಪ್ರತಿಮಾ ನಾಟಕದಲ್ಲಿಯೂ ಮನೋಜ್ಞವಾಗಿ ಕಂಡುಬಂದಿದೆ: ರಾಮ ಲಕ್ಷ್ಮಣರೂ ಸೀತಾದೇವಿಯೂ ಶೃಂಗಬೇರಪುರದಿಂದ ಸಂದೇಶವನ್ನು ಕಳು ಹಿಸಲು ಪ್ರಯತ್ನಿಸಿ ಅದು ಸಾಗದೆ ವನಕ್ಕೆ ತೆರಳಿದ ಸಂದರ್ಭವನ್ನು ಸೂಚಿಸಿ ಸುಮಂತ್ರನು "ಶೃಂಗಬೇರಪುರದಲ್ಲಿ ರಥದಿಂದಿಳಿದು ಅಯೋಧ್ಯಾಭಿಮುಖ ವಾಗಿ ನಿಂತು ಅವರೆಲ್ಲರೂ ಮಹಾರಾಜನನ್ನುದ್ದೇಶಿಸಿ ಶಿರಸಾ ಪ್ರಣಾಮಮಾಡಿ ಏನನ್ನೋ ವಿಜ್ಞಾಪಿಸಲು ಪ್ರಯತ್ನಿಸಿದರು. ಯಾವುದೋ ಅಂಶವನ್ನು ಬಹುಕಾಲ ಯೋಚಿಸಿದರು. ಅದನ್ನು ಹೇಳುವಷ್ಟರಲ್ಲಿ ತುಟಿಗಳು ನಡುಗಿ ದುವು. ಕಂಠವು ಸ್ತಂಭಿತವಾಯಿತು. ಆದಕಾರಣ ಅವರು ಏನನ್ನೂ ಹೇಳ ದೆಯೇ ವನಕ್ಕೆ ತೆರಳಿದರು" ಎನ್ನುವನು. ದುಃಖದಿಂದ ದಶರಥನು

ಮೊದಲಿಗಿಮ್ಮಡಿಯಾಗಿ ಮೂರ್ಛಿತನಾಗುವನು. ಯಾವ ಮಾತುಗಳಿಂದಲೂ ಸಾಧ್ಯವಾಗದಷ್ಟು ದುಃಖಕರವಾದ ಸಂದೇಶವನ್ನು ಭಾಸನು ಇಲ್ಲಿ ಮೌನವ ದಿಂದ ಸಾಧಿಸಿದ್ದಾನೆ. (ಮೌನದ ಸದುಪಯೋಗದ ವಿಚಾರದಲ್ಲಿ ಮುಂದೆ ದೂತಘಟೋತ್ಕಚದ ವಿಮರ್ಶೆಯನ್ನೂ ದಯೆಯಿಟ್ಟು ನೋಡಿ.) ಮಾತ ನಾಡಿದರೆ ಆಭಾಸವಾಗುವ ಸನ್ನಿವೇಶಗಳಲ್ಲಿ ಪಾತ್ರಗಳು ಮೌನವನ್ನವ ಲಂಬಿಸುವಂತೆ ಮಾಡುವ ಶಕ್ತಿಯು ಎಲ್ಲ ಕವಿಗಳಿಗೂ ಇರುವುದಿಲ್ಲ. ಅಭಿ ಷೇಕ ನಾಟಕದ ಮೂರು ಸನ್ನಿವೇಶಗಳಲ್ಲಿ ಕವಿಯು ಈ ಶಕ್ತಿಯನ್ನು ಸೊಗ ಸಾಗಿ ಪ್ರದರ್ಶಿಸಿದ್ದಾನೆ: ಹನುಮಂತನು ರಾವಣನನ್ನು ಕುರಿತು ಸಮಾನ ಸ್ಕಂಧನಂತೆ "ಏನಯ್ಯ, ರಾಜ, ನಿನಗೆ ಕುಶಲವೋ?" ಎಂದು ಕೇಳಿದಾಗ ರಾವಣನು ಮೌನದಿಂದಿರುವುದು ಬಹಳ ಸೊಗಸಾಗಿದೆ. ರಾಮಲಕ್ಷ್ಮಣರ ಮಾಯಾ ಶಿರಸ್ಸುಗಳನ್ನು ನೋಡಿದಾಗ ಸೀತಾದೇವಿಯು ವಧಕೃತ್ಯಕ್ಕಾಗಿ ರಾವಣನನ್ನು ನಿಂದಿಸದೆ ಸುಮ್ಮನಿರುವುದು ಮನೋಜ್ಞವಾಗಿದೆ. ಏಕೆಂದರೆ, ಆ ಕ್ರೂರಕರ್ಮಕ್ಕೆ ತಕ್ಕಂತೆ ಅವನನ್ನು ನಿಂದಿಸಲು ಭಾಷೆಯಲ್ಲಿರುವ ಯಾವ ಮಾತುಗಳೂ ಸಾಲುವಂತಿಲ್ಲ. ಆದುದರಿಂದ ದೇವಿಯ ಮೌನವು ಹೃದಯ ವೇಧಕವಾಗಿದೆ. ಅಗ್ನಿಶುದ್ಧಿಯಾಗಿ ಬಂದಮೇಲೆ ಸೀತಾದೇವಿಯು ಒಂದು ಮಾತನ್ನೂ ಆಡಿಲ್ಲ. ರಾಮನ ಸಂಶಯವಾಣಿಯು ಹೊರಟಬಳಿಕ ನಾಟಕದ ಕೊನೆಯವರೆಗೂ ಸೀತಾದೇವಿಗೆ ಮೌನವ್ರತ. ಹೀಗೆ ದೇವಿಗೆ ಮೌನ ವುಂಟಾಗುವಂತೆ ಚಿತ್ರಿಸಿರುವುದು ಕವಿಯ ಸಾಮರ್ಥ್ಯವನ್ನು ತೋರಿಸುತ್ತದೆ. ದೇವಿಯು ಆಗಿನ ಸಂದರ್ಭದಲ್ಲಿ ಮೌನದಿಂದಿರುವುದರ ಔಚಿತ್ಯವನ್ನು ಎಷ್ಟು ಕೊಂಡಾಡಿದರೂ ಸಾಲದು. ಆಗಿನ ಪರಿಸ್ಥಿತಿಯಲ್ಲಿ ಅವಳದು ಮಾತುಗಳಿಗೆ ನಿಲುಕದ ಮನೋಭಾವ. ತನ್ನ ಪತಿಯು ತನಗಾಗಿ ವ್ಯಥೆ ಪಡುತ್ತಿರುವುದನ್ನು ಹನುಮಂತನಿಂದ ಕೇಳಿದಾಗ "ದೈವಕ್ಕೆ ನನ್ನಲ್ಲಿ ಕರುಣೆಯಿಲ್ಲ. ಕರುಣೆಯಿದ್ದರೆ ಆರ್ಯಪುತ್ರನಿಗೆ ಹೀಗೆ ದುಃಖವುಂಟಾಗು ವಂತೆ ಮಾಡುತ್ತಿರಲಿಲ್ಲ" ಎಂದ ಸ್ವಾರ್ಥತ್ಯಾಗಿನಿಯವಳು. ಹನುಮಂತ ನನ್ನು ಕುರಿತು "ಮಂಗಳಕರನೇ! ನನ್ನ ವೃತ್ತಾಂತವನ್ನು ಕೇಳಿ ಆರ್ಯ ಪುತ್ರನಿಗೆ ಶೋಕಪಾರವಶ್ಯವುಂಟಾಗದಿರುವುದಕ್ಕೆ ತಕ್ಕಂತೆ ಅದನ್ನು ಶ್ರುತ ಪಡಿಸು" ಎಂದವಳವಳು. ಅಂತಹ ಪತಿಪ್ರಾಣೆಯಾದ ಸಾಧ್ವಿಯು ಅಗ್ನಿ

ಪ್ರವೇಶಮಾಡುವ ದಾರುಣ ಪರಿಸ್ಥಿತಿಯೊದಗಿದುದು ದುಃಖಕರವಾದ ಸಂಗತಿ. ಅಗ್ನಿಶುದ್ಧಿಯಾದ ಬಳಿಕ ಅಗ್ನಿದೇವನು ರಾಮನ ಬಳಿಗೆ ಕರೆದು ಕೊಂಡು ಬಂದಾಗ ದೇವಿಯು ಯಂತ್ರದ ಬೊಂಬೆಯಾಗಿರುವಳು. ರಾಮನಿಗೆ ಮಣಿಯುವುದೂ ಇಲ್ಲ; ಜಯವಾಗಲೆನ್ನುವುದೂ ಇಲ್ಲ. ಮೌನವಾಗಿಯೇ ನಿಂತಿದ್ದು, ಮೌನವಾಗಿಯೇ ಪಟ್ಟಾಭಿಷೇಕಕ್ಕೆ ಹೋಗಿದ್ದು, ಮತ್ತೆ ಪ್ರವೇಶಿಸಿದ ಮೇಲೆ ಕೂಡ ಮೌನದಿಂದಲೇ ಇರುತ್ತಾಳೆ. ಮೌನವನ್ನು ಸದುಪಯೋಗ ಮಾಡುವುದರಲ್ಲಿ ಕವಿಯು ಅದ್ಭುತ ಸಾಮರ್ಥ್ಯವನ್ನು ತೋರಿಸಿದ್ದಾನೆ.

——o——

# ಮೂರನೆಯ ತರಂಗ

——— : ———

## ಉದಯನ ಸಂಬಂಧವಾದ ರೂಪಕಗಳು



ಪ್ರತಿಜ್ಞಾಯೌಗಂಧರಾಯಣ
ಸ್ವಪ್ನವಾಸವದತ್ತ

# ಪ್ರತಿಜ್ಞಾಯೌಗಂಧರಾಯಣ

## ಅವತರಣಿಕೆ

ಪ್ರತಿಜ್ಞಾಯೌಗಂಧರಾಯಣವೂ, ಸ್ವಪ್ನವಾಸದತ್ತವೂ ಶಕಪುರುಷನೆಂತಿದ್ದ ಐತಿಹಾಸಿಕ ವ್ಯಕ್ತಿಯಾದ ಉದಯನನೆಂಬ ರಾಜನ ಸಂಬಂಧವಾದ ರೂಪಕಗಳು. ಇವುಗಳಲ್ಲಿ ಮೊದಲನೆಯ ರೂಪಕದ ಕಥೆಯು ಎರಡನೆಯದರಲ್ಲಿ ಮುಂದುವರಿಯುತ್ತದೆ. ವತ್ಸರಾಜನಾದ ಉದಯನನ ಭಾಗ್ಯದಶೆಯನ್ನು ಚಿತ್ರಿಸುವುದಕ್ಕಾಗಿ ಕವಿಯು ಇವೆರಡು ರೂಪಕಗಳನ್ನೂ ಬರೆದಿದ್ದಾನೆ. ಗೌತಮಬುದ್ಧನು ನಿರ್ವಾಣಹೊಂದಿದ ತರುಣದಲ್ಲಿ ಉದಯನನು ಕೌಶಾಂಬಿಯಲ್ಲಿಯೂ, ಪ್ರದ್ಯೋತನು ಉಜ್ಜಯಿನಿಯಲ್ಲಿಯೂ, ಅಜಾತಶತ್ರುವು ಮಗಧರಾಜ್ಯದಲ್ಲಿಯೂ ಪ್ರಭುತ್ವಮಾಡುತ್ತಿದ್ದರು.

ಕಾಳಿದಾಸನು ತನ್ನ ಮೇಘಸಂದೇಶ ಕಾವ್ಯದಲ್ಲಿ "ಉದಯನ ಕಥಾಕೋವಿದ ಗ್ರಾಮವೃದ್ಧಾನ್" ಎಂದು ಅವಂತಿಯನ್ನು ವರ್ಣಿಸಿದ್ದಾನೆ. ಕಾಳಿದಾಸ ಮಹಾಕವಿಯ ಕಾಲದಲ್ಲಿ ಕೂಡ ಉದಯನನ ಕಥೆಯು ಗ್ರಾಮವೃದ್ಧರಿಗೆ ಪ್ರಿಯವಾಗಿದ್ದಿತೆಂದಮೇಲೆ, ಕಾಳಿದಾಸ ಮಹಾಕವಿಯ ಕಾಲಕ್ಕೆ ಮುಂಚಿತವಾಗಿಯೇ ಸುಪ್ರಸಿದ್ಧವಾಗಿದ್ದ ಪತಂಜಲಿಯ ಮಹಾಭಾಷ್ಯ, ಕೌಟಿಲ್ಯನ ಅರ್ಥಶಾಸ್ತ್ರ, ಗುಣಾಢ್ಯನ ಬೃಹತ್ಕಥೆ, ಮೃಚ್ಛಕಟಿಕ, ಮುಂತಾದ ಪ್ರಾಚೀನ ಗ್ರಂಥಗಳಲ್ಲಿ ಉದಯನನ ಪ್ರಸ್ತಾವವು ಬಂದಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಉದಯನನ ವಿಚಾರವಾಗಿ ಭಾಸನು ಬರೆದಿರುವ ಎರಡು ರೂಪಕಗಳಲ್ಲದೆ ರತ್ನಾವಳಿ, ಪ್ರಿಯದರ್ಶಿಕಾ, ಎಂಬೆರಡು ನಾಟಕಗಳು ವಿರಚಿತವಾಗಿರುವುದನ್ನೂ ಇಲ್ಲಿ ಸೂಚಿಸಬಹುದಾಗಿದೆ.

ಭಾಸಮಹಾಕವಿಯು ಗುಣಾಢ್ಯನ ಬೃಹತ್ಕಥೆಯ ಆಧಾರದ ಮೇಲೆ ಪ್ರಸಕ್ತ ಗ್ರಂಥಗಳೆರಡನ್ನೂ ಬರೆದಿರಬೇಕೆಂದು ತೋರುತ್ತದೆ. ಗುಣಾಢ್ಯನ

ಬೃಹತ್ಕಥೆಯು ಪ್ರಾಕೃತಭಾಷೆಯ ಪ್ರಭೇದವಾದ ಪೈಶಾಚಿಯಲ್ಲಿ ಬರೆದಿದ್ದ ಗ್ರಂಥವಂತೆ. ಅದು ಈಗ ದೊರೆಯುವುದಿಲ್ಲ. ಅದರ ಅವಲಂಬನದಿಂದ ಸಂಗ್ರಹರೂಪದಲ್ಲಿ ಬರೆದಿರುವ ಮೂರು ಗ್ರಂಥಗಳು ಮಾತ್ರವೇ ಈಗ ದೊರೆಯುತ್ತವೆ. ಕ್ರಿಸ್ತಶಕ ಹತ್ತನೆಯ ಶತಮಾನದಲ್ಲಿ ಬುದ್ಧಸ್ವಾಮಿ ಎಂಬಾತನು ಬರೆದ ಬೃಹತ್ಕಥಾ ಸಂಗ್ರಹ, ಕ್ರಿಸ್ತಶಕ ಹನ್ನೊಂದನೆಯ ಶತಮಾನದಲ್ಲಿ ಕ್ಷೇಮೇಂದ್ರನು ಬರೆದ ಬೃಹತ್ಕಥಾಮಂಜರಿ ಮತ್ತು ಆ ಗ್ರಂಥವು ಹುಟ್ಟಿದ ತರುವಾಯ ಅದೇ ಶತಮಾನದಲ್ಲಿ ಸೋಮದೇವನು ಬರೆದ ಕಥಾ ಸರಿತ್ಸಾಗರ, ಎಂಬಿವೇ ಆ ಮೂರು ಗ್ರಂಥಗಳು. ಉದಯನನ ಸಂಬಂಧವಾದ ಕಥೆಯು ಅವುಗಳಲ್ಲಿಯೂ ಇದೆ. ಅವುಗಳಲ್ಲಿರುವ ಕಥೆಯನ್ನು ನೋಡಿದರೆ, ಭಾಸ ಮಹಾಕವಿಯು ತನ್ನ ಕಲಾನೈಪುಣ್ಯಕ್ಕನುಗುಣವಾಗಿ ಕೆಲವು ಮಾರ್ಪಾಟುಗಳನ್ನು ಮಾಡಿ ಪ್ರಸಕ್ತ ರೂಪಕಗಳೆರಡನ್ನೂ ಬರೆದಿರುವುದು ವ್ಯಕ್ತವಾಗುವುದು. ಕಥಾಭಾಗವು ವಾಚಕರಿಗೆ ಚೆನ್ನಾಗಿ ತಿಳಿಯಲೆಂಬ ಉದ್ದೇಶದಿಂದ ಕಥಾಸಾರಾಂಶವನ್ನು ಸಂಕ್ಷೇಪವಾಗಿ ಬರೆಯಲಾಗುವುದು. ಮುಂದೆ ವಿಮರ್ಶೆಯನ್ನು ಗ್ರಹಿಸುವುದಕ್ಕೂ ಅವರಿಗೆ ಇದರಿಂದ ಅನುಕೂಲವಾಗುವುದು.

## ೧. ಕಥಾಸಾರಾಂಶ

ಭರತವಂಶಕ್ಕೆ ಸೇರಿದವನೂ, ವಯಸ್ಸಿಗೆ ಸಹಜವಾದ ಸ್ಫುರದ್ರೂಪವುಳ್ಳವನೂ, ಗಾಂಧರ್ವವೇದಪಾರಂಗತನೂ ಆದ ಉದಯನನೆಂಬ ರಾಜನು ಕೌಶಾಂಬಿಯಲ್ಲಿ ವಿಚಕ್ಷಣೆಯಿಂದ ಪ್ರಭುತ್ವಮಾಡುತ್ತ ಪ್ರಜೆಗಳ ಪ್ರೀತಿಗೆ ಪಾತ್ರನಾಗಿ ಸುಖದಿಂದ್ದನು. ಅವನಿಗಿಂತ ವಯಸ್ಸಿನಲ್ಲಿ ದೊಡ್ಡವನಾಗಿದ್ದ ಪ್ರದ್ಯೋತನು ಉಜ್ಜಯಿನಿಯಲ್ಲಿ ರಾಜ್ಯವಾಳುತ್ತಿದ್ದನು. ಆತನ ಸೈನ್ಯಬಲವು ಅಪರಿಮಿತವಾಗಿದ್ದುದರಿಂದ ಆತನಿಗೆ ಮಹಾಸೇನನೆಂಬ ಹೆಸರಿದ್ದಿತು. ಮಹಾಸೇನನಿಗೆ ವಾಸವದತ್ತೆಯೆಂಬ ಮಗಳಿದ್ದಳು. ಅವಳನ್ನು ವತ್ಸರಾಜನಾದ ಉದಯನನಿಗೆ ಕೊಟ್ಟು ವಿವಾಹಮಾಡಬೇಕೆಂದು ಮಹಾಸೇನನಿಗೆ ಆಶೆಯಿದ್ದಿತು. ಆದರೆ ಉದಯನನು ತನಗಿಂತ ಪ್ರಬಲನಾಗಿದ್ದ ಮಹಾಸೇನನನ್ನು ಲಕ್ಷ್ಯಮಾಡದೆ ದರ್ಪದಿಂದಿದ್ದನು. ಸೈನ್ಯಸಾಗರವೇ

ಮಹಾಸೇನನ ವಶವರ್ತಿಯಾಗಿದ್ದರೂ, ಪ್ರಚಂಡ ಮೇಧಾವಿಗಳಾದ ಯೌಗಂಧರಾಯಣನೇ ಮುಂತಾದ ಸಚಿವರ ಸಹಾಯವನ್ನು ಪಡೆದಿದ್ದ ಉದಯನನ ಮೇಲೆ ಅವನ ಪ್ರಯತ್ನವೇನೂ ಸಾಗದೆ ಹೋಯಿತು. ಪರಿಣಾಮದಲ್ಲಿ ವತ್ಸರಾಜನನ್ನು ಕಂಡರೆ ಅವನು ಭಯಪಡುವಂತೆಯೂ ಆಯಿತು. * ಉದಯನನ್ನು ಉಜ್ಜಯನಿಗೆ ಬರಮಾಡಿಕೊಂಡಲ್ಲದೆ ಮಹಾಸೇನನ ಉದ್ದೇಶವು ಈಡೇರುವಂತಿರಲಿಲ್ಲ. ಅದಕ್ಕಾಗಿ ಅವನು ಒಂದು ಯುಕ್ತಿಯನ್ನು ಹೂಡುವನು: ಉದಯನನು ಘೋಷವತಿಯೆಂಬ ಹೆಸರಿನ ತನ್ನ ವೀಣೆಯನ್ನು ನುಡಿಸಿ ಕಾಡಾನೆಗಳನ್ನು ಪಾರವಶ್ಯಹೊಂದಿಸಿ ಅವುಗಳನ್ನು ಹಿಡಿಸುತ್ತಿದ್ದನು. ಈ ಅಮೋಘ ಸಾಮರ್ಥ್ಯವನ್ನರಿತಿದ್ದ ಮಹಾಸೇನನು ದೊಡ್ಡದೊಂದು ಕೃತಕ ಗಜವನ್ನು ನಿರ್ಮಾಣಮಾಡಿಸಿ, ಗಡಿಸೀಮೆಯ ದಟ್ಟವಾದ ಕಾಡಿನಲ್ಲಿ ಅದನ್ನು ನಿಲ್ಲಿಸಿ, ಶಾಸ್ತ್ರಗಳಲ್ಲಿ ಪ್ರಸಿದ್ಧವಾದ "ನೀಲಕುವಲಯತನು" ವುಳ್ಳಜಾತಿಯ ಆನೆಯು ಬಂದಿದೆಯೆಂಬ ವದಂತಿಯನ್ನು ಹುಟ್ಟಿಸಿ, ತನ್ನ ಕಡೆಯ ಸೈನಿಕರು ಸಶಸ್ತ್ರರಾಗಿ ಅಡಗಿಕೊಂಡಿರುವಂತೆ ಅಪ್ಪಣೆಮಾಡುವನು. ಆನೆಗಳನ್ನು ಹಿಡಿಯುವ ಕೆಲಸದಲ್ಲಿ ನಿರತನಾಗಿ ಸಂಚಾರ ಹೊರಟಿದ್ದ ಉದಯನನು ಆ ಆನೆಯನ್ನು ಹಿಡಿಯುವ ಕುತೂಹಲದಿಂದ ಮಿತಪರಿವಾರನಾಗಿ—ರುಮಣ್ವಂತನೆಂಬ ಮಂತ್ರಿಯು ಬೇಡವೆಂದು ಪ್ರಾರ್ಥಿಸಿದರೂ ಕೇಳದೆ—ನಾಗವನಕ್ಕೆ ಹೊರಟುಹೋಗುವನು. ಸಮಯ ನಿರೀಕ್ಷೆಯಿಂದಿದ್ದ ಶತ್ರು ಬಲದವರು ಬಹುಮಂದಿ ಅವನನ್ನು ಮುತ್ತುವರು, ಅವನು ಅತ್ಯಂತ ಸಾಮರ್ಥ್ಯದಿಂದ ಹೊಡೆದಾಡಿದರೂ ಫಲವಾಗದೆ ಸೆರೆಸಿಕ್ಕುವನು. ಶತ್ರುಯೋಧರು ಅವನನ್ನು ಉಜ್ಜಯಿನಿಗೆ ಕರೆದೊಯ್ಯುವರು. ಈ ಸನ್ನಿವೇಶದಲ್ಲಿ ಕಥೆಯು ಪ್ರಾರಂಭವಾಗುವುದು.

ಕೃತಕ ಗಜದ ವಾರ್ತೆಯನ್ನು ಉದಯನನಿಗೆ ತಿಳಿಸಿ ಅವನು ಮಹಾಸೇನನ ಕಡೆಯವರಿಗೆ ಸೆರೆಸಿಕ್ಕುವ ಸಂಭವವನ್ನೇ ತಪ್ಪಿಸುವುದಕ್ಕಾಗಿ ಮುಖ್ಯಾಮಾತ್ಯನಾದ ಯೌಗಂಧರಾಯಣನು ಪತ್ರದೊಡನೆ ದೂತನನ್ನು

---

* "ಅಹೋ ತು ಖಲು ವತ್ಸರಾಜ ಭೀರುತ್ವಂ ಪ್ರದ್ಯೋತಸ್ಯ"

ಕಳುಹಿಸುವ ಪ್ರಯತ್ನದಲ್ಲಿರುವಲ್ಲಿ, ಉದಯನನು ಸೆರೆಸಿಕ್ಕಿದ ಸಮಾಚಾರವು ಬರುವುದು. ಅವನು ಅದಕ್ಕಾಗಿ ದುಃಖಿಸಿ, ಶತ್ರುಗಳಿಂದ ರಾಜನನ್ನು ಬಿಡಿಸಿಕೊಂಡು ಬರುವುದಾಗಿ ವೀರಪ್ರತಿಜ್ಞೆಮಾಡಿ ರಾಜಮಾತೆಯನ್ನು ಕಾಣಲು ಹೋಗುವನು. ಅಲ್ಲಿಗೆ ಮೊದಲನೆಯ ಅಂಕವು ಪೂರೈಸುವುದು.

ಎರಡನೆಯ ಅಂಕವು ಮಹಾಸೇನನ ಅರಮನೆಯಲ್ಲಿಯ ದೃಶ್ಯದಿಂದ ಪ್ರಾರಂಭವಾಗುವುದು. ವಾಸವದತ್ತೆಯೊಡನೆ ವಿವಾಹವನ್ನು ಬಯಸಿದ ನಾನಾ ರಾಜರುಗಳೂ ದೂತರನ್ನಟ್ಟಿದ್ದರೂ, ಮಹಾಸೇನನು ಯಾರಿಗೂ ನಿರ್ಧರವಾಗಿ ಉತ್ತರ ಹೇಳಿದಿರುವುದಕ್ಕಾಗಿ ಕಾಂಚುಕೀಯನು ಆಶ್ಚರ್ಯ ಪಡುವನು. ಮಹಾಸೇನನು ಮಗಳ ಮದುವೆಯ ವಿಷಯವನ್ನು ಕುರಿತು ಆಲೋಚಿಸುವುದಕ್ಕಾಗಿ ಮಹಾರಾಣಿಯಾದ ಅಂಗಾರವತಿಯನ್ನು ಅಲ್ಲಿಗೆ ಕರೆಯಿಸುವನು. ದಂಪತಿಗಳು ಸಂಭಾಷಣೆಮಾಡುತ್ತಿರುವಲ್ಲಿ ಉದಯನನು ಸೆರೆಸಿಕ್ಕಿದ ಸುದ್ದಿಯು ಬರುವುದು. ಅದನ್ನು ಕೇಳಿ ಮಹಾಸೇನನ ಆನಂದಕ್ಕೆ ಪಾರವೇ ಇಲ್ಲದಂತಾಗುವುದು. ಅಲ್ಲಿಗೆ ಎರಡನೆಯ ಅಂಕವು ಪೂರೈಸುವುದು.

ಮೂರನೆಯ ಅಂಕವು ಆರಂಭವಾಗುವ ವೇಳೆಗೆ ಉದಯನನು ವಾಸವದತ್ತೆಯನ್ನು ಕಂಡು ಮೋಹಿತನಾಗಿರುವನು. ಉದಯನನು ಅವಳಿಗೆ ವೀಣಾವಾದನವನ್ನು ಕಲಿಸುತ್ತಿರುವಲ್ಲಿ ಅವರೀರ್ವರಿಗೂ ಪರಸ್ಪರ ಅನುರಾಗವುಂಟಾಗಿ ವೃದ್ಧಿಯಾಗುತ್ತಿರುವುದು. ಅಷ್ಟರಲ್ಲಿ ಉನ್ಮತ್ತ ವೇಷ ಧಾರಿಯಾಗಿ ಉಜ್ಜಯಿನಿಗೆ ಬಂದಿದ್ದ ಯೌಗಂಧರಾಯಣನೂ, ವೇಷ ಧಾರಿಗಳಾದ ಅವನ ಸಂಗಡಿಗರೂ ಕಾರಾಗೃಹವೇ ಉದಯನನಿಗೆ ಪ್ರಮದ ವನವಾಯಿತೆಂದು ಖಿನ್ನಮನಸ್ಕರಾಗುವರು. ಕುಶಲಿಯೂ ವೀರನೂ ಆದ ಯೌಗಂಧರಾಯಣನು ಉದಯನ ವಾಸವದತ್ತೆಯರಿಬ್ಬರನ್ನೂ ಕೌಶಾಂಬಿಗೆ ಕರೆದೊಯ್ಯುವ ಉಪಾಯವನ್ನು ಚಿಂತಿಸುವುದಾಗಿ ಹೇಳುವನು.

ನಾಲ್ಕನೆಯ ಅಂಕದಲ್ಲಿ ಯೌಗಂಧರಾಯಣನು ತನ್ನ ಕೌಶಲದಿಂದ ಉದಯನನೂ ವಾಸವದತ್ತೆಯೂ ಉಜ್ಜಯಿನಿಗೆ ತೆರಳುವಂತೆ ಮಾಡುವನು. (ಇದರ ವಿವರವನ್ನು ಮುಂದೆ ಅರಿಕೆ ಮಾಡುವೆವು.) ಆದರೆ ಮಹಾಸೇನನ ಕಡೆಯವರೊಡನೆ ಯುದ್ಧವು ಸಂಘಟಿಸಿ ಯೌಗಂಧರಾಯಣನು ಸೆರೆ ಸಿಕ್ಕು

ವನು. ಸ್ವಾಮಿಕಾರ್ಯವು ನೆರವೇರಿತೆಂಬ ಸಂತೋಷದಲ್ಲಿ ಅವನಿಗೆ ಜೀವವೇ ತೃಣಸಮಾನ. ಯೌಗಂಧರಾಯಣನ ಶೌರ್ಯ ಸಾಹಸಗಳಿಗೆ ಮೆಚ್ಚಿ ಮಹಾಸೇನನು ಕನಕಾಲುಕದ ಮೆಚ್ಚನ್ನು ಕಳುಹಿಸುವನು. ತನ್ನ ಪ್ರಭುವಿನ ಶತ್ರುವಿನಿಂದ ಬಂದ ಮೆಚ್ಚನ್ನು ತಾನು ಸ್ವೀಕರಿಸುವುದಿಲ್ಲವೆಂದು ಯೌಗಂಧರಾಯಣನು ಸೂಚಿಸುವನು. ಆದರೆ ಅಷ್ಟರಲ್ಲಿ ರಾಜಪುತ್ರಿಯಾದ ವಾಸವದತ್ತೆಯು ಓಡಿಹೋದ ದುಃಖವನ್ನು ಸೈರಿಸಲಾರದೆ ಮಹಾರಾಣಿ ಯಾದ ಅಂಗಾರವತಿಯು ಅರಮನೆಯ ಉಪ್ಪರಿಗೆಯ ಮೇಲಿನಿಂದ ಬಿದ್ದು ಆತ್ಮಹತ್ಯ ಮಾಡಿಕೊಳ್ಳುವುದರಲ್ಲಿದ್ದಳೆಂದೂ, ಆಗ ಮಹಾಸೇನನು ಅವಳನ್ನು ತಡೆದು ಸಮಾಧಾನ ಹೇಳಿದನೆಂದೂ, ಉದಯನ ವಾಸವದತ್ತೆಯರಿಗೆ ಕ್ಷತ್ರಿಯರ ಪದ್ಧತಿಯಂತೆ ಗಾಂಧರ್ವ ವಿವಾಹವಾಗಿದ್ದ ಕಾರಣ ಅವರ ಚಿತ್ರ ಪಟಗಳಿಗೆ ವಿವಾಹಮಾಡಿಸುವುದಾಗಿ ತಿಳಿಸಿ ಸಂತೈಸಿದನೆಂದೂ ವರ್ತಮಾನವು ಬರುವುದು. ಯೌಗಂಧರಾಯಣನು ಆಗ ಮೆಚ್ಚನ್ನು ಸ್ವೀಕರಿಸುವನು.

## ೨. ವಿಮರ್ಶೆ

**ಸಂವಿಧಾನ:**—ಉದಯನನನ್ನೂ ವಾಸವದತ್ತೆಯನ್ನೂ ರಂಗಸ್ಥಳಕ್ಕೆ ತಾರದೆಯೇ ಕವಿಯು ರೂಪಕವನ್ನು ರಚನೆಮಾಡಿದ್ದಾನೆ. ಉದಯನನು ರಂಗಸ್ಥಳಕ್ಕೆ ಬಾರದೆ ಹೋಗಿದ್ದೂ ಇತರರ ಹೇಳಿಕೆಗಳಿಂದಲೇ ಅವನ ಪಾತ್ರವು ಪ್ರೇಕ್ಷಕರ ಕಣ್ಣಿಗೆ ಕಟ್ಟುವಂತೆಯೂ ಪ್ರೇಕ್ಷಕರಿಗೆ ಪ್ರಿಯವಾಗು ವಂತೆಯೂ ಮಾಡಿರುವ ಸಂವಿಧಾನಕೌಶಲವು ಕವಿಯ ಜಾಣ್ಮೆಯನ್ನು ವ್ಯಕ್ತ ಪಡಿಸುತ್ತದೆ. ಕಥಾಭಾಗದಲ್ಲಿ ಹೆಚ್ಚಿನ ಘಟನೆಗಳೇ ಇಲ್ಲದಿದ್ದರೂ ಸೊಗಸಾದ ಮತ್ತು ಸ್ವಾರಸ್ಯವಾದ ರೂಪಕವನ್ನು ಕವಿಯು ರಚಿಸಿದ್ದಾನೆ.

ಯೌಗಂಧರಾಯಣನೇ ಈ ರೂಪಕದ ಕೀಲು. ಆದಕಾರಣ, ಯೌಗಂಧ ರಾಯಣಪಾತ್ರವನ್ನು ಎಷ್ಟು ಸೊಗಸಾಗಿ ಕವಿಯು ಪರಿಪೋಷಿಸಿದ್ದಾನೆಂಬು ದನ್ನೂ ಮೊದಲನೆಯ ಅಂಕದಲ್ಲಿಯೇ ಕವಿಯು ಅವನ ವ್ಯಕ್ತಿವೈಶಿಷ್ಟ್ಯ ವನ್ನೂ ಅವನ ಸದ್ಗುಣಗಳನ್ನೂ ಹೇಗೆ ಸೂಚಿಸಿದ್ದಾನೆಂಬುದನ್ನೂ, ಚೆನ್ನಾಗಿ ಪರಿಶೀಲಿಸಬೇಕಾದುದು ಆವಶ್ಯಕ.

ಸೂತ್ರಧಾರನೂ ನಟಿಯೂ ನಿಷ್ಕ್ರಮಿಸಿದ ಮೇಲೆ ಸಾಲಕನೊಡನೆ ಯೌಗಂಧರಾಯಣನು ಪ್ರವೇಶಿಸುವನು. ಕುಶಾಗ್ರಮತಿಯಾದ ಯೌಗಂಧರಾಯಣನು ಕೃತಕಗಜದ ವಾರ್ತೆಯನ್ನು ರಾಜನಿಗೆ ಅರಿಕೆಮಾಡಿ ಎಚ್ಚರಿಕೆ ಹೇಳಲು ಸಾಲಕನನ್ನು ಕಳುಹಿಸಲುದ್ದೇಶಿಸಿರುವನು. ಯೌಗಂಧರಾಯಣನು "ಸಾಲಕ! ಪ್ರಯಾಣಕ್ಕೆ ಸಿದ್ಧವಾಗಿರುವಿಯೋ?" ಎಂದು ಕೇಳಿದಾಗ ಸಾಲಕನು "ಆರ್ಯ! ಹೌದು, ಸಿದ್ಧನಾಗಿರುವೆನು" ಎನ್ನುವನು. ಕರುಣಾಳುವಾದ ಯೌಗಂಧರಾಯಣನು "ನೀನು ಬಹುದೂರ ಹೋಗಬೇಕಾಗಿದೆ" ಎನ್ನುವುದನ್ನೂ ಸಾಲಕನು ಸ್ವಾಮಿಯ ಕೃಪಾಳುತನವನ್ನು ಗ್ರಹಿಸಿ "ಮಹತ್ತರವಾದ ಭಕ್ತಿ ವಿಶ್ವಾಸಗಳಿಂದ ಆರ್ಯನನ್ನು ಓಲೈಸುವೆನು" ಎಂದು ಉತ್ತರ ಹೇಳುವುದನ್ನೂ ಕಂಡು, ಯೌಗಂಧರಾಯಣನಲ್ಲಿ ಅಧಿಕಾರ ಪದವಿಗಳೊಡನೆ ಸಂಸ್ಕೃತಿಯೂ ಸೇರಿರುವುದಕ್ಕಾಗಿ ನಮ್ಮ ಮನಸ್ಸು ಮೆಚ್ಚಿ ಮುಗ್ಧಗೊಳ್ಳುವುದು.

ಉದಯನನಿಗೆ ಸಾಲಕನೊಡನೆ ಕಳುಹಿಸಬೇಕಾದ ಲೇಖನವು ಸಿದ್ಧವಾಗಿ ಬರುವಷ್ಟರಲ್ಲಿ ಹಂಸಕನೆಂಬ ದೂತನು ನಾಗವನದಿಂದ ಬರುವನು. ಒಂದು ಕ್ಷಣವೂ ಸ್ವಾಮಿಯನ್ನು ಅಗಲದೆ ಓಲೈಸುತ್ತಿದ್ದ ಆಪ್ತಭೃತ್ಯನಾದ ಹಂಸಕನು ಬಂದಿರುವುದನ್ನು ಕೇಳಿ ಯೌಗಂಧರಾಯಣನಿಗೆ ಆತಂಕವುಂಟಾಗುವುದು. ಅವನು "ಹಂಸಕ! ಸ್ವಾಮಿಯು ನಾಗವನಕ್ಕೆ ಹೋಗಲಿಲ್ಲವಲ್ಲವೆ?" ಎಂದು ಕೇಳುವನು. ಉದಯನನು ಹಿಂದಿನ ದಿನವೇ ಅಲ್ಲಿಗೆ ಹೋದನೆಂದು ಹಂಸಕನು ತಿಳಿಸುವನು. ಒಡನೆಯೇ ಯೌಗಂಧರಾಯಣನು "ಅಯ್ಯೋ ಇನ್ನು ಪತ್ರ ಪ್ರೇಷಣವು ನಿಷ್ಫಲ. ವಂಚಿತರಾದೆವು, ಪ್ರತ್ಯಾಶೆಯೇನಾದರೂ ಉಂಟೊ? ಇಲ್ಲವೇ ಇಂದೇ ಪ್ರಾಣಗಳನ್ನು ಪರಿತ್ಯಜಿಸಬೇಕೊ?" ಎಂದು ಕೇಳುವನು. ರಾಜನು ಮೃತನಾಗಿದ್ದರೆ ತನಗೂ ಮರಣವೇ ಶರಣೆಂಬುದು ಆತನ ಭಾವನೆ. ಯೌಗಂಧರಾಯಣನ ರಾಜಭಕ್ತಿಯು ಎಷ್ಟು ಉಜ್ಜ್ವಲವಾದುದೆಂಬುದು ಇದರಿಂದ ವ್ಯಕ್ತವಾಗುವುದು. ಸ್ವಾಮಿಯು ಬದುಕಿದ್ದುದಾಗಿ ಹಂಸಕನು ಹೇಳಿದೊಡನೆಯೇ ಉದಯನನು ಸೆರೆಸಿಕ್ಕಿರಬೇಕೆಂದು ಅವನು ಶಂಕಿಸುವನು ರಾಜನು ಸೆರೆಸಿಕ್ಕಿದುದನ್ನು ಕೇಳಿದಾಗ ಅವನು ಬಹುವಾಗಿ ವ್ಯಥೆಪಡುವನು; ಅಲ್ಲದೆ "ಇಂದಿನಿಂದ

ವತ್ಸರಾಜನ ಮಂತ್ರಿಗಳ ಅಸಾಮರ್ಥ್ಯವೂ ಅಪಯಶಸ್ಸೂ ಸುಪ್ರತಿಷ್ಠಿತ ವಾಯಿತು'' ಎನ್ನುವನು. ರುಮಣ್ವಂತನು ನಿಷೇಧಿಸಿದರೂ ಕೇಳದೆ ಮಿತಪರಿವಾರನಾಗಿ ಉದಯನನು ನೀಲಗಜವನ್ನು ಹಿಡಿದುತರಲು ಘೋಷವತಿಯೆಂಬ ತನ್ನ ವೀಣೆಯೊಡನೆ ನಾಗವನಕ್ಕೆ ಹೋದುದೇ ಮುಂತಾದ ಸಂಗತಿಗಳನ್ನೂ, ಉದಯನನು ಶತ್ರುಗಳೊಡನೆ ಅಮಿತ ಪರಾಕ್ರಮದಿಂದ ಹೋರಾಡಿ ಅವರು ಬಹುಮಂದಿಗಳಿದ್ದುದರ ದೆಸೆಯಿಂದ ಕೊನೆಗೆ ಘಾಸಿ ಹೊಂದಿ ಮೂರ್ಛಿತನಾದುದನ್ನೂ ಹಂಸಕನು ಬಿನ್ನವಿಸುವನು. ರಾಜನನ್ನು ಶತ್ರುಯೋಧರು ಕರ್ಕಶವಾದ ಲತೆಗಳಿಂದ ಬಿಗಿದು ಹಿಂಸಿಸಿದರೆಂದು ಕೇಳಿ ದುಃಖಾಕ್ರಾಂತನಾದ ಯೌಗಂಧರಾಯಣನು ತನ್ನ ಮನಸ್ಸಿಗೆ ತಾನೇ ಸಮಾಧಾನ ಹೇಳಿಕೊಂಡು "ಶರೀರವು ಧರ್ಷಿತವಾಯಿತು, ತೇಜಸ್ಸಲ್ಲ. ಆಮೇಲಾಮೇಲೆ?'' ಎನ್ನುವನು. ವಂಚನೆಯಿಂದ ಉದಯನನನ್ನು ಶತ್ರುಗಳು ವಶಪಡಿಸಿಕೊಂಡಿರುವಲ್ಲಿ ಅವನಿಗೇನೂ ತೇಜೋಹಾನಿಯಾದಂತಾಗಲಿಲ್ಲವೆಂಬುದೂ, ಅವನ ಪರಾಕ್ರಮದಿಂದಲೇ ಯುದ್ಧಮಾಡಿ ಕೊನೆಗೆ ನಿರ್ವಾಹವಿಲ್ಲದೆ ತತ್ರುಗಳ ವಶನಾದನೆಂಬುದೂ ಇದರ ಆಶಯ.

ಉದಯನನು ಮೂರ್ಛಿತನಾದಾಗ ಶತ್ರುಯೋಧರು ಅವನ ದೇಹವನ್ನು ಲತೆಗಳಿಂದ ಬಿಗಿಯುವರು. ಅವರ ಹೇಯಕೃತ್ಯವು ಪೂರೈಸುವ ವೇಳೆಗೆ ಉದಯನನಿಗೆ ಮೂರ್ಛೆತಿಳಿದುದನ್ನು ಕಂಡು ಅವರೆಲ್ಲರೂ "ಇವನಿಂದ ನನ್ನ ಸಹೋದರನು ಹತನಾದನು; ಇವನಿಂದ ನನ್ನ ತಂದೆಯು ಹತನಾದನು; ಇವನಿಂದ ನನ್ನ ಮಗನು ಹತನಾದನು; ಇವನಿಂದ ನನ್ನ ಮಿತ್ರನು ಹತನಾದನು.''* ಎಂದು ಬಗೆಬಗೆಯಾಗಿ ತಮ್ಮತಮ್ಮ ದುಃಖವನ್ನು ಹೇಳಿಕೊಳ್ಳುತ್ತ ಓಡಿಹೋಗುವರು. ತಾವೇ ಉದಯನನನ್ನು ಬಂಧಿಸಿದ್ದೂ ಅವರು ಓಡಿಹೋದರೆಂಬ ಅಂಶದಿಂದ ಉದಯನನ ಪರಾಕ್ರಮವೂ, ಉದಯನನನ್ನು ಕಂಡರೆ ಅವರ ಭಯವೂ ಎಷ್ಟು ಹೆಚ್ಚಿನ ವೆಂಬುದು ಗೊತ್ತಾಗುವುದು. ಶತ್ರುಯೋಧರು ದೂರ ಸರಿದ ಮೇಲೆ ತಾವು

---

* "..........ಮಮ ಭ್ರಾತಾ ಹತೋಽನೇನ ಮಮ ಪಿತಾಽನೇನ ಮಮ ಸುತೋ ಮಮ ವಯಸ್ಯ ಇತಿ..............."

ಉದಯನನನ್ನು ಕಟ್ಟಿಹಾಕಿದ್ದ ವಿಚಾರವು ಅವರಿಗೆ—ಅವರ ಭಯವು ಕಡಮೆಯಾದಮೇಲೆ—ಜ್ಞಾಪಕಕ್ಕೆಬರುವುದೆಂದು ತೋರುವುದು. ಆ ಬಳಿಕ ಶತ್ರುಪಕ್ಷದವನೊಬ್ಬನು ಉದಯನನ ಜುಟ್ಟನ್ನು ಹಿಡಿದು ಅವನ ದೇಹವನ್ನು ದರದರನೆ ಎಳೆದು ಅವನ ಶಿರಸ್ಸನ್ನು ಛೇದಿಸಲು ಕತ್ತಿಯನ್ನು ಹಿರಿದನೆಂದು ಹಂಸಕನು ತಿಳಿಸುವನು. ಪ್ರಭು ಭಕ್ತನಾದ ಯೌಗಂಧರಾಯಣನು "ಹಂಸಕ! ಸುದ್ದಿ ತಿಳಿಸುವುದನ್ನು ಸ್ವಲ್ಪ ನಿಲ್ಲಿಸು; ನನ್ನ ಉಚ್ಛ್ವಾಸಕ್ಕೆ ಸ್ವಲ್ಪ ಅವಕಾಶಕೊಡು" ಎನ್ನುವನು. ಅವನ ಸ್ಥಿತಿಯು ಆಗ ಹೇಗಿದ್ದಿತೆಂಬುದನ್ನು ಅವನ ಮಾತುಗಳಿಂದಲೇ ಗ್ರಹಿಸಬಹುದಾಗಿದೆ. ಉದಯನನನ್ನು ಕತ್ತಿಯಿಂದ ಹೊಡೆಯಲುದ್ಯುಕ್ತನಾದವನು ರಭಸದಿಂದ ಆ ಕೆಲಸವನ್ನು ಆಗ ಮಾಡಲಿಚ್ಛಿಸಿ ಸ್ವಲ್ಪದೂರ ಹಿಂದಕ್ಕೆ ಸರಿದು ಕತ್ತಿಯನ್ನು ಹಿಡಿದು ಓಡಿಬರುತ್ತಿರುವಲ್ಲಿ ಯುದ್ಧಭೂಮಿಯಾದ ಆ ಪ್ರದೇಶದಲ್ಲಿ ಕೆಸರುಗಟ್ಟಿದ್ದ ರಕ್ತವನ್ನು ಕಾಣದೆ ಕಾಲಿಟ್ಟು ಜಾರಿಬಿದ್ದನೆಂದೂ, ಅಷ್ಟರಲ್ಲಿ ಮಹಾಸೇನನ ಅಮಾತ್ಯನಾದ ಶಾಲಂಕಾಯನನು ಅಲ್ಲಿಗೆ ಬಂದು "ಸಾಕು, ಸಾಕು, ನಿನ್ನ ಸಾಹಸ" ಎಂದು ಹೇಳಿ ಆ ನೃಶಂಸಕಾರ್ಯವನ್ನು ತಡೆದು, ಉದಯನನಿಗೆ ನಮಸ್ಕಾರಮಾಡಿ ಅವನ ಬಂಧನವನ್ನು ಬಿಡಿಸಿದನೆಂದೂ ಹಂಸಕನು ಆ ಬಳಿಕ ತಿಳಿಸುವನು. ಯುದ್ಧದಲ್ಲಿ ಉದಯನನ ಕುಂತ ಪ್ರಹಾರದಿಂದ ಮೂರ್ಛಿತನಾಗಿದ್ದ ಶಾಲಂಕಾಯನನು ಆ ರೀತಿ ವರ್ತಿಸಿದುದನ್ನು ಕೇಳಿ ಯೌಗಂಧರಾಯಣನು ಅವನ ಸಾಧುತ್ವವನ್ನು ಶ್ಲಾಘಿಸುವನು. ವತ್ಸರಾಜನನ್ನು ಶತ್ರುಗಳು ಸೆರೆಹಿಡಿದು ಕರೆದೊಯ್ದುದನ್ನು ಕೇಳಿ ಸಂತಾಪಪಡುವನು. ಆ ದುಃಖವಾರ್ತೆಯನ್ನು ರಾಜಮಾತೆಗೆ ನಿವೇದಿಸುವಲ್ಲಿ ಪ್ರತೀಹಾರಿಯಾದ ವಿಜಯೆಯು ನಯವಿಲ್ಲದೆ ನಡೆದಾಳೆಂಬ ಶಂಕೆಯಿಂದ ಸ್ವಾಮಿಯನ್ನು ಸೆರೆಹಿಡಿದು ಕರೆದೊಯ್ದರೆಂದು ತಟಕ್ಕನೆ ತಿಳಿಸಕೂಡದೆಂದೂ, ಸ್ನೇಹದುರ್ಬಲವಾದ ಮಾತೃ ಹೃದಯವನ್ನು ರಕ್ಷಿಸಬೇಕೆಂದೂ ಅವಳಿಗೆ ಯೌಗಂಧರಾಯಣನು ಎಚ್ಚರಿಕೆ ಹೇಳುವನು. ಅವನು ಎಂತಹ ಜಾಗರೂಕನಾದ ಮೇಧಾವಿಯೆಂಬುದು ಇದರಿಂದಲೂ ಗೊತ್ತಾಗುವುದು.

ಪ್ರತೀಹಾರಿಯು ಹೊರಟುಹೋದ ಬಳಿಕ ಯೌಗಂಧರಾಯಣನು ಹಂಸಕನನ್ನು ಕುರಿತು ಅವನೇಕೆ ರಾಜನೊಡನೆ ಹೋಗದೆ ಕೌಶಾಂಬಿಗೆ

ಹಿಂತಿರುಗಿದನೆಂದು ಕೇಳುವನು. ಉದಯನನಲ್ಲಿ ಯೌಗಂಧರಾಯಣನಿಗೆ ಗಾಢವಾದ ಪ್ರೀತಿಯಿದ್ದಿತೆಂಬುದು ಇಂತಹ ಸಣ್ಣವಿಚಾರಗಳಿಂದಲೂ ಗೊತ್ತಾಗುವುದು. ಶಾಲಂಕಾಯನನು ಕೌಶಾಂಬಿಗೆ ಹೋಗಿ ನಡೆದ ಸಂಗತಿಗಳನ್ನು ತಿಳಿಸುವಂತೆ ತನಗೆ ಅಪ್ಪಣೆಮಾಡಿದುದರಿಂದ ಸ್ವಾಮಿಯೊಡನೆ ಹೊರಡಲನುವಾಗಿದ್ದ ತಾನು ಹಿಂತಿರುಗಬೇಕಾಯಿತೆಂದು ಹಂಸಕನು ಹೇಳುವನು. ಬಳಿಕ ಯೌಗಂಧರಾಯಣನು "........ನನ್ನನ್ನು ಕುರಿತು ಹೇಳುವಂತೆ ಸ್ವಾಮಿಯು ಏನನ್ನೂ ತಿಳಿಸಲಿಲ್ಲವೆ ?" ಎಂದು ಕೇಳುವನು. ತಾನು ನಮಸ್ಕರಿಸಿ ಬೀಳ್ಕೊಳ್ಳುತ್ತಿರುವಲ್ಲಿ ಉದಯನನು ಕಂಬನಿದುಂಬಿ ಯೌಗಂಧರಾಯಣನನ್ನು ನೋಡು ಹೋಗೆಂದು ತನಗೆ ಬೆಸಸಿದನೆಂದು ಹಂಸಕನು ಉತ್ತರ ಹೇಳುವನು. ಆ ಮಾತುಗಳನ್ನು ಕೇಳಿ ಯೌಗಂಧರಾಯಣನು "ಹಾಗಲ್ಲ. ಸಚಿವರಾರನ್ನೂ ನೋಡದೆ ಯೌಗಂಧರಾಯಣನೊಬ್ಬನನ್ನೇ ನೋಡಬೇಕೆಂದು ಸ್ವಾಮಿಯು ಹೇಳಿದ್ದಾನೆ" ಎನ್ನುವನು. ತನ್ನ ಪ್ರಾಶಸ್ತ್ಯವನ್ನು ಮೆರೆಯುವುದಕ್ಕಾಗಿ ಯೌಗಂಧರಾಯಣನು ಹೀಗೆ ಹೇಳುವುದಿಲ್ಲ. ತಾನು ತನ್ನ ಪದವಿಗುಚಿತವಾಗಿ ತಕ್ಕಷ್ಟು ಜಾಗರೂಕನಾಗಿದ್ದು ಸ್ವಾಮಿಯ ಉಪ್ಪಿಗೆ ಅರ್ಹನಾಗುವಂತೆ ಸೇವೆಯನ್ನೆಸಗಲಿಲ್ಲವೆಂಬ ಕಾರಣಕ್ಕಾಗಿ ಸ್ವಾಮಿಯು ಆ ರೀತಿ ಹೇಳಿದನೆಂದು ಯೌಗಂಧರಾಯಣನು ನಿರ್ಧರಿಸುವುದನ್ನು ಕಂಡು ತಲೆದೂಗದವರಾರು ? ಯೌಗಂಧರಾಯಣನ ಆ ಬಗೆಯ ನಿರ್ಧರದ ನುಡಿಗಳನ್ನು ಕೇಳಿ ಹಂಸಕನು "ಇರಬೇಕು" ಎನ್ನುವನು. ಪ್ರಧಾನ ಸಚಿವನ ಬಳಿಯಲ್ಲಿ ಒಬ್ಬ ಭೃತ್ಯನಿಗೆ ಹಾಗೆ ಹೇಳುವಷ್ಟು ಮಟ್ಟಿನ ಸ್ವಾತಂತ್ರ್ಯವಿರಬೇಕಾದರೆ ಯೌಗಂಧರಾಯಣನು ಅಳವಡಿಸಿದ್ದ ಸ್ವಾಮಿಭೃತ್ಯ ಸಂಬಂಧದ ಸರಳತೆಯೂ ಸ್ನಿಗ್ಧತೆಯೂ ಎಷ್ಟು ಉತ್ತಮ ರೀತಿಯವಾಗಿರಬೇಕೆಂದು ವಿಸ್ಮಯವುಂಟಾಗುವುದು. ಯೌಗಂಧರಾಯಣನು ಹಂಸಕನ ಮಾತನ್ನು ಕೇಳಿ ಕುಗ್ಗುವುದಿಲ್ಲ. ಉತ್ಸಾಹಪೂರಿತನಾಗಿ ಅವನು "ಇನ್ನು ಮುಂದೆ ನಾನು ಬೇರೆ ಮನುಷ್ಯನೇ ಆಗುವುದನ್ನು ಸ್ವಾಮಿಯು ಕಾಣುವನು. ಶತ್ರುರಾಜನ ನಗರದಲ್ಲಾಗಲಿ, ಬಂಧನದಲ್ಲಾಗಲಿ, ಕಾಡಿನಲ್ಲಾಗಲಿ, ವಿನಾಶವೇ ಒದಗುವುದಾದರೆ ಪರಲೋಕದಲ್ಲಾಗಲಿ, ಎಲ್ಲಿಯೇ ಇದ್ದರೂ ತುಲ್ಯನಿಷ್ಠನಾದ ನನ್ನನ್ನು ಸ್ವಾಮಿಯು ಕಾಣುವಂತಾಗುವುದು.

ಸ್ವಾಮಿಯನ್ನು ತಾನು ಗೆದ್ದನೆಂದು ಭಾವಿಸಿಕೊಂಡಿರುವ ಆ ರಾಜನನ್ನು ವಂಚಿಸಿ ಸ್ವಾಮಿಗೆ ಮತ್ತೆ ರಾಜ್ಯಲಾಭವನ್ನು ದೊರೆಯಿಸುವೆನು. ಆತನ ಬಳಿಯಲ್ಲಿ ನಿಂತು ಶ್ಲಾಘನೆಯನ್ನು ಪಡೆಯುವೆನು"* ಎಂದು ಹೇಳಿ ಮೂರ್ತಿಮತ್ತಾದ ಸ್ವಾಮಿನಿಷ್ಠೆಯೋ ಎಂಬಂತೆ ವಿರಾಜಿಸುವನು.

ಅಷ್ಟರಲ್ಲಿ ಅಂತಃಪುರದಿಂದ ರೋದನ ಧ್ವನಿಯು ಕೇಳಿಬಂದು, ಆ ಬಳಿಕ ರಾಜಮಾತೆಯಿಂದ ಸಂದೇಶವು ಬರುವುದು. ಆಕೆಯು ಯೌಗಂಧರಾಯಣದಲ್ಲಿ ಪುತ್ರನಿರ್ವಿಶೇಷವಾದ ಪ್ರೀತಿಯನ್ನು ತೋರಿಸಿ "ಈ ಬಗೆಯ ಸುಹೃಜ್ಜನರಿದ್ದೂ ವತ್ಸರಾಜನಿಗೆ ಈ ಗತಿಯೊದವಿತು. ವಿಧಿವಿಲಾಸಕ್ಕೆ ಹೊಣೆಯಾರು? ವತ್ಸನ ಸುಹೃಜ್ಜನರಲ್ಲಿ ಗೌರವ ಭರವಸೆಗಳನ್ನಿಟ್ಟು ಈಗಿನ ದುಃಖವನ್ನು ತಾಳಬೇಕಾಗಿದೆ. ಈ ಬಗೆಯ ಸಂಕಟಗಳಿಂದಲೂ ಯಾವನು ಧೃತಿಗೆಡುವುದಿಲ್ಲವೋ, ವಿಘ್ನಗಳು ಬಂದರೂ ಯಾವನು ಸಗ್ಗುವುದಿಲ್ಲವೋ, ವಂಚಿತನಾದರೂ ಯಾವನು ನಿರ್ವೇದ ಹೊಂದುವುದಿಲ್ಲವೋ, ಸೋತರೂ ಯಾವನು ಹತಾಶನಾಗಿ ಪ್ರಾಣತ್ಯಾಗ ಮಾಡುವುದಿಲ್ಲವೋ ಮತ್ತು ಯಾವನು ಪ್ರಥಮತಃ ನನ್ನ ವತ್ಸನ ಮಿತ್ರನಾಗಿಯೂ ಆ ಬಳಿಕ ಅವನ ಅಮಾತ್ಯನಾಗಿಯೂ ಇರುವನೋ ಆ ನನ್ನ ಪುತ್ರಕನಾದ ಮೇಧಾವಿಯು (ಎಂದರೆ ಯೌಗಂಧರಾಯಣನು) ನನ್ನ ಮಗನನ್ನು ಕರೆದು ತರುವಂತೆ ಕೇಳಿಕೊಳ್ಳುತ್ತೇನೆ" ಎಂಬ ಸಂದೇಶವನ್ನು ಕಳುಹಿಸುತ್ತಾಳೆ. ಯೌಗಂಧರಾಯಣನು ವೃದ್ಧೆಯಾದ ರಾಜಮಾತೆಯ ಧೀರವಾಕ್ಯಗಳಿಗಾಗಿ ಆಕೆಯನ್ನು ಪ್ರಶಂಸಿಸಿ, ಆಕೆಯಲ್ಲಿ ತನ್ನ ಭಕ್ತಿಯನ್ನು ಸೂಚಿಸಲು ಶುದ್ಧಾಚಮನವಮಾಡಿ "ರಾಹುಗ್ರಸ್ತನಾದ ಚಂದ್ರಮನಂತೆ ಶತ್ರುಬಲಗ್ರಸ್ತನಾಗಿರುವ ರಾಜನನ್ನು ಬಿಡಿಸಿಕೊಂಡು ಬರದೆ ಹೋದರೆ ನಾನು ಯೌಗಂಧರಾಯಣನೇ ಅಲ್ಲ"†

---

* "ಪುರುಷಾಂತರಿತಂ ಮಾಂ ದ್ರಕ್ಷ್ಯತಿ ಸ್ವಾಮೀ,—
ರಿಪುನೃಪನಗರೇ ವಾ ಬಂಧನೇ ವಾ ವನೇ ವಾ
ಸಮುಪಗತ ವಿನಾಶಃ ಪ್ರೇತ್ಯ ವಾ ತುಲ್ಯನಿಷ್ಠಮ್ ।
ಜಿತಮಿತಿ ಕೃತಬುದ್ಧಿಂ ವಂಚಯಿತ್ವಾ ನೃಪಂ ತಂ
ಪುನರಧಿಗತರಾಜ್ಯಃ ಪಾರ್ಶ್ವತಃ ಶ್ಲಾಘನೀಯಮ್ ॥"

† "ಯದಿ ಶತ್ರುಬಲಗ್ರಸ್ತೋ ರಾಹುಣಾ ಚಂದ್ರಮಾ ಇವ । (?)
ಮೋಚಯಾಮಿ ನ ರಾಜಾನಂ ನಾಸ್ಮಿ ಯೌಗಂಧರಾಯಣಃ ॥"

ಎಂದು ಪ್ರತಿಜ್ಞೆಮಾಡುವನು. ಆತನಂತೆಯೇ ಅವನ ಪ್ರತಿಜ್ಞೆಯ ನುಡಿಗಳೂ ಸರಳವಾದರೂ ಹುರುಳುಳ್ಳ ಬಲುಹಿನ ನುಡಿಗಳೆನ್ನಲು ಅಡ್ಡಿಯಿಲ್ಲ. ರಾಜಮಾತೆಯು ಮತ್ತೆ ಪ್ರತೀಹಾರಿಯನ್ನಟ್ಟಿ, "ನನ್ನ ಪುತ್ರಕನನ್ನು ನೋಡಲಿಚ್ಛಿಸುವೆನು" ಎಂದು ಹೇಳಿಕಳುಹಿಸಿದಾಗಲಂತು, ಅವನ ಉತ್ಸಾಹವು ಮೊದಲಿಗಿಮ್ಮಡಿಯಾಗುವುದು. ವಿಶ್ರಾಂತಿಹೊಂದಲು ಹಂಸಕನಿಗೆ ಅನುಮತಿಯನ್ನಿತ್ತು ರಾಜಮಾತೆಯನ್ನು ಕಾಣಲು ಶಾಂತಿ ಗೃಹಕ್ಕೆ ಹೊರಡಲನುವಾಗಿ ಯೌಗಂಧರಾಯಣನು, † "ಮಥಿಸಿದರೆ ಕಾಷ್ಠ ದಿಂದಲೂ ಅಗ್ನಿಯು ಹುಟ್ಟುವುದು. ತೋಡಿದರೆ ಭೂಮಿಯೂ ನೀರನ್ನು ಕೊಡುವುದು. ಉತ್ಸಾಹಶಾಲಿಗಳಾದ ಮಾನವರಿಗಸಾಧ್ಯವಾದುದಾವುದೂ ಇಲ್ಲ. ಸರಿಯಾದ ಮಾರ್ಗದಲ್ಲಿ ನಡೆಯಿಸಿದ ಸರ್ವಪ್ರಯತ್ನಗಳೂ ಸಫಲ ವಾಗಲೇಬೇಕು" ಎಂದು ವೀರತ್ವದ ಕೆಚ್ಚಿನಿಂದ ಉದ್ಘೋಷಿಸುವನು. ಅಲ್ಲಿಗೆ ಮೊದಲನೆಯ ಅಂಕವು ಮುಗಿಯುವುದು.

ಎರಡನೆಯ ಅಂಕದಲ್ಲಿ ಕವಿಯು ಮಹಾಸೇನನನಿಗೆ ಅತಿಥಿಸತ್ಕಾರ ದಲ್ಲಿದ್ದ ಆಸಕ್ತಿ, ವಾಸವದತ್ತೆಯ ಮೇಲಣ ವಾತ್ಸಲ್ಯ, ಮುಂತಾದ ಗುಣಗಳನ್ನು ಪರಿಚಯಮಾಡಿಕೊಟ್ಟು ಅವನ ಗೃಹಕೃತ್ಯದ ಚಿತ್ರವನ್ನು ಮನೋಹರವಾಗಿ ವಾಚಕರ (ಮತ್ತು ಪ್ರೇಕ್ಷಕರ) ಮುಂದಿಟ್ಟಿದ್ದಾನೆ.

ವಾಸವದತ್ತೆಯನ್ನು ವಿವಾಹ ಮಾಡಿಕೊಳ್ಳಲಿಚ್ಛಿಸುವ ಕಾಶೀರಾಜನ ಪರವಾಗಿ ದೌತ್ಯವನ್ನು ವಹಿಸಿ ಉಪಾಧ್ಯಾಯ ಜೈವಂತಿಯು ಮಹಾಸೇನನಲ್ಲಿಗೆ ಬಂದಿರುವ ಪ್ರಸಂಗದಿಂದ ಎರಡನೆಯ ಅಂಕವು ಪ್ರಾರಂಭವಾಗುವುದು. ಆ ವೇಳೆಗೆ ನಾನಾ ರಾಜ ಕುಲಗಳಿಂದಲೂ ರಾಯಭಾರಿಗಳು ಬಂದಿರುವರು. ಮಹಾಸೇನನು ಯಾರೊಬ್ಬರಿಗೂ ಯಾವನಿರ್ಧರವನ್ನೂ ಹೇಳದೆ ಮೌನ

---

† "ಕಾಷ್ಠಾದಗ್ನಿರ್ಜಾಯತೇ ಮಥ್ಯಮಾನಾತ್
ಭೂಮಿಸ್ತೋಯಂ ಖನ್ಯಮಾನಾ ದದಾತಿ ।
ಸೋತ್ಸಾಹಾನಾಂ ನಾಸ್ತ್ಯಸಾಧ್ಯಂ ನರಾಣಾಂ
ಮಾರ್ಗಾರಬ್ಧಾಃ ಸರ್ವಯತ್ನಾಃ ಫಲನ್ತಿ ॥"

ದಿಂದಿದ್ದುದನ್ನು ಕಂಡು ವಿಸ್ಮಿತನಾದ ಕಾಂಚುಕೀಯನು ರಾಜನಲ್ಲಿಗೆ ಹೋಗಲು ಸಿದ್ಧವಾಗುವನು. ಮಹಾಸೇನನು, "ನನ್ನ ಕುದುರೆಯ ಗೊರಸಿನಿಂದ ಸಿಡಿದೆದ್ದ ಮಾರ್ಗಧೂಳಿಯನ್ನು ನನ್ನ ಹಿಂದೆ ಬರುತ್ತಿರುವ ಇತರ ರಾಜರುಗಳು ಉಷ್ಣೀಷಗಳ ಮೇಲೆ ಭೃತ್ಯಭಾವದಿಂದ ವಹಿಸುತ್ತಾರೆ. ಆದರೂ ನನಗೆ ಸಂತೋಷವಿಲ್ಲ. ಏಕೆಂದರೆ ಗುಣಶಾಲಿಯೂ ಕುಂಜರಜ್ಞಾನದೃಪ್ತನೂ ಆದ ವತ್ಸರಾಜನೊಬ್ಬನು ಮಾತ್ರ (ನನ್ನ ಅಧೀನನಾಗಿ) ನನಗೆ ಪ್ರಣಾಮಮಾಡುವಂತಿಲ್ಲ" ಎಂದು* ಕೊರಗುತ್ತ ಪ್ರವೇಶಿಸುವನು. ಅವನು ಕಾಂಚುಕೀಯನಾದ ಬಾದರಾಯಣನನ್ನು ಕರೆದು ಜೈವಂತಿಯ ಸತ್ಕಾರವು ಯಥಾಯೋಗ್ಯವಾಗಿ ನಡೆಯಿತೇ-ಎಂದು ಕೇಳುವನು. ಬಾದರಾಯಣನು ಅದಕ್ಕೆ ಉತ್ತರ ಹೇಳಿದ ಬಳಿಕ ತನ್ನ ಮನಸ್ಸಿನ ವಿಸ್ಮಯವನ್ನು ಸೂಚಿಸುವನು. ವಾಸವದತ್ತೆಗೆ ಯೋಗ್ಯನಾಗಬೇಕಾದ ವರನು ಸತ್ಕುಲಪ್ರಸೂತನೂ ಸಾನುಕ್ರೋಶನಾದ ಮೃದುಸ್ವಭಾವದವನೂ, ರೂಪವಂತನೂ, ವೀರನೂ ಆಗಿರಬೇಕೆಂದು ತನಗೆ ಇಷ್ಟವಿರುವುದೇ ತಾನು ಯಾರಿಗೂ ಉತ್ತರ ಹೇಳದಿರುವುದಕ್ಕೆ ಕಾರಣವೆಂದು ಮಹಾಸೇನನು ತಿಳಿಸುವನು. ಮಹಾಸೇನನನ್ನುಳಿದು ಮತ್ತಾರಲ್ಲಿಯೂ ಆ ಗುಣಗಳಿಲ್ಲವೆಂದು ಬಾದರಾಯಣನು ಬಿನ್ನವಿಸುವನು. ಆ ಬಳಿಕ ಮಹಾಸೇನನು ವಾಸವದತ್ತೆಯ ವಿವಾಹ ವಿಚಾರವನ್ನು ಕುರಿತು ಮಾತನಾಡಲು ತನ್ನ ಪತ್ನಿಯಾದ ಅಂಗಾರವತಿಯನ್ನು ಕರೆಯಿಸುವನು. ಹೆಣ್ಣುಮಕ್ಕಳ ವಿವಾಹಕಾಲದಲ್ಲಿ ಮಾತೆಯರು ದುಃಖಶೀಲೆಯರೆಂದು ಅವನ ಅಭಿಪ್ರಾಯ. ಅವನೆಷ್ಟು ದಾಕ್ಷಿಣ್ಯಸ್ವಭಾವದವನೆಂಬುದು ಇದರಿಂದ ವ್ಯಕ್ತವಾಗುವುದು. ಬಾದರಾಯಣನು ರಾಜನ ಇಂಗಿತವನ್ನು ತಿಳಿಸಿದಮೇಲೆ, ಸಪರಿವಾರಳಾಗಿ ಮಹಾರಾಣಿ ಅಂಗಾರವತಿಯು ಪ್ರವೇಶಿಸುವಳು. ವಾಸವದತ್ತೆಯೆಲ್ಲಿರುವಳೆಂದು ರಾಜನು ಕೇಳಿ

---

* "ಮಮಹಯಖುರ ಭಿನ್ನಂ ಮಾರ್ಗರೇಣುಂ ನರೇಂದ್ರಾ
ಮುಕುಟ ತಟವಿಲಗ್ನಂ ಭೃತ್ಯಭೂತಾ ವಹನ್ತಿ ।
ನ ಚ ಮಮ ಪರಿತೋಷೋ ಯನ್ನ ಮಾಂ ವತ್ಸರಾಜೋ
ಪ್ರಣಮತಿ ಗುಣಶಾಲೀ ಕುಂಜರ ಜ್ಞಾನ ದೃಪ್ತಃ ॥"

ದಾಗ, ವೀಣೆಯನ್ನು ಕಲಿಯುವ ಆಶೆಯಿಂದ ಅವಳು ಉಪಾಧ್ಯಾಯನಲ್ಲಿಗೆ ಹೋಗಿರುವುದಾಗಿ ಅಂಗಾರವತಿಯು ಉತ್ತರ ಹೇಳುವಳು. ವಿವಾಹ ಕಾಲವು ಸಮೀಪಿಸಿರುವಲ್ಲಿ ಉಪಾಧ್ಯಾಯನಿಂದ ಪಾಠವಾಗಬೇಕಾದುದಿಲ್ಲ ವೆಂದೂ, ವಾಸವದತ್ತೆಯ ಪತಿಯೇ ವೀಣೆಯನ್ನು ನುಡಿಸುವುದನ್ನು ಕಲಿಸು ವನೆಂದೂ ಮಹಾಸೇನನು ಹೇಳುವನು. (ಉದಯನನು ಅಳಿಯನಾದರೆ ಸಾಕೆಂಬ ಆತನ ಬಯಕೆಯು ಇದನ್ನು ಹೇಳಿಸುವುದೆಂದು ತೋರುವುದು.) ಪ್ರಿಯಪುತ್ರಿಯನ್ನಗಲುವ ಕಾಲವು ಸಮೀಪಿಸಿರುವುದರ ನೆನಪಾಗಿ ಅಂಗಾರ ವತಿಯು ಕಂಬನಿದುಂಬುವಳು. ಸಂಬಂಧಾಪೇಕ್ಷೆಯಿಂದ ರಾಯಭಾರಿಗಳನ್ನು ಕಳುಹಿಸಿರುವ ರಾಜರುಗಳಲ್ಲಿ ಯಾರ ಪ್ರಾರ್ಥನೆಯನ್ನು ಲಾಲಿಸಬೇಕೆಂಬ ವಿಚಾರವನ್ನು ಪ್ರಸ್ತಾವಿಸುತ್ತಿರುವಷ್ಟರಲ್ಲಿ ವತ್ಸರಾಜನು ಸೆರೆಸಿಕ್ಕಿದ ವಾರ್ತೆಯನ್ನು ತಂದಿರುವ ಕಾಂಚುಕೀಯನು, "ವತ್ಸರಾಜಃ" ಎಂದುಹೇಳಿ ಸುಮ್ಮನಾಗುವನು. ಮಹಾಸೇನನ ಪ್ರಶ್ನೆಗೆ ಉತ್ತರವಾಗಿ ವತ್ಸರಾಜನಿಗೆ ಮಗಳನ್ನು ಕೊಡಬೇಕೆಂದು ಪರೋಕ್ಷವಾಗಿ ಸೂಚಿತವಾದಂತೆ ಇದರಿಂದ ತೋರಿಬರುವ ಕಾರಣ, ಕಲಾದೃಷ್ಟಿಯಿಂದ ಇದು ಮನೋಹರವಾಗಿರುವುದು. ವತ್ಸರಾಜನು ಸೆರೆ ಸಿಕ್ಕಿದ್ದುದನ್ನು ಕೇಳಿ ಮಹಾಸೇನನು ಆನಂದ ತುಂದಿಲ ಸ್ವಾಂತನಾಗಿ ಕೋಲಾಹಲಪಡುವನು. ವಾಸವದತ್ತೆಯನ್ನು ವಿವಾಹ ವಾಗುವ ಬಯಕೆಯಿಂದ ಅನೇಕಮಂದಿ ರಾಜರು ದೂತಸಂಪ್ರೇಷಣ ಮಾಡಿದ್ದರೂ, ಉದಯನನೊಬ್ಬನೇಕೆ ಆರೀತಿ ಮಾಡಲಿಲ್ಲವೆಂದು ಅಂಗಾರ ವತಿಯು ಕೇಳುವಳು. ರಾಜನು, "ದೇವಿ! ಮಹಾಸೇನನೆಂಬ ಶಬ್ದವನ್ನೇ ಲಕ್ಷ್ಯಮಾಡದವನು ನನ್ನೊಡನೆ ಸಂಬಂಧವನ್ನಿಚ್ಛಿಸುವುದೂ ಉಂಟೆ?" ಎಂದು ಉತ್ತರಹೇಳುವನು. "ಅವನೇನು ಬಾಲಕನೋ ಅಥವಾ ಅವಿವೇಕಿಯೋ" ಎಂದು ತಾನು ಹೇಳಿದುದಕ್ಕೆ ಮಹಾಸೇನನು, "ಬಾಲಕ. ಅವಿವೇಕಿಯಲ್ಲ" ಎಂದುದನ್ನು ಕೇಳಿ ವಿಸ್ಮಿತಳಾಗಿ ಅಂಗಾರವತಿಯು "ಅವನ ಬಿಂಕಕ್ಕೇನುಕಾರಣ?" ಎಂದು ಪ್ರಶ್ನೆಮಾಡುವಳು. ಮಹಾ ಸೇನನು "ತಾನು ಅನೇಕ ರಾಜರ್ಷಿಗಳು ಬೆಳಗಿದ ಭರತ ವಂಶದವನೆಂಬ ಪ್ರತಿಷ್ಠೆ. ತಮ್ಮ ವಂಶವು ವಿದ್ಯೆಯ ನೆಲೆಯೆಂಬ ಅಹಂಕಾರ. ವಂಶಾನು ಗತವಾಗಿ ತನಗೆ ಗಾಂಧರ್ವವೇದವು ಲಭಿಸಿರುವ ಹೆಮ್ಮೆ. ವಯಸ್ಸಹಜವಾದ

ರೂಪವಿದೆಯೆಂಬ ಕೆಚ್ಚು. ಪುರಜನರ ಅನುರಾಗಕ್ಕೆ ತಾನು ಪಾತ್ರನಾಗಿರುವು ದರಿಂದ ತಾನು ಅಜೇಯನೆಂಬ ಗರ್ವ.'' ಎಂದು ಉತ್ತರ ಹೇಳುವನು. ಗುಣಗ್ರಾಹಿಯಾದ ಮಹಾರಾಣಿಯು ''ಈ ಶ್ರೇಷ್ಠಗುಣಗಳೆಲ್ಲ ಇಚ್ಛಿಸ ತಕ್ಕವೇ ಆಗಿವೆ. ಈ ವಿಪರೀತ ಬುದ್ಧಿಗೇನು ಕಾರಣ?'' ಎಂದು ಪ್ರಶ್ನಿ ಸುವಳು. ಉದಯನನನ್ನು ತಾನು ಜಯಿಸುವುದು ಸಾಧ್ಯವಿಲ್ಲದೆ ಹೋಗಿರುವ ಮನೋವೇದನೆಯನ್ನು ಮಹಾಸೇನನು ಆಕೆಯೊಡನೆ ಹೇಳಿಕೊಳ್ಳುತ್ತಿರು ವಲ್ಲಿ, ಉದಯನನು ಸೆರೆಸಿಕ್ಕಿದಾಗ ಮಹಾಸೇನನ ಕಡೆಯವರು ಸ್ವಾಧೀನ ಪಡಿಸಿಕೊಂಡ ಘೋಷವತಿಯೆಂಬ ವೀಣಾರತ್ನವನ್ನು ಶಾಲಂಕಾಯನನು ಕಳುಹಿಸಿಸುವನು. ಮಹಾಸೇನನು ಅದನ್ನು ಕೊಂಡಾಡಿ, ಅರ್ಥಶಾಸ್ತ್ರ ಗುಣ ಗ್ರಾಹಿಯಾಗಿರುವ ತನ್ನ ಹಿರಿಯಮಗನಾದ ಗೋಪಾಲಕನಿಗಾಗಲಿ ಅಥವಾ ವ್ಯಾಯಾಮ ಪ್ರೇಮಿಯಾಗಿ ಸಂಗೀತ ದ್ವೇಷಿಯಾಗಿರುವ ಕಿರಿಯ ಮಗನಾದ ಪಾಲಕನಿಗಾಗಲಿ ಅದರಿಂದ ಪ್ರಯೋಜನವಿಲ್ಲವೆಂದು ಬಗೆದು ಅದನ್ನು ವಾಸವದತ್ತೆಗೆ ಕಳುಹಿಸುವನು. ಆ ಬಳಿಕ ಉದಯನನಿಗೆ ಬಹಳವಾಗಿ ಪ್ರಹಾರಗಳು ಬಿದ್ದಿರುವುದಕ್ಕಾಗಿ ಅನುಕಂಪಪಟ್ಟು ಅವನ ವ್ರಣಗಳಿಗೆ ತಕ್ಕ ಚಿಕಿತ್ಸೆಯು ನಡೆಯುವಂತೆ ಅಪ್ಪಣೆಮಾಡುವನು. ಅಲ್ಲದೆ ಅವನ ವಿಷಯದಲ್ಲಿ ಪರಿಜನರೆಲ್ಲರೂ ಅನುನಯದಿಂದ ವರ್ತಿಸಬೇಕೆಂದೂ ಆಜ್ಞಾಪಿಸುವನು. ಸೆರೆಸಿಕ್ಕುವವರೆಗೂ ಅವನಲ್ಲಿದ್ದ ದ್ವೇಷವನ್ನು ಪರಿತ್ಯಜಿಸಿ ಮಹಾಸೇನನು ಅವನಲ್ಲಿ ಕನಿಕರ ಪಡುವನು. ಅಲ್ಲಿಗೆ ಎರಡನೆಯ ಅಂಕವು ಪೂರೈಸುವುದು.

ಯೌಗಂಧರಾಯಣನು ಎಷ್ಟು ಜಾಗರೂಕತೆಯಿಂದ ಕೆಲಸಮಾಡು ತ್ತಿದ್ದನೆಂಬುದು ಮೂರನೆಯ ಅಂಕದಿಂದ ಗೋಚರವಾಗುವುದು. ಮೂರ ನೆಯ ಅಂಕದ ಕಥಾಭಾಗವು ಪ್ರಾರಂಭವಾಗುವ ವೇಳೆಗೆ ಯೌಗಂಧ ರಾಯಣನೂ, ರುಮಣ್ವಂತನೂ, ವಿದೂಷಕ ಮುಂತಾದವರೂ ಛದ್ಮವೇಷ ಧಾರಿಗಳಾಗಿ ಉಜ್ಜಯಿನಿಗೆ ಹೋಗಿರುವರು. ಅವರ ಪ್ರಯತ್ನಗಳು ಸಫಲವಾಗಿ, ಭಿಕ್ಷುಕನಾದ ಹಾಸ್ಯಗಾರನ ವೇಷವನ್ನು ಧರಿಸಿರುವ ವಿದೂ ಷಕನಿಗೆ ಬಂಧನಗೃಹದಲ್ಲಿರುವ ಉದಯನನ ದರ್ಶನವಾಗುವುದು. ಉದಯ ನನು ಅವನ ಮುಖಾಂತರವಾಗಿ ಉನ್ಮತ್ತವೇಷಧಾರಿ ಯೌಗಂಧರಾಯಣ ನೊಡನೆ ತನ್ನ ಬಂಧನವಿಮೋಚನೆಯ ಮಂತ್ರಾಲೋಚನೆಮಾಡುತ್ತಿರು

ವನು. ಈ ಮಧ್ಯದಲ್ಲಿ ಬಂಧನಗೃಹದಲ್ಲಿರುವ ಉದಯನನು ಯಕ್ಷಿಣೀ ದೇವಾಲಯಕ್ಕೆ ದೇವಕಾರ್ಯಕ್ಕಾಗಿ ಪಲ್ಲಕ್ಕಿಯಲ್ಲಿ ಹೋಗುತ್ತಿರುವ ವಾಸವ ದತ್ತೆಯನ್ನು ಕಂಡು ಮೋಹಿಸುವನು. ಪಲ್ಲಕ್ಕಿಯನ್ನು ಹೊತ್ತು ಕೊಂಚ ಸೋತಿರುವ ಆಳುಗಳಿಗೆ ಬದಲಾಗಿ ಬೇರೆ ಆಳುಗಳು ಹೆಗಲನ್ನು ಕೊಡಲು ಪಲ್ಲಕ್ಕಿಯು ನಿಲ್ಲಬೇಕಾಗುವುದು. ಬಂಧನಗೃಹಕ್ಕೆದುರಾಗಿ ರಾಜಮಾರ್ಗ ದಲ್ಲಿ ಪಲ್ಲಕ್ಕಿಯು ನಿಂತಿರುವ ಆ ಸಮಯದಲ್ಲಿ ಉದಯನನು ವಾಸವದತ್ತೆ ಯನ್ನು ಮನವಾರೆ ನೋಡಲು ಅವಕಾಶ ದೊರೆಯುವುದು. ಉದಯನನೂ ವಾಸವದತ್ತೆಯೂ ಪರಸ್ಪರವಾಗಿ ಅನುರಕ್ತರಾಗುವರು.

ಉನ್ಮತ್ತವೇಷಧಾರಿ ಯೌಗಂಧರಾಯಣನೂ, ಭಿಕ್ಷುಕವೇಷಧಾರಿ ವಿದೂಷಕನೂ, ಶ್ರಮಣಕವೇಷಧಾರಿ ರುಮಣ್ವಂತನೂ ಅಗ್ನಿಗೃಹದಲ್ಲಿ ರಹಸ್ಯವಾಗಿ ಮಂತ್ರಾಲೋಚನೆಮಾಡಲು ಸೇರುವ ಸನ್ನಿವೇಶದಿಂದ ಮೂರ ನೆಯ ಅಂಕವು ಪ್ರಾರಂಭವಾಗುವುದು. ಆಗ ಮಟಮಟ ಮಧ್ಯಾಹ್ನ. ಛದ್ಮ ವೇಷಧಾರಿಗಳಾಗಿ ಬಂದಿರುವ ಆ ಮೂವರೂ ಅಗ್ನಿಗೃಹದಲ್ಲಾಗಲಿ, ಅದರ ನೆರೆಹೊರೆಯಲ್ಲಾಗಲಿ ಇತರರಾರೂ ಇಲ್ಲವೆಂದು ಮನಸ್ಸಿಗೆ ಖಂಡಿತ ಮಾಡಿಕೊಳ್ಳುವ ಬಗೆಯು ಮನೋಹರವಾಗಿದೆ. ಮೊದಲು ವಿದೂಷಕನು ಪ್ರವೇಶಿಸುವನು. ಅವನ ಹೆಸರು ವಸಂತಕ. ದೇವಾಲಯದಲ್ಲಿ ಮೆಟ್ಟಿಲಿನ ಮೇಲೆ ತಾನು ಮೋದಕಗಳ ಪಾತ್ರೆಯನ್ನು ಬಿಟ್ಟು ದಕ್ಷಿಣೆಯ ನಾಣ್ಯಗಳನ್ನು ಎಣಿಸಿ ಬಟ್ಟೆಯ ಸೆರಗಿನಲ್ಲಿ ಕಟ್ಟಿ ಗಂಟುಹಾಕಿ ಮತ್ತೆ ನೋಡುವಲ್ಲಿ ಆ ಮೋದಕ ಪಾತ್ರೆಯು ಮಾಯವಾಗಿದೆಯೆಂದು ಗಟ್ಟಿಯಾಗಿ ಅವನು ಕೂಗಿ ಕೊಳ್ಳುವನು. ಅದು ಎಲ್ಲಿಹೋಯಿತೆಂಬುದು ಅವನ ತರ್ಕ. ದಾರಿಯಲ್ಲಿ ತನ್ನಿಂದ ಒಂದು ಮೋದಕವನ್ನು ಪಡೆದವನೂ ಹಿಂದೆ ಬಂದಿಲ್ಲ. ಪ್ರಾಕಾರದ ಗೋಡೆಗಳು ಬಹಳ ಎತ್ತರವಾಗಿರುವುದರಿಂದ ನಾಯಿಗಳು ಬರುವುದಕ್ಕೂ ಅವಕಾಶವಿಲ್ಲ. ಕಡುಬುಗಳ ಸ್ಥಿತಿಯನ್ನು ನೋಡಿದರೆ ಪಥಿಕರು ಆಶೆ ಪಡುವಂತೆಯೂ ಇರಲಿಲ್ಲ. ಹೀಗಿದ್ದೂ ಮೋದಕಗಳ ಗತಿಯೇನಾಗಿರಬೇಕು? "ಅಥವಾ ನಾನೇ ಅವುಗಳನ್ನು ತಿಂದುಬಿಟ್ಟೆನೆ?" ಎಂದು ವಸಂತಕನು ತನ್ನನ್ನು ತಾನೆ ಪ್ರಶ್ನೆಮಾಡಿಕೊಳ್ಳುವುದನ್ನು ಕಂಡು ನಗದಿರುವವರೇ ವಿರಳ.

ಕಾತ್ಯಾಯನಿಯ ಕಡೆಯವನು ತನ್ನವನೆಂಬ ಭಾವನೆಯಿಂದ ಮೋದಕ ಮಲ್ಲಕವನ್ನು ಮಹಾದೇವನು ಅಪಹರಿಸಿರಬಹುದೆ—ಎಂದು ವಿದೂಷಕನು ಗಟ್ಟಿಯಾಗಿ ಮಾತನಾಡಿಕೊಳ್ಳುತ್ತಿರುವಲ್ಲಿ ಉನ್ಮತ್ತ ವೇಷಧಾರಿಯಾದ ಯೌಗಂಧರಾಯಣನು "ಮೋದಕಗಳು, ಮೋದಕಗಳು, ಹ್ಹ ಹ್ಹ ಹ್ಹ!" ಎಂದುಕೊಂಡು ಪ್ರವೇಶಿಸುವನು. ವಸಂತಕನು ಅವನ ಮೇಲೆ ಸಂಶಯ ಪಟ್ಟಂತೆ ನಟಿಸುತ್ತ "ಎಲೈ ಉನ್ಮತ್ತಕ, ನನ್ನ ಮೋದಕ ಮಲ್ಲಕವನ್ನಿಲ್ಲಿ ತಾ" ಎನ್ನುವನು. ಉನ್ಮತ್ತ ವೇಷಧಾರಿಯೂ ತನ್ನ ವೇಷಕ್ಕೆ ತಕ್ಕಂತೆ "ಓಹೊ ಮೋದಕಗಳೆ! ಎಲ್ಲಿವೆ ಮೋದಕಗಳು? ಯಾರ ಮೋದಕಗಳು?" ಎಂದು ಮುಂತಾಗಿ ಅರ್ಭಟಿಸುವನು. ಮೋದಕಗಳೆಂದರೆ ಕೌಶಾಂಬಿಯಿಂದ ವೇಷಧಾರಿಗಳಾಗಿ ಬಂದು ಉಜ್ಜಯನಿಯಲ್ಲಿ ನೆಲಸಿರುವ ಯೋಧರೆಂದೂ, ಅವರ ಸಹಾಯದಿಂದ ತಮ್ಮ ಕಾರ್ಯಸಿದ್ಧಿಯಾಗುವುದೆಂದೂ ತೋರಿಬರುವಂತೆ ಅವರೀರ್ವರೂ ಮಾತನಾಡಿಕೊಳ್ಳುವರು. ಕೊನೆಗೆ ವಸಂತಕನು "ನನ್ನ ಮೋದಕಗಳನ್ನು ಕೊಡುವೆಯೊ, ನಾನು ಕೂಗಿಕೊಳ್ಳಲೊ?" ಎಂದು ಕೇಳಲು ಯೌಗಂಧರಾಯಣನು "ಕೂಗಿಕೊ, ಕೂಗಿಕೊ, ಅರಚು' ಬೇಕಾದಷ್ಟು ಕೂಗು" ಎನ್ನುವನು. ವಸಂತಕನು "ಅನಾಹುತ, ಅನಾಹುತ. ಬನ್ನಿ, ಬನ್ನಿ," ಎಂದು * ಚೀರಿಡುವನು. ಸುತ್ತಮುತ್ತಲೂ ಯಾರಾದರೂ ಇರಬಹುದೋ ಹೇಗೋ ಎಂಬುದನ್ನು ನಿರ್ಧರಿಸಿಕೊಳ್ಳುವುದಕ್ಕಾಗಿ ಅವನು ಹೀಗೆ ಕೂಗಾಡುವನು. ನೆರೆಹೊರೆಯಲ್ಲಿ ಯಾರಿದ್ದರೂ ಸಹಾಯಕ್ಕೆ ಬಂದೇ ಬರಬೇಕೆಂಬ ಅಂಶವು ಅದಕ್ಕೆ ಕಾರಣ. ಯೌಗಂಧರಾಯಣನು 'ನಾನೂ ಕೂಗುವೆನು. ಇಂದ್ರನು ಬಂಧನಕ್ಕೊಳಗಾಗಿದ್ದಾನೆ.' ಎನ್ನುವನು. ಅವನೂ ಗಟ್ಟಿಯಾಗಿ ಕೂಗಿಕೊಂಡಿರಬೇಕು.

ಮೇಲೆ ನೋಡಲು ಅಸಂಬದ್ಧ ಪ್ರಲಾಪದಂತೆ ತೋರುವ ಹುಚ್ಚನ ಮಾತುಗಳಿವು. ಆದರೆ ವಾಸ್ತವಿಕವಾಗಿ ಪರಿಶೀಲಿಸಿ ನೋಡಿದರೆ ರುಮಣ್ವಂತನು ಅಲ್ಲಿಗೆ ಬಂದಲ್ಲಿ ಪ್ರಾಕಾರದ ಹೊರಗಿರುವಾಗಲೇ ಯೌಗಂಧ

---

* ಮೂಲದಲ್ಲಿ "ಅಬ್ರಹ್ಮಣ್ಯಂ ಭೋ! ಅಬ್ರಹ್ಮಣ್ಯಂ!" ಎಂದಿದೆ. ಅದನ್ನು ಸರಿಯಾಗಿ ಭಾಷಾಂತರಮಾಡಿ ಭಾವವನ್ನೆಲ್ಲ ತರುವುದು ಸಾಧ್ಯವಿಲ್ಲ. ನಡೆಯಬಾರದ ಘೋರಕೃತ್ಯವು ನಡೆಯುತ್ತಿರುವಾಗ ಇತರರನ್ನು ಕೂಗುವಲ್ಲಿ ಈ ಪದಗಳು ಪ್ರಯೋಗವಾಗುವುವು.

ರಾಯಣನು ಒಳಗಿರುವುದನ್ನು ಅವನು ಗ್ರಹಿಸಲು ಅವುಗಳಿಂದ ಸೂಚನೆ. ಇಂದ್ರನ ಬಂಧನವೆಂದು ಹೇಳಿ ಉದಯನನ ಬಂಧನವನ್ನು ಸೂಚಿಸುವ ಸಾಂಕೇತಿಕ ವಚನ. ವಸಂತಕನು ಮತ್ತೆ ಮೊದಲಿನಂತೆಯೇ ಕೂಗಿಕೊಳ್ಳುವನು. "ಹೆದರದಿರು ಹೆದರದಿರು ಬ್ರಾಹ್ಮಣ, ಹೆದರದಿರು" ಎಂದು ಹೇಳುತ್ತ ಶ್ರಮಣಕ ವೇಷಧಾರಿಯಾದ ರುಮಣ್ವಂತನು ಪ್ರವೇಶಿಸಿ ನಡೆದ ಸಂಗತಿಯೇನೆಂದು ವಿಚಾರಿಸುವನು. ಆ ಬಳಿಕ ಆಗಿನ ಸನ್ನಿವೇಶಕ್ಕೆ ತಕ್ಕಂತೆ ಅವರು ಮೂವರೂ ಸಂಭಾಷಣೆಮಾಡುವರು. ವಸಂತಕನು ಪೂರ್ವಾಹ್ನದಲ್ಲಿಯೇ ಅಗ್ನಿಗೃಹವು ನಿರ್ಜನವಾಗಿರುವುದೆಂದು ಹೇಳಿದ ಬಳಿಕ ಯೌಗಂಧರಾಯಣನು ಆಗ ಅಲ್ಲಿ ಹೊರಗಿನವರು ಮತ್ತಾರೂ ಇಲ್ಲವೆಂಬುದನ್ನು ಮನಸ್ಸಿಗೆ ಖಂಡಿತಮಾಡಿಕೊಂಡು ಅವರೀರ್ವರೂ ತನ್ನನ್ನು ಆಲಂಗಿಸಬೇಕೆಂದು ಕೋರುವನು. ಯೌಗಂಧರಾಯಣನ ಸ್ನೇಹಸರಣಿಯು ಅಮೋಘವಾದುದೆಂಬ ಅಂಶವು ಅದರಿಂದ ವ್ಯಕ್ತವಾಗುವುದು. ಅವರು ಆತನನ್ನು ಆಲಂಗಿಸಿದ ಬಳಿಕ ಆತನು ವಿದೂಷಕನನ್ನು ಕುರಿತು, "ಪ್ರಭುವಿನೊಡನೆ ಮಾತನಾಡಿದೆಯಾ?" ಎಂದು ಕೇಳುವನು. ವಿದೂಷಕನು ಅಂದು ಚತುರ್ದಶಿಯಾದಕಾರಣ ದೇವಕಾರ್ಯಕ್ಕಾಗಿ ವತ್ಸರಾಜನು ಸ್ನಾನಮಾಡಿದುದಾಗಿಯೂ, ಆಗ ತಾನು ಅವನೊಡನೆ ಮಾತನಾಡಿದುದಾಗಿಯೂ ಹೇಳುವನು. ಯೌಗಂಧರಾಯಣನು, "ಸ್ವಾಮಿಯು ದೇವಕಾರ್ಯವನ್ನಾಚರಿಸಿದನೆ?" ಎಂದು ಕೇಳುವನು. ವಿದೂಷಕನು ಅದಕ್ಕೆ, "ಪ್ರಣಾಮಮಾತ್ರದಿಂದ ದೇವತಾರ್ಚನೆಯು ನಡೆಯಿತು" ಎಂದು ಉತ್ತರ ಹೇಳಿದುದನ್ನು ಕೇಳಿ, "ಹೀಗೆ ಮಾಡುವಷ್ಟಿಗಾದರೂ ಪ್ರಭುವಿನ ದೇಹಸ್ಥಿತಿಯು ಅನುಕೂಲವಾಗಿ ಪರಿಣಮಿಸಿತಲ್ಲಾ! ಅಯ್ಯೋ, ಯಾವನು ಸ್ನಾನಮಾಡಿ ದೇವತಾರ್ಚನೆಗೆ ಹೋದೊಡನೆಯೇ ಪುಣ್ಯಾಹಘೋಷವು ವಿರಮಿಸುತ್ತಿರುವಲ್ಲಿ ಪಟಹಗಳ ಧ್ವನಿಯಾಗುತ್ತಿದ್ದಿತೋ ಆತನೇ ಬೇಡಿಗಳ ಸರಪಣಿಯು ಅಲುಗಿದ ಸದ್ದಿನಿಂದ ದೇವರಿಗೆ ನಮಸ್ಕಾರಮಾಡಬೇಕಾಗಿದೆ" * ಎಂದು

---

* "ಏತಾಮಪಿ ಬಹುಮತಾಮವಸ್ಥಾಂ ಪ್ರಾಪ್ತಃ ಸ್ವಾಮೀ। ಕುತಃ—
ಸ್ನಾತಸ್ಯ ಯಸ್ಯ ಸಮುಪಸ್ಥಿತ ದೈವತಸ್ಯ
ಪುಣ್ಯಾಹ ಘೋಷವಿರಮೇ ಪಟಹಾ ನದನ್ತಿ।
ತಸ್ಯೈವ ಕಾಲವಿಭವಾತ್ ತಿಥಿಪೂಜನೇಷು
ದೈವ ಪ್ರಣಾಮ ಚಲಿತಾ ನಿಗಲಾಃ ಸ್ವನನ್ತಿ॥"

ವಿಷಾದ ಪಡುವನು. ಯೌಗಂಧರಾಯಣನ ಪ್ರಯತ್ನದಿಂದ ಸ್ವಾಮಿಗೆ ಶೀಘ್ರದಲ್ಲಿಯೇ ಬಿಡುಗಡೆಯಾಗುವುದಾಗಿ ರುಮಣ್ವಂತನು ಸೂಚಿಸಿ ಅವನನ್ನು ಸಂತೈಸುವನು.

ಯೌಗಂಧರಾಯಣನು ವಸಂತಕನನ್ನು ಕುರಿತು, "ವಸಂತಕ! ಹೋಗು. ಸ್ವಾಮಿಯನ್ನು ಮತ್ತೆ ಕಂಡು ಈರೀತಿ ವಿಜ್ಞಾಪಿಸು: ನಾವು ಆಲೋಚಿಸಿರುವ ಉಪಾಯಕ್ಕೆ ನಾಳೆಯೇ ಪ್ರಯೋಗಕಾಲ. (ಮಹಾಸೇನನಿಗೆ ಪ್ರಿಯವಾದ) ನಲಾಗಿರಿಯೆಂಬ ಹೆಸರಿನ ಆನೆಯನ್ನು ರೇಗಿಸಲು ಮಂತ್ರೌಷಧಿ ಪ್ರಯೋಗಗಳಿಗೆ (ಅದು ಮಿಂದು ಮೇವು ತಿನ್ನುವೆಡೆಯಲ್ಲಿ) ಅವಕಾಶವನ್ನು ಕಲ್ಪಿಸಲಾಗಿದೆ. ರೇಗಿದ ಆನೆಗೆ ಭಯಭ್ರಾಂತಿಗಳುಂಟಾಗುವಂತೆ ಹೊಗೆಹಾಕಲು ಧೂಪವು ಸಿದ್ಧವಾಗಿದೆ. ಅದರ ರೋಷವನ್ನು ಮತ್ತಷ್ಟು ಉದ್ರೇಕಿಸಲನುಕೂಲಿಸುವಂತೆ ಲಾಯದೆದುರಿಗೆ ಮದಗಜವೂ ಇದೆ. ಆನೆಗಳಿಗೆ ಬೆಂಕಿಯನ್ನು ಕಂಡರೆ ಭಯವಷ್ಟೆ. ಸಮೀಪದಲ್ಲಿರುವ-ಅಲ್ಪಸ್ವಲ್ಪ ಸಾಮಾನುಗಳಿರುವ ಬರಿಯಮನೆಗೆ ಆ ಕಾಲಕ್ಕೆ ಸರಿಯಾಗಿ ಬೆಂಕಿಹಚ್ಚುವ ಏರ್ಪಾಡೂ ನಡೆದಿದೆ. ನಲಾಗಿರಿಗೆ ಉದ್ವೃತ್ತಿಯುಂಟಾಗಲನುಕೂಲಿಸುವಂತೆ ದೇವಾಲಯಗಳಲ್ಲಿ ಶಂಖದುಂದುಭಿಗಳು ಮೊಳಗುವಂತೆ ಮಾಡಿದ್ದೇವೆ. ಈ ಸನ್ನಿವೇಶದಲ್ಲಿ ಆನೆಯನ್ನು ವಶಪಡಿಸಿಕೊಳ್ಳಲು ಪ್ರದ್ಯೋತನ ಕಡೆಯವರ ಸರ್ವಪ್ರಯತ್ನಗಳೂ ವಿಫಲವಾಗುವ ಕಾರಣ ಘೋಷವತಿಯನ್ನು ನುಡಿಸಿ ಆನೆಯನ್ನು ಸ್ವಾಧೀನಪಡಿಸಿಕೊಳ್ಳಲು ಆತನು ಸ್ವಾಮಿಯ ಸಹಾಯವನ್ನು ಖಂಡಿತವಾಗಿ ಅಪೇಕ್ಷಿಸುತ್ತಾನೆ. ಆಗ್ಗೆ ಶತ್ರುವಿನ ಅನುಮತಿಯಿಂದಲೇ ಸ್ವಾಮಿಗೆ ಬಿಡುಗಡೆಯಾಗುತ್ತದೆ. ಸಹದುಃಖಿನಿಯಾದ ಘೋಷವತಿಯೊಡನೆ ಸ್ವಾಮಿಯು ಬಂಧನಗೃಹದಿಂದ ಬಂದು, ನಲಾಗಿರಿಯನ್ನು ವೀಣಾವಾದನದ ಮೂಲಕ ಸ್ವಾಧೀನಪಡಿಸಿಕೊಂಡು ಅದೇ ಆನೆಯನ್ನೇರಿ ಒಂದೇದಿನ ಬಂಧನಗೃಹವನ್ನೂ ವನವನ್ನೂ ಬಿಟ್ಟು ಸ್ವನಗರಿಗೆ ಹೋಗಿ ಸೇರಿ ಆನೆಯ ಸಂಬಂಧವಾದ ಮೋಸದ ದೆಸೆಯಿಂದ ಸೆರೆಸಿಕ್ಕಿದಂತೆ ಆನೆಯ ವ್ಯಾಜದಿಂದಲೇ ಬಿಡುಗಡೆ ಹೊಂದಬೇಕು—ಹೀಗೆಂದು ವಿಜ್ಞಾಪಿಸು ಎಂದು ತಿಳಿಸುವನು.

ವಸಂತಕನು ಆಲೋಚನಾಮಗ್ನನಾಗಿರುವನು. ರುಮಣ್ವಂತನು ಅದಕ್ಕೆ ಕಾರಣವೇನೆಂದು ಕೇಳಿದಮೇಲೆ, ಆ ಪ್ರಯತ್ನವು ವಿಫಲವಾಗುವು

ದೆಂದು ತಿಳಿಸಿ, ಉದಯನನ ಪ್ರಣಯವಾರ್ತೆಯನ್ನರುಹುವನು. ತುಲ್ಯಾನು ರಾಗಿಗಳಾದ ಉದಯನವಾಸವದತ್ತೆಯರ ರಾಗಲೀಲೆಗಳಿಂದ ಕಾರಾ ಗೃಹವೇ ಪ್ರಮದವನವಾಗಿ ಪರಿಣಮಿಸಿರುವುದೆಂದು ಹೇಳುವನು. ಧೀರನಾದ ಯೌಗಂಧರಾಯಣನು ಕೊನೆಗೆ ತಾನು ಅವರೀರ್ವರನ್ನೂ ಕೌಶಾಂಬಿಗೆ ಪ್ರಯಾಣಮಾಡಿಸಿಯೇ ತೀರುವುದಾಗಿ ವೀರಪ್ರತಿಜ್ಞೆಮಾಡಿ ಅದಕ್ಕೆ ತಕ್ಕ ಉಪಾಯವನ್ನು ಯೋಚಿಸುವನು. ಆ ವೇಳೆಗೆ ಜನಗಳು ಬರುವ ಸೂಚನೆಯು ತಲೆದೋರಲು, ಅವನು ಮತ್ತೆ ಉನ್ಮತ್ತನಂತೆ ನಟಿಸುತ್ತ ಹೊರಡುವನು.

ನಾಲ್ಕನೆಯ ಅಂಕದಲ್ಲಿ ಯೌಗಂಧರಾಯಣನು (ಮೂರನೆಯ ಅಂಕ ದಲ್ಲಿ ಸೂಚಿತವಾದಂತೆ) ನಲಾಗಿರಿಗೆ ರೋಷಭಯಗಳುಂಟಾಗುವಂತೆ ಮಾಡುವನು. ಅದನ್ನು ಸ್ವಾಧೀನಪಡಿಸಿಕೊಳ್ಳಲು "ಕುಂಜರ ಜ್ಞಾನದೃಪ್ತ" ನಾದ ಉದಯನನಿಗೆ ಕಾರಾಗೃಹದಿಂದ ಬಿಡುಗಡೆಯಾಗುವುದು. ಘೋಷ ವತಿಯನ್ನು ನುಡಿಸಿ ಆನೆಯ ರೋಷಭೀತಿಗಳನ್ನಿಳಿಸಿದ ಉದಯನನಲ್ಲಿ ಕೃತಜ್ಞತೆಯುಳ್ಳವನಾಗಿ ಮಹಾಸೇನನು ಅವನನ್ನು ಮತ್ತೆ ಕಾರಾಗೃಹ ದಲ್ಲಿಡಿಸದೆ ಸುಮ್ಮನಿರುವನು. ಅಲ್ಲದೆ ವಾಸವದತ್ತೆಗೆ ವೀಣಾವಾದನವನ್ನು ಬೋಧಿಸುವ ಹಿತಕರವಾದ ಕರ್ತವ್ಯವೂ ಉದಯನನಿಗೊದಗಿ ಅವರೀರ್ವ ರಿಗೂ ಪರಸ್ಪರವಾಗಿ ಅನುರಾಗವು ವೃದ್ಧಿಯಾಗುತ್ತಿರುವುದು. ವಾಸವ ದತ್ತೆಯು ತನ್ನ ಪ್ರಿಯನೊಡನೆ ಕೌಶಾಂಬಿಗೆ ಹೋಗುವುದಕ್ಕೂ ಸಮ್ಮತಿ ಸುವಳು. ಹೀಗಿರುವಲ್ಲಿ ಯೌಗಂಧರಾಯಣನು ಸಮಯ ನಿರೀಕ್ಷೆಯಿಂದಿದ್ದು ಮಹಾಸೇನನ ಭಟರು ಎಚ್ಚರತಪ್ಪಿರುವ ಕಾಲದಲ್ಲಿ ಉದಯನನು ತನ್ನ ಪ್ರಿಯೆಯೊಡನೆ ಆಕೆಯ ಭದ್ರವತಿಯೆಂಬ ಆನೆಯನ್ನೇರಿ ಕೌಶಾಂಬಿಗೆ ಹೊರಟುಹೋಗುವಂತೆ ಮಾಡುವನು. ಅವರಿಬ್ಬರೂ ಆನೆಯನ್ನೇರಿ ಹೊರಟುಹೋದ ವಾರ್ತೆಯು ನಗರದಲ್ಲೆಲ್ಲ ಹಬ್ಬಿ, ಯೌಗಂಧರಾಯಣನೂ ಅವನ ಕಡೆಯವರೂ ಮಹಾಸೇನನ ಸೈನಿಕರೊಡನೆ ಯುದ್ಧಮಾಡ ಬೇಕಾಗುವುದು.

ಈ ಯುದ್ಧದ ಸನ್ನಿವೇಶವನ್ನು ಪ್ರತ್ಯಕ್ಷವಾಗಿ ರಂಗಸ್ಥಳಕ್ಕೆ ತರದೆ ಪರೋಕ್ಷವಾದ ಅದರ ವರ್ಣನೆಯಿಂದಲೇ ಅದನ್ನು ತಿಳಿಸುವುದಕ್ಕಾಗಿ

ಕುಶಲಿಯಾದ ಕವಿಯು ತಕ್ಕ ಘಟನೆಯನ್ನು ತಂದು ಒಂದು ಪ್ರವೇಶಕ ವನ್ನು ಕಲ್ಪಿಸಿರುವನು. ನಾಲ್ಕನೆಯ ಅಂಕದ ಪ್ರಾರಂಭದ ಈ ಪ್ರವೇಶಕದಲ್ಲಿ ಭಟನೊಬ್ಬನು ಪ್ರವೇಶಿಸಿ ವಾಸವದತ್ತೆಯು ಭದ್ರವತಿಯೆಂಬ ತನ್ನ ಆನೆಯ ನ್ನೇರಿ ಜಲಕ್ರೀಡೆಗೆ ಹೋಗಲು ಬಯಸಿದಳೆಂದೂ, ಭದ್ರವತಿಯ ಪರಿಚಾರಕ ನಾದ ಗಾತ್ರಸೇವಕನು ತಲೆತಪ್ಪಿಸಿಕೊಂಡು ಹೋಗಿರುವನೆಂದೂ ಸೂಚಿಸಿ ಆಕಾಶ ಭಾಷಣಮಾಡಿ "ಪುಷ್ಪದಂತಕ! ಏನೆಂದೆ? ಗಾತ್ರಸೇವಕನು ಮದ್ಯವನ್ನು ಮಾರುವವಳ ಮನೆಗೆ ಹೋಗಿದ್ದಾನೆ. ಅವನು ಅಲ್ಲಿಗೆ ಹೋಗಿ ಹೆಂಡವನ್ನು ಕುಡಿಯುತ್ತಾನೆ—ಎಂದೆಯಾ?" ಎಂದು ಹೇಳಿ, "ಗಾತ್ರ ಸೇವಕ! ಗಾತ್ರ ಸೇವಕ!" ಎಂದು ಕೂಗುವನು. ಗಾತ್ರಸೇವಕನು ತನ್ನನ್ನು ಕೂಗಿದವರಾರೆಂದು ಹೇಳಿಕೊಳ್ಳುತ್ತ ಮದ್ಯಪಾನಮಾಡಿದವನಿಗೆ ತಕ್ಕ ಮಾತುಗಳನ್ನಾಡುತ್ತ ಪ್ರವೇಶಿಸುವನು. ಅವನು "ಸುರೆಯಿಂದ ಮತ್ತರಾದವರು ಧನ್ಯರು. ಸುರೆಯಿಂದ ಲಿಪ್ತರಾದವರು ಧನ್ಯರು. ಸುರೆಯಲ್ಲಿ ಸ್ನಾನಮಾಡಿದವರು ಧನ್ಯರು. ಸುರೆಯಿಂದ ಮರಣಹೊಂದಿದವರು ಧನ್ಯರು"* ಎಂದು ಹೇಳುವುದನ್ನೂ ಅವನು ಆಡುವ ಇತರ ಮಾತು ಗಳನ್ನೂ ಅವನಿಗೂ ಭಟನಿಗೂ ನಡೆಯುವ ಸಂಭಾಷಣೆಯನ್ನೂ ನೋಡಿ ದರೆ, ಮದ್ಯಪಾಯಿಗಳ ಮನೋಧರ್ಮವನ್ನು ಕವಿಯು ಎಷ್ಟುಮಟ್ಟಿಗೆ ಅರಿ ತಿರುವನೆಂಬ ಅಂಶವು ವ್ಯಕ್ತವಾಗುತ್ತದೆ. ಗಾತ್ರಸೇವಕನೂ ಯೌಗಂಧ ರಾಯಣನ ಅಪ್ಪಣೆಯಂತೆ ಕೌಶಾಂಬಿಯಿಂದ ಬಂದು ಊಳಿಗಕ್ಕೆ ಸೇರಿರ ತಕ್ಕವನೇ. ಭಟನು ದರ್ಪದಿಂದ "ಎಲೋ ಗಾತ್ರಸೇವಕ! ಎಷ್ಟು ಹೊತ್ತಿ ನಿಂದ ನಿನ್ನ ಹುಡುಕಿದುದಾಯಿತು! ರಾಜಕುಮಾರಿ ವಾಸವದತ್ತೆಯು ಜಲಕ್ರೀಡೆಗೆ ಹೋಗಲಿಚ್ಛಿಸುವಳು ಅಲ್ಲ ನೋಡಿದರೆ ಭದ್ರವತಿಯೇ ಇಲ್ಲ. ನೀನು ಮತ್ತನಾಗಿ ಇಲ್ಲಿ ಅಲೆದಾಡುತ್ತಿದ್ದೀಯೆ" ಎಂದು ತರ್ಜನೆ ಮಾಡು ವನು. ಆ ಬಳಿಕ ನಡೆಯುವ ಸಂಭಾಷಣೆಯನ್ನು ನೋಡಿ:—

---

* "ಧಣ್ಣಾ ಸುರಾಹಿ ಮತ್ತಾ ಧಣ್ಣಾ ಸುರಾಹಿ ಅಣುಳಿತ್ತಾ ।
ಧಣ್ಣಾ ಸುರಾಹಿ ಣ್ಹಾದಾ ಧಣ್ಣಾ ಸುರಾಹಿ ಸಂಜ್ಞಾವಿದಾ ॥"
(ಧನ್ಯಾಃ ಸುರಾಭಿರ್ಮತ್ತಾ ಧನ್ಯಾಃ ಸುರಾಭಿರನುಲಿಪ್ತಾಃ ।
ಧನ್ಯಾಃ ಸುರಾಭಿಃ ಸ್ನಾತಾ ಧನ್ಯಾಃ ಸುರಾಭಿಃ ಸಂಜ್ಞಾಪಿತಾಃ ॥)

"ಹೌದು. ಅವಳೂ ಮತ್ತಳು. ಆ ಪುರುಷನೂ ಮತ್ತನೇ. ನಾನೂ ಮತ್ತ. ನೀನೂ ಮತ್ತನೇ. ಎಲ್ಲವೂ ಮತ್ತವೇ."

"ಅದೆಲ್ಲ ಹಾಗಿರಲಿ. ನೀನು ಭದ್ರವತಿಯನ್ನು ಅರಮನೆಗೆ ತಾರದೆ ಹೀಗೇಕೆ ಅಲೆದಾಡುತ್ತಿದ್ದೀಯೆ?"

"ಇಲ್ಲಿ ಅಲೆದಾಡುತ್ತೇನೆ. ಅಲ್ಲಿ ಕುಡಿಯುತ್ತೇನೆ. ಇದರಿಂದ ಕುಡಿಯುತ್ತೇನೆ. ಆಕ್ಷೇಪಣೆಯೆಲ್ಲಾ ಹಾಗಿರಲಿ. ನನ್ನಿಂದ ಆಗಬೇಕಾದ ಕೆಲಸವೇನು?"

"ಈ ಅಸಂಬದ್ಧಪ್ರಲಾಪವು ಹಾಗಿರಲಿ. ಬೇಗ ಭದ್ರವತಿಯನ್ನು ಹೊಡೆದುಕೊಂಡು ಬಾ."

"ಭದ್ರವತಿಯು ಬರಬಹುದು; ಬರಬಹುದು. ಆದರೆ ಒಂದೇಕಷ್ಟ. ನಾನು ಅಂಕುಶವನ್ನು ಅಡವಿಟ್ಟಿದ್ದೇನೆ."

"ಸಾಧು ಸ್ವಭಾವವುಳ್ಳ ಭದ್ರವತಿಯನ್ನು ತರಲು ಅಂಕುಶವೇಕೆ? ಹೋಗು. ಬೇಗ ಭದ್ರವತಿಯನ್ನು ಹೊಡೆದುಕೊಂಡುಬಾ."

"ಭದ್ರವತಿಯು ಬರಬಹುದು; ಬರಬಹುದು. ಆದರೆ ಒಂದೇ ಕಷ್ಟ. ನಾನು ಅದರ ಕ್ಷುರಪ್ರಮಾಲಾ ಬಂಧನವನ್ನು ಅಡವಿಟ್ಟಿದ್ದೇನೆ."

"ಹೂಮಾಲೆಯಿಂದ ಕಟ್ಟಿದರೂ ಕಟ್ಟಿದೆಡೆಯಲ್ಲಿ ನಿಂತಿರುವ ಭದ್ರವತಿಯನ್ನು ತರಲು ಬಂಧನವೇಕೆ? ಬೇಗ ಭದ್ರವತಿಯನ್ನು ಹೊಡೆದುಕೊಂಡುಬಾ."

ಛದ್ಮವೇಷಧಾರಿ ಗಾತ್ರಸೇವಕನು ಹೀಗೆ ಮಾತುಗಳನ್ನು ಬಳೆಯಿಸುತ್ತ, ತಾನು ಭದ್ರವತಿಯ ಘಂಟೆಯನ್ನು ಅಡವಿಟ್ಟದ್ದುದಾಗಿಯೂ ತಿಳಿಸುವನು. ಅಷ್ಟರಲ್ಲಿ ಕೋಲಾಹಲ ಧ್ವನಿಯಾಗುವುದು. ಭಟನನ್ನು ಕುರಿತು ಯಾವನೋ ಒಬ್ಬನು "ವಾಸವದತ್ತೆಯನ್ನು ಕರೆದುಕೊಂಡು ವತ್ಸರಾಜನು ಹೊರಟುಹೋದನು" ಎಂದು ಕೂಗಿ ಹೇಳುವನು. ಗಾತ್ರಸೇವಕನು ಹರ್ಷದಿಂದ ಕೂಡಿ "ಸ್ವಾಮಿಕಾರ್ಯವು ನಿರ್ವಿಘ್ನವಾಗಿ ನೆರವೇರಲಿ" ಎನ್ನುವನು.

ಗಾತ್ರಸೇವಕನಿಗೆ ಮದ್ಯಪಾನದಿಂದ ಪ್ರಜ್ಞೆತಪ್ಪಿರುವುದೇ ಆ ಮಾತುಗಳಿಗೆ ಕಾರಣವೆಂದು ಬಗೆದು ಭಟನು "ಕುಡಿ. ಕುಡಿ. ಈಗಲೂ ಮತ್ತನಾಗಿದ್ದು ಅಲೆದಾಡುತ್ತಿರು" ಎಂದು ಮೂದಲಿಸುವನು. ಗಾತ್ರಸೇವಕನು

ನಡೆತುನಿಂತು "ಅಬ್ಬ, ಯಾರು ಮತ್ತರು? ಯಾವನಿಗೆ ಮದ? ನಾವೆಲ್ಲ ಆರ್ಯ ಯೌಗಂಧರಾಯಣನಿಂದ ನಮ್ಮ ನಮ್ಮ ಸ್ಥಾನಗಳಲ್ಲಿ ನೇಮಕವಾದ ಚಾರಪುರುಷರು. ಇನ್ನು ನಾನೂ ನನ್ನ ಮಿತ್ರರಿಗೆ ಸಂಜ್ಞೆಮಾಡುತ್ತೇನೆ. ಪರೆಯನ್ನು ಬಿಟ್ಟ ಕೃಷ್ಣಸರ್ಪಗಳಂತೆ ಮಿತ್ರರು ಅಲ್ಲಲ್ಲಿ ಕಾರ್ಯಪಟುಗಳಾಗಿ ಓಡಾಡುತ್ತಿದ್ದಾರೆ" ಎಂದು ಮುಂತಾಗಿ ಹೇಳಿ ನಿಜಸ್ಥಿತಿಯನ್ನು ತಿಳಿಸುವನು. ಆ ಬಳಿಕ ಯೌಗಂಧರಾಯಣ ಮುಂತಾದವರು ಯುದ್ಧಕೊಡುತ್ತಿರುವ ಪರಿಪಾಟಿಯನ್ನು ವರ್ಣಿಸುವನು. ದೊಡ್ಡದೊಂದು ಆನೆಯ (ಮುಸಲ ದಂತಿರುವ) ದಂತಹತಿಯಿಂದ ಯೌಗಂಧರಾಯಣನ ತೋಳು ಮುರಿದು ಕತ್ತಿಯು ಕೈಯಿಂದ ಬಿದ್ದುದಕ್ಕಾಗಿ ವ್ಯಥೆಪಡುತ್ತ ಅವನ ಬಳಿಗೆ ಓಡುವನು. ಮಹಾಸೇನನ ಕಡೆಯಭಟನು ಆಶ್ಚರ್ಯಪಡುತ್ತ "ಪ್ರಾಕಾರತೋರಣ ಗಳೆರಡರಹೊರತು ಒಟ್ಟು ಕೌಂಶಾಂಬಿಯೇ ಅಲ್ಲಿಗೆ ಬಂದಿದೆಯಲ್ಲಾ" ಎಂದುಕೊಂಡು ಅಮಾತ್ಯನಿಗೆ ವಿಷಯವನ್ನು ತಿಳಿಸಲು ಹೊರಟು ಹೋಗುವನು.

ಯುದ್ಧದಲ್ಲಿ ಗಾಯಹೊಂದಿ ತೋಳನ್ನು ಮುರಿದುಕೊಂಡು ಶತ್ರು ಯೋಧರಿಗೆ ಸೆರೆಸಿಕ್ಕಿರುವ ಯೌಗಂಧರಾಯಣನನ್ನು ನೋಡಲು ಜನರು ಮುತ್ತುವರು. ಭಟರು ಅವರನ್ನು ದೂರವಾಗಿ ಅಟ್ಟುತ್ತಿರುವರು. ತೋಳನ್ನು ಮುರಿದುಕೊಂಡಿರುವ ಯೌಗಂಧರಾಯಣನ ಕೈಗಳಿಗೆ ಬೇಡಿ ಗಳನ್ನು (ಶೃಂಖಲೆಗಳನ್ನು) ತೊಡಿಸಿ ಅವನನ್ನು ಹಲಗೆಯ ಮೇಲೆ ಮಲಗಿಸಿ ಆಳುಗಳು ಹೊತ್ತುತರುವರು. ಸ್ವಾಮಿಭಕ್ತನೂ, ಅದಕ್ಕಿಂತ ಹೆಚ್ಚಾಗಿ ದೇಶಭಕ್ತನೂ ಆದ ಯೌಗಂಧರಾಯಣನು ಹಲಗೆಯಿಂದಿಳಿದಾಗ ಆಡುವ ಮಾತುಗಳು ಅವನ ಹೃದಯವನ್ನೇ ನಮ್ಮೆದುರಿಗೆ ಹಿಡಿಯು ವಂತಿವೆ. ಅವನು ಸ್ವಾಮಿಕಾರ್ಯವನ್ನು ನೆರವೇರಿಸಿದ ಸಂತೋಷದಲ್ಲಿ ತನ್ನ ವಿಪತ್ತನ್ನೂ ಲಕ್ಷ್ಯಮಾಡದೆ "ವಿಧುರರಿಗೆ ವನಪ್ರವೇಶವು ಸುಖಕರ ವಲ್ಲವೆ? ಮನೋರಥ ಸಿದ್ಧಿಯನ್ನು ಪಡೆದವರಿಗೆ ಮರಣವು ರಮಣೀಯ ತರವಲ್ಲವೆ? ಧರ್ಮಾರ್ಜನೆ ಮಾಡಿರತಕ್ಕವರಿಗೆ ಮೃತ್ಯುವು ವ್ಯಸನಹೇತು ವೆನಿಸದಲ್ಲವೆ? ನಾನಾದರೋ ವೈರವನ್ನೂ ಭಯವನ್ನೂ ಪರಿಭವವನ್ನೂ ಸಮವೆಂದೆಣಿಸಿ ಪರಿತ್ಯಜಿಸಿ ನಯವಿನಯಗಳಿಂದಲೂ ಯುದ್ಧದಿಂದಲೂ

ಕಾರ್ಯಸಾಧನೆಮಾಡಿ ಶತ್ರುಗಳನ್ನು ಕಳಿಗುಂದಿಸಿ ಮಿತ್ರರು ತಲೆತಗ್ಗಿಸು ವಂತಿದ್ದುದನ್ನು ಹೋಗಲಾಡಿಸಿ ಜಯಲಾಭಹೊಂದಿ ರಾಜನನ್ನು ಪಡೆದು ಖ್ಯಾತಿಯನ್ನೂ ಗಳಿಸಿದ್ದೇನೆ" ಎನ್ನುವನು ಯೌಗಂಧರಾಯಣನು "ವಿಧು ರರಿಗೆ ವನಪ್ರವೇಶವು ಸುಖಕರವಲ್ಲವೆ?" ಎಂದು ಹೇಳಿರುವುದು ಲೋಕಾಭಿ ರಾಮವಾಗಿಯೋ ಅಥವಾ ಅವನೇ ವಿಧುರನೋ ಎಂಬುದು ತಿಳಿಯದು. ಅವನು ವಿಧುರನೂ ಆಗಿರುವ ಪಕ್ಷಕ್ಕೆ, ತನಗೆ ಪತ್ನಿಯಿಲ್ಲದಿದ್ದೂ ಅವನು ಕೌಂಶಾಂಬಿರಾಜ್ಯದ ಉದ್ಧಾರಕ್ಕಾಗಿ ಮಾತ್ರವೇ ಮಂತ್ರಿತ್ವವನ್ನು ವಹಿಸಿದ್ದ ವರ್ತನೆಯು ಮತ್ತೂ ಶ್ಲಾಘನೀಯವೆನಿಸುತ್ತದೆ. ಯೌಗಂಧರಾಯಣನ ಮಾತುಗಳು ಪೂರ್ತಿಸುವ ವೇಳೆಗೆ ರಾಜಸೇವಕನು ಜನರನ್ನು ಮತ್ತೊಮ್ಮೆ ಅಟ್ಟಿದುದನ್ನು ಕಂಡು ಯೌಗಂಧರಾಯಣನು ತನ್ನ ನೋವನ್ನೂ ಮರೆತು "ನನ್ನನ್ನು ನೋಡಲಿಚ್ಛಿಸುವವರನ್ನು ಯಾರೊಬ್ಬರನ್ನೂ ಹೊರಡಿಸುವ ಯತ್ನಮಾಡಕೂಡದು" ಎನ್ನುವನು. ಪ್ರಜಾಸಾಮಾನ್ಯರಲ್ಲಿ ಅವನಿಗೆಷ್ಟು ಪ್ರೀತಿಗೌರವಗಳೆಂಬುದು ಇದರಿಂದ ಸ್ವಲ್ಪಮಟ್ಟಿಗೆ ಸೂಚಿತವಾಗುವುದು. ಭಟನೊಬ್ಬನು ಪ್ರವೇಶಿಸಿ ಯೌಗಂಧರಾಯಣನನ್ನು ಅರಮನೆಯ ಆಯುಧಾಗಾರದಲ್ಲಿ ಸೆರೆಯಲ್ಲಿಡುವಂತೆ ಅಮಾತ್ಯನ ಆಜ್ಞೆಯಾಗಿರುವ ಸಂಗತಿಯನ್ನು ಸೂಚಿಸಿದಾಗ ಯೌಗಂಧರಾಯಣನು "ವತ್ಸರಾಜನೆಂಬ ಅಭಿಧಾನದ ಬೆಂಕಿಯನ್ನು ಬಂಧಿಸಿದ್ದಾಗ್ಗೆ ಕಾವಲಿರಬೇಕಾದ ಸಮಯದಲ್ಲಿ ನಿದ್ರೆಹೋಗಿ, ರತ್ನವು ಹೋದಮೇಲೆ ಅಮಾತ್ಯರು ಪೆಟ್ಟಿಗೆಗೆ ಬೀಗಹಾಕಿ ಫಲವೇನು?" ಎಂದು ಹೇಳುವ ಹಾಸ್ಯವಚನಗಳು ಭಾವಗರ್ಭಿತವಾಗಿ ಮನೋಹರವಾಗಿವೆ. ಭರತರೋಹಕನೆಂಬ ಮಹಾಸೇನ ಮಂತ್ರಿಯು ಆಯುಧಾಗಾರದಲ್ಲಿರುವ ಯೌಗಂಧರಾಯಣನ ಬಳಿಗೆ ಬಂದಾಗ ಅವರಿಗೆ ನಡೆಯುವ ಸಂಭಾಷಣೆಯಿಂದಲೂ ಯೌಗಂಧರಾಯಣನ ಧೀರತೆಯೂ ಸ್ವಾಮಿಭಕ್ತಿಯೂ ಗೋಚರವಾಗುವುವು. ಅವನ "ಭೋಃ!" ಎಂಬ ಒಂದು ಶಬ್ದವೇ ಆಯುಧಾಗಾರವನ್ನೆಲ್ಲ ತುಂಬುವುದು. ಭರತರೋಹಕನು "ಎಲೈ! ಯೌಗಂಧರಾಯಣನೆಂಬ ಹೆಸರನ್ನು ಮಾತ್ರವೇ ಕೇಳಿದ್ದೆನು. ಇಂದು ನಿನ್ನನ್ನು ನಿಜವಾಗಿ ನೋಡಿದೆನು" ಎಂದುದಕ್ಕೆ ಯೌಗಂಧ ರಾಯಣನು ಕೊಡುವ "ನಿಜವಾಗಿ ನೋಡಿದೆನೆಂದೆಯಾ? ನೋಡು,

ರಕ್ತಮಯವಾದ ದೇಹವುಳ್ಳ ನನ್ನನ್ನು ನೋಡು. ಗುರುವಧೆಮಾಡಿ ದವನನ್ನು ಕೊಂದ ಅಶ್ವತ್ಥಾಮನಂತೆ ನಾನು ಶಾಂತನಾಗಿದ್ದೇನೆ'' ಎಂದು ಉತ್ತರ ಹೇಳುವನು. ಇದು ಧೀರನಿಗೆ ಸಹಜವಾದ ಉತ್ತರ. ಸಾವಿಗೂ ಸಿದ್ಧವಾಗಿರುವ ಆ ಸ್ವಾಮಿಭಕ್ತನು ಆ ಬಳಿಕಲೂ ಭರತರೋಹಕನೊಡನೆ ನಿರ್ಭೀತನಾಗಿಯೇ ಮಾತನಾಡುವನು. ಆನೆಯ ವ್ಯಾಜದಿಂದ ಸೆರೆಸಿಕ್ಕಿದ್ದ ಉದಯನನಿಗೆ ಆನೆಯ ವ್ಯಾಜದಿಂದಲೇ ಬಿಡುಗಡೆಯಾಯಿತೆಂದು ಕಂಠೋಕ್ತವಾಗಿ ಹೇಳುವನು. ಅಷ್ಟರಲ್ಲಿ ಅವನ ಸ್ವಾಮಿಭಕ್ತಿಗೂ ಪರಾಕ್ರಮಕ್ಕೂ ಮೆಚ್ಚಿದ್ದ ಮಹಾಸೇನನು ಕನಕಾಲುಕದ ಪಾರಿತೋಷಿಕವನ್ನು ಕಳುಹಿಸುವನು. ಸ್ವಾಮಿಭಕ್ತಿ ಯೋಗ ರತನಾದ ಆ ಮಂತ್ರಿಶ್ರೇಷ್ಠನು ಅದು ಉದಯನನ ಶತ್ರುವಿನಿಂದ ಬಂದ ಮೆಚ್ಚೆಂಬ ಕಾರಣದ ಮೇಲೆ ಆ ಚಿನ್ನದ ಪಾತ್ರೆಯನ್ನು ಸ್ವೀಕರಿಸಲು ಸಮ್ಮತಿಸದೆ ಹೋಗುವನು. ಅಷ್ಟರಲ್ಲಿ ಹಾಹಾಕಾರವು ಕೇಳಿಸುವುದು. ಭರತರೋಹಕನ ಅಪ್ಪಣೆಯ ಮೇರೆಗೆ ಅವಕ್ಕೆ ಕಾರಣವನ್ನು ಕೇಳಿಕೊಂಡು ಬರಲುಹೋಗಿದ್ದ ಕಾಂಚುಕೀಯನು ವಾಸವದತ್ತೆಯ ವರ್ತನೆಯಿಂದ ದುಃಖಾರ್ತೆಯಾದ ಅಂಗಾರವತಿಯು ಅರಮನೆಯ ಮೇಲಿನಿಂದ ಕೆಳಕ್ಕೆ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುವ ಪ್ರಯತ್ನ ಮಾಡಿದಳೆಂದೂ, ಮಹಾಸೇನನು ಅವಳನ್ನು ಸಂತೈಸಿ ಉದಯನ ವಾಸವದತ್ತೆಯರಿಗೆ ಗಾಂಧರ್ವ ವಿವಾಹವಾಗಿದ್ದ ಕಾರಣ. ಅವರ ಭಾವಚಿತ್ರಗಳಿಗೇ ವಿವಾಹ ವಿಧಿಯನ್ನು ನೆರವೇರಿಸುವುದಾಗಿ ತಿಳಿಸಿದನೆಂದೂ ಹೇಳುವನು. ಈ ವರ್ತಮಾನವನ್ನು ಕೇಳಿ ಯೌಗಂಧರಾಯಣನ ಮನಸ್ಸು ಮಾರ್ಪಡುವುದು. ಯೌಗಂಧರಾಯಣನ ಮನಸ್ಸು ಅನಿರೀಕ್ಷಿತವಾದ ಈ ಘಟನೆಯಿಂದ ಮಾರ್ಪಡುವಂತೆ ಮಾಡಿರುವುದು ರಮಣೀಯವಾಗಿದೆ. ಕಲಾದೃಷ್ಟಿಯಿಂದ ಕಮನೀಯವಾಗಿರುವ ಈ ಬಗೆಯ ಸಂವಿಧಾನದ ಕೈಚಳಕಕ್ಕಾಗಿ ನಮ್ಮ ಕವಿಯು ಶ್ಲಾಘನೆಗೆ ಪಾತ್ರನೆನ್ನಲು ಅಡ್ಡಿಯಿಲ್ಲ. ಇನ್ನು ಮಹಾಸೇನನು ತಮ್ಮವನೇ ಆವನೆಂದು ಬಗೆದು ಯೌಗಂಧರಾಯಣನು ವಿಶೇಷ ಸಂತೋಷದಿಂದ ಮೆಚ್ಚನ್ನು ಸ್ವೀಕರಿಸುವನು. ಯೌಗಂಧರಾಯಣನ ವೀರಪ್ರತಿಜ್ಞೆಯು ನೆರವೇರಿದ ಪ್ರತಿಜ್ಞಾ ಯೌಗಂಧರಾಯಣವು ಅಲ್ಲಿಗೆ ಪೂರೈಸುವುದು.

**ಪಾತ್ರರಚನೆ:**—ಪಾತ್ರಗಳು ನೈಸರ್ಗಿಕ ರಮಣೀಯವಾಗಿರುವಂತೆ ಕವಿಯು ಅಳವಡಿಸಿದ್ದಾನೆ. ಉದಯನ, ಯೌಗಂಧರಾಯಣ, ಮಹಾಸೇನ, ಮುಂತಾದ ಐತಿಹಾಸಿಕ ವ್ಯಕ್ತಿಗಳನ್ನು ರಂಗಸ್ಥಳಕ್ಕೆ ತರುವಲ್ಲಿ ಕವಿಯು ಬಹಳ ಜಾಣ್ಮೆಯನ್ನು ತೋರಿಸಿದ್ದಾನೆ.

**ಉದಯನ**

ಮೊದಲೇ ಸೂಚಿಸಿರುವಂತೆ ಉದಯನನು ಭರತವಂಶಕ್ಕೆ ಸೇರಿದ ರಾಜ. ರಸಿಕನೂ ರೂಪವಂತನೂ ಆದ ನವಯುವಕ. ಲಲಿತಲಾ ಪ್ರವೀಣ. ಅವನ ವೀಣಾವಾದನದಿಂದ ಆನೆಗಳೂ ಮುಗ್ಧವಾಗುತ್ತಿದ್ದುವೆಂದಬಳಿಕ ಕೇಳತಕ್ಕುದೇನುಂಟು? ಕಾಡಾನೆಗಳನ್ನು ಹಿಡಿಯಲು ಘೋಷವತಿಯೆಂಬ ವೀಣೆಯೇ ಅವನ ಸಾಧನ. ಅವನು ಕೃತಕಮತಂಗವನ್ನು ಹಿಡಿಯಲು ನಾಗವನಕ್ಕೆ ತೆರಳಿ ಸೆರೆಸಿಕ್ಕಿದ ದಿನ ಅಶ್ವಾರೋಹಿಯಾಗಿ ಅವನು ಸೂರ್ಯೋದಯವಾದ ಸ್ವಲ್ಪಹೊತ್ತಿಗೆಲ್ಲ ಅನೇಕ ಹರಿದಾರಿಗಳ ದೂರ ಬಂದಿರುತ್ತಾನೆ. ಅವನು ಕುದುರೆ ಸವಾರಿಯಲ್ಲಿ ಗಟ್ಟಿಗನೆಂಬುದೂ, ಅವನು ಹೊತ್ತಿಗೆ ಮುಂಚೆ ಏಳುತ್ತಿದ್ದನೆಂಬುದೂ, ಇವರಿಂದ ವ್ಯಕ್ತವಾಗುವ ಅಂಶಗಳು. ಅವನು ಸ್ವಾತಂತ್ರ್ಯಪ್ರಿಯನಾದ ಮತ್ತು ಪ್ರಜಾರಂಜನಪರಾಯಣನಾದ ಪ್ರಭು. ಉದಯನನು ಸೆರೆಸಿಕ್ಕಿದಾಗ ಹಂಸಕನು ಕಣ್ಣೀರು ಸುರಿಸುವುದೂ ಅವನು ಪ್ರಜಾರಂಜನಪರಾಯಣನೆಂಬುದಕ್ಕೊಂದು ಗುರುತು. ಅವನು ಪ್ರಜಾನುರಾಗವನ್ನು ಪಡೆದಿದ್ದನೆಂಬುದನ್ನು ಶತ್ರುವಾದ ಮಹಾಸೇನನ ಮಾತುಗಳೂ ಸೂಚಿಸುತ್ತವೆ.† ಹಲವು ಜನ ರಾಜರು ಮಹಾಸೇನನೆಂಬ ಅನ್ವರ್ಥನಾಮವುಳ್ಳ ಪ್ರದ್ಯೋತನ ಸಾಮಂತರಾದರೂ ಉದಯನನೊಬ್ಬನು ಮಾತ್ರ ಸ್ವತಂತ್ರನಾಗಿಯೇ ಇದ್ದನು. ಮಹಾಸೇನನ ಮಗಳಾದ ವಾಸವದತ್ತೆಯ ಪಾಣಿಗ್ರಹಣವನ್ನು ಬಯಸಿ ಅನೇಕರು ಅವನ ಬಳಿಗೆ ರಾಯಭಾರಿಗಳನ್ನು ಕಳುಹಿಸುತ್ತಿದ್ದರು. ಉದಯನನು ಮಾತ್ರ ಆ ರೀತಿ ಮಾಡಲಿಲ್ಲ. ಮಹಾಸೇನನೇ

---

† "ವಿಭ್ರಮಯತ್ಯೇನಂ ಕಥಮಪ್ಯುತ್ಪನ್ನೋಽಸ್ಯ ಪೌರಾನುರಾಗಃ"
"ಹೇಗೋ ಉತ್ಪನ್ನವಾದ ಪುರಜನರ ಅನುರಾಗದಿಂದ ಅವನ ತಲೆಯು ತಿರುಗಿಹೋಗಿದೆ."

ಹೇಳಿಕೊಳ್ಳುವಂತೆ ಅವನು ಮಹಾಸೇನನೆಂಬ ಶಬ್ದವನ್ನೇ ಲಕ್ಷ್ಯಮಾಡು ತ್ತಿರಲಿಲ್ಲವೆಂದಮೇಲೆ ಇನ್ನು ಸಂಬಂಧದ ಅಪೇಕ್ಷೆಗೆ ಅವಕಾಶವೆಲ್ಲಿ ?

ಉದಯನನು ಅತುಳ ಪರಾಕ್ರಮಿ; ಅದಕ್ಕೆ ತಕ್ಕಂತೆ ಪುಣ್ಯವಶದಿಂದ ಅವನಿಗೆ ಯೌಗಂಧರಾಯಣನಂತಹ ಮೇಧಾವಿಯಾದ ಮಂತ್ರಿಯ ಸಹಾಯವೂ ದೊರೆತಿದ್ದಿತು. ಆದಕಾರಣ, ಸೈನ್ಯಸಾಗರವನ್ನೇ ಇಟ್ಟು ಕೊಂಡಿದ್ದ ಮಹಾಸೇನನಿಗೂ ಸಗ್ಗದೆ ಉದಯನನು ತನ್ನ ಸ್ವಾತಂತ್ರ್ಯ ವನ್ನು ಸುರಕ್ಷಿತವಾಗಿ ಕಾಪಾಡಿಕೊಂಡಿದ್ದನು. ಮಹಾಸೇನನೆಂದರೆ ಸಾಮಾನ್ಯನಲ್ಲ. ಸ್ವಪ್ನವಾಸವದತ್ತದಲ್ಲಿ ಉದಯನನೇ ವರ್ಣಿಸಿರುವಂತೆ ಅವನು ಉದಯಾಸ್ತಮಯ ಪ್ರಭು. ತಾನು ಒಲಿದವರನ್ನು ರಾಜರನ್ನಾಗಿ ಮಾಡಿ ಉದಯಗೊಳಿಸಿ ತಾನು ಒಲ್ಲದವರನ್ನು ರಾಜತ್ವದಿಂದ ಕೆಳಕ್ಕಿಳಿಸಿ ಅಸ್ತಮಯ ಗೊಳಿಸುವ ಪ್ರಭು. ಅಂತಹ ಮಹಾಸೇನನಿಗೆ ಕೂಡ ಉದಯನ ನನ್ನು ಕಂಡರೆ ಭಯವೆಂದ ಬಳಿಕ ಉದಯನನ ಶೌರ್ಯವೆಷ್ಟೆಂಬುದು ಸ್ಪಷ್ಟ ವಾಗುತ್ತದೆ. ಉದಯನನು ಸೆರೆಸಿಕ್ಕಿದನೆಂಬ ವಾರ್ತೆಯನ್ನು ಮಹಾಸೇನನು ನಂಬಲಾರದೆ, ಕಾಂಚುಕೀಯನನ್ನು ಬಗೆಬಗೆಯಾಗಿ ಪ್ರಶ್ನೆಮಾಡುವನು. ವತ್ಸರಾಜನ ಪರಾಕ್ರಮವೂ, ಯೌಗಂಧರಾಯಣನ ಕೌಶಲವೂ ಎಷ್ಟೆಂ ಬುದೂ, ಮಹಾಸೇನನ ಸಂಶಯ ಸಂಭ್ರಮಗಳೂ, ಅವರೀರ್ವರ ಸಂಭಾ ಷಣೆಯಿಂದ ಸ್ಪಷ್ಟವಾಗುವುವು:—

**ಮಹಾಸೇನ:**—(ಹರ್ಷಿತನಾಗಿ) " ನೀನು ಏನೆಂದೆ ? "

**ಕಾಂಚುಕೀಯ:**—" ಪೂಜ್ಯನಾದ ಅಮಾತ್ಯ ಶಾಲಂಕಾಯನನು ವತ್ಸರಾಜನನ್ನು ಸೆರೆಹಿಡಿದಿದ್ದಾನೆ "

**ಮಹಾಸೇನ:**—" ಉದಯನ? "

**ಕಾಂಚುಕೀಯ:**—" ಹೌದು "

**ಮಹಾಸೇನ:**—" ಶತಾನೀಕನ ಪುತ್ರನೆ ? "

**ಕಾಂಚುಕೀಯ:**—" ಅಹ, ಖಂಡಿತವಾಗಿ "

**ಮಹಾಸೇನ:**—" ಸಹಸ್ರಾನೀಕನ ಮೊಮ್ಮಗನೆ? "

**ಕಾಂಚುಕೀಯ:**—" ಅವನೇ "

ಮಹಾಸೇನ:—“ಕೌಶಾಂಬಿಯ ಒಡೆಯನೆ?”
ಕಾಂಚುಕೀಯ:—“ಸುವ್ಯಕ್ತವಾಗಿ; ಅವನೇ”
ಮಹಾಸೇನ:—“ಗಾಂಧರ್ವವಿದ್ಯಾ ಪಾರಂಗತನೆ?”
ಕಾಂಚುಕೀಯ:—“ಆತನು ಗಾಂಧರ್ವವಿದ್ಯಾ ಪಾರಂಗತನೆನ್ನುತ್ತಾರೆ”
ಮಹಾಸೇನ:—“ವತ್ಸರಾಜನೇ ಅಲ್ಲವೆ?”
ಕಾಂಚುಕೀಯ:—“ಹೌದು; ವತ್ಸರಾಜ”
ಮಹಾಸೇನ:—“ಹಾಗಾದರೆ ಯೌಗಂಧರಾಯಣನು ಮೃತಪಟ್ಟಿದ್ದಾನೊ?”
ಕಾಂಚುಕೀಯ:—“ಇಲ್ಲ. ಅವನು ಕೌಶಾಂಬಿಯಲ್ಲಿಲ್ಲವೇ ಇದ್ದಾನೆ!
ಮಹಾಸೇನ:—“ಹಾಗಿದ್ದ ಪಕ್ಷಕ್ಕೆ ವತ್ಸರಾಜನನ್ನು ಸೆರೆಹಿಡಿದೇ ಇಲ್ಲ”
ಕಾಂಚುಕೀಯ:-“ಮಹಾಸೇನನು ನನ್ನ ಮಾತನ್ನು ನಂಬಬೇಕೆಂದು ಪ್ರಾರ್ಥನೆ”

ಮಹಾಸೇನ:—“ಇಲ್ಲ. ನೀನು ಹೇಳಿದ (ಉದಯನನನ್ನು ಸೆರೆಹಿಡಿದ) ವಾರ್ತೆಯನ್ನು ನಾನು ನಂಬಲಾರೆ. ಉದಯನನನ್ನು ಸೆರೆಹಿಡಿದಿರುವುದು ಮಂದರ ಪರ್ವತವನ್ನು ಅಂಗೈಯಲ್ಲಿ ಧರಿಸಿ ತಿರುಗಿಸಿದಷ್ಟು ನಿಜ. ಯುದ್ಧದಲ್ಲಿ ಉದಯನನ ಪರಾಕ್ರಮವನ್ನು ಶತ್ರುಗಳೂ ಕೊಂಡಾಡಿದ್ದಾರೆ. ಯೌಗಂಧರಾಯಣನ ತಂತ್ರಗಳಂತು ನಮ್ಮ ಮನಸ್ಸನ್ನು ಮಿಡಿದು ನೊಳಗುತ್ತಿವೆ.”

ಕಾಂಚುಕೀಯ:-“ಮಹಾಸೇನನು ಪ್ರಸನ್ನನಾಗಬೇಕು. ನಾನು ವೃದ್ಧ; ಬ್ರಾಹ್ಮಣನೂ ಆಗಿದ್ದೇನೆ. ಮಹಾಸೇನ ಸಮಕ್ಷಮದಲ್ಲಿ ನಾನೆಂದೂ ಸುಳ್ಳು ಹೇಳಿಲ್ಲ”*

---

* ಕಾಂಚುಕೀಯನ “ನಾನು ವೃದ್ಧ; ಬ್ರಾಹ್ಮಣನೂ ಆಗಿದ್ದೇನೆ” (ವೃದ್ಧೋಽಸ್ಮಿ ಬ್ರಾಹ್ಮಣಃ ಖಲ್ವಹಮ್) ಎಂಬ ಪ್ರತ್ಯುತ್ತರದಲ್ಲಿ ಪದಪ್ರಯೋಜನವು ಮನೋಹರವಾಗಿದೆ. ಇಲ್ಲಿ “ಮುದುಕನಾಗಿದ್ದೂ ಸುಳ್ಳು ಹೇಳಲೆ?” ಎಂಬ ಪಾಪಭೀರುತ್ವದ ಧ್ವನಿಯಿದೆ. “ಬ್ರಾಹ್ಮಣನೂ ಆಗಿದ್ದೇನೆ” ಎಂಬುದರಲ್ಲಿಯೂ ವಿಶೇಷವುಂಟು. ಸತ್ಯ ಭಾಷಣವೇ ಬ್ರಾಹ್ಮಣ ಲಕ್ಷಣವೆಂಬ ಸನಾತನಧರ್ಮ ಸೂಕ್ಷ್ಮವನ್ನು ಇದು ಸೂಚಿಸುವಂತೆ ತೋರುತ್ತಿದೆ. ಏಕೆಂದರೆ ಸಾಕ್ಷಿಗಳನ್ನು ವಿಚಾರಣೆ ಮಾಡಬೇಕಾದಾಗ ಅನುಸರಿಸಬೇಕಾದ ಮಾರ್ಗವನ್ನು ಸೂಚಿಸುವಲ್ಲಿ “ಬ್ರೂಹೀತಿ ಬ್ರಾಹ್ಮಣಂ ಬ್ರೂಯಾತ್ಸತ್ಯಂ ಬ್ರೂಹೀತಿ ಪಾರ್ಥಿವಂ” ಎಂಬ ಸ್ಮೃತಿವಚನವಿದೆ. ಧರ್ಮಾಸನದೆದುರಿಗೆ ನಿಲ್ಲಿಸಿ “ಬ್ರೂಹಿ” (ಹೇಳು) ಎಂದರೇ ಸಾಕು. ಬ್ರಾಹ್ಮಣ ಸಾಕ್ಷಿಯು ಸತ್ಯವನ್ನೇ ನುಡಿಯಬೇಕಾಗಿದ್ದುದರಿಂದ ಅವನನ್ನು ಕುರಿತು ಸತ್ಯವನ್ನು ನುಡಿಯಬೇಕೆಂದು ಹೇಳಬೇಕಾದ ಆವಶ್ಯಕತೆಯೇ ಇರಲಿಲ್ಲವೆಂಬುದು ಅದರ ಆಶಯ. ಕಾಂಚುಕೀಯನು “ನಾನು ಬ್ರಾಹ್ಮಣನೂ ಆಗಿದ್ದೇನೆ” ಎಂದು ಹೇಳುವುದೂ ಈ ಆಶಯದಿಂದಲೇಹೊರತು ತಾನು ಬ್ರಾಹ್ಮಣನೆಂಬ ಗರ್ವದಿಂದಲ್ಲ. ಕವಿಯು ಅತಿಸಾಮಾನ್ಯವಾದ ಕೆಲವು ಮಾತುಗಳಲ್ಲಿಯೂ ಎಷ್ಟುಮಟ್ಟಿನ ಪದಪ್ರಯೋಜನವನ್ನಿಟ್ಟಿದ್ದಾನೆಂಬುದು ಇದರಿಂದ ವ್ಯಕ್ತವಾಗುತ್ತದೆ.

**ಮಹಾಸೇನ:**—"ಹಾಗೋ ಇದು! ಶಾಲಂಕಾಯನನು ಯಾವ ಪ್ರಿಯದೂತನನ್ನು (ಈ ವರ್ತಮಾನವನ್ನು ತಿಳಿಸಲು) ಕಳುಹಿಸಿದ್ದಾನೆ?"

**ಕಾಂಚುಕೀಯ:**—ಆಳನ್ನು ಕಳುಹಿಸಿಲ್ಲ. ವೇಗಾತಿಶಯವುಳ್ಳ ದೊಡ್ಡ ರಥದಲ್ಲಿ ವತ್ಸರಾಜನನ್ನು ಮುಂದಿಟ್ಟುಕೊಂಡು ಅಮಾತ್ಯನೇ ಬಂದಿದ್ದಾನೆ."

**ಮಹಾಸೇನ:**—"ಹೀಗೆ ಬಂದಿದ್ದಾನೆಯೇ? ಭಲಾ! ಇನ್ನು ಯುದ್ಧಸನ್ನಾಹದ ಗೊಡವೆಯಿಲ್ಲದೆ ಅಕ್ಷೋಹಿಣೀ ಸೈನ್ಯವು ಸುಖವಾಗಿ ವಿಶ್ರಾಂತಿ ಹೊಂದಲಿ. ಇನ್ನು ರಾಜರುಗಳು ಪ್ರಚ್ಛನ್ನ ವೇಷಧಾರಿಗಳಾದ ಗೂಢಚಾರರನ್ನು ಕಳುಹಿಸಬೇಕಾದ ಆವಶ್ಯಕತೆಯಿಲ್ಲದೆ ನಿರಾಂತಕವಾಗಿರಬಹುದು. ಇದರ ನಿಜವಾದ ಪರಿಣಾಮವಿಷ್ಟು: ಇಂದೀಗ ನಾನು ಮಹಾಸೇನನಾಗಿದ್ದೇನೆ."

ಈ ಕೊನೆಯ ವಾಕ್ಯಗಳಿಂದ ಉದಯನನ ಶೌರ್ಯವೆಷ್ಟೆಂಬುದು ವ್ಯಕ್ತವಾಗುತ್ತದೆ. ಅವನು ಸೆರೆಸಿಕ್ಕುವುದಕ್ಕೆ ಮೊದಲು ಅವನು ಯುದ್ಧ ಮಾಡಿದ ಬಗೆಯಿಂದಲೂ ಅದು ಸೂಚಿತವಾಗಿದೆ. ಉದಯನನಿಗೆ ಬಹಳವಾಗಿ ಗಾಯವಾಗಿರುವುದನ್ನು ಕೇಳಿ ಮನನೊಂದ ಮಹಾಸೇನನು "ಬಹಳ ವ್ರಣಗಳಾಗಿವೆ. ಅದು ಅವನ ಪರಾಕ್ರಮದ ತಪ್ಪು. (ಅವನದಲ್ಲ)" ಎನ್ನುವನು. ಶತ್ರುವಿನ ಈ ಮಾತುಗಳಿಗಿಂತ ವೀರನಿಗೆ ಮತ್ತಾವ ಭಾಗ್ಯವು ಬೇಕು? ಪ್ರದ್ಯೋತನು ತಾನು ಮಹಾಸೇನನಾಗಿ ಸೈನ್ಯಸಾಗರವನ್ನು ಪಡೆದಿದ್ದುದೂ ಅದುವರೆಗೂ ವ್ಯರ್ಥವೆಂದು ಭಾವಿಸಬೇಕಾಗಿದ್ದಿತು. ಅಂಗಾರವತಿಯು ಹೇಳುವಂತೆ ಮಹಾಸೇನನಿಗೆ ಉದಯನನು ಸೆರೆ ಸಿಕ್ಕಿದುದನ್ನು ಕೇಳಿದ ಆ ದಿನದಷ್ಟು ಉತ್ಸವದ ಕಾಲವೂ ಸಂಭ್ರಮದ ವೇಳೆಯೂ ಹಿಂದೆ ಎಂದೂ ಒದಗಿರಲಿಲ್ಲ. ವತ್ಸರಾಜನಾದ ಉದಯನನ ಪ್ರತಾಪವೆಷ್ಟೆಂಬುದನ್ನು ಅದರಿಂದಲೇ ಗ್ರಹಿಸಬಹುದಲ್ಲವೆ?

**ಯೌಗಂಧರಾಯಣ**

ಮೇಧಾಶಕ್ತಿ ಪರಿಪೂರ್ಣವಾಗಿ ರಾಜಭಕ್ತಿ ಪರಾಯಣನೆನಿಸಿದ ಸ್ವಾರ್ಥತ್ಯಾಗಿಯಾದ ರಾಜನೀತಿ ವಿಶಾರದನೆಂದರೆ ಯೌಗಂಧರಾಯಣನ ಹೆಸರನ್ನು ಹೇಳಬೇಕು. ಮಹಾಸೇನನ ಮಂತ್ರಿಯಾದ ಭರತರೋಹಕನು ಕೂಡ ಅವನು ರಾಜನೀತಿ ಕುಶಲನೆಂಬುದನ್ನು ಒಪ್ಪಿಕೊಂಡಿ

ದ್ದಾನೆ. * ಅವನು ಜೀವಂತನಾಗಿರುವಲ್ಲಿ ಉದಯನನನ್ನು ಯುದ್ಧದಲ್ಲಿ ಗೆಲ್ಲುವುದಾಗಲಿ, ಮೋಸದಿಂದ ಸೆರೆಹಿಡಿಯುವುದಾಗಲಿ ಅಸಾಧ್ಯವೆಂದು ಮಹಾಸೇನನೆಂಬ ಹೆಸರನ್ನು ಪಡೆದು ಪ್ರಖ್ಯಾತನಾಗಿದ್ದ ಪ್ರದ್ಯೋತನಿಗೂ ತೋರಿದ್ದಿತೆಂದಮೇಲೆ, ಹೆಚ್ಚೇನನ್ನು ತಾನೆ ಹೇಳಬೇಕು? ಅವನು ಕುಶಲಿಯಾದ ಮಂತ್ರಿಯು ಮಾತ್ರವೇ ಅಲ್ಲದೆ, ಶೂರನೂ ಹೌದು. ಸ್ವಾಮಿಕಾರ್ಯಕ್ಕಾಗಿ ತನ್ನ ರಕ್ತವನ್ನು ಚೆಲ್ಲಿದುದೇ ಅವನಿಗೊಂದು ಹೆಮ್ಮೆ. ಅವನ ಬುದ್ಧಿಶಕ್ತಿ, ಪರಿಜನರಲ್ಲಿ ಅವನಿಗಿದ್ದ ಪ್ರೀತಿಕರುಣೆಗಳು, ಅವನ ರಾಜಭಕ್ತಿ, ಮುಂತಾದ ನಾನಾಗುಣಗಳಿಗೂ ನಿದರ್ಶನಗಳನ್ನು ಹಿಂದೆಯೇ ಸೂಚಿಸಿದ್ದೇವೆ. ರಾಜನೀತಿ ಕುಶಲನೂ ದೇಶವತ್ಸಲನೂ ಮೇಧಾವಿಯೂ ಆದ ಯೌಗಂಧರಾಯಣನಂತಹ ಅಮಾತ್ಯನ ಪಾತ್ರವನ್ನು ಮತ್ತಾವ ಕವಿಯೂ ರಚಿಸಿಲ್ಲ. ಆರ್ಯಸಂಸ್ಕೃತಿಯ ಮೂರ್ತಸ್ವರೂಪವೇ ಯೌಗಂಧರಾಯಣನೆಂದರೂ ಸಲ್ಲುವುದು.

ಈ ಐತಿಹಾಸಿಕ ವ್ಯಕ್ತಿಯನ್ನು ರೂಪಕಪ್ರಪಂಚಕ್ಕೆ ತರುವುದರಲ್ಲಿ ಭಾಸನು ವಿಶೇಷ ಸಾಮರ್ಥ್ಯವನ್ನು ತೋರಿಸಿದ್ದಾನೆ. ಪ್ರದ್ಯೋತನು

**ಪ್ರದ್ಯೋತ**

ಇತಿಹಾಸದಲ್ಲಿಯೂ ಸುಪ್ರಸಿದ್ಧನು. ಅವನಿಗೆ ಪ್ರಚಂಡ ಪ್ರದ್ಯೋತನೆಂದೂ, ಮಹಾಸೇನನೆಂದೂ ಬಿರುದುಗಳಿದ್ದುವು. ಅವನು ಕ್ರೂರನಾಗಿಯೂ, ನಯವರ್ಜಿತನಾಗಿಯೂ, ಪ್ರಣತಸಾಮಂತನಾಗಿಯೂ ಇದ್ದನೆಂಬುದಕ್ಕೆ ಹೇಮಚಂದ್ರರಾಯ್ ಚಾಧುರಿಯವರು ತಾವು ಬರೆದಿರುವ ಪ್ರಾಚೀನ ಭರತಖಂಡದ ರಾಜಕೀಯಚರಿತ್ರೆ ಯೆಂಬ ಗ್ರಂಥದಲ್ಲಿ (Political History of Ancient India) ಪುರಾತನ ಗ್ರಂಥಗಳಿಂದ ಪ್ರಮಾಣವಾಕ್ಯಗಳನ್ನು ಉದಾಹರಿಸಿ ಬರೆದಿದ್ದಾರೆ. ಬಿಂಬಿಸಾರನ ಮಗ ಅಜಾತಶತ್ರುವು ಪ್ರದ್ಯೋತನ ಮುತ್ತಿಗೆಯ ಭಯದಿಂದ ತನ್ನ ರಾಜಧಾನಿಯಾದ ರಾಜಗೃಹಕ್ಕೆ ಬಹುಬಲವಾದ ಕೋಟೆಕೊತ್ತಲಗಳನ್ನು ಕಟ್ಟಿಕೊಂಡನೆಂಬ ಸಂಗತಿಯನ್ನೂ ಅವರು ವಿವರಿಸಿದ್ದಾರೆ.

ಇತಿಹಾಸದಲ್ಲಿ ಕ್ರೂರಿಯೂ ನಯವರ್ಜಿತನೂ ಆಗಿದ್ದ ಪ್ರದ್ಯೋತನನ್ನು ನಮ್ಮ ಕವಿಯು ದಾಕ್ಷಿಣ್ಯಪರನೂ ವಿನಯಶೀಲನೂ ಆದ ಸದ್ಗೃಹಸ್ಥ

---

* "ಅಪರೋಕ್ಷ ರಾಜ್ಯವ್ಯವಹಾರೋ ಭವಾನಿತಿ ಬ್ರವೀತಿ"

ನಂತೆ ಚಿತ್ರಿಸಿದ್ದಾನೆ. * ಪ್ರತಿಜ್ಞಾಯೌಗಂಧರಾಯಣದ ಮಹಾಸೇನನು ಅತಿಥಿ ಸತ್ಕಾರ ಮುಂತಾದ ಗೃಹಸ್ಥಧರ್ಮಗಳನ್ನು ಪ್ರತಿಪಾಲಿಸುವುದು ಅವನ ಶೌರ್ಯ ವೈಭವಗಳಿಗೆ ಒಪ್ಪವಿಡುವಂತಿದೆ. ಅತಿಥಿ ಪೂಜೆಯಲ್ಲಿ ಅವನಿಗಿರುವ ಆದರಾಸಕ್ತಿಗಳು "ಸಮಾಗತಾನಾಂ ಯುಕ್ತಃ ಪೂಜಯಾ ಪ್ರತಿಗ್ರಹಃ" ಎಂಬ ಮಾತುಗಳಿಂದ ಬಹು ಚೆನ್ನಾಗಿ ವ್ಯಕ್ತವಾಗುತ್ತದೆ. ಅವನೂ ಅಂಗಾರವತಿಯೂ ವಾಸವದತ್ತೆಯ ವಿವಾಹದ ವಿಷಯದಲ್ಲಿ ನಡೆಯಿಸುವ ಸಂಭಾಷಣೆಯು ಹೃದಯಂಗಮವಾಗಿಯೂ ಜೀವನದ ಪ್ರತ್ಯಕ್ಷ ಚಿತ್ರವೆನಿಸುವಂತೆಯೂ ಇದೆ.

ಮಹಾಸೇನನ ದರ್ಪವು ಬಹಳ ಹೆಚ್ಚು. ತನ್ನ ಗಡ್ಡಮೀಸೆಗಳು ಬೆಳ್ಳಗಾಗುವವರೆಗೂ ರಾಜಸೇವೆ ಮಾಡಿರುವ ಕಾಂಚುಕೀಯನಿಗೆ ಕೂಡ ಅವನನ್ನು ಕಂಡರೆ ದಿಗಿಲು. (ಸಾಮಾನ್ಯರಿಗೆ ಕಾಂಚುಕೀಯನ ಹುದ್ದೆಯು ದೊರೆಯುತ್ತಿರಲಿಲ್ಲ. ಸತ್ಯಸಂಪನ್ನರಾಗಿಯೂ, ಕಾಮದೋಷವಿವರ್ಜಿತ ರಾಗಿಯೂ ಜ್ಞಾನವಿಜ್ಞಾನ ಕುಶಲಿಗಳಾಗಿಯೂ ಇದ್ದವರಿಗೆ ಮಾತ್ರವೇ ಆ ದೊಡ್ಡ ಹುದ್ದೆಯು ದೊರೆಯುತ್ತಿದ್ದಿತು.) ಅಷ್ಟು ದೊಡ್ಡ ಹೊದ್ದೆಯಲ್ಲಿದ್ದ ಮುದುಕನಿಗೂ ಅಷ್ಟು ಭಯವೆಂದಮೇಲೆ ಮಹಾಸೇನನ ದರ್ಪವೆಷ್ಟೆಂಬು ದಕ್ಕೆ ಮತ್ತಾವ ವಿವರಣೆಯೂ ಆವಶ್ಯಕವಿಲ್ಲ. ವತ್ಸರಾಜನು ಸೆರೆಸಿಕ್ಕಿದ ವಿಷಯವನ್ನು ವಿಜ್ಞಾಪಿಸುವ ಸಂಭ್ರಮದಲ್ಲಿ ಕಾಂಚುಕೀಯನು "ವತ್ಸ ರಾಜನು" ಎಂದು ಸಮ್ಮನಾಗುತ್ತಾನೆ. ಆಗ ಮಹಾಸೇನನು "ಏನದು?

---

* ರೂಪಕ ಲೇಖಕನು ಈ ರೀತಿ ಸ್ವಾತಂತ್ರ್ಯವಹಿಸಿದಲ್ಲದೆ ಕಲೆಗೆ ಸೊಬ ಗೇರದು. ಚರಿತ್ರೆಯಿಂದ ದೊರೆತ ಮುರುಡು ಕಲ್ಲುಬಂಡೆಯಿಂದ ಕನ್ನಡಿಯಂತೆ ಹೊಳೆಯುವಷ್ಟು ನುಣುಪಾದ ಕಂಬವನ್ನು ಮಾಡುವ ರೂಪಕ ಪ್ರಪಂಚ ವಿಧಾ ತನೇ ನಿಜವಾದ ನಾಟಕ ಲೇಖಕ. ಚರಿತ್ರೆಯ ವಿವರಗಳ ಮೇರೆಗೆ ಕ್ರೂರಿಗಳೂ ನೀಚರೂ ಆದ ಬ್ರೂಟಸ್ ಮತ್ತು ಕ್ಯಾಸಿಯಸ್ ಎಂಬವರನ್ನು ಷೇಕ್ಸ್‌ಪಿಯರ್ ಮಹಾಕವಿಯು ಸದ್ಗುಣಿಗಳಾಗಿ ಚಿತ್ರಿಸಿ ತನ್ನ ಕಲಾಪ್ರೌಢಿಮೆಯನ್ನು ಬೆಳಗಿರು ವನು. ಭಾಸನು ಮಹಾಸೇನ ಪಾತ್ರವನ್ನು ಚಿತ್ರಿಸುವಲ್ಲಿ ಅದೇಬಗೆಯ ಕಲಾ ಪ್ರೌಢಿಮೆಯನ್ನೇ ತೋರಿಸಿದ್ದಾನೆ.

ವತ್ಸರಾಜ!" ಎನ್ನುವನು. ಶತ್ರುವಿನ ನಾಮೋಚ್ಚಾರಣೆಯನ್ನು ಕೇಳಿ ಮಹಾಸೇನನು ಕುಪಿತನಾಗಿರುವನೆಂದು ಬಗೆದು ಕಾಂಚುಕೀಯನು ಅವನ ಕಾಲಿಗೆರಗುವನು. ಮೇಲಕ್ಕೇಳೆಂದು ಮಹಾಸೇನನು ಹೇಳುವವರೆಗೂ ಅವನು ಮೇಲಕ್ಕೆಕೂಡ ಏಳುವುದಿಲ್ಲ.

ಮಹಾಸೇನನ ದರ್ಪವು ಅತ್ಯಧಿಕವಾಗಿದ್ದರೂ ಅವನು ಗುಣಪಕ್ಷ ಪಾತಿಯಾದ ದಯಾಳುವಾಗಿರುವಂತೆ ಕವಿಯು ಚಿತ್ರಿಸಿದ್ದಾನೆ. ಉದ ಯನನು ತನ್ನ ಶತ್ರುವಾಗಿದ್ದರೂ ಮಹಾಸೇನನು ತನ್ನ ಸ್ವಗತ ಭಾಷಣದಲ್ಲಿ ಅವನನ್ನು ಗುಣಶಾಲಿಯೆಂದು ಕರೆದಿದ್ದಾನೆ. ಸೆರೆಸಿಕ್ಕಿದ ಉದಯನನೆಲ್ಲಿರುವನೆಂದು ಕೇಳುವಾಗ "ವೀರಮಾನೀ" ಎಂದು ಮಹಾ ಸೇನನು ಹೇಳುವನು. ಅವನು ಗರ್ವಿತನೆಂಬ ಭಾವನೆಯು ಮನಸ್ಸಿ ನಿಂದ ಮರೆಯಾಗಲೊಲ್ಲದಾದರೂ ಅವನ ಶೌರ್ಯದಿಂದ ಮುಗ್ಧನಾಗಿ ಅವನನ್ನು ವೀರನೆಂದು ಕರೆಯುವಷ್ಟು ಸೌಜನ್ಯತೆಯನ್ನು ಮಹಾಸೇನನು ಉಳಿಸಿಕೊಂಡಿದ್ದಾನೆ. ಅಲ್ಲದೆ ಉದಯನನನ್ನು ಉಪಚರಿಸಿ ನೋಡಿಕೊಳ್ಳುವ ವಿಷಯದಲ್ಲಿ ಆ ಮೊದಲೇ "ಅವನಿಗೇನು ಇಷ್ಟವೆಂಬುದನ್ನು ಅವನ ಮುಖ ಭಾವದಿಂದಲೇ ಗ್ರಹಿಸಿ ಅದನ್ನು ನೆರವೇರಿಸಬೇಕು. ಸೋಲಿನ ವಿಷಯ ವನ್ನಾಗಲಿ ಯುದ್ಧದ ವಿಷಯವನ್ನಾಗಲಿ ಅವನೆದುರಿಗೆ ಸೂಚಿಸತಕ್ಕ ದಲ್ಲ. ಓನುಗಳೇ ಮುಂತಾದ ಅವನ ವ್ಯಾಪಾರಗಳೆಲ್ಲ ಶುಭಕರವೆಂದು ಹೇಳುತ್ತಿರಬೇಕು. ಕಾಲೋಚಿತವಾದ ಪ್ರಿಯವಚನಗಳಿಂದಲೂ ಸ್ತುತಿ ಗಳಿಂದಲೂ ಅವನನ್ನು ಓಲೈಸಬೇಕು" ಎಂದು ಮಹಾಸೇನನು ಬೆಸಸಿ ತನ್ನ ದಯಾಗುಣವನ್ನು ವ್ಯಕ್ತಪಡಿಸಿದ್ದಾನೆ. ಆದಕಾರಣ, ಘಾಸಿಹೊಂದಿ ನರಳುತ್ತಿರುವ ಆಗಿನ ಅವಸ್ಥೆಯಲ್ಲಿ ಉದಯನನನ್ನು ಅವನು ಗರ್ವಿತನೆಂದು ಕರೆದುದರಲ್ಲಿ ಯಾರೊಬ್ಬರೂ ಅವನ ಮೇಲೆ ಆಗ್ರಹಗೊಳ್ಳುವುದಕ್ಕೆ ಮನಸ್ಸೇ ಬರುವಂತಿಲ್ಲ.

ಮಹಾಸೇನನು ದಾಕ್ಷಿಣ್ಯಪರನೂ ಹೌದು. ಉದಯನನನ್ನು ಮಯೂರ ಯಷ್ಟಿಮುಖದಲ್ಲಿ ಇಟ್ಟಿರುವರೆಂದು ಕೇಳಿ ಮಹಾಸೇನನು "ಅಯ್ಯೋ! ಅದು ಬಿಸಿಲಿಗೆ ಮರೆಯೇ ಇಲ್ಲದ ಪ್ರದೇಶ. ಬಿಸಿಲಿನ ಝಳವು ಬಾಧಿಸಲವಕಾಶ ವಿಲ್ಲದ ಮಣಿಭೂಮಿಕೆಯಲ್ಲಿ ಅವನನ್ನು ಇಡಿಸಬೇಕೆಂದು ಆಜ್ಞಾಪಿಸು"

ಎನ್ನುವನು. ಕಾಂಚುಕೀಯನು ಮಹಾಸೇನನ ಆಜ್ಞೆಯನ್ನು ನೆರವೇರಿಸು ವಂತೆ ಅಪ್ಪಣೆ ಮಾಡಲು ಹೋಗಿದ್ದು ಹಿಂತಿರುಗಿ ಮಹಾಸೇನನ ಆಜ್ಞೆ ಯಾದುದನ್ನೆಲ್ಲ ನೆರವೇರಿಸಿದುದಾಗಿಯೂ, ಅಮಾತ್ಯ ಭರತರೋಹಕನು ಮಹಾಸೇನನ ದರ್ಶನವನ್ನಪೇಕ್ಷಿಸಿ ಪ್ರಾರ್ಥಿಸಿದನೆಂದೂ ಹೇಳುವನು. ಆಗ ಮಹಾಸೇನನು "ವತ್ಸರಾಜನಿಗೆ ಮಾಡಿದ ಆದರೋಪಚಾರಗಳು ಅವನಿಗೆ ಸರಿಬೀಳುವುದಿಲ್ಲವೆಂಬುದು ವ್ಯಕ್ತವಾಯಿತು. ಅವನು ಅನುಸರಿಸ ಬೇಕೆಂಬ ರಾಜನೀತಿಯು ಇದಕ್ಕೆ ವಿರುದ್ಧರೀತಿಯಲ್ಲಿದೆ. ನಾನೇ ಈ ವಿಚಾರ ದಲ್ಲಿ ಅವನಿಗೆ ಸಮಾಧಾನಹೇಳುತ್ತೇನೆ." ಎನ್ನುವನು. ಅಮಾತ್ಯನೇ ಮುಂತಾದವರಲ್ಲಿ ಅವನು ದಾಕ್ಷಿಣ್ಯಪರನೆಂಬುದು ಇದರಿಂದ ವ್ಯಕ್ತವಾಗು ತ್ತದೆ. ಉದಯನನು ವ್ರಣಗಳ ಯಾತನೆಯನ್ನು ಅನುಭವಿಸುತ್ತಿರುವುದನ್ನು ಕುರಿತು ಆಲೋಚಿಸಿದಾಗ ಅವನು ತನ್ನಲ್ಲಿ ತಾನು ಹೇಳಿಕೊಳ್ಳುವ "ಅವನ (ಉದಯನನ) ಗರ್ವದಿಂದ ನನಗೆ ಮೊದಲು ಅವನಲ್ಲಿ ವೈರವಿದ್ದಿತು. ಅವನನ್ನು ಸೆರೆಹಿಡಿದು ತಂದರೆಂದೊಡನೆಯೇ ವೈರಭಾವವು ನಷ್ಟವಾಯಿತು. ಯುದ್ಧಕಾಲದಲ್ಲಿ ಗಾಯವಡೆದು ವಿಪತ್ತಿಗೊಳಗಾಗಿ ಜೀವದಿಂದುಳಿಯುವ ವಿಚಾರವಲ್ಲಿ ಸಂಶಯವುಂಟಾಗಿರುವುದನ್ನು ಕೇಳಿ (ನನ್ನ ಮನಸ್ಸೇ ಒಂದು ವಿಧವಾಗಿದೆ. ನನ್ನ ಮನಸ್ಸಿನಬಗೆಯೇ ನನಗೆ ತಿಳಿಯದೆ) ಸಂಶಯ ವುಂಟಾಗಿದೆ"* ಎಂಬ ಮಾತುಗಳಿಂದ ಕವಿಯು ಅವನ ಹೃದಯವನ್ನೇ ನಮ್ಮೆದುರಿಗೆ ಹಿಡಿದಿರುವಂತೆ ಭಾಸವಾಗುತ್ತದೆ.

ಅಂಗಾರವತಿಯ ಪಾತ್ರವನ್ನು ಚಿತ್ರಿಸುವುದರಲ್ಲಿ ಮಹಾರಾಜ್ಞೀ ಭಾವಕ್ಕಿಂತ ಹೆಚ್ಚಾಗಿ ಆಕೆಯ ಗೃಹಿಣೀ ಭಾವವನ್ನೂ ಮಾತೃಭಾವವನ್ನೂ ಕವಿಯು ಹೆಚ್ಚಾಗಿ ಸ್ಫುಟಗೊಳಿಸಿ ತೋರಿಸಿದ್ದಾನೆ.

**ಅಂಗಾರವತಿ** ಅವಳು ಪತಿಪರಾಯಣೆಯಾದ ಸಾಧ್ವಿಯಾದರೂ, ತನ್ನ ವೈಶಿಷ್ಟ್ಯವನ್ನು ಕಳೆದುಕೊಂಡಿಲ್ಲ; ಮಹಾ

---

* " ಪೂರ್ವಂ ತಾವದ್ವೈರಮುತ್ಸ್ಯಾವಲೇಪಾ
ದಾನೀತೇಽಸ್ಮಿನ್ ಸ್ಯಾತ್ತು ವಧ್ಯಸ್ತಥಾ ಮೇ ।
ಯುದ್ಧಕ್ಲಿಷ್ಟಂ ಸಂಶಯಸ್ಥಂ ವಿಪನ್ನಂ
ಶ್ರುತ್ವಾತ್ವೇನಂ ಸಂಶಯಂ ಚಿಂತಯಾಮಿ ॥ "

ಸೇನನು ಹೇಳಿದುದನ್ನೆಲ್ಲ ಒಪ್ಪಿಕೊಳ್ಳುವ ಯಂತ್ರದ ಬೊಂಬೆಯಾಗಿಲ್ಲ. ಮಹಾಸೇನನು ತನ್ನ ಶತ್ರುವಾದ ಉದಯನನ ದುರಹಂಕಾರಕ್ಕೆ ಅವನು ಭರತವಂಶೀಯನಾಗಿದ್ದ ಅಭಿಮಾನವೂ ಗಾಂಧರ್ವವೇದ ಚತುರನೆಂಬ ಗರ್ವವೂ, ವಯಸ್ಸಹಜವಾದ ರೂಪವುಂಟೆಂಬ ಬಿಂಕವೂ, ಪೌರಾನುರಾಗಕ್ಕೆ ತಾನು ಪಾತ್ರನೆಂಬ ಹೆಮ್ಮೆಯೂ ಕಾರಣವೆಂದು ಅವಳಿಗೆ ತಿಳಿಸಿದಾಗ, ಅವಳು ಮಹಾಸೇನನು ಸೂಚಿಸಿದುದೇ ನಿಜವೆನ್ನದೆ ಆ ಗುಣಗಳು ಅಭಿಲಷಣೀಯವೇ ಆಗಿದ್ದುವೆಂದು ಹೇಳುವುದೇ ಇದಕ್ಕೆ ನಿದರ್ಶನ ವಾಸವದತ್ತೆಯು ವಿವಾಹ ಯೋಗ್ಯವಾದ ವಯಸ್ಸಿಗೆ ಬಂದಳೆಂಬುದನ್ನು ಕೇಳಿ ಅವಳಿಗೆ ಮಾತೃಸಹಜವಾದ ಮನೋವ್ಯಥೆ. ಮಹಾಸೇನನು "ವಿವಾಹ ಯೋಗ್ಯಳಾದ ಪುತ್ರಿಯ ಮದುವೆಯಾಗಲಿಲ್ಲವಲ್ಲಾ ಎಂಬ ಲಜ್ಜೆ. ಮದುವೆಯಾಯಿತೆಂದರೆ ಮಗಳು ಹೊರಟುಹೋಗುವಳಲ್ಲಾ ಎಂದು ಮನೋವ್ಯಥೆ. ಹೀಗೆ ಧರ್ಮಸ್ನೇಹಗಳಿಂದ ಡೋಲಾಯಮಾನ ಮನಸ್ಕರಾಗಿ ಮಾತೆಯರು ದುಃಖಿನಿಯರು.'' ಎಂದು* ಹೇಳಿ ಅಂಗಾರವತಿಯ ಮನಸ್ಸಿನ ಭಾವಗಳನ್ನು ನಮಗೆ ಪರಿಚಯಮಾಡಿಕೊಟ್ಟಿದ್ದಾನೆ. ವಾಸವದತ್ತೆಯನ್ನು ಯಾರಿಗೆ ಕೊಟ್ಟು ವಿವಾಹಮಾಡಬೇಕೆಂಬುದು ಇನ್ನೂ ನಿಶ್ಚಿತವಾಗಿಲ್ಲವೆಂದು ಮಹಾಸೇನನು ಹೇಳಿದಾಗ (ಸೆರೆಸಿಕ್ಕಿರುವ ಉದಯನನು ಅಳಿಯನಾದಾನೇ ಎಂಬ ಆಸೆಯು ಮನಸ್ಸಿನಲ್ಲಿ ಮಿಡಿಯುತ್ತಿದ್ದುದರಿಂದ) ಅಂಗಾರವತಿಯು "ಅವಸರಪಡುವುದೇನೂ ಬೇಡ. ನನ್ನ ಮಗು ಇನ್ನೂ ಹುಡುಗಿ'' ಎಂದು‡ ಉತ್ತರಹೇಳುವಳು. ಈ ಉತ್ತರವು ಅತಿ ಮನೋಹರವಾಗಿಯೂ, ಸ್ವಾಭಾವಿಕವಾಗಿಯೂ ಇರುವುದಲ್ಲದೆ ಮಹಾಸೇನನು ಸೂಚಿಸಿದ ಧರ್ಮಸ್ನೇಹಾಂತರ ನ್ಯಸ್ತವಾದ ಮನೋಭಾವಕ್ಕೆ ನಿದರ್ಶನವಾಗಿಯೂ ಇರುವುದು. ಮಹಾಸೇನನು ತಮ್ಮವರು ಉದಯನನನ್ನು ಸೆರೆಹಿಡಿದಾಗ ವಶಪಡಿಸಿಕೊಂಡ

---

* "ಅದತ್ತೇತ್ಯಾಗತಾ ಲಜ್ಜಾ ದತ್ತೇತಿ ವ್ಯಥಿತಂ ಮನಃ ।
ಧರ್ಮಸ್ನೇಹಾಂತರೇ ನ್ಯಸ್ತಾ ದುಃಖಿತಾಃ ಖಲು ಮಾತರಃ ॥"

‡ "ಅಳಂ ದಾಣಿ ತುವರಿಅ । ಬಾಳಾ ಮೇ ದಾರಿಆ" ("ಅಲಮಿದಾನೀಂ ತ್ವರಿತ್ವಾ । ಬಾಲಾ ಮೇ ದಾರಿಕಾ । ")

ಘೋಷವತಿಯೆಂಬ ವೀಣೆಯನ್ನು ವಾಸವದತ್ತೆಗೆ (ಮೊದಲೇ ವೀಣೆಯನ್ನು ಕಲಿಯುತ್ತಿರುವ ವಾಸವದತ್ತೆಗೆ) ಕಳುಹಿಸಬೇಕೆಂದು ನಿರ್ಧರಿಸಿದಾಗ ಅಂಗಾರವತಿಯು "ಈ ವೀಣೆಯನ್ನು ಕಳುಹಿಸಿಬಿಟ್ಟರೆ ಅವಳು ಹುಚ್ಚಿಯೇ ಆಗುತ್ತಾಳೆ" ಎಂದು ಹೇಳುವ ಮಾತುಗಳು ನೈಸರ್ಗಿಕ ರಮಣೀಯವಾಗಿ ಮಗಳಿಗಿರುವ ವೀಣೆಯ ಹುಚ್ಚಿನಿಂದ ತಾಯಿಗೆಷ್ಟು ಆನಂದವಾಗಿದೆಯೆಂಬುದನ್ನು ಬಹಳ ಸೊಗಸಾಗಿ ತೋರ್ಪಡಿಸುತ್ತವೆ.

ವಸಂತಕನೆಂಬ ಹೆಸರಿನಿಂದ ಕವಿಯು ವಿದೂಷಕ ಪಾತ್ರವನ್ನು ಚೆನ್ನಾಗಿ ಚಿತ್ರಿಸಿದ್ದಾನೆ. ವಸಂತಕನು ಮೋದಕಪ್ರಿಯನಾಗಿ ಭಾದ್ರಪದ ಮಾಸದ ಶುಕ್ಲಪಕ್ಷ ಚತುರ್ಥಿಯ ದೇವನಿಗೆ ಪ್ರತಿಕಕ್ಷಿ

**ವಸಂತಕ**

ಯಾಗಿರುವಂತೆ ತೋರುವುದು ಅವನಲ್ಲಿ ಸತ್ತ್ವವುಂಟು. ಭಾಸಮಹಾಕವಿಯು ಕೇವಲ ಹೊಟ್ಟೆಬಾಕನಾದ ವಿದೂಷಕನನ್ನು ಚಿತ್ರಿಸಿಲ್ಲ. ಉದಯನನಲ್ಲಿ ವಿದೂಷಕನಿಗೆ ಬಹಳಪ್ರೀತಿ; ಅತ್ಯಂತ ಸ್ನೇಹ ಮಮತೆಗಳು. ಅಪಾಯಕ್ಕೂ ಹೆದರದೆ ಅವನು ವೇಷಧಾರಿಯಾಗಿ ಮಹಾಸೇನನ ರಾಜ್ಯಕ್ಕೆ ಹೋಗಿ ಮಿತ್ರನ ಬಿಡುಗಡೆಗಾಗಿ ತನ್ನಿಂದ ಸಾಧ್ಯವಾದ ಸೇವೆಯನ್ನು ಸಮರ್ಪಿಸುವುದು ಶ್ಲಾಘ್ಯವಾಗಿದೆ. ಯೌಗಂಧರಾಯಣ ರುಮಣ್ವಂತರು ಅಪಾಯಕ್ಕೆ ಹೆದರದೆ ಪ್ರವರ್ತಿಸಿದುದು, ವಸಂತಕನ ವರ್ತನೆಯಷ್ಟು ಮೆಟ್ಟಿಗೆ ಮೆಚ್ಚಿಕೆಗೆ ಅರ್ಹವಲ್ಲ. ತಾವೆಲ್ಲರೂ ಬಹಳ ಕಷ್ಟಪಡುತ್ತಿದ್ದುದನ್ನೂ ಗಮನಿಸದೆ ಉದಯನನು ತನ್ನ ಬಂಧನ ಗೃಹವನ್ನೇ ಪ್ರಮದವನವನ್ನಾಗಿ ಭಾವಿಸಿ, (ಶತ್ರುವಿನ ಮಗಳಾದ ವಾಸವದತ್ತೆಯನ್ನು ಮೋಹಿಸಿ) ರಾಗಲೀಲೆಗೆ ಪ್ರಾರಂಭಿಸಿದುದಕ್ಕಾಗಿ ವಸಂತಕನು ಅಪ್ರಸನ್ನನಾಗಿ ಬೇಸರಪಡುವನು. ಕವಿಯು ವಿದೂಷಕನಲ್ಲಿಕೂಡ ಎಷ್ಟು ಕೆಚ್ಚನ್ನಿಟ್ಟಿರುವನೆಂದು ನಾವು ತಲೆದೂಗಬೇಕಾಗುವುದು. ವತ್ಸರಾಜನು ಕೌಶಾಂಬಿಗೆ ಹಿಂತಿರುಗುವ ಸುಯೋಗವನ್ನು ಕಾಣುವ ಸಂಭವವಿಲ್ಲದ ಕಾರಣ ಮುಪ್ಪಿನ ಕಾಲದವರೆಗೂ ತಾವೆಲ್ಲರೂ ವೇಷಧಾರಿಗಳಾಗಿಯೇ ಇದ್ದು ಕಾಲವನ್ನು ಕಳೆಯಬೇಕೆಂದು ಅವನು ಸೂಚಿಸುವನು. (ವತ್ಸರಾಜನಲ್ಲಿ ಅವನಿಗಿರುವ ಮೈತ್ರಿಯು ಎಷ್ಟು ಗಾಢವಾದುದೆಂಬ ಅಂಶವು ಇದರಿಂದ ವ್ಯಕ್ತವಾಗುವುದು) ಅದುಕೂಡ ಶ್ಲಾಘ್ಯವಲ್ಲವೆ—ಎಂದು ಯೌಗಂಧ

ರಾಯಣನು ಕೇಳಿದಾಗ ವಿದೂಷಕನು "ಜನಗಳಿಗೆ ಇದೆಲ್ಲ ತಿಳಿದರೆ ಅದು ಶ್ಲಾಘನೀಯವೇ ಆದೀತು" ಎನ್ನುವನು. ತಾವು ಪಡುತ್ತಿರುವ ಕಷ್ಟಗಳ ಸಂಬಂಧದಲ್ಲಿ ಜನಗಳ ಮೆಚ್ಚಿಕೆಯೂ ದೊರೆಯಬೇಕೆಂಬುದು ವಸಂತಕನ ಆಶೆ. ಯೌಗಂಧರಾಯಣನು ಅವನ ಮಾತುಗಳಿಗೆ ಪ್ರತ್ಯುತ್ತರವಾಗಿ "ಜನಗಳ ಮಾತನ್ನು ಕಟ್ಟಿಕೊಂಡೇನು? ಸ್ವಾಮಿಪ್ರಿಯಾರ್ಥವಾಗಿ ನಮ್ಮ ಪ್ರಯತ್ನ" ಎಂದು ಹೇಳುವನು. ವತ್ಸರಾಜನ ಮೇಲಣ ಪ್ರೀತಿಯಿಂದಲೇ ಉದ್ದೀಪಿತರಾಗಿದ್ದರೂ ಅವರೀರ್ವರಿಗೂ ಪರಸ್ಪರವಾಗಿರುವ ಅಂತರವು ಇದರಿಂದ ಗೊತ್ತಾಗುವುದು.

ಸಣ್ಣ ಪುಟ್ಟ ಪಾತ್ರಗಳಲ್ಲಿ ಕೂಡ ಭಾಸನುಹಾಕವಿಯು ಎಷ್ಟು ಜೀವ ಕಳೆಯನ್ನಿಟ್ಟಿರುವನೆಂಬುದು ಗಾತ್ರಸೇವಕನ ಪಾತ್ರದಿಂದ ಗೊತ್ತಾಗುತ್ತದೆ.

**ಗಾತ್ರಸೇವಕ**

ಗಾತ್ರಸೇವಕನು ಉದಯನನ ರಾಜ್ಯದಿಂದ (ಬಹುಶಃ ವೇಷಧಾರಿಯಾಗಿ) ಬಂದು ವಾಸವದತ್ತೆಯ ಆನೆಯ ಮಾವಟಿಗನಾಗಿ ಚಿಕ್ಕಕೆಲಸದಲ್ಲಿರುವನು. ಅವನು ಮದ್ಯಪಾನಮಾಡಿಲ್ಲದಿದ್ದೂ ಅವನು ಪಾನಮತ್ತನಾಗಿರುವನೆಂದು ಭಟನಿಗೆ ಸಂಶಯಬರುವಂತೆ ಕೌಶಲದಿಂದ ನಟಿಸುವನು. ಅವನು ಸ್ವಾಮಿಭಕ್ತನಾದ ವೀರನೂ ಆಗಿದ್ದಾನೆ. ಭಟನು "ಕುಡಿ. ಕುಡಿ. ಈಗಲೂ ಕುಡಿದು ಅಲೆದಾಡುತ್ತಿರು" ಎಂದು ಹೇಳಿದಾಗ ಗಾತ್ರಸೇವಕನು ಕೊಡುವ ಪ್ರತ್ಯುತ್ತರದ ಬಗೆಯನ್ನೂ ಭರವನ್ನೂ ನೋಡಿದರೆ, ಆಶ್ಚರ್ಯಪಾರವಶ್ಯದಿಂದ ಹೃದಯವೇ ಜಗ್ಗುವಂತಾಗುತ್ತದೆ: "ಆಃ! ಯಾವನು ಮತ್ತನು? ಮದವಾದರೂ ಯಾರಿಗೆ? ನಾವೆಲ್ಲರೂ ಆರ್ಯ ಯೌಗಂಧರಾಯಣನಿಂದ ನಮ್ಮನಮ್ಮ ಕಾರ್ಯಗಳಲ್ಲಿ ಸ್ಥಾಪಿತರಾದ ಚಾರಪುರುಷರು. ನಾನೂ ನನ್ನ ಸ್ನೇಹಿತರಿಗೆ ಸಂಜ್ಞೆಮಾಡಿ (ಯುದ್ಧೋದ್ಯೋಗಕ್ಕೆ) ಸಹಾಯಕರಾಗುವಂತೆ ಕರೆಯುವೆನು. ಇದೋ, ನನ್ನ ಮಿತ್ರರು ನಿರೋಧಮುಕ್ತ ಕೃಷ್ಣಸರ್ಪಗಳಂತೆ ಅಲ್ಲಲ್ಲಿ ಓಡಾಡುತ್ತಿದ್ದಾರೆ. ಎಲೈ ಎಲೈ ಮಿತ್ರರಿರಾ! ತಾವೆಲ್ಲರೂ ಕೇಳಬೇಕು—ಯಾವನು ಒಡೆಯನ ಉಪ್ಪಿಗಾಗಿ (ಕೃತಜ್ಞತೆಯಿಂದ) ಯುದ್ಧಮಾಡುವುದಿಲ್ಲವೋ ಅವನಿಗೆ (ಜಲಪಾನಕ್ಕಾಗಿ ಸ್ವರ್ಗದಲ್ಲಿ ಪವಿತ್ರವಾದ) ದರ್ಭೆಗಳಿಂದ ಆವೃತವಾಗಿ ಸುಸಂಸ್ಕೃತವಾಗಿ ಸಲಿಲಪೂರ್ಣ

ವಾಗಿರುವ ನೂತನಪಾತ್ರೆಯೇ ದೊರೆಯುವುದಿಲ್ಲ. ಅವನು ನರಕಕ್ಕೆ ಹೋಗುತ್ತಾನೆ" * ಎಂಬುದೇ ಆ ಪ್ರತ್ಯುತ್ತರ. "ನಿರೋಧಮುಕ್ತ ಕೃಷ್ಣ ಸರ್ಪಗಳಂತೆ" ಎಂಬ ಉಪಮಾನವು ಮನೋಹರವಾಗಿದೆ. ಪರೆಯನ್ನು ಬಿಟ್ಟ ಕರಿಯ ನಾಗರುಗಳೆಂಬ ಮಾತುಗಳು ಭಾವಗರ್ಭಿತವಾಗಿವೆ. "ನಿರೋಧ ಮುಕ್ತ" ಎಂಬುದರಲ್ಲಿ ಪದಪ್ರಯೋಜನವೂ ಸೊಗಸಾಗಿದೆ. ಯೌಗಂಧರಾಯಣನ ಕಡೆಯವರು ಆದುವರೆಗೂ ತಾವು ಇಂತಹವರೆಂಬುದನ್ನು ಬಹಿರಂಗಪಡಿಸಕೂಡದೆಂಬ ನಿರೋಧದಿಂದಕೂಡಿದ್ದು ಆಗ ಆ ನಿರೋಧದ ಪರೆಯಿಂದ ಪಾರಾದುದನ್ನೂ ಸೂಚಿಸುವುದಕ್ಕಾಗಿಯೇ ಪರೆಯೆಂಬುದನ್ನು ಸೂಚಿಸುವ ಇತರ ನಿರ್ಮೋಕ ಮುಂತಾದ ಪದಗಳನ್ನಾವುವನ್ನೂ ಉಪಯೋಗಿಸದೆ ಕವಿಯು "ನಿರೋಧ" ಎಂಬುದನ್ನುಪಯೋಗಿಸಿದ್ದಾನೆ. ಪರೆಯುಗಿದ ಹಾವಿನ ರಭಸ, ನವಚೈತನ್ಯ, ಮುಂತಾದವುಗಳೂ ಕಣ್ಣಿಗೆ ಕಟ್ಟಿದಂತಾಗಿ, ಉದಯನನ ಸೈನಿಕರ ಮತ್ತು ಅವರೆಲ್ಲರನ್ನೂ ಹುರಿದುಂಬಿಸುವ ಗಾತ್ರಸೇವಕನ, ಉತ್ಸಾಹವೂ ಹುರುಪೂ ಎಷ್ಟಿರಬೇಕೆಂಬುದು ವ್ಯಕ್ತವಾಗುತ್ತದೆ. ಗಾತ್ರಸೇವಕನು ಯೌಗಂಧರಾಯಣನನ್ನೂ

---

* "ಆಃ ಕೋ ಮತ್ತಃ ಕಸ್ಯ ವಾ ಮದಃ । ವಯಂಖಿಲ್ವಾರ್ಯ ಯೌಗಂಧರಾಯಣೇನ ಸ್ವೇಷುಸ್ವೇಷು ಸ್ಥಾನೇಷು ಸ್ಥಾಪಿತಾಶ್ಚಾರಪುರುಷಾಃ । ಯಾವದಹಮಪಿ ಸುಹೃಜ್ಜನಸ್ಯ ಸಂಜ್ಞಾಂ ಕರೋಮಿ । ಏತೇ ತೇ ಸುಹೃದೋ ನಿರೋಧ ಮುಕ್ತಾ ಇವ ಕೃಷ್ಣಸರ್ಪಾ ಇತಸ್ತತೋ ನಿರ್ಧಾವನ್ತಿ । ಭೋ ಭೋಃ ಸುಹೃದಃ । ಶೃಣ್ವನ್ತು ಭವನ್ತಃ—

ನವಂ ಶರಾವಂ ಸಲಿಲೈಃ ಸುಪೂರ್ಣಂ
ಸುಸಂಸ್ಕೃತಂ ದರ್ಭಕೃತೋತ್ತರೀಯಮ್ ।
ತತ್ತಸ್ಯ ಮಾ ಭೂನ್ನರಕಂ ಸ ಗಚ್ಛೇದ್
ಯೋ ಭರ್ತೃಪಿಂಡಸ್ಯ ಕೃತೇ ನ ಯುಧ್ಯೇತ್ ॥"

(ಈ ಶ್ಲೋಕವು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿಯೂ ಇದೆ. ಭಾಸನಿಂದ ಇದನ್ನು ಕೌಟಿಲ್ಯನು ತೆಗೆದುಕೊಂಡನೋ ಅಥವಾ ಅವರೀರ್ವರೂ ಇದನ್ನು ಬೇರೆ ಗ್ರಂಥದಿಂದ ತೆಗೆದುಕೊಂಡರೋ ತಿಳಿಯದು. ಈ ವಿಚಾರವನ್ನು ಹಿಂದೆಯೇ ಚರ್ಚಿಸಿದೆ.

ಅವನು ಯುದ್ಧಮಾಡಿದ ಬಗೆಯನ್ನೂ ಸ್ವಾಮಿಭಕ್ತಿಯ ಹೆಮ್ಮೆಯಿಂದ ವರ್ಣಿಸುವನು. ಯೌಗಂಧರಾಯಣನು ಸೆರೆಸಿಕ್ಕಿದುದಕ್ಕಾಗಿ ವ್ಯಥೆಪಟ್ಟು ಯೌಗಂಧರಾಯಣನ ಆಗಿನ ದುರವಸ್ಥೆಯಲ್ಲಿಯೂ ತನ್ನ ಪ್ರಾಣದಮೇಲಿನ ಆಶೆಯನ್ನೂ ತೊರೆದು ಸ್ವಾಮಿಗಾದ ಗತಿಯೇ ತನಗೂ ಆಗಲೆಂದು ಬಗೆದು ಯೌಗಂಧರಾಯಣನನ್ನು ಹಿಂಬಾಲಿಸುವುದಾಗಿ ನಿರ್ಧರಿಸುವುದನ್ನು ಕಂಡು ನಮ್ಮ ಮನಸ್ಸು ಮುಗ್ಧವಾಗಿ "ಭಲೇ'' ಎನ್ನುವುದು. ಚಾರಪುರುಷರು ಕೂಡ ಎಂತಹವರಾಗಿದ್ದರೆಂಬುದನ್ನು ಕಲಾಪರಿಪೂರ್ಣತೆಯ ಕಮನೀಯತೆಯಿಂದ ಕವಿಯು ತೋರಿಸಿ, ಯೌಗಂಧರಾಯಣನ ವ್ಯವಸ್ಥಾಪಕ ಸಾಮರ್ಥ್ಯವೂ ವರ್ಚಸ್ಸೂ ಎಂತಹವೆಂಬುದು ಪರೋಕ್ಷವಾಗಿ ನಮ್ಮ ಮನಸ್ಸಿಗೆ ಹೊಳೆಯುವಂತೆ ಮಾಡಬೇಕೆಂಬ ಉದ್ದೇಶದಿಂದ ಕವಿಯು ಗಾತ್ರಸೇವಕನನ್ನು ನಮ್ಮೆದುರಿಗೆ ನಿಲ್ಲಿಸಿದ್ದಾನೆ. ಇಂತಹ ಚತುರರಾದ ಸ್ವಾಮಿಭಕ್ತರ ಸಹಾಯವಿದ್ದುದರಿಂದಲೇ ಮಹಾಸೇನನನ್ನು ಕೌಶಾಂಬಿಯಂತಹ ಚಿಕ್ಕ ನಾಡಿನವರು ಎದುರಿಸಲು ಸಾಧ್ಯವಾದುದು.

**ಕಥಾನಾಯಕನಾರೆಂಬ ವಿಚಾರ:**—ಭಾಸಮಹಾಕವಿಯ ರೂಪಕಗಳಿಗೆ ಭರತಮುನಿಯ ನಾಟ್ಯಶಾಸ್ತ್ರನಿಯಮಗಳು ಅನ್ವಯಿಸುವಂತಿಲ್ಲವೆಂಬುದನ್ನು ನೆನಪಿನಲ್ಲಿಟ್ಟು ಉತ್ತಮ ಕವಿಗಳೆಲ್ಲರೂ ಸ್ವತಂತ್ರರೆಂಬ ಭಾವನೆಯಿಂದ ಕೂಡಿ ಪರಿಗಣಿಸಿ ನೋಡಿದರೆ, ಈ ರೂಪಕದ ನಾಯಕನಾರೆಂದು ನಮಗೆ ವಿಸ್ಮಯವಾಗದಿರದು. ಈ ರೂಪಕಕ್ಕೆ "ಪ್ರತಿಜ್ಞಾಯೌಗಂಧರಾಯಣ''ವೆಂಬ ಹೆಸರನ್ನಿಟ್ಟು, ಯೌಗಂಧರಾಯಣ ಪಾತ್ರದಲ್ಲಿ ಕವಿಯು ಅನಿರ್ವಚನೀಯವಾದೊಂದು ಸೊಬಗನ್ನು ತುಂಬಿದ್ದಾನೆ. ಆದಾಗ್ಯೂ, ಉದಯನನೆಂಬ ಕೇಂದ್ರದ ಆಧಾರದಿಂದ ಈ ರೂಪಕದಲ್ಲಿ ಪರಿಧಿಯು ಏರ್ಪಟ್ಟಿದೆ: ಮಹಾಸೇನನು ಹೆಣಗುವುದು ಉದಯನನನ್ನು ಹಿಡಿಯುವುದಕ್ಕಾಗಿ; ಅವನು ಕಪಟೋಪಾಯದ ಬಲೆಯನ್ನು ಬೀಸುವುದು ಉದಯನನಿಗಾಗಿ; ಯೌಗಂಧರಾಯಣ, ವಸಂತಕ, ರುಮಣ್ವಂತ, ಮುಂತಾದವರೆಲ್ಲರೂ—ಪ್ರಾಕಾರ ತೋರಣಗಳ ಹೊರತಾಗಿ ಒಟ್ಟು ಕೌಶಾಂಬಿಯೇ—ಛದ್ಮವೇಷದಿಂದ ಉಜ್ಜಯಿನಿಯಲ್ಲಿರುವುದು ಉದಯನನನ್ನು ಬಿಡಿಸಿಕೊಂಡು ಬರುವುದಕ್ಕಾಗಿ; ಮಹಾಸೇನನು ಹಿಗ್ಗಿ ಹೆಚ್ಚಳಪಡುವುದು,

ಉದಯನನನ್ನು ಹಿಡಿದುದಕ್ಕಾಗಿ; ಹೂಡಿದ ತನ್ನ ಕಪಟೋಪಾಯವು ಸಿದ್ಧಿಸಿತೆಂದು; ಅಂಗಾರವತಿಯು ತನ್ನ ಪುತ್ರಿಗೆ ತಕ್ಕವರನೆಂದು ಸಂತೋಷಿಸಿ ಆಸೆಪಡುವುದು ಉದಯನನಿಗಾಗಿ; ರಾಜಕುಮಾರಿ ವಾಸವದತ್ತೆಯು ತನ್ನ ಹೃದಯವನ್ನು ಸೂರೆಗೊಡುವುದು ಉದಯನನಿಗೆ; ಯೌಗಂಧರಾಯಣನು ಸೆರೆಸಿಕ್ಕುವುದು ಉದಯನ ವಾಸವದತ್ತೆಯರನ್ನು ಕೌಶಾಂಬಿಗೆ ಕಳುಹಿಸುವ ಪ್ರಯತ್ನದಲ್ಲಿ: ಮಹಾಸೇನನು ವಿವಾಹ ಕ್ರಿಯೆಯನ್ನು ನೆರವೇರಿಸುವ ಚಿತ್ರದಲ್ಲಿರುವವನು ಉದಯನ. ಆದಕಾರಣ, ರೂಪಕದಲ್ಲಿ ಪ್ರಧಾನಮೂರ್ತಿ ಯಾರೆಂಬ ದೃಷ್ಟಿಯಿಂದ ನೋಡಿದರೆ ಉದಯನನೇ ಕಥಾನಾಯಕನೆನ್ನ ಬೇಕಾಗುತ್ತದೆ. ಆದರೆ ಉದಯನನು ರಂಗಸ್ಥಳಕ್ಕೇ ಬರುವುದಿಲ್ಲ. ಹೀಗಿರು ವಲ್ಲಿ ಅವನನ್ನು ಕಥಾನಾಯಕನೆನ್ನಲು ಮನಸ್ಸುಹಿಂದೆಗೆಯುತ್ತದೆ. ಇನ್ನು ಯೌಗಂಧರಾಯಣನ ವಿಚಾರ. ಯೌಗಂಧರಾಯಣನು ಕಥಾಸಂವಿಧಾನದ ತಿರುಳೆಂದರೂ ಸಲ್ಲುವುದು. ಶತ್ರುಗಳ ಮೋಸದಿಂದ ವಂಚಿತನಾಗಿ ಸೆರೆಸಿಕ್ಕಿದ ಉದಯನನನ್ನು ಬಿಡಿಸಿಕೊಂಡುಬರಲು ಪ್ರತಿಜ್ಞೆಮಾಡಿ, ಅವನು ತನ್ನ ಪ್ರತಿಜ್ಞೆಯನ್ನು ನೆರವೇರಿಸಿದುದರಿಂದಲೇ ರೂಪಕಕ್ಕೆ ಪ್ರತಿಜ್ಞಾ ಯೌಗಂಧ ರಾಯಣವೆಂಬ ಹೆಸರು. ಯೌಗಂಧರಾಯಣನು ತನ್ನ ಸ್ವಾಮಿಯು ಸೆರೆಯ ಲ್ಲಿರುವಾಗಲೂ ಪ್ರಭುಪರಾಯಣನಾಗಿ ವರ್ತಿಸಿ, ಅವನ ಬಿಡುಗಡೆಗಾಗಿ ತನ್ನ ಪ್ರಾಣವನ್ನೂ ಪಣವಾಗಿಟ್ಟುದರಿಂದಲೇ ರೂಪಕದ ಕಥೆ. ಅವನ ಪ್ರಯತ್ನವೇ ಅಭಿನಯವು ಮುಂದುವರಿಯುವುದರ ಮೂಲತ್ರಾಣ. ಅವನ ಅನರ್ಘ್ಯವಾದ ಸದ್ಗುಣಗಳೇ ರೂಪಕವು ಕಳಕಳಿಸುವಂತೆ ಮಾಡುವ ಸಾಧನ ವಿಶೇಷಗಳು. ಆದಕಾರಣ ಈ ಅಂಶಗಳನ್ನು ಪರಿಗಣಿಸಿದರೆ ರೂಪ ಕಕ್ಕೆ ಯೌಗಂಧರಾಯಣನೇ ಕಥಾನಾಯಕನೆಂದು ಒಪ್ಪಬೇಕಾಗುವುದು.

**ಕೆಲವು ಆಕ್ಷೇಪಗಳಿಗೆ ಸಮಾಧಾನ:**—ಭಾಮಹಾಚಾರ್ಯನು ಸೂಚಿಸಿರುವ ಕೆಲವು ಆಕ್ಷೇಪಗಳು ಈ ರೂಪಕವನ್ನು ಕುರಿತೇ ಹುಟ್ಟಿದಂತೆ ತೋರುವುದು. ಉದಯನನು ವಿಶೇಷ ಮೇಧಾವಿಯಾಗಿದ್ದೂ ಕೂಡ, ಕೃತಕ ಗಜವನ್ನು ನಿಜವಾದ ಆನೆಯೆಂದು ಭಾವಿಸಿದನೆಂಬುದು ಅಸಂಭವವೆಂದು ಭಾಮಹಾಚಾರ್ಯನು ತನ್ನ ಕಾವ್ಯಾಲಂಕಾರವೆಂಬ ಗ್ರಂಥದ ನಾಲ್ಕನೆಯ

ಪರಿಚ್ಛೇದದಲ್ಲಿ ಆಕ್ಷೇಪಿಸಿದ್ದಾನೆ.* ಈ ಆಕ್ಷೇಪಗಳು ಈಗ ನಮಗೆ ಉಪಲಬ್ಧವಾಗಿರುವ ಗ್ರಂಥಗಳಲ್ಲಿ ಪ್ರತಿಜ್ಞಾಯೌಗಂಧರಾಯಣ ಹೊರತು, ಇತರ ಗ್ರಂಥಗಳಾವುದಕ್ಕೂ ಅನ್ವಯಿಸುವಂತಿಲ್ಲ. (೨೮ನೆಯ ಪುಟವನ್ನು ನೋಡಿ.) ಭಾಮಹಾಚಾರ್ಯನ ವಾದದಲ್ಲಿಯೂ ಮತ್ತು ಚರ್ಮನಿರ್ಮಿತವಾದ ಕೃತಕಗಜದ ನಿಜತ್ವವನ್ನು ಮಕ್ಕಳುಕೂಡ ಅರಿಯುವಂತಿರುವಲ್ಲಿ ಉದಯನನು ಮೋಸಹೋದಬಗೆ ಹೇಗೆಂಬ ಆಕ್ಷೇಪದಲ್ಲಿಯೂ ಹೆಚ್ಚು ಹುರುಳಿಲ್ಲ. ಏಕೆಂದರೆ, ನಾಗವನದಲ್ಲಿ ಕೃತಕ ಗಜವಿದ್ದ ಸ್ಥಳವು ಸಾಲ ವೃಕ್ಷಗಳಿಂದ ಕೂಡಿ ಗಾಢಾಂಧಕಾರಮಯವಾಗಿದ್ದ ಅರಣ್ಯ. ಆನೆಯು ಪೂರ್ತಿಯಾಗಿ ಕಾಣಿಸುವುದಕ್ಕೆ ಕೂಡ ದಟ್ಟವಾದ ಆ ಕಾಡಿನಲ್ಲಿ ಅವಕಾಶವಿರಲಿಲ್ಲ. ಹಂಸಕನು ಹೇಳುವಂತೆ ಮುಂದಕ್ಕೆ ಹಾಯ್ದು ಬಂದಿದ್ದ ಎರಡು

---

* ಆ ಆಕ್ಷೇಪಗಳ ಶ್ಲೋಕಗಳಾವುವೆಂದರೆ:—

"ವಿಜಿಗೀಷು ಮುಪನ್ಯಸ್ಯ ವತ್ಸೇಶಂ ವೃದ್ಧದರ್ಶನಮ್ ।
ತಸ್ಯೈವ ಕೃತಿನಃ ಪಶ್ಚಾದಭ್ಯಧಾಚ್ಚಾರಶೂನ್ಯತಾಮ್ ॥೪೦॥
ಅಂತರ್ಯೋಧಶತಾಕೀರ್ಣಂ ಸಾಲಂಕಾಯನನೇತೃಕಮ್ ।
ತಥಾವಿಧಂ ಗಜಚ್ಛದ್ಮ ನಾಜ್ಞಾಸೀತ್ ಸ ಸ್ವಭೂಗತಮ್ ॥೪೧॥
ಯದಿ ಪ್ರೋಪೇಕ್ಷಿತಂ ತಸ್ಯ ಸಚಿವೈಃ ಸ್ವಾರ್ಥಸಿದ್ಧಯೇ ।
ಅಹೋ ನು ಮನ್ದಿಮಾ ತೇಷಾಂ ಭಕ್ತಿರ್ವಾ ನಾಸ್ತಿ ಭರ್ತರಿ ॥೪೨॥
ಶರಾ ದೃಢಧನುರ್ಮುಕ್ತಾ ಮನ್ಯುಮದ್ಭಿರರಾತಿಭಿಃ ।
ಮರ್ಮಾಣಿ ಪರಿಹೃತ್ಯಾಸ್ಯ ಪತಿಷ್ಯನ್ತೀತಿ ಕಾನುಮಾ ॥೪೩॥
ಹತೋಽನೇನ ಮಮ ಭ್ರಾತಾ ಮಮ ಪುತ್ರಃ ಪಿತಾ ಮಮ ।
ಮಾತುಲೋ ಭಾಗಿನೇಯಶ್ಚ ರುಷಾ ಸಂರಬ್ಧಚೇತಸಃ ॥೪೪॥
ಅಸ್ಯನ್ತೋ ವಿವಿಧಾನ್ಯಾಜಾವಾಯುಧಾನ್ಯಪರಾಧಿನಮ್ ।
ಏಕಾಕಿನಮರಣ್ಯಾನ್ಯಾಂ ನ ಹನ್ಯುರ್ಬಹವಃ ಕಥಮ್ ॥೪೫॥
ನಮೋಽಸ್ತು ತೇಭ್ಯೋ ವಿದ್ವದ್ಭ್ಯೋ ಯೇಽಭಿಪ್ರಾಯಂ ಕವೇರಿಮಮ್ ।
ಶಾಸ್ತ್ರಲೋಕಾವಪಾಸ್ಯೈವ ನಯನ್ತಿ ನಯವೇದಿನಃ ॥೪೬॥
ಸಚೇತಸೋ ವನೇಭಸ್ಯ ಚರ್ಮಣಾ ನಿರ್ಮಿತಸ್ಯ ಚ ।
ವಿಶೇಷಂ ವೇದ ಬಾಲೋಽಪಿ ಕಷ್ಟಂ ಕಿನ್ನು ಕಥನ್ನು ತತ್ ॥೪೭॥

ದಂತಗಳನ್ನೂ ನೋಡಿ, ಹಿಂದೆ ಆನೆಯಿದೆಯೆಂದು ನಿರ್ಧರಿಸಬೇಕಾಗಿದ್ದಿತು ಮಹಾಸೇನನ ಕಡೆಯ ಮಂತ್ರಿಗಳೂ ಚತುರರಾದ ಮೇಧಾವಿಗಳು. ಬಟ್ಟೆ ಬಯಲಿನಲ್ಲಿ ಬಿಸಿಲು ಬೀಳುವಕಡೆ ಅವರು ಕೃತಕಗಜವನ್ನು ನಿಲ್ಲಿಸಿರಲಿಲ್ಲ. ದಂತಗಳನ್ನು ನೋಡಿ ಆನೆಯು ಇರುವುದನ್ನು ಶಂಕಿಸಬೇಕಾಗಿದ್ದಷ್ಟು ದಟ್ಟವಾದ ಕಾಡಿನಲ್ಲಿದ್ದ ಕೃತಕಗಜವನ್ನು ನೋಡಿ ಉದಯನನು ಮೋಸ ಹೋದುದು ಅಸಂಭವವೇನೂ ಅಲ್ಲ. ಅದು ಕೃತಕ ಗಜವಾದರೂ ನಿಜತ್ವದ ಭ್ರಾಂತಿಯುಂಟಾಗುವಂತೆ ಅದು ರಚಿತವಾಗಿಯೂ ಇರಬಹುದೆಂಬ ಅಂಶವನ್ನು ಭಾಮಹಾಚಾರ್ಯನೇಕೆ ಗಮನಿಸಲಿಲ್ಲವೋ ತಿಳಿಯದು. ಇದರ ಮೇಲೆ ಪ್ರಸಕ್ತ ಸನ್ನಿವೇಶದಲ್ಲಿ ಅಲ್ಪಸ್ವಲ್ಪ ಅಸಂಗತಗಳು ಕಂಡುಬಂದರೂ ಅವುಗಳನ್ನೇ ಪ್ರಧಾನವಾಗೆಣಿಸ ಬೇಕಾದುದೂ ಅಷ್ಟೇನೂ ಅವಶ್ಯಕವಲ್ಲ. ಇಷ್ಟಕ್ಕೂ ಮಧ್ಯಾಹ್ನದ ವೇಳೆಯಲ್ಲಿಯೂ ಬೆಳಕು ಬೀಳದೆ ಮಸಕು ಮಸಕಾಗಿ ವಸ್ತುಗಳು ಕಾಣಿಸುವಷ್ಟು ದಟ್ಟವಾಗಿರುವ ಅರಣ್ಯಗಳಿರುವುದೂ ಪ್ರಕೃತಿವಿರುದ್ಧವಾದುದಲ್ಲ. ವೀಣೆಯನ್ನು ನುಡಿಸಿ ಮೋಸದಿಂದ ಆನೆಯನ್ನು ಹಿಡಿಯಲು ಬಂದ ಉದಯನನು ತಾನೇ ಶತ್ರುಗಳ ಮೋಸದ ಬಲೆಯಲ್ಲಿಬಿದ್ದು ಯುದ್ಧದಲ್ಲಿ ಘಾಸಿಹೊಂದಿ ಸೆರೆಸಿಕ್ಕಿದನೆಂಬುದು ಕಲಾ ಸೌಂದರ್ಯದ ದೃಷ್ಟಿಯಿಂದ ಮನೋಹರವಾದ ಸನ್ನಿವೇಶವೇ ಸರಿ. ಶಸ್ತ್ರಪಾಣಿಗಳಾದ ನೂರುಮಂದಿ ಯೋಧರೊಡನೆ ಒಬ್ಬ ಉದಯನನು ಹೋರಾಡಿ ಬದುಕಿದ ಬಗೆ ಹೇಗೆಂದು ಭಾಮಹಾಚಾರ್ಯನು ಆಕ್ಷೇಪಿಸಿರುವುದೂ ಅಸಂಗತ. ಉದಯನನು ಅತುಳ ಪರಾಕ್ರಮದಿಂದ ಕಾದಿದನೆಂಬುದೇನೊ ನಿಜ. ಆದರೂ ಶಾಲಂಕಾಯನನು ತನ್ನ ಕಡೆಯವರಿಗೆ ಉದಯನನ್ನು ಹಿಂಸಿಸಕೂಡದೆಂದು ಅಪ್ಪಣೆಮಾಡದೆ ಹೋಗಿದ್ದರೆ ಉದಯನನು ಜೀವಿಸಿರುವುದಕ್ಕೆ ಅವಕಾಶವೇ ಇರುತ್ತಿರಲಿಲ್ಲ. ಆದಕಾರಣ, ಒಟ್ಟಿನಲ್ಲಿ ತೂಗಿನೋಡಿದರೆ ಭಾಮಹಾಚಾರ್ಯನ ಆಕ್ಷೇಪಗಳಿಗೆ ತಕ್ಕಷ್ಟು ಕಾರಣವಿಲ್ಲವೆಂದು ಹೇಳಬೇಕಾಗುತ್ತದೆ.

ಪ್ರತಿಜ್ಞಾ ಯೌಗಂಧರಾಯಣದ ವಿಚಾರದಲ್ಲಿ ಈಗಿನ ವಿದ್ವಾಂಸರಲ್ಲೊಬ್ಬರಾದ ಶ್ರೀಮಾನ್ ಎ. ಸಿ. ವುಲ್ನರ್ ಅವರು ಮಾಡಿರತಕ್ಕ ಕೆಲವು ಆಕ್ಷೇಪಗಳೂ ಇವೆ. ಉದಯನನ ಮತ್ತು ವಾಸವದತ್ತೆಯ ಪ್ರಣಯವು

ಮೂಡಿ ವೃದ್ಧಿಯಾದ ವಿಚಾರದಲ್ಲಿ ಒಂದೊಂದು ಗ್ರಂಥದಲ್ಲಿ ಒಂದೊಂದು ಬಗೆಯ ಸಂಗತಿಗಳಿರುವ ಕಾರಣ, ಎರಡನೆಯ ಅಂಕಕ್ಕೂ ಮೂರನೆಯ ಅಂಕಕ್ಕೂ ಮಧ್ಯದಲ್ಲಿ ಏನು ನಡೆಯಿತೆಂಬುದೂ, ಮೂರನೆಯ ಅಂಕಕ್ಕೂ ನಾಲ್ಕನೆಯ ಅಂಕಕ್ಕೂ ಮಧ್ಯದಲ್ಲಿ ಏನು ನಡೆಯಿತೆಂಬುದೂ, ವಾಸವದತ್ತೆಗೆ ಉದಯನನು ವೀಣೆಯನ್ನು ನುಡಿಸುವುದನ್ನಾವಾಗ ಬೋಧಿಸಿರಬೇಕೆಂಬುದೂ ಸ್ಪಷ್ಟವಾಗಿಲ್ಲ; ಮೂರನೆಯ ಅಂಕವಾದಮೇಲೆ ಗಾತ್ರಸೇವಕನು ಪ್ರವೇಶಿಸುವ ಭಾಗವನ್ನು ಬಿಟ್ಟರೆ ಉಳಿದ ಭಾಗವು ಅಭಿನಯದ ದೃಷ್ಟಿಯಿಂದ ನೀರಸ. ಎರಡನೆಯ ಅಂಕವನ್ನು ಉಳಿದ ಅಂಕಗಳನ್ನು ಬರೆದವನಲ್ಲದೆ ಮತ್ತಾರೋ ಬರೆದಿರುವಂತೆ ತೋರುತ್ತದೆ; ಎಂಬಿವು ಅವರ ಆಕ್ಷೇಪಗಳು. ಡಾಕ್ಟರ್ ಲಕ್ಷ್ಮಣ ಸರೂಪ್ ಅವರು ಇವುಗಳಲ್ಲಿ ಕೆಲವಕ್ಕೆ ಸ್ವಲ್ಪಮಟ್ಟಿಗೆ ಉತ್ತರ ಹೇಳಿದ್ದಾರೆ. ಚೆನ್ನಾಗಿ ವಿಚಾರಮಾಡಿ ನೋಡಿದರೆ, ಶ್ರೀಮಾನ್ ಎ. ಸಿ. ವುಲ್ನರ್ ಅವರು ಸೂಚಿಸಿರತಕ್ಕ ಶಂಕೆಗಳಿಗೆ ಅವಕಾಶವೇ ಇಲ್ಲವೆಂದು ತೋರುವುದು. ಎರಡನೆಯ ಅಂಕಕ್ಕೂ ಮೂರನೆಯ ಅಂಕಕ್ಕೂ ಮಧ್ಯದಲ್ಲಿ ನಡೆದ ಸಂಗತಿಗಳನ್ನು ನಾವು ಸುಲಭವಾಗಿ ಗ್ರಹಿಸಲು ಕವಿ ಸೂಚನೆಯನ್ನು ಕೊಡದೆ ಹೋಗಿಲ್ಲ. ಉದಯನನನ್ನು ಕಾರಾಗೃಹದಿಂದ ಬಿಡಿಸಿಕೊಂಡು ಹೋಗುವುದಕ್ಕಾಗಿ ಯೌಗಂಧರಾಯಣನೇ ಮುಂತಾದವರು ವೇಷಧಾರಿಗಳಾಗಿ ಬಂದುದು, ಉದಯನನು ವಾಸವದತ್ತೆಯನ್ನು ಕಂಡುದು, ಅವಳಲ್ಲಿ ಅವನು ಅನುರಕ್ತನಾದುದು, ಇವುಗಳೆಲ್ಲ ಆಗ್ಗೆ ನಡೆದಿವೆ. ಮೂರನೆಯ ಅಂಕವನ್ನು ಓದಿದರೆ ಇದನ್ನು ಸುಲಭವಾಗಿ ಊಹಿಸಲು ಅವಕಾಶವಿದೆ. ವಾಸವದತ್ತೆಗೆ ವೀಣೆಯನ್ನು ಕಲಿಯುವ ಆಸೆಯು ಹುಟ್ಟಿ ಅವಳು ಉಪಾಧ್ಯಾಯನಲ್ಲಿಗೆ ಹೋಗಿದ್ದುದೂ, ಘೋಷವತಿಯೆಂಬ (ಉದಯನನ) ವೀಣೆಯನ್ನು ಅವಳಿಗೆ ಕಳುಹಿಸುವಂತೆ ಮಹಾಸೇನನು ತೀರ್ಮಾನಿಸಿದುದೂ, ಎರಡನೆಯ ಅಂಕದಲ್ಲಿ ಸೂಚಿತವಾಗಿವೆ. ವೀಣೆಯನ್ನು ನುಡಿಸುವುದನ್ನು ಅವಳಿಗೆ ಉದಯನನು ಕಲಿಸುತ್ತಿದ್ದುದರ ಪ್ರಸ್ತಾವವೇ ಮೂರನೆಯ ಅಂಕದಲ್ಲಿಲ್ಲ. ಆದಕಾರಣ ಉದಯನನು ವಾಸವದತ್ತೆಗೆ ವೀಣಾವಾದನವನ್ನು ಕಲಿಸುವ ಕೆಲಸವು ಆ ವೇಳೆಗೆ ನಡೆಯುತ್ತಿರಲಿಲ್ಲವೆಂದು ಹೇಳಬಹುದಾಗಿದೆ. ಅದು ನಡೆಯುತ್ತಿದ್ದರೆ ಯೌಗಂಧರಾಯಣನ

ಕಡೆಯವರೆಂದಿಗೂ ಅದನ್ನು ತಿಳಿದುಕೊಳ್ಳದಿರುತ್ತಿರಲಿಲ್ಲ. ಉದಯನನು ವಾಸವದತ್ತೆಗೆ ವೀಣಾವಾದನವನ್ನು ಕಲಿಸಿದುದು, ಅವರೀರ್ವರಿಗೂ ಪರಸ್ಪರವಾಗಿ ಪ್ರಣಯವು ವೃದ್ಧಿಯಾದುದು, ಮದವೇರಿದ (ಮಹಾಸೇನನ) ಆನೆಯನ್ನು ಉದಯನನು (ಘೋಷವತಿಯೆಂಬ ತನ್ನ ವೀಣೆಯನ್ನು ಬಾರಿಸಿ) ಶಾಂತಗೊಳಿಸಿದುದು, ಮುಂತಾದವೆಲ್ಲ ಮೂರನೆಯ ಅಂಕಕ್ಕೂ ನಾಲ್ಕನೆಯ ಅಂಕಕ್ಕೂ ಮಧ್ಯದಲ್ಲಿ ನಡೆದಿರಬೇಕೆಂಬುದು ಸ್ಪಷ್ಟವಾಗುತ್ತದೆ. ಇನ್ನುಳಿದಿರುವುವು, ಎರಡು ಆಕ್ಷೇಪಗಳು. ಮೊದಲನೆಯದು:—ಎರಡನೆಯ ಅಂಕವನ್ನು ಮತ್ತಾರೋ ಬರೆದಿರಬೇಕೆಂಬುದು; ಎರಡನೆಯದು:—ನಾಲ್ಕನೆಯ ಅಂಕವು ನೀರಸವಾಗಿದೆಯೆಂಬುದು. ಡಾಕ್ಟರ್ ಲಕ್ಷ್ಮಣ ಸರೂಪ್ ಅವರು ಇವೆರಡಕ್ಕೂ ಏಕೆ ಉತ್ತರ ಹೇಳಲಿಲ್ಲವೋ ತಿಳಿಯದು. ಎರಡನೆಯ ಅಂಕವನ್ನು ಮತ್ತಾರೋ ಬರೆದಿರಬೇಕೆಂಬ ತಮ್ಮ ವಾದವನ್ನು ಸಮರ್ಥಿಸಲು ಶ್ರೀಮಾನ್ ಎ. ಸಿ. ವ್ಯುಲ್ನರ್ ಅವರು ಕಾರಣಗಳಾವುವನ್ನೂ ತಿಳಿಸಿಲ್ಲದಿರುವುದು ವಿಸ್ಮಯ ಜನಕವಾಗಿದೆ. ಅವರು ಶೈಲಿಯನ್ನು ನೋಡಿ ಹಾಗೆ ಶಂಕಿಸಿದ್ದರೆ, ತಿರುವನಂತಪುರದ ಡಾಕ್ಟರ್ ಟಿ. ಗಣಪತಿಶಾಸ್ತ್ರಿಗಳವರಿಗೆ ಸಿಕ್ಕಿದ ಈ ರೂಪಕದ ಓಲೆಗರಿಯ ಪ್ರತಿಯನ್ನೂ ಅದಕ್ಕೆ ಮೂಲವಾದ ಪ್ರತಿಗಳನ್ನೂ ಬೇರೆಬೇರೆ ತಲೆಮಾರುಗಳಲ್ಲಿ ಬರೆದವರ ಪ್ರಮಾದದಿಂದಲೋ, ಅಥವಾ ಭಾವಕ್ಕೆ ತಕ್ಕ ಶೈಲಿಯಿರಬೇಕಾದ ನಿಯಮದ ದೆಸೆಯಿಂದಲೋ, ಅಲ್ಪಸ್ವಲ್ಪ ಭೇದವು ಕಂಡುಬಂದಿರಬಹುದೆಂದು ಹೇಳಬೇಕಾಗುತ್ತದೆ. ಇನ್ನು ವಿಷಯ ನಿರೂಪಣೆಯ ಸ್ವಭಾವವು ಅವರ ಶಂಕೆಗೆ ಕಾರಣವಾಗಿದ್ದರೆ, ಅದಕ್ಕೂ ಸುಲಭವಾಗಿ ಸಮಾಧಾನ ಹೇಳಬಹುದಾಗಿದೆ. ಎರಡನೆಯ ಅಂಕವನ್ನು ಮತ್ತಾರೋ ಬರೆದಿದ್ದರೂ ಅವನುಕೂಡ ರೂಪಕ ಲೇಖನದಲ್ಲಿ ಬಹು ಚತುರನಾಗಿರಬೇಕೆಂಬುದನ್ನು ಅವರೂ ಒಪ್ಪುತ್ತಾರೆ. ಅದೂ ಹಾಗಿರಲಿ. ಅವಿಮಾರಕವನ್ನು ಭಾಸಮಹಾಕವಿಯೇ ಬರೆದಿರಬೇಕೆಂಬ ವಿಚಾರದಲ್ಲಿ ಅವರಿಗೆ ಯಾವಸಂಶಯವೂ ಇಲ್ಲ. ವರಾನ್ವೇಷಣ ಸಂಬಂಧವಾಗಿ ಅವಿಮಾರಕದಲ್ಲಿ ಹೇಳಿರುವ ಕೆಲವು ಅಂಶಗಳೇ ಮತ್ತಷ್ಟು ಸೊಗಸಾಗಿ ಪ್ರತಿಜ್ಞಾ ಯೌಗಂಧರಾಯಣದ ಎರಡನೆಯ ಅಂಕದಲ್ಲಿ ಬಂದಿವೆ. ಇದನ್ನೂ ನಾವು ಪರಿಗಣಿಸಬೇಕು. ಅಂತು, ಆ ಅಂಕವನ್ನು ಮತ್ತಾವನೋ

ಬರೆದನೆಂದು ಹೇಳಲು ತಕ್ಕಷ್ಟು ಕಾರಣವಿದ್ದಂತೆ ತೋರುವುದಿಲ್ಲ ಮೂರನೆಯ ಅಂಕವನ್ನಂತು, ಅವರು ಬಹಳವಾಗಿ ಮೆಚ್ಚಿ ಮನವಾರೆಕೊಂಡಾಡಿದ್ದಾರೆ. ನಾಲ್ಕನೆಯ ಅಂಕದಲ್ಲಿ ಯೌಗಂಧರಾಯಣನ ಸ್ವಾಮಿಭಕ್ತಿಯು ಎಷ್ಟು ಶ್ರೇಷ್ಠವಾದುದೆಂಬ ವಿಚಾರವು ರಮಣೀಯತೆಯಿಂದ ಚಿತ್ರಿತವಾಗಿದೆ. ಮಹಾಸೇನನ ಮಂತ್ರಿಯೊಡನೆ ಅವನು ನಿರ್ಭಯವಾಗಿ ಮಾತನಾಡುವ ಸನ್ನಿವೇಶವೂ, ಉಳಿದ ಘಟನೆಗಳೂ ಸೊಗಸಾಗಿವೆ. ಹೀಗಿದ್ದೂ ಶ್ರೀಮಾನ್ ಎ. ಸಿ. ವುಲ್ನರ್ ಅವರಿಗೇಕೆ ಅದು ರುಚಿಸಲಿಲ್ಲವೋ ತಿಳಿಯದು. ಮೂರನೆಯ ಅಂಕದ ಮಟ್ಟಕ್ಕೆ ನಾಲ್ಕನೆಯ ಅಂಕವು ಏರಿಲ್ಲವೆಂಬುದು ಬಹುಶಃ ಅವರ ಆ ಅಭಿಪ್ರಾಯಕ್ಕೆ ಕಾರಣವಾಗಿರಬೇಕು. ಆದರೆ ಮೂರನೆಯ ಅಂಕದ ಸನ್ನಿವೇಶವೇ ಬೇರೆ ನಾಲ್ಕನೆಯ ಅಂಕದ ಸನ್ನಿವೇಶವೇ ಬೇರೆ. ಇಷ್ಟಕ್ಕೂ "ಲೋಕೋಭಿನ್ನರುಚಿಃ" ಎಂಬದನ್ನೂ ನಾವು ಗಮನಿಸಲೇ ಬೇಕು.

———o———

# ಸ್ವಪ್ನವಾಸವದತ್ತ

## ಅವತರಣಿಕೆ

ಪ್ರತಿಜ್ಞಾ ಯೌಗಂಧರಾಯಣದಲ್ಲಿ ಚಿತ್ರಿತವಾಗಿರುವುದರ ಮುಂದಿನ ಕಥಾಭಾಗವೇ ಸ್ವಪ್ನವಾಸವದತ್ತದ ಕಥಾವಸ್ತು. ಕವಿಯು ತನ್ನ ಕಲಾ ನೈಪುಣ್ಯವನ್ನು ಈ ರೂಪಕದಲ್ಲಿ ಬಹುಚೆನ್ನಾಗಿ ಪ್ರದರ್ಶಿಸಿದ್ದಾನೆ. ಎಲ್ಲಕ್ಕೂ ಮಿಗಿಲಾಗಿ ನಮ್ಮ ಮನಸ್ಸನ್ನು ಮುಗ್ಧಗೊಳಿಸುವ ವೈಶಿಷ್ಟ್ಯಗಳೆರಡಿವೆ. ಪ್ರಭು ಪರಾಯಣನಾದರೂ, ಸ್ವಾಮಿಭಕ್ತಿಗಿಂತಲೂ ಹೆಚ್ಚಾಗಿ ದೇಶವಾತ್ಸಲ್ಯದಿಂದ ಉದ್ದೀಪಿತನಾಗಿರುವ ಯೌಗಂಧರಾಯಣನ ಚಿತ್ರವೊಂದು; ಚತುರೆಯೂ ಸುಸಂಸ್ಕೃತಳೂ ಪತಿಪರಾಯಣೆಯೂ ಆದ ಸಾಧ್ವಿಯಾಗಿದ್ದರೂ, ದಾಂಪತ್ಯ ಧರ್ಮಕ್ಕಿಂತ ರಾಜ್ಯಸಂಬಂಧವಾದ ಕರ್ತವ್ಯವೇ ಹೆಚ್ಚೆಂದು ಭಾವಿಸಿದವ ಳಾಗಿ, ಪತಿಯು ಕಳೆದುಕೊಂಡಿದ್ದ ರಾಜ್ಯವು ಅವನಿಗೆ ದೊರೆಯುವು ದಕ್ಕಾಗಿ ಸ್ವಂತ ಸುಖವನ್ನೂ ತೊರೆದು ಅಜ್ಞಾತವಾಸ ಮಾಡಲು ಸಿದ್ಧಳಾಗಿ ತಾನು ಅಗ್ನಿದಗ್ಧಳಾದಂತೆ ಸುಳ್ಳು ಸಮಾಚಾರವನ್ನು ಹರಡಬಹುದೆಂದು ಸಮ್ಮತಿಸಿದ ರಾಜ್ಯಲಕ್ಷ್ಮಿಯಂತಿರುವ ಯುವತಿ ವಾಸವದತ್ತೆಯ ಚಿತ್ರ ವೊಂದು; ಇವೆರಡೂ ನಮ್ಮನ್ನು ಮುಗ್ಧಗೊಳಿಸುತ್ತವೆ. ರೂಪಕವು ಆರಂಭ ವಾಗುವ ವೇಳೆಗೆ ಉದಯನನು ಆರುಣಿಯೆಂಬವನಿಂದ ಪರಾಜಿತನಾಗಿ ತನ್ನ ವೈಭವವನ್ನು ಕಳೆದುಕೊಂಡು ಲಾವಾಣಕವೆಂಬ ಗ್ರಾಮದಲ್ಲಿರು ತ್ತಾನೆ. ಮಹಾಸೇನನಂತಹವನಿಗೆ ಕೂಡ ಸಗ್ಗದಿದ್ದ ಶೂರನು, ಆರುಣಿಯೆಂಬ ಸಾಮಾನ್ಯನಿಗೆ ಸೋತು ರಾಜ್ಯವನ್ನು ಕಳೆದುಕೊಂಡಿರುತ್ತಾನೆ. ವಾಸವ ದತ್ತೆಯೊಡನೆ ಉಜ್ಜಯಿನಿಯಿಂದ ಬಂದಮೇಲೆ ಅವನು ಭೋಗಪಾರವಶ್ಯ ದಿಂದ ಮೈಮರೆತು ರಾಜಕಾರ್ಯಗಳಲ್ಲಿ ಉದಾಸೀನತೆಯನ್ನು ತೋರಿದುದೇ ಇದಕ್ಕೆ ಕಾರಣ. ಪ್ರಭುವನ್ನು ಆಗಿನ ವಿಪನ್ನಾವಸ್ಥೆಯಲ್ಲಿಯೂ ಓಲೈಸು ತ್ತಿದ್ದ ಯೌಗಂಧರಾಯಣನು ರಾಜ್ಯಲಾಭಕ್ಕಾಗಿ ರುಮಣ್ವಂತ ಮುಂತಾದ ಸಚಿವರೊಡನೆ ಮಂತ್ರಾಲೋಚನೆಮಾಡಿ ಉಪಾಯವೊಂದನ್ನು ಹೂಡು

ತ್ತಾನೆ. ವಾಸವದತ್ತೆಯು ಅಗ್ನಿದಗ್ಧಳಾದಂತೆ ವರ್ತಮಾನವನ್ನು ಹುಟ್ಟಿಸಿ, ಅವಳನ್ನು ಅಜ್ಞಾತವಾಸದಲ್ಲಿಟ್ಟು ಆ ಬಳಿಕ ಮಗಧರಾಜಪುತ್ರಿಯಾದ ಪದ್ಮಾವತಿಯೊಡನೆ ಉದಯನನಿಗೆ ವಿವಾಹವಾಗುವ ಸನ್ನಿವೇಶವನ್ನು ಕಲ್ಪಿಸಿದರೆ, ಪದ್ಮಾವತಿಯ ಅಣ್ಣನಾದ ದರ್ಶಕ ಮಹಾರಾಜನ ಸಹಾಯದಿಂದ ಸ್ವಾಮಿಗೆ ರಾಜ್ಯಲಾಭವಾಗುವುದೆಂಬುದೇ ಅವನ ನಿರ್ಧಾರ. ಉದಯನ ಪದ್ಮಾವತಿಯರಿಗೆ ವಿವಾಹವು ನಡೆಯುವುದೆಂದು ಸಿದ್ಧಪುರುಷರು ಹೇಳಿದ್ದುದರಲ್ಲಿ ಅವನಿಗೆ ನಂಬಿಕೆಯೂ ಇರುತ್ತದೆ. ಪತಿಗೆ ರಾಜ್ಯಲಾಭವಾಗುವುದು ತನ್ನ ಅಜ್ಞಾತವಾಸದಿಂದ ಸಾಧ್ಯವಾಗುವುದೆಂದು ಕೇಳಿ, ವಾಸವದತ್ತೆಯು ಅದಕ್ಕೆ ಸಮ್ಮತಿಸಿ ಅನನ್ಯ ಸಾಧಾರಣವಾದ ಸ್ವಾರ್ಥತ್ಯಾಗಕ್ಕೆ ಸಿದ್ಧವಾಗುತ್ತಾಳೆ. ಆದರೆ ಪದ್ಮಾವತಿಯೊಡನೆ ಉದಯನನಿಗೆ ವಿವಾಹವು ನಡೆಯುವುದೂ ರಾಜ್ಯಲಾಭಕ್ಕೆ ಅಗತ್ಯವೆಂಬ ಅಂಶವನ್ನು ಅವಳಿಗೆ ಯೌಗಂಧರಾಯಣನು ತಿಳಿಸಿರುವುದಿಲ್ಲ. ಒಂದು ದಿನ ಉದಯನನು ಬೇಟೆಗೆ ಹೋಗಿದ್ದಾಗ ಯೌಗಂಧರಾಯಣನು ವಾಸವದತ್ತೆಯೊಡನೆ ಲಾವಾಣಕದಿಂದ ಹೊರಟುಹೋಗುತ್ತಾನೆ. ರುಮಣ್ವಂತ ಮುಂತಾದವರು ಅವನು ಹಿಂತಿರುಗಿದ ಮೇಲೆ ಯೌಗಂಧರಾಯಣನೂ ವಾಸವದತ್ತೆಯೂ ಅಗ್ನಿದಗ್ಧರಾದರೆಂದು ತಿಳಿಸುತ್ತಾರೆ. ಅವನು ದುಃಖಪರವಶನಾಗಿ ಗೋಳಾಡುತ್ತಾನೆ. ಅತ್ತ ಯೌಗಂಧರಾಯಣನು ಬ್ರಾಹ್ಮಣವೇಷವನ್ನು ಧರಿಸಿ ವಾಸವದತ್ತೆಗೆ ಆವಂತಿಕೆಯೆಂಬ ಕೃತಕನಾಮಧೇಯವನ್ನಿಟ್ಟು ಮಗಧರಾಜ್ಯದ ಆಶ್ರಮವೊಂದರ ಬಳಿಗೆ ಹೋಗುತ್ತಾನೆ. ಪದ್ಮಾವತಿಯು ಅಂದು ಅಲ್ಲಿಗೆ ಬರುವವಳಾಗಿದ್ದ ಕಾರಣ, ಭಟರು ಜನರನ್ನು ದೂರವಾಗಿ ಅಟ್ಟುತ್ತಿರುವರೆಂಬ ಅಂಶವನ್ನು ಸೂತ್ರಧಾರನು ಸೂಚಿಸಿ ಹೊರಟು ಹೋಗುತ್ತಾನೆ. ಆ ಬಳಿಕ ರೂಪಕವು ಆರಂಭವಾಗುತ್ತದೆ.

## ೧. ಕಥಾಸಾರಾಂಶ

ಮೊದಲನೆಯ ಅಂಕದಲ್ಲಿ ಯೌಗಂಧರಾಯಣನು ಆವಂತಿಕೆಯನ್ನು (ವಾಸವದತ್ತೆಯನ್ನು) ರಾಜಕುಮಾರಿ ಪದ್ಮಾವತಿಯಲ್ಲಿ ನ್ಯಾಸವಾಗಿಡುವನು. ತಾನು ಬ್ರಾಹ್ಮಣನೆಂದೂ, ಆವಂತಿಕೆಯು ತನ್ನ ತಂಗಿಯೆಂದೂ ಅವನು ತಿಳಿಸುವನು. ಅಣ್ಣನು ಮತ್ತೆ ಬರುವವರೆಗೂ ತಂಗಿಯನ್ನು ತಾನು ರಕ್ಷಿಸು

ತ್ತಿರುವುದಾಗಿ ಪದ್ಮಾವತಿಯು ಸಮ್ಮತಿಸುವಳು. ಎರಡನೆಯ ಅಂಕವು ಆರಂಭವಾಗುವ ವೇಳೆಗೆ ವಾಸವದತ್ತೆಗೂ ಪದ್ಮಾವತಿಗೂ ಸ್ನೇಹವೂ ಪ್ರೀತಿಯೂ ಉಂಟಾಗಿರುವುವು. ದರ್ಶಕನನ್ನು ನೋಡುವುದಕ್ಕಾಗಿ ರಾಜಧಾನಿಗೆ ಬಂದ ಉದಯನನಿಗೆ ಪದ್ಮಾವತಿಯನ್ನು ಕೊಟ್ಟು ವಿವಾಹವಾಗುವುದಾಗಿ ಗೊತ್ತಾಗುವುದು. ಆ ವಿವಾಹ ಸಂರಂಭದಿಂದ ವಾಸವದತ್ತಾ ದೇವಿಯ ಮನಸ್ಸಿನ ಮೇಲಣ ಪರಿಣಾಮವೂ, ಸಂಬಂಧಮಾಲೆಯನ್ನು ಕೂಡ ಅವಳೇ ಕಟ್ಟಬೇಕಾಗುವ ಸನ್ನಿವೇಶವೂ ಮೂರನೆಯ ಅಂಕದಲ್ಲಿ ಚಿತ್ರಿತವಾಗಿವೆ. ನಾಲ್ಕನೆಯ ಅಂಕದಲ್ಲಿ, ಉದಯನನೂ ವಿದೂಷಕನೂ ಉದ್ಯಾನಕ್ಕೆ ಬಂದು ಮಾಧವೀ ಮಂಟಪದ ಹೊರಭಾಗದಲ್ಲಿ ಕುಳಿತುಕೊಳ್ಳುವರು. ಪದ್ಮಾವತಿಯು ಆವಂತಿಕೆಯೊಡನೆಯೂ ತನ್ನ ಚೇಟಿಯೊಡನೆಯೂ ಮಾಧವೀ ಮಂಟಪದೊಳಗೇ ಇರುವಳು. ಅದನ್ನರಿಯದೆ ವಿದೂಷಕನು ರಾಜನನ್ನು ಕುರಿತು ಅವನಿಗೆ ವಾಸವದತ್ತೆಯು ಪ್ರಿಯಳೋ ಅಥವಾ ಪದ್ಮಾವತಿಯು ಪ್ರಿಯಳೋ—ಎಂದು ಪ್ರಶ್ನೆಮಾಡುವನು. ವಾಸವದತ್ತೆಯ ಗುಣಗಳನ್ನು ಸ್ಮರಿಸಿ ಉವಯನನು ರೋದಿಸುವನು. ಮುಖೋದಕವನ್ನು ತರಲು ವಿದೂಷಕನು ಹೋಗುವನು. ಉದಯನನು ರೋದಿಸುತ್ತಿರುವಲ್ಲಿ ಪದ್ಮಾವತಿಯು ಆವಂತಿಕೆಯನ್ನು ಅವನಿಗೆ ಗೋಚರವಾಗದಂತೆ ಕಳುಹಿಸಿ, ಪತಿಯನ್ನು ಸಂತೈಸಲು ತಾನು ಅವನ ಬಳಿಗೆ ಬರುವಳು. ಉದ್ಯಾನದಲ್ಲಿ (ಬಿಸಿಲಿನಲ್ಲಿ) ಓಡಾಡಿದುದರಿಂದ ಪದ್ಮಾವತಿಗೆ ತಲೆನೋವು ಬಂದಿರುವ ವಾರ್ತೆಯಿಂದ ಐದನೆಯ ಅಂಕವು ಪ್ರಾರಂಭವಾಗುವುದು. ಉದಯನನು ಪದ್ಮಾವತಿಯನ್ನು ನೋಡಲು ವಿದೂಷಕನೊಡನೆ ಸಮುದ್ರ ಗೃಹಕ್ಕೆ ಹೋಗುವನು. ಪದ್ಮಾವತಿಯು ಅಲ್ಲಿರುವುದಿಲ್ಲ. ವಿದೂಷಕನು ಕಥೆಯನ್ನು ಹೇಳುತ್ತಿರುವಲ್ಲಿ, ಉದಯನನು ನಿದ್ರಿಸುವುದರಲ್ಲಿರುವನು. ಆಗ ಚಳಿಯಾಗಿದ್ದುದರಿಂದ ಹೊದಿಕೆಯನ್ನು ತರುವುದಾಗಿ ಹೇಳಿ ವಿದೂಷಕನು ಹೋಗುವನು. ಆ ಬಳಿಕ ವಾಸವದತ್ತೆಯು ಅಲ್ಲಿಗೆ ಬರುವಳು. ಉದಯನನು ನಿದ್ರೆಯಲ್ಲಿ ವಾಸವದತ್ತೆಯನ್ನು ನೆನೆದು ಸ್ವಪ್ನವನ್ನು ಕಾಣುತ್ತ ಕನವರಿಸುವನು. ವಾಸವದತ್ತೆಯು ತಾನು ಅಲ್ಲಿದ್ದರೆ ಪ್ರಮಾದವಾದೀತೆಂದು ಯೋಚಿಸಿ ನೆಲದಮೇಲೆ ಬಿದ್ದಿದ್ದ ಅವನ ತೋಳನ್ನು ಹಾಸಿಗೆಯ ಮೇಲಿಟ್ಟು ಹೊರಟು

ಹೋಗುವಳು. ಉದಯನನಿಗೆ ತಟಕ್ಕನೆ ಎಚ್ಚರವಾಗುವುದು. ಅವನು ಅವಳ ಸ್ಪರ್ಶದಿಂದ ರೋಮಾಂಚ ಹೊಂದಿ, (ಆ ವೇಳೆಗೆ ಅಲ್ಲಿಗೆ ಬಂದ) ವಿದೂಷಕನೊಡನೆ ವಾಸವದತ್ತೆಯು ಬದುಕಿರುವಳೆನ್ನುವನು. ವಿದೂಷಕನು ವಾಸವದತ್ತಾದೇವಿಯು ಮೃತಳಾಗಿದ್ದಳೆಂದೂ ಉದಯನನು ಸ್ವಪ್ನವನ್ನು ಕಂಡಿರಬೇಕೆಂದೂ ಸಮಾಧಾನ ಹೇಳುವನು. ಆರನೆಯ ಅಂಕದ ಕಥಾ ಭಾಗವು ಕೌಶಾಂಬಿಯಲ್ಲಿ ನಡೆಯುವುದು. ಉದಯನನಿಗೆ ರಾಜ್ಯಲಾಭ ವಾಗುವುದು. ಮಹಾಸೇನನ ಕಡೆಯಿಂದ ಬಂದ ಧಾತ್ರಿಮುಂತಾದವರು ಉದಯನ ವಾಸವದತ್ತೆಯರ ಚಿತ್ರಪಟಗಳನ್ನೊಪ್ಪಿಸುವರು. ಆ ವೇಳೆಗೆ ಯೌಗಂಧರಾಯಣನು ವೇಷಧಾರಿಯಾಗಿಯೇ ಬಂದು ತಾನು ನ್ಯಾಸವಾಗಿ ಟ್ಟಿದ್ದ ಆವಂತಿಕೆಯನ್ನು ತನಗೊಪ್ಪಿಸಬೇಕೆಂದು ಕೇಳುವನು. ಧಾತ್ರಿಯು ಆವಂತಿಕೆಯನ್ನು ಗುರುತಿಸುವಳು. ಆವಂತಿಕೆಯೇ ವಾಸವದತ್ತೆಯೆಂಬು ದನ್ನು ತಿಳಿದು ಪದ್ಮಾವತಿಯು ತನ್ನ ಅಪಚಾರಕ್ಕಾಗಿ ಅವಳಲ್ಲಿ ಕ್ಷಮೆಬೇಡು ವಳು. ಯೌಗಂಧರಾಯಣನೂ ಪ್ರಭುವಿನಲ್ಲಿ ಕ್ಷಮಾಪ್ರಾರ್ಥನೆ ಮಾಡು ವನು. ಉದಯನನು ತನ್ನ ಪತ್ನಿಯರೊಡನೆ ಉಜ್ಜಯಿನಿಗೆ ತೆರಳಲು ನಿರ್ಧರಿಸುವನು. ಐದನೆಯ ಅಂಕದಲ್ಲಿ ಸೂಚಿತವಾಗಿರುವ ಉದಯನನ ಸ್ವಪ್ನದ ದೆಸೆಯಿಂದ ರೂಪಕಕ್ಕೆ ಸ್ವಪ್ನವಾಸವದತ್ತವೆಂದು ಹೆಸರು ಬಂದಿದೆ.

## ೨. ವಿಮರ್ಶೆ

**ಸಂವಿಧಾನ:**—ಈ ರೂಪಕದ ಆರಂಭ ದೃಶ್ಯದಲ್ಲಿಯೇ ಕವಿಯು ತನ್ನ ಕಲಾಭಿಜ್ಞತೆಯನ್ನು ಚೆನ್ನಾಗಿ ಪ್ರದರ್ಶಿಸಿದ್ದಾನೆ. ರೂಪಕವು ಆರಂಭ ವಾಗುವುದು ತಪೋವನದಲ್ಲಿ. ಪದ್ಮಾವತಿಯು ತಮ್ಮತಾಯಿಯನ್ನು ನೋಡಿ ಕೊಂಡು ಬರಲು ತಪೋವನಕ್ಕೆ ಹೋಗಿದ್ದವಳು, ರಾಜಧಾನಿಯಾದ ರಾಜ ಗೃಹಕ್ಕೆ ಬರುತ್ತಿರುವಳು. ದಾರಿಯಲ್ಲಿರುವ ತಪೋವನದಸಮೀಪಕ್ಕೆ ಕಾಷಾ ಯವನ್ನುಟ್ಟು ತಪಸ್ವಿಯ ವೇಷವನ್ನು ಧರಿಸಿರುವ ಯೌಗಂಧರಾಯಣನೂ, ಆವಂತಿಕೆಯೆಂಬ ಸುಳ್ಳುಹೆಸರಿನ ವಾಸವದತ್ತೆಯೂ, ಬಂದುಸೇರುವರು. ಆ ವೇಳೆಗೆಸರಿಯಾಗಿ ಭಟರು ದಾರಿಯಲ್ಲಿದ್ದವರನ್ನು ಅತ್ತಿತ್ತ ಒತ್ತರಿಸಿ ಹಾದಿ ಯನ್ನು ಬಿಡಿಸುವರು. ಮಹಾಸೇನನ ಪುತ್ರಿಯೂ, ಉದಯನನ ಪತ್ನಿಯೂ,

ಆದ ವಾಸವದತ್ತೆಯನ್ನು ಅವರು ಯಾವಳೋ ಹೆಂಗಸೆಂದು ಭಾವಿಸಿ ಅವಳು ಒತ್ತಟ್ಟು ಸರಿದು ನಿಲ್ಲುವಂತೆ ಮಾಡುವರು. ವಾಸವದತ್ತೆಯು "ಆರ್ಯ! ಇವನಾವನು ಹೀಗೆ ದೂರವಾಗಿ ಸರಿಯುವಂತೆ ನಮ್ಮನ್ನು ಅಟ್ಟುವವನು?" ಎಂದು ಯೌಗಂಧರಾಯಣನನ್ನು ಕೇಳುವಳು. ಅವನು "ಪೂಜ್ಯಳೆ! ಧರ್ಮದತ್ತಣಿಂದ ದೂರವಾಗಿ ತನ್ನನ್ನು ತಾನೇ ಅಟ್ಟಿಕೊಂಡು, ಧರ್ಮಬಾಹಿರನಾಗಲಿಚ್ಛಿಸುವನು" ಎಂದು ಉತ್ತರ ಹೇಳುತ್ತಾನೆ. ವಾಸವದತ್ತೆಯು, "ಆರ್ಯ! ನಾನು ಹೇಳಿದುದು ಆ ಮಾತಲ್ಲ. ನಾನು ಕೂಡ ಹೀಗೆ ಅಟ್ಟಲ್ಪಡಬೇಕೆ?" ಎಂದು ಕೇಳುವಳು. ಯೌಗಂಧರಾಯಣನು ಬಿಸಿಲು ಬಂದಕಡೆಗೆ ಕೊಡೆಹಿಡಿಯುವವನಲ್ಲ. ಅವನು ಸತ್ಯಭಾಷಿಯಾದ ಸಚಿವಶ್ರೇಷ್ಠ. "ಅವಿಜ್ಞಾತರಾದ ಬಳಿಕ ದೇವತೆಗಳೂ ಹೀಗೆಯೇ ತಿರಸ್ಕರಿಸಲ್ಪಡುತ್ತಾರೆ" ಎಂದು ಉತ್ತರ ಹೇಳುವನು. ಬಹುದೂರ ನಡೆದು ಬಳಲಿಬಂದಿರುವ ಸುಕುಮಾರಿ ವಾಸವದತ್ತೆಯು "ಆರ್ಯ! ಈ ತಿರಸ್ಕಾರವು ಮಾರ್ಗಾಯಾಸಕ್ಕಿಂತಲೂ ಹೆಚ್ಚು ಪರಿಖೇದವನ್ನುಂಟುಮಾಡತಕ್ಕುದಾಗಿದೆ" ಎನ್ನುವಳು. ಯೌಗಂಧರಾಯಣನು, "ಪೂಜ್ಯಳೆ! ಈ ವಿಧದ ಸುಖಗಳನ್ನೆಲ್ಲ ನೀನು ಅನುಭವಿಸುತ್ತಿದ್ದು, ಈಗ ನೀನಾಗಿಯೇ ರಾಜ್ಯಸಂಪದವನ್ನು ಬಿಟ್ಟುಬಂದಿರುವೆ. ಈ ಸಣ್ಣ ವಿಚಾರಗಳಿಗೆಲ್ಲ ಚಿಂತಿಸಬಾರದು. ಈಗ ನಾವು ಅನುಸರಿಸಬೇಕೆಂದಿರುವ ಮಾರ್ಗವನ್ನು ಮೊದಲು ನೀನೇ ಒಪ್ಪಿದೆ. ನಮಗಿರುವುದೂ ಇದೊಂದೇಮಾರ್ಗ. ನಿನ್ನ ಪತಿಯು ವಿಜಯಶಾಲಿಯಾದೊಡನೆಯೇ ಮತ್ತೆ ಸುಖವನ್ನು ಅನುಭವಿಸುವೆ. ಪ್ರಾಪಂಚಿಕ ಭಾಗ್ಯಪಙ್ಕ್ತಿಯು ಕಾಲಕ್ರಮವನ್ನನುಸರಿಸಿ ಚಕ್ರದ ಅರೆಗಳಂತೆ ಮೇಲಿನಿಂದ ಕೆಳಕ್ಕೂ ಕೆಳಗಿನಿಂದ ಮೇಲಕ್ಕೂ ಸುತ್ತುತ್ತಲೇ ಬರುತ್ತದೆ" ಎಂದು ಸಮಾಧಾನ ಹೇಳುವನು. ಯೌಗಂಧರಾಯಣನಂತಹ ಮಂತ್ರಿಗೆ ತಕ್ಕಮಾತುಗಳಿವು. "ಮುಂದಕ್ಕೆ ನಡೆಯಿರಿ, ದಾರಿಯನ್ನು ಬಿಟ್ಟು ನಡೆಯಿರಿ" ಎಂದು ಮತ್ತೆ ಭಟರು ಕೂಗುವರು. ಆ ವೇಳೆಗೆ ಮಗಧರಾಜನಾದ ದರ್ಶಕನ ಕಾಂಚುಕೀಯನು ತಪಸ್ವಿಜನರ ವಿಷಯದಲ್ಲಿ ಈ ವಿಧದ ಅಸಭ್ಯವರ್ತನೆಯನ್ನು ಕೈಕೊಂಡು ರಾಜನಿಗೆ ಕೆಟ್ಟಹೆಸರನ್ನು ತರಕೂಡದೆಂದು ಭಟರಿಗೆ ಆಜ್ಞಾಪಿಸುವನು.

ಪದ್ಮಾವತಿಯು ರಾಜಗೃಹಕ್ಕೆ ಹೋಗುತ್ತಿರುವುದನ್ನೂ, ಅವಳು ಅಂದು ಆಶ್ರಮದಲ್ಲಿ ಬೀಡುಬಿಡುವುದನ್ನೂ, ಅವಳು ಧರ್ಮಪ್ರಿಯಳೇ ಹೊರತು ಧರ್ಮಕ್ರಿಯಾ ವಿಘ್ನವನ್ನೊಡ್ಡಿ ತಪಸ್ವಿಜನರು ಸಮಿತ್ತು, ಹೂ, ದರ್ಭೆ ಮುಂತಾದವುಗಳನ್ನು ತೆಗೆದುಕೊಳ್ಳಲು ಅಡ್ಡಿಮಾಡತಕ್ಕವಳಲ್ಲವೆಂಬುದನ್ನೂ, ಇದು ಅವಳಕುಲವ್ರತವೆಂಬುದನ್ನೂ ಕಾಂಚುಕೀಯನಿಂದ ಯೌಗಂಧರಾಯಣನು ತಿಳಿದುಕೊಳ್ಳುವನು. ಸಿದ್ಧಪುರುಷರಾದ ಪುಷ್ಪಕ ಭದ್ರಾದಿಗಳು ಪದ್ಮಾವತಿಯು ಉದಯನನ ಪತ್ನಿಯಾಗುವಳೆಂಬುದನ್ನು ಹೇಳಿರುವರು. ಅದನ್ನು ಯೌಗಂಧರಾಯಣನು ನಂಬಿರುವನು. ಸಿದ್ಧಪುರುಷರ ನುಡಿಯು ಸುಳ್ಳಾಗದೆಂಬುದು ಅವನಭಾವನೆ. ಅವನಇಷ್ಟವೂ ಅದೇರೀತಿಯಾಗಿಯೇ ಇರುವುದರಿಂದ ಮುಂದೆ ತನ್ನ ಸ್ವಾಮಿನಿಯಾಗತಕ್ಕವಳಾದ ಪದ್ಮಾವತಿಯಲ್ಲಿ ಅವನಿಗೆ ಆತ್ಮೀಯತೆಯುಂಟಾಗುವುದು. ರಾಜಪುತ್ರಿಯೆಂಬುದನ್ನು ಕೇಳಿ, ದೊಡನೆಯೇ ತನಗೆ ಅವಳಲ್ಲಿ ಭಗಿನಿಯಂತೆ ಸ್ನೇಹಪ್ರೀತಿಗಳುಂಟಾದುವೆಂದು ವಾಸವದತ್ತೆಯು ತನ್ನಲ್ಲಿ ತಾನು ಹೇಳಿಕೊಳ್ಳುವಳು. ಪದ್ಮಾವತಿಯ ಸದ್ಗುಣಗಳನ್ನು ಕಾಂಚುಕೀಯನು ಹೊಗಳಿದುದನ್ನು ಕೇಳಿದೊಡನೆಯೇ, ಗುಣಮಂಡಿತೆಯಾಗಿ ಗುಣಪಕ್ಷಪಾತವುಳ್ಳವಳೂ ಆಗಿರುವ ವಾಸವದತ್ತೆಗೆ ಅವಳಲ್ಲಿ ಸ್ನೇಹವೃತ್ತಿಯುಂಟಾಗುವುದು. ಬಳಿಕ ಪದ್ಮಾವತಿಯು ಬರುವಳು. ಅವಳನ್ನು ಕಂಡೊಡನೆಯೇ ವಾಸವದತ್ತೆಯು ಅವಳ ರೂಪವು ಅಭಿಜನಾನುರೂಪವಾಗಿ ಅವಳು ದೊಡ್ಡವಂಶದವಳೆಂಬುದಕ್ಕೆ ತಕ್ಕಹಾಗಿರುವುದೆನ್ನುವಳು. ಇದೂ ಅವಳು ತನ್ನಲ್ಲಿ ತಾನು ಹೇಳಿಕೊಂಡ ಮಾತು. ಪದ್ಮಾವತಿಯು ಆಶ್ರಮವಾಸಿನಿಯಾದ ತಾಪಸಿಗೆ ವಂದನೆಮಾಡಿ ಕೇವಲ ವಿನೀತಭಾವದಿಂದ ವರ್ತಿಸುವಳು. ತಪಸ್ವಿನಿಯೂ ಅವಳನ್ನು ಆದರದಿಂದ ಬರಮಾಡಿಕೊಂಡು, "ತಪೋವನಾನಿ ನಾಮ ಅತಿಥಿಜನಸ್ಯ ಸ್ವಗೇಹಂ" ಎಂದು ಹೇಳುವಳು. ನಿಸ್ಸಂಕೋಚವಾಗಿ ಸ್ವಗೃಹದಲ್ಲಿರುವಂತೆಯೇ ಆಶ್ರಮದಲ್ಲಿರಬಹುದೆಂಬ ಆ ಉಪಚಾರದ ಮಾತುಗಳನ್ನು ಕೇಳಿ ಪದ್ಮಾವತಿಯು ಸವಿನುಡಿಗಳಿಂದ ಉತ್ತರ ಹೇಳುವಳು. ಅವಳಲ್ಲಿ ರೂಪಮಾಧುರ್ಯವು ಮಾತ್ರವೇ ಅಲ್ಲದೆ, ಸವಿನುಡಿಯ ಸೊಬಗೂ ಇರುವುದೆಂದು ವಾಸವದತ್ತೆಯು ತನ್ನ ಮನಸ್ಸಿನಲ್ಲಿ ಹೇಳಿಕೊಳ್ಳುವಳು. ಹೆಜ್ಜೆ

ಗಳಿಂದ ಉತ್ತರ ಹೇಳುವಳು. ಅವಳಲ್ಲಿ ರೂಪಮಾಧುರ್ಯವು ಮಾತ್ರವೇ ಅಲ್ಲದೆ, ನವಿನುಡಿಯ ಸೊಬಗೂ ಇರುವುದೆಂದು ವಾಸವದತ್ತೆಯು ತನ್ನ ಮನಸ್ಸಿನಲ್ಲಿ ಹೇಳಿಕೊಳ್ಳುವಳು. ಹೆಜ್ಜೆಹೆಜ್ಜೆಗೂ ವಾಸವದತ್ತೆಗೆ ಪದ್ಮಾವತಿಯ ಮೇಲಣ ಪ್ರೀತಿಯು ಹೆಚ್ಚುತ್ತ ಬರುವುದು. ಪದ್ಮಾವತಿಯು ಆಗಲೇ ವಿವಾಹ ಯೋಗ್ಯೆಯಾಗಿರುವಳು. ಆದುದರಿಂದ, ಅವಳಿಗೆ ವರನು ಇನ್ನೂ ಯಾರೂ ಗೊತ್ತಾಗಿಲ್ಲವೆ—ಎಂಬುದಾಗಿ ತಾಪಸಿಯು ಪದ್ಮಾವತಿಯ ಚೇಟಿಯನ್ನು ಕೇಳುವಳು. ಅವಳನ್ನು ತನ್ನ ಮಗನಿಗೆ ತಂದುಕೊಳ್ಳಲು ಅವಳ ಅಣ್ಣನಾದ ದರ್ಶಕರಾಜನಲ್ಲಿಗೆ ಪ್ರದ್ಯೋತನು ದೂತನನ್ನು ಕಳುಹಿಸಿರುವನೆಂದು ಚೇಟಿಯು ಉತ್ತರ ಹೇಳುವಳು. ಪ್ರದ್ಯೋತನು ವಾಸವದತ್ತೆಯ ತಂದೆ. ಆದುದರಿಂದ, ವಾಸವದತ್ತೆಯು ಇದನ್ನು ಕೇಳಿ, "ಆಗಲಿ, ಆಗಲಿ, ಇವಳು ಇನ್ನು ನನಗೆ ಆತ್ಮೀಯಳೇ ಆದಳು" ಎಂದುಕೊಳ್ಳುವಳು. ಮೊದಲೇ ಅವಳ ಹೃದಯದಲ್ಲಿ ಮೂಡಿದ್ದ ಪ್ರೀತಿಗೆ ಆಗ ಆತ್ಮೀಯತೆಯ ಕಳೆಯೂ ಏರುವುದು. ಆದುದರಿಂದ, ಪದ್ಮಾವತಿಯು ಉದಯನನನ್ನು ವರಿಸುವಂತೆ ಮಾಡಬೇಕೆಂಬ ತನ್ನ ಸಂಕಲ್ಪವನ್ನು ಯೌಗಂಧರಾಯಣನು ವಾಸವದತ್ತೆಗೆ ಹೇಳಿಲ್ಲವೆಂಬುದು ಸ್ಪಷ್ಟವಾಗುತ್ತದೆ. ತಪಸ್ವಿಜನರಲ್ಲಿ ಅರ್ಥಿಗಳಾದವರು ತನ್ನ ಬಳಿಗೆ ಬಂದು ತಮ್ಮ ಇಷ್ಟಾರ್ಥವನ್ನು ಪಡೆದು, ತನ್ನನ್ನು ಅನುಗ್ರಹಿಸಬೇಕೆಂಬುದಾಗಿ ಪದ್ಮಾವತಿಗೆ ಅಭಿಲಾಷೆ. ಅದನ್ನು ಉದ್ಘೋಷಿಸುವಂತೆ ಅವಳು ಕಾಂಚುಕೀಯನಿಗೆ ತಿಳಿಸುವಳು. ಅವನೂ ಆ ರೀತಿ ಉದ್ಘೋಷಿಸುವನು. ಪಾತ್ರೆಗಳು, ಬಟ್ಟೆಗಳು, ಗುರುದಕ್ಷಿಣಾದ್ರವ್ಯ, ಮುಂತಾದುವುಗಳನ್ನು ಯಾರಿಗೆ ಯಾವುದು ಬೇಕೋ ಅದನ್ನು ಪಡೆಯಬಹುದೆಂದು ತಿಳಿಸುವನು. "ಮನಸಿ ಚ ಪರಿತುಷ್ಟೇ ಕೋಽರ್ಥವಾನ್ ಕೋ ದರಿದ್ರಃ" (ಮನಸ್ಸೊಂದು ಪರಿತುಷ್ಟವಾಗಿದ್ದರೆ ಹಣಗಾರನಾರು ಮತ್ತು ಬಡವನಾರು) ಎಂಬ ಭರ್ತೃಹರಿ ವಾಕ್ಯದಂತೆ ಮನಸ್ಸು ಪರಿತೃಪ್ತವಾಗಿದ್ದರೆ ಬಡವರುಬಲ್ಲಿದರೆಂಬ ಚಿಂತೆಗೇ ಅವಕಾಶವಿರುವುದಿಲ್ಲವಷ್ಟೆ. ಸರಳಜೀವಿಗಳಾಗಿದ್ದ ಆಶ್ರಮವಾಸಿಗಳಲ್ಲಿ ಯಾರಿಗೂ ಪದ್ಮಾವತಿಯ ಔದಾರ್ಯದಿಂದ ಪ್ರಯೋಜನವನ್ನು ಪಡೆಯುವ ಪ್ರಸಂಗನೇ ಇರಲಿಲ್ಲ. ಆದರೆ ತಪಸ್ವಿಯ ವೇಷವನ್ನು ಧರಿಸಿ ಅಲ್ಲಿಗೆ ಬಂದಿದ್ದ ಯೌಗಂಧರಾಯಣನ ವಿಷಯವು ಹಾಗಿರಲಿಲ್ಲ.

ಪದ್ಮಾವತಿಯ ಮನೋರಥವು ಉದ್ಘೋಷಿಸಲ್ಪಟ್ಟುದು ಅವನಿಗೆ
ಅನುಕೂಲವೇ ಆಯಿತು. ಈ ಉದ್ಘೋಷವು ಕೂಡ, ಕವಿಯ ಕಲ್ಪನಾ
ಸಾಮರ್ಥ್ಯದಿಂದ ಕಲ್ಪಿಸಲ್ಪಟ್ಟುದು. ಇಲ್ಲದೆ ಹೋಗಿದ್ದರೆ, ಪದ್ಮಾವತಿಯ
ವಶಕ್ಕೆ ವಾಸವದತ್ತೆಯನ್ನು ನ್ಯಾಸವಾಗಿ ಒಪ್ಪಿಸಲು ಅವನಿಗೆ ಸರಿಯಾದ
ಅವಕಾಶವೇ ಇರುತ್ತಿರಲಿಲ್ಲ. ಅಂತು, ಯೌಗಂಧರಾಯಣನು ಮುಂದೆ
ಬಂದು ತಾನು ಅರ್ಥಿಯೆಂದು ಹೇಳಿಕೊಳ್ಳುವನು. ತಾಪಸಿಯು ಇದನ್ನು
ಕಂಡು ಆಶ್ಚರ್ಯಪಟ್ಟು, "ಈ ಆಶ್ರಮಪದವು ಸಂತುಷ್ಟರಾದ ತಪಸ್ವಿಜನ
ರಿಂದ ಕೂಡಿದೆ. ಇವನಾರೋ ಆಗಂತುಕನಿರಬಹುದು" ಎಂದು ತನ್ನಲ್ಲಿ
ತಾನು ಹೇಳಿಕೊಳ್ಳುವಳು. ತಮ್ಮ ಆಶ್ರಮದವರಾರೂ ರಾಜಕುಮಾರಿ
ಯಲ್ಲಿ ಏನನ್ನೂ ಯಾಚಿಸರೆಂಬ ಭರವಸೆಯು ಆಕೆಗುಂಟು. ಕವಿಯು
ಆಶ್ರಮವಾಸಿಗಳ ಸರಳಜೀವನದ ಸಂತೃಪ್ತಿಯನ್ನು ಎಷ್ಟು ರಮಣೀಯ
ವಾಗಿ ಸೂಚಿಸಿದ್ದಾನೆಂದು ಇದರಿಂದ ಗೋಚರವಾಗುವುದು. ಪದ್ಮಾವತಿ
ಗಂತು ಒಬ್ಬ ಅರ್ಥಿಯಾದರೂ ತನಗೆ ದೊರೆತು, ತಾನು ತಪೋವನಕ್ಕೆ
ಬಂದುದು ಸಾರ್ಥಕವಾಯಿತಲ್ಲಾ ಎಂದು ಸಂತೋಷ. ಅರ್ಥಿಯು ತನ್ನ
ವಾಂಛಿತವನ್ನು ತಿಳಿಸಬೇಕೆಂದು ಕಾಂಚುಕೀಯನು ಕೇಳುವನು. ಯೌಗಂಧ
ರಾಯಣನು, "ಇವಳು ನನ್ನ ತಂಗಿ. ಇವಳ ಗಂಡನು ದೇಶಾಂತರವಾಸಕ್ಕೆ
ಹೋಗಿದ್ದಾನೆ. ಆದಕಾರಣ, ಈಕೆಯನ್ನು ಪೂಜ್ಯೆಯಾದ ಪದ್ಮಾವತಿಯು
ಸ್ವಲ್ಪಕಾಲ ಸಂರಕ್ಷಿಸಿ ಸಹಾಯಮಾಡಬೇಕು. ಜೀವನವನ್ನು ಹೊರೆಯು
ವುದಕ್ಕಾಗಿ ನಾನು ಕಾಷಾಯವನ್ನು ಧರಿಸಿದವನಲ್ಲ. ಆದಕಾರಣ, ನನಗೆ
ಹಣವು ಬೇಡ. ಧರ್ಮಪ್ರಚಾರೆಯೂ, ಧೀರೆಯೂ, ಆಗಿರುವ ಈ ರಾಜ
ಕನ್ಯೆಯು ನನ್ನ ಸಹೋದರಿಯ ಚಾರಿತ್ರ್ಯವನ್ನು ಕಾಪಾಡಲು ಸಮರ್ಥ
ಳಾಗಿದ್ದಾಳೆ" ಎಂದು ಹೇಳುವನು. ವಾಸವದತ್ತೆಯು ತನ್ನ ಮನಸ್ಸಿ
ನಲ್ಲಿ, "ಸರಿ! ಆರ್ಯ ಯೌಗಂಧರಾಯಣನು ನನ್ನನ್ನು ಈಕೆಯಲ್ಲಿ
ನಿಕ್ಷೇಪವಾಗಿಟ್ಟು ಹೋಗಲಿಚ್ಛಿಸುವನು. ಆಗಲಿ, ಇವನೆಂದಿಗೂ ವಿಚಾರ
ವಿಲ್ಲದೆ ಕಾರ್ಯವನ್ನು ಮಾಡುವವನಲ್ಲ." ಎಂದುಕೊಳ್ಳುವಳು. ಆದ
ಕಾರಣ, ಮುಂದೆ ಉದಯನನಿಗೂ, ಪದ್ಮಾವತಿಗೂ, ವಿವಾಹವಾಗ
ಬೇಕೆಂಬುದು ಯೌಗಂಧರಾಯಣನ ಆಶಯವೆಂದು ಅವಳಿಗೆ ಖಂಡಿತ

ವಾಗಿಯೂ ತಿಳಿದಿಲ್ಲ. ಕಾಂಚುಕೀಯನು "ಪೂಜ್ಯಳೆ! ಈತನ ಪ್ರಾರ್ಥನೆಯನ್ನು ಸಲ್ಲಿಸುವುದು ಬಹಳ ಕಷ್ಟ. ಹಣವನ್ನಾದರೂ ಸುಲಭವಾಗಿ ಕೊಡಬಹುದು. ಪರೋಪಕಾರಕ್ಕಾಗಿ ಪ್ರಾಣವನ್ನಾದರೂ ಸುಲಭವಾಗಿ ಕೊಡಬಹುದು. ತಪಃಫಲವನ್ನಾದರೂ ಸುಲಭವಾಗಿ ಬಿಟ್ಟುಕೊಡಬಹುದು. ಯಾವುದನ್ನಾದರೂ ಸುಲಭವಾಗಿ ಕೊಡಬಹುದು. ನ್ಯಾಸವನ್ನು ರಕ್ಷಿಸುವುದು ಮಾತ್ರ ಅತಿಪ್ರಯಾಸಕರವಾದುದು" ಎಂದು ತಿಳಿಸುವನು. ಪದ್ಮಾವತಿಯು ತನ್ನ ಉದಾತ್ತ ಸ್ವಭಾವಕ್ಕನುಗುಣವಾಗಿ, "ಆರ್ಯ! ಮೊದಲು ಯಾರು ಏನನ್ನು ಬೇಕಾದರೂ ಕೇಳಬಹುದೆಂದು ಉದ್ಘೋಷಿಸಿ, ಈಗ ಹೀಗೆ ಅನುಮಾನಿಸುವುದು ಅಯುಕ್ತವೇ ಸರಿ. ಈತನು ಹೇಳುವಂತೆ ಆರ್ಯನು ನಡೆಯಿಸಬೇಕೆಂದು ಕೋರುವೆನು." ಎಂದು ಉತ್ತರ ಹೇಳುವಳು. ಅದು ದೊಡ್ಡಕುಲದವಳಾದ ಅವಳಿಗೆ ಅನುರೂಪವೆನಿಸುವ ಉತ್ತರವೆಂದು ಕಾಂಚುಕೀಯನು ಒಪ್ಪಿಕೊಳ್ಳುವನು. ತಾಪಸಿಯೂ ಅದನ್ನು ನೋಡಿ, "ಭದ್ರೇ! ಚಿರಂಜೀವಿಯಾಗಿ ಬಾಳು." ಎಂದು ಹರಸುವಳು.

ಆ ಬಳಿಕ ಪದ್ಮಾವತಿಯ ಒಪ್ಪಿಗೆಯಿಂದ ಯೌಗಂಧರಾಯಣನು ವಾಸವದತ್ತೆಯನ್ನು ನ್ಯಾಸವಾಗಿ ಒಪ್ಪಿಸುವನು. ಪಾಪ! ಇನ್ನುಮುಂದೆ ವಾಸವದತ್ತೆಯು ಸಾಮಾನ್ಯಳಂತೆ ಪರಗೃಹವಾಸವನ್ನನುಭವಿಸಬೇಕು. ತನ್ನ ನಿಜವಾದ ಪರಿಚಯವನ್ನು ಹೇಳಿಕೊಳ್ಳುವುದಕ್ಕಿಲ್ಲದೆ ಆವಂತಿಕೆಯೆಂಬ ಸುಳ್ಳು ಹೆಸರನ್ನಿಟ್ಟುಕೊಂಡಿರಬೇಕು. ವಿಧೇಯನಾಗಿ ತನ್ನ ಪರಿಚರ್ಯದಲ್ಲಿದ್ದ ಹಿತಚಿಂತಕನಾದ ಮಂತ್ರಿಯೂ ಈಗ ತನ್ನನ್ನು ಬಿಟ್ಟು ಹೋಗುವನಲ್ಲಾ-ಎಂದು ಅವಳಿಗೆ ಪೇಚಾಟ. ಆದುದರಿಂದಲೇ, ಯೌಗಂಧರಾಯಣನು ಅವಳನ್ನು ಕುರಿತು, "ವತ್ಸೆ! ಪೂಜ್ಯಳಾದ ಪದ್ಮಾವತಿಯ ಸಮೀಪವನ್ನು ಸೇರು" ಎಂದು ಹೇಳಿದಾಗ, ಅವಳು "ಮಾಡುವುದೇನು! ಮಂದಭಾಗ್ಯಳು ಇದೋ, ಹೋಗುವೆನು." ಎಂದುಕೊಳ್ಳುವಳು. ಪದ್ಮಾವತಿಗೂ ಅವಳಲ್ಲಿ ಆದರವು ಹುಟ್ಟುವುದು. ವಾಸವದತ್ತೆಯು ತನ್ನ ಆತ್ಮೀಯಳಾದಂತೆ ಅವಳು ಭಾವಿಸುವಳು. ವಾಸವದತ್ತೆಯ ಆಕೃತಿಯಿಂದ ಅವಳೂ ರಾಜಪುತ್ರಿಯೇ ಆಗಿರಬೇಕೆಂದು ತಾಪಸಿಯೂ ಶಂಕಿಸುವಳು.

ಚೇಟಿಗೂ ಅದೇ ಅಭಿಪ್ರಾಯವಿರುವುದರಿಂದ ತಾಪಸಿಯು ಹೇಳಿದುದನ್ನು ಅವಳೂ ಅನುಮೋದಿಸಿ, "ಆರ್ಯೆಯು ಹೇಳಿದುದು ಯುಕ್ತ. ಈಕೆಯು ವಿಶೇಷ ಸುಖಾನುಭವ ಮಾಡತಕ್ಕವಳೆಂದು ನನಗೂ ತೋರುತ್ತದೆ" ಎಂದು ಹೇಳುವಳು. ಯೌಗಂಧರಾಯಣನು ತನ್ನಲ್ಲಿ ತಾನು "ಸರಿ! ಈಗ ಅರ್ಧ ಭಾರವು ಕಡಿಮೆಯಾದಂತಾಯಿತು. ಮಂತ್ರಿಗಳೊಡನೆ ನಾನು ಆಲೋಚಿಸಿಕೊಂಡು ಬಂದ ಹಾಗೆಯೇ ಕಾರ್ಯವು ಪರಿಣಾಮ ಹೊಂದುತ್ತಿದೆ. ವತ್ಸರಾಜನು ರಾಜ್ಯವನ್ನು ಮತ್ತೆ ಪಡೆದಬಳಿಕ, ವಾಸವದತ್ತೆಯನ್ನು ಸ್ವೀಕರಿಸುವ ಭಾಗದಲ್ಲಿ ಅನುಮಾನಿಸಿದರೆ ಪದ್ಮಾವತಿಯೇ ಅದಕ್ಕೆ ಪ್ರಮಾಣವಾಗಿ ನಿಜಸ್ಥಿತಿಯನ್ನು ತಿಳಿಸುತ್ತಾಳೆ. ನಮಗೆ ವಿಪತ್ತು ಒದಗುವುದೆಂದು ದೈವಜ್ಞರು ಹಿಂದೆ ಹೇಳಿದ್ದುದು ನಿಜವಾಯಿತು. ಪದ್ಮಾವತಿಯು ಉದಯನನ ಸಹಧರ್ಮಿಣಿಯಾಗುವಳೆಂದು ಅವರು ಹೇಳಿರುವುದೂ ನಿಜವಾಗಲೇಬೇಕು. ಸುಪರೀಕ್ಷಿತವಾದ ಸಿದ್ಧವಾಕ್ಯವನ್ನತಿಕ್ರಮಿಸಿ ಘಟನೆಗಳು ನಡೆಯಲಾರವು" ಎಂದು ಹೇಳಿಕೊಳ್ಳುವನು. ಭಾಸನ ಸಂವಿಧಾನ ಕೌಶಲವು ರಮಣೀಯವಾದುದು. ಆ ವೇಳೆಗೆ ಸರಿಯಾಗಿ ಬ್ರಹ್ಮಚಾರಿಯು ಬರುವನು. ಅದೂ ಲಾವಾಣಕ ಗ್ರಾಮದಿಂದ. ಆಶ್ರಮದಲ್ಲಿ ತಪಸ್ವಿಜನಗಳು ಮಾತ್ರವೇ ಅಲ್ಲದೆ ಇತರರೂ ಇರುವುದನ್ನು ಕಂಡು, ಅದು ನಿಜವಾಗಿಯೂ ಆಶ್ರಮವೇ ಹೌದೋ ಅಲ್ಲವೋ ಎಂಬುದಾಗಿ ಬ್ರಹ್ಮಚಾರಿಗೆ ಸಂದೇಹ. ಅದನ್ನರಿತೋ ಏನೋ, ಕಾಂಚುಕೀಯನು "ಸರ್ವಜನಸಾಧಾರಣ ಮಾಶ್ರಮ ಪದಂ ನಾಮ." (ಆಶ್ರಮ ಪದವೆಂಬುದು ಸರ್ವಜನ ಸಾಧಾರಣವಾದುದು) ಎಂದು ಹೇಳುವನು. ಯಾವ ಭೀತಿಯೂ ಇಲ್ಲದೆ ಹರಿಣಗಳು ನಿರಾಂತಕವಾಗಿ ಮೇಯುತ್ತಿದ್ದುದನ್ನೂ, ದಯಾರಕ್ಷಿತಗಳಾದ ಮರ ಗಿಡಗಳೂ, ಲತೆಗಳೂ, ಫಲಪುಷ್ಪ ಸಮನ್ವಿತವಾಗಿದ್ದುದನ್ನೂ, ಕಪಿಲವರ್ಣದ ಧೇನುಗಳು ತಂಡೋಪತಂಡವಾಗಿ ತಿರುಗುತ್ತಿದ್ದುದನ್ನೂ, ಕಂಡು ಅದು ಆಶ್ರಮ ಪದವೆಂದು ಅವನು ಮೊದಲೇ ನಿರ್ಧರಿಸಿದ್ದನು. ಆದರೂ ಅಲ್ಲಿ ಆಶ್ರಮವಿರುದ್ಧ ಜನರಿದ್ದುದನ್ನು ನೋಡಿ ಅವನು ಸಂಶಯಗ್ರಸ್ತನಾಗಿರುವನು. ಕಾಂಚುಕೀಯನ ಮಾತಿನಿಂದ ಅವನ ಸಂಶಯವು ದೂರವಾಗಿರಬೇಕು. ಅವನು ಎಲ್ಲಿಯೋ ನೋಡಿ

ಕೊಂಡು ದಡದಡನೆ ನುಗ್ಗಿ ವಾಸವದತ್ತೆಯ ಸಮೀಪದಲ್ಲಿ ಹೊರಟು ಬಂದಿರಬೇಕು. ಆದುದರಿಂದಲೇ, ಆಕೆಯು "ಹಂ" ಎಂದು ಹಂಕಾರ ಮಾಡುವುದು. ಅವನು ಹಾಗೆ ದಡದಡನೆ ಬಂದುದರಿಂದ ವಾಸವದತ್ತೆಯು "ಹಂ" ಎನ್ನುವಳೋ, ಇಲ್ಲವೇ ಪರಪುರುಷನು ಅಲ್ಲಿಗೆ ಬಂದುದರಿಂದ ಹಾಗೆನ್ನುವಳೋ, ತಿಳಿಯದು. ಇದನ್ನು ನೋಡಿ ಪದ್ಮಾವತಿಗೆ ಮತ್ತಷ್ಟು ಆದರವು ಹುಟ್ಟುವುದು. ಪದ್ಮಾವತಿಯು "ಆರ್ಯೆಗೆ ಪರಪುರುಷ ದರ್ಶನದಲ್ಲಿ ಜಿಹಾಸೆ. ನನ್ನ ನ್ಯಾಸವನ್ನು ಬಹಳ ಚೆನ್ನಾಗಿ ನೋಡಿಕೊಳ್ಳ ಬೇಕು" ಎಂದುಕೊಳ್ಳುವಳು. ಬ್ರಹ್ಮಚಾರಿಯು ಎಲ್ಲಿಂದ ಬಂದಿದ್ದನೆಂಬು ದನ್ನೂ ಎಲ್ಲಿಗೆ ಹೋಗಬೇಕೆಂದಿದ್ದನೆಂಬುದನ್ನೂ ಕುರಿತು ಯೌಗಂಧ ರಾಯಣನು ಅವನನ್ನು ಪ್ರಶ್ನೆಮಾಡುವನು. ಅತ್ತ ಉದಯನನ ಸಮಾ ಚಾರವೇನೋ ಎಂದು ಅವನ ಮನಸ್ಸಿನಲ್ಲಿ ಕಳವಳವಿದ್ದೇಇದೆ. ಯಾರಿಂದ ಲಾದರೂ ಅಲ್ಲಿಯ ಸಂಗತಿಯು ತಿಳಿದೀತೆ ಎಂಬ ಕುತೂಹಲದಿಂದ ಕೂಡಿ ಅವನು ಬ್ರಹ್ಮಚಾರಿಯನ್ನು ಹೀಗೆ ಕೇಳಿರಬೇಕು.

ಬ್ರಹ್ಮಚಾರಿಯು ತಾನು ವತ್ಸರಾಜನಿಗೆ ಸೇರಿದ ಲಾವಾಣಕ ನಗರ ದಿಂದ ಬಂದುದಾಗಿ ತಿಳಿಸುವನು. ಅದನ್ನು ಕೇಳಿ, ವಾಸವದತ್ತೆಯ ಎರಡು ಕಿವಿಗಳು ಹತ್ತು ಕಿವಿಗಳಾಗುವುವು. ಅವಳ ಸಂತಾಪವೂ ಮತ್ತೆ ನವೀ ಕೃತವಾದುದಾಗಿ ಅವಳು ಹೇಳಿಕೊಳ್ಳುವಳು. ರಾಜನು ಬೇಟೆಗೆ ಹೋಗಿ ದ್ದಾಗ ಗ್ರಾಮಕ್ಕೆ ಬೆಂಕಿಯು ಬಿದ್ದು ವಾಸವದತ್ತೆಯು ಸುಟ್ಟುಹೋದಳೆಂಬು ದಾಗಿ ಬ್ರಹ್ಮಚಾರಿಯು ತಿಳಿಸಿದಾಗ, ಕೂಲವಿಲ್ಲದ ಶೋಕಪ್ರವಾಹದಲ್ಲಿ ಅವಳ ಮನಸ್ಸು ತೇಲಿಹೋಗುವುದು. ತಾನು ಸ್ವಪ್ನಪ್ರಪಂಚದಲ್ಲಿದ್ದಂತೆ ಅವಳ ಮನಸ್ಸಿಗೆ ಬೋಧೆಯಾಗಿ, ಅವಳು "ಇದು ಸುಳ್ಳು, ಸರ್ವಥಾ ಸುಳ್ಳು. ಮಂದಭಾಗ್ಯಳಾದ ನಾನು ಜೀವಂತಳಾಗಿದ್ದೇನೆ" ಎಂದುಕೊಳ್ಳು ವಳು. ಆದರೆ, ಅವಳ ಮನಸ್ಸು ಮಾತ್ರ ಸಂಯಮದ ಹಿಡಿತದಿಂದ ತಪ್ಪಿಸಿ ಕೊಳ್ಳುವಹಾಗಿಲ್ಲ. ಬಳಿಕ, ಯೌಗಂಧರಾಯಣನೆಂಬ ಮಂತ್ರಿಯೂ ಬೆಂಕಿಗೆ ಬಿದ್ದು ಆಹುತಿಯಾದನೆಂದು ಬ್ರಹ್ಮಚಾರಿಯು ತಿಳಿಸುವನು. ಆಮೇಲೆ ರಾಜನು ಬೇಟೆಯಿಂದ ಬಂದನೆಂದೂ, ಅವರೀರ್ವರ ಮರಣ ವಾರ್ತೆಯನ್ನೂ ಕೇಳಿ, ಅತಿದುಃಖದಿಂದ ತಾನೂ ಬೆಂಕಿಯಲ್ಲಿ ಬೀಳಹೋದ

ನೆಂದೂ, ಮಂತ್ರಿಗಳು ಕಷ್ಟದಿಂದ ಅವನನ್ನು ತಡೆದರೆಂದೂ ಬ್ರಹ್ಮ ಚಾರಿಯು ತಿಳಿಸುವನು. ವಾಸವದತ್ತೆಯು ವ್ಯಸನಪಟ್ಟು, "ಆರ್ಯ ಪುತ್ರನು ನನ್ನಲ್ಲಿ ಸಾನುಕ್ರೋಶನಾಗಿರುವುದನ್ನು ಬಲ್ಲೆನು, ಬಲ್ಲೆನು" ಎಂದುಕೊಳ್ಳುವಳು.

ಕವಿಯು ಬ್ರಹ್ಮಚಾರಿಯ ಬಾಯಲ್ಲಿ ಮೆಟ್ಟಿಲುಮೆಟ್ಟಿಲಾಗಿ ಮಾತನ್ನು ಹೊರಡಿಸುವುದು, ವಾಸವದತ್ತೆಯ ಸತ್ವಪರೀಕ್ಷೆಮಾಡಿ ಅವಳ ಚಿತ್ತ ದಮನ ಸಾಮರ್ಥ್ಯವನ್ನಳೆಯುವುದಕ್ಕೋ ಏನೋ ಎಂದು ನಮಗೆ ತೋರುತ್ತದೆ. ಅನಂತರ ಏನು ನಡೆಯಿತೆಂದು ಯೌಗಂಧರಾಯಣನು ಕೇಳುವನು. ಬೆಂಕಿಯ ಬೇಗೆಗೆ ಸಿಕ್ಕಿ ಉಳಿದಿದ್ದ ವಾಸವದತ್ತೆಯ ಆಭರಣಗಳನ್ನು ಅಪ್ಪಿಕೊಂಡು ಉದಯನನು ಮೂರ್ಛೆಹೊಂದಿದನೆಂದು ಬ್ರಹ್ಮಚಾರಿಯು ಹೇಳುವನು. ಎಲ್ಲರೂ ವ್ಯಥೆಯಿಂದ "ಹಾ" ಎನ್ನುವರು. ವಾಸವದತ್ತೆಯು ಈ ದಾರುಣವಾರ್ತೆಯನ್ನು ತಾಳಲಾರದೆ ಎಲ್ಲಿ ಗುಟ್ಟನ್ನು ರಟ್ಟುಗೊಳಿಸುವಳೋ ಎಂದು ಯೌಗಂಧರಾಯಣನು ಆಗ ಬಹಳ ಕಳವಳ ಪಟ್ಟಿರಬೇಕು. ಈ ಮಾತುಗಳನ್ನು ಕೇಳಿಯೂ ವಾಸವದತ್ತೆಯು ತನ್ನ ಚಿತ್ತಸಂಯಮದ ಬಿಕ್ಕಟ್ಟನ್ನು ಸಡಿಲಗೊಳಿಸುವುದಿಲ್ಲ. ಆದರೂ ಅವಳ ಮನಸ್ಸೇನೋ ವ್ಯಸನದಗ್ಧವಾಗಿ ಚೀರಿಡುವುದು. "ಯೌಗಂಧರಾಯಣನು ಇನ್ನು ಸಕಾಮವಾಗಿ ತನ್ನ ಇಷ್ಟಾರ್ಥವನ್ನು ಪಡೆಯಲಿ" ಎಂದುಕೊಂಡು ಅವಳು ಕಣ್ಣೀರು ಸುರಿಸುವಳು. ಅದನ್ನು ಚೇಟಿಯು ಕಂಡು ತಿಳಿಸುವಳು. ಭಾಸಮಹಾಕವಿಯು ಚಿತ್ರಿಸಿರುವ ಸನ್ನಿವೇಶವು ಎಂತಹ ಸನ್ನಿವೇಶ! ಆಗ ವಾಸವದತ್ತೆಯು ತನ್ನ ಮನಸ್ಸಿನ ಯಾತನೆಯನ್ನು ಹೊರಗೆಡಹುವುದಕ್ಕೂ ಇಲ್ಲದೆ, ದುಃಖದ ಆವೇಗವನ್ನು ತಡೆಯಲೂ ಆರದೆ ಡೋಲಾಯಮಾನ ವಾದ ಮನಸ್ಸಿನಿಂದ ತರಗೆಲೆಯಂತೆ ನಡುಗಿ ತತ್ತರಿಸುತ್ತ ನಿಂತಿರಬೇಕು. ಯೌಗಂಧರಾಯಣನು ಮುಂದೇನು ಪ್ರಮಾದವಾಗುವುದೋ ಎಂದು ದಿಕ್ಕುತೋರದೆ ಕಳವಳಪಟ್ಟಿರಬೇಕು. ಆದರೂ, ಅವನ ದಮನಶಕ್ತಿಯು ದುರವಗಾಹ್ಯವಾದುದು. ಸರಳಹೃದಯೆಯಾದ ಪದ್ಮಾವತಿಯು, "ಸಾನು ಕ್ರೋಶಳಾಗಿ ಹಾಗೆ ಮಾಡುತ್ತಿರುವಳೆಂದು ತೋರುವುದು" ಎಂದು ಹೇಳು ವಳು. ಯೌಗಂಧರಾಯಣನು "ಹೌದು, ಹೌದು, ಸ್ವಭಾವತಃ ನನ್ನ

ತಂಗಿಯು ಮೃದು ಹೃದಯವುಳ್ಳವಳು. ಆಮೇಲಾಮೇಲೆ" ಎಂದು ದಿಟ್ಟ ತನದಿಂದ ಹೇಳುವನು. ಅನಂತರ ಉದಯನನು ಸ್ವಲ್ಪ ಸ್ವಲ್ಪವಾಗಿ ಚೇತರಿಸಿಕೊಂಡು ಪ್ರಜ್ಞೆಯನ್ನು ಹೊಂದಿದನೆಂದು ಬ್ರಹ್ಮಚಾರಿಯು ತಿಳಿಸುವನು. ಪದ್ಮಾವತಿಯು ಕೂಡ ಅನುತಾಪಪಟ್ಟು, "ದೇವರದಯೆ, ಸದ್ಯ ಬದುಕಿದನಲ್ಲಾ ! ಮೂರ್ಛೆಹೊಂದಿದನೆಂಬುದನ್ನು ಕೇಳಿ ನನ್ನ ಹೃದಯವೇ ಜರ್ಝರಿಸಿಹೋಗಿ ಶೂನ್ಯತೆಯನ್ನು ಪಡೆದ ಹಾಗಾಗಿದ್ದಿತು." ಎಂದುಕೊಳ್ಳುವಳು. ಸಹಾನುಭೂತಿಯ ಮುಖವಾಡವನ್ನಿಟ್ಟುಕೊಂಡು ಅವಳ ಹೃದಯದಲ್ಲಿ ಉದಯನ ವಿಷಯಕವಾದ ಗುಣಪಕ್ಷಪಾತದಿಂದ ಪ್ರೇಮ ಸಂಚಾರಕ್ಕೆ ಪ್ರಾರಂಭವಾಯಿತೋ—ಎಂದು ತೋರುತ್ತದೆ. ಬಳಿಕ ಉದಯನನು ವಾಸವದತ್ತೆಗಾಗಿ ಹಂಬಲಿಸಿ ಧೂಳಿನಲ್ಲಿ ಹೊರಳಿ ಪ್ರಲಾಪಿಸಿದ ಬಗೆಯನ್ನು ಹೇಳಿ ಕೊನೆಗೆ ಬ್ರಹ್ಮಚಾರಿಯು "ಹೆಚ್ಚು ಹೇಳಲೇಕೆ? ವಿರಹ ದುಃಖಾನುಭವ ವಿಚಾರದಲ್ಲಿ ಚಕ್ರವಾಕ ಪಕ್ಷಿಗಳೂ ಹಾಗಿಲ್ಲ. ದೇವತಾ ಸ್ತ್ರೀಯನ್ನು ಪಡೆದಿದ್ದವರು ಕೂಡ ಹಾಗಿರುವುದಿಲ್ಲ. ಉದಯನನಂತೆ ಪತಿಪ್ರೇಮಕ್ಕೆ ಪಾತ್ರಳಾಗಿರುವ ಪತ್ನಿಯೇ ಧನ್ಯಳು. ಅವಳು ದಗ್ಧಳಾಗಿದ್ದರೂ, ಈ ವಿಧದ ಭರ್ತೃಸ್ನೇಹದಿಂದ ಅವಳು ಅದಗ್ಧಳಾಗಿ ಚಿರಜೀವಿಯೆನಿಸಿದ್ದಾಳೆ" * ಎಂದು ಹೇಳುವನು. ದಾಂಪತ್ಯಸುಖಾನುಭವವನ್ನು ಕಂಡರಿಯದ ಬ್ರಹ್ಮಚಾರಿಗೂ ಹೀಗೆ ತೋರಿಬಂದು, ಅವನು ಈ ಮಾತುಗಳನ್ನಾಡುವಂತೆ ಸಂವಿಧಾನ ಕೌಶಲವನ್ನು ತೋರಿಸಿ ಮಹಾಕವಿ ಭಾಸನು ನಮ್ಮನ್ನು ಆನಂದಗೊಳಿಸಿದ್ದಾನೆ. ಬ್ರಹ್ಮಚಾರಿಯ ಮಾತುಗಳನ್ನು ಕೇಳಿ ಯೌಗಂಧರಾಯಣನು "ಆತನನ್ನು ಸಂತೈಸಲು ಯಾವನೊಬ್ಬ ಅಮಾತ್ಯನೂ ಪ್ರಯತ್ನಿಸಲಿಲ್ಲವೆ" ಎಂದು ಕೇಳುವನು. ಪ್ರಭು

---

* "ಕಿಂ ಬಹುನಾ ।

ನೈವೇದಾನೀಂ ದುಃಖಿತಾಶ್ಚಕ್ರವಾಕಾ

ನೈವಾಪ್ಯನ್ಯೇ ಸ್ತ್ರೀವಿಶೇಷೈರ್ವಿಯುಕ್ತಾಃ ।

ಧನ್ಯಾ ಸಾ ಸ್ತ್ರೀ ಯಾಂ ತಥಾ ವೇತ್ತಿ ಭರ್ತಾ

ಭರ್ತೃಸ್ನೇಹಾತ್ ಸಾ ಹಿ ದಗ್ಧಾಪ್ಯದಗ್ಧಾ ॥"

ಪರಾಯಣನಾದ ಆ ಮುಖ್ಯಾಮಾತ್ಯನಿಗೆ ಅವು ತಕ್ಕ ಮಾತುಗಳು. ಸಮಾಧಾನ ಹೇಳದೆ ಮಂತ್ರಿಗಳಿಲ್ಲಿ ಕರ್ತವ್ಯ ಲೋಪಮಾಡಿದರೋ ಎಂದು ಅವನಿಗೆ ಆತಂಕವಾಗಿರಬೇಕು. ಬ್ರಹ್ಮಚಾರಿಯು ಮಂತ್ರಿಯಾದ ರುಮಣ್ವಂತನು ರಾಜನಂತೆ ಅನಾಹಾರಿಯಾಗಿ ರೋದಿಸುತ್ತಿದ್ದನೆಂದೂ, ರಾಜನೊಡನೆ ಅನುಕಂಪದಿಂದ ಕೂಡಿ ತನ್ನ ದೇಹಸೌಖ್ಯವನ್ನು ಕೂಡ ತೊರೆದು ಹಗಲು ರಾತ್ರಿಗಳಲ್ಲಿಯೂ ಪರಿಚರ್ಯೆ ಮಾಡುತ್ತಿದ್ದನೆಂದೂ, ರಾಜನೇನಾದರೂ ಮೃತಿಯನ್ನೈದಿದರೆ ಅವನೂ ಮರಣ ಹೊಂದುವಂತೆ ತೋರುತ್ತಿದ್ದಿದೆಂದೂ † ತಿಳಿಸುವನು. ರುಮಣ್ವಂತನಿಗಿದ್ದ ಪ್ರಭುಪ್ರೇಮವೂ, ವಾಸವದತ್ತಾದೇವಿಯ ಸದ್ಗುಣಗಳೂ ಆತನ ರೋದನದಿಂದ ಬಹುಚೆನ್ನಾಗಿ ವ್ಯಕ್ತವಾಗುವುವು. ಅವನ ಸ್ವಾಮಿಭಕ್ತಿಯ ಸ್ವಭಾವವನ್ನರಿತಿದ್ದ ವಾಸವದತ್ತಾದೇವಿಯು "ಸರಿಯಾದವನ ಉಪಚಾರವೇ ಆರ್ಯಪುತ್ರನಿಗೆ ದೊರೆತಿದೆ" ಎಂದುಕೊಳ್ಳುವಳು. ರುಮಣ್ವಂತನ ಕಷ್ಟವನ್ನು ನೆನೆದು ಯೌಗಂಧರಾಯಣನು ತನ್ನಲ್ಲಿ ತಾನು ಪೇಚಾಡಿಕೊಳ್ಳುವನು. ಅಲ್ಲದೆ, ದೊರೆಯು ಕೊನೆಗೆ ಸಮಾಧಾನ ಹೊಂದಿದನೆ—ಎಂದು ಬ್ರಹ್ಮಚಾರಿಯನ್ನು ಕೇಳುವನು. ಬ್ರಹ್ಮಚಾರಿಯು "ಅದು ನನಗೆ ತಿಳಿಯದು. ಉದಯನನು 'ನಾನು ಇಲ್ಲಿ ಅವಳೊಡನೆ ಕೋಪಿಸಿಕೊಂಡಿದ್ದೆ. ನಾನು ಇಲ್ಲಿ ಅವಳೊಡನೆ ನಿದ್ರಿಸಿದ್ದೆ' ಎಂದು ಸ್ಥಳವಾದಮೇಲೆ ಸ್ಥಳವನ್ನು ನೋಡಿ ಪ್ರಲಾಪಿಸುತ್ತಿದ್ದನು. ಮಂತ್ರಿಗಳು ಬಹುಕಷ್ಟಪಟ್ಟು ಅವನನ್ನು ಲಾವಾಣಕ ಗ್ರಾಮದಿಂದ ಕರೆದುಕೊಂಡು ಬೇರೆ ಸ್ಥಳಕ್ಕೆ ಹೋದರು. ಚಂದ್ರನೂ, ನಕ್ಷತ್ರಗಳೂ, ಅಸ್ತಮಿಸಿದ ಆಕಾಶದಂತೆ ಆ ಗ್ರಾಮದ ಸ್ಥಿತಿಯಾಯಿತು. ನಾನೂ ಹೊರಟುಬಂದೆ" ಎಂದು ತಿಳಿಸುವನು. ತಾಪಸಿಯು ಕೂಡ, "ಆಗಂತುಕನಾದ ಇವನೂ ಹೀಗೆ ಪ್ರಶಂಸೆ ಮಾಡಿದಮೇಲೆ ಆ ರಾಜನು ಗುಣವಂತನೇ ಆಗಿರಬೇಕು." ಎನ್ನುವಳು. ಚೇಟಿಯು ಸುಮ್ಮನಿರದೆ, "ಅವನು

---

† "ಅನಾಹಾರೇ ತುಲ್ಯಃ ಪ್ರತತ ರುದಿತ ಕ್ಷಾಮವದನಃ
ಶರೀರೇ ಸಂಸ್ಕಾರಂ ನೃಪತಿಸಮದುಃಖಂ ಪರಿವಹನ್ ।
ದಿವಾ ವಾ ರಾತ್ರೌ ವಾ ಪರಿಚರತಿ ಯತ್ನೈರ್ನರಪತಿಂ
ನೃಪಃ ಪ್ರಾಣಾನ್ ಸದ್ಯಸ್ತ್ಯಜತಿ ಯದಿ ತಸ್ಯಾಪ್ಯುಪರಮಃ ॥"

ಮತ್ತ್ಯಾವಳಾದರೂ ಸ್ತ್ರೀಯನ್ನು ಪಾಣಿಗ್ರಹಣ ಮಾಡಿಕೊಳ್ಳುವನೆ?" ಎಂದು ಕೇಳುವಳು. ಪದ್ಮಾವತಿಯು ಅವಳಿಗೆ ಉತ್ತರಹೇಳದೆ ತನ್ನಲ್ಲಿ ತಾನು, "ನನ್ನ ಹೃದಯವೂ ಇದನ್ನೇ ತಿಳಿದುಕೊಳ್ಳಲು ತ್ವರೆಗೊಳ್ಳುತ್ತಿದೆ." ಎಂದುಕೊಳ್ಳುವಳು. ಅವಳ ಹೃದಯದಲ್ಲಿ ಪ್ರೇಮ ಸಂಚಾರಕ್ಕೆ ಪ್ರಾರಂಭವಾದಂತೆ ಇದರಿಂದಲೂ ತೋರುವುದು. ಆದರೆ, ಆಗ ಅವಳು ಮರುಮಾತನಾಡದೆ ಮೌನವನ್ನವಲಂಬಿಸಿದ್ದಳೆಂದು ಚಿತ್ರಿಸಿರುವುದರಲ್ಲಿ ಮಾತ್ರ ಕವಿಯು ತನ್ನ ಕಲಾಕೌಶಲ್ಯವನ್ನು ಚೆನ್ನಾಗಿ ತೋರ್ಪಡಿಸಿದ್ದಾನೆ. ಬಳಿಕ ಬ್ರಹ್ಮಚಾರಿಯೂ, ಯೌಗಂಧರಾಯಣನೂ ಹೊರಟುಹೋಗುವರು. ಪದ್ಮಾವತಿಯೂ, ವಾಸವದತ್ತೆಯೂ, ತಾಪಸಿಗೆ ನಮಸ್ಕಾರಮಾಡಿ ಆಶೀರ್ವಾದವನ್ನು ಪಡೆಯುವರು. ಆ ವೇಳೆಗೆ ಸೂರ್ಯನೂ ಅಸ್ತಾಚಲವನ್ನೈದುವನು. ಮುಖ್ಯ ಪಾತ್ರಗಳ ಪರಿಚಯವನ್ನು ತಿಳಿಸಿದ ಮನೋಹರವಾದ ಮೊದಲನೆಯ ಅಂಕವು ಅಲ್ಲಿಗೆ ಪೂರೈಸುವುದು.

**ಎರಡನೆಯ ಅಂಕ**:—ಪದ್ಮಾವತಿಯು ಮಾಧವೀಲತಾ ಮಂಟಪದ ಬಳಿಯಲ್ಲಿ ಚೆಂಡಾಡುತ್ತಿರುವಳೆಂಬುದನ್ನು ಚೇಟಿಯು ಕುಂಜರಿಕೆಯಿಂದ ತಿಳಿದುಕೊಂಡು ಅಲ್ಲಿಗೆ ಹೋಗುವಳು. ಪದ್ಮಾವತಿಯು ಚೆಂಡಾಡುತ್ತಿರುವ ರಭಸದಲ್ಲಿ ಕಿವಿಗಳಲ್ಲಿ ಧರಿಸಿರುವ ಚೂಳಿಕೆಗಳು ಮೇಲ್ಮುಖವಾಗಿ ತಿರುಗಿರುವುವು. ವ್ಯಾಯಾಮದಿಂದ ಹುಟ್ಟಿದ ಬೆವರಿನ ಹನಿಗಳಿಂದ ಕೂಡಿ ಅವಳ ಮುಖವು ರಮಣೀಯವಾಗಿರುವುದು. ಎರಡನೆಯ ಅಂಕವು ಆರಂಭವಾಗುವ ವೇಳೆಗೆ ವಾಸವದತ್ತೆಯು ಪದ್ಮಾವತಿಯ ನ್ಯಾಸವಾಗಿ ಸ್ವಲ್ಪಕಾಲವಾಗಿರುವುದು. ಕೆಲವು ತಿಂಗಳುಗಳಾಗಿಯೇ ಇರಬೇಕು. ಏಕೆಂದರೆ, ಉದಯನನು ವಾಸವದತ್ತಾವಿಯೋಗ ದುಃಖವನ್ನು ಸ್ವಲ್ಪ ಕಡಮೆ ಮಾಡಿಕೊಂಡು, ರಾಜ್ಯಪ್ರಾಪ್ತಿಗೋಸ್ಕರ ಮಗಧರಾಜನಾದ ದರ್ಶಕನ ಸಹಾಯವನ್ನು ಕೇಳಲು ಬರುವನು. ವಾಸವದತ್ತೆಗೂ, ಪದ್ಮಾವತಿಯೊಡನೆ ಸಲಿಗೆಯಾಗಿರುವುದು. ಅವಳು ಪದ್ಮಾವತಿಯೊಡನೆ ಮಾತನಾಡುವಾಗ, "ಹಲಾ" ಎಂದು ಪ್ರಯೋಗಿಸುವುದರಿಂದ ನಾವು ಇದನ್ನು ಗೊತ್ತುಮಾಡಿಕೊಳ್ಳಬಹುದು. ಪದ್ಮಾವತಿಗೂ ವಾಸವದತ್ತೆಯಲ್ಲಿ ಪ್ರೀತಿಗೌರವಗಳುಂಟಾಗಿರುವುವು. ಅವಳು ವಾಸವದತ್ತೆಯನ್ನು, "ಆರ್ಯೇ" ಎಂದು

ಸಂಬೋಧಿಸುವಳು. ವಾಸವದತ್ತೆಯೂ ತನ್ನ ಪತಿವಿರಹ ದುಃಖವನ್ನು ಸ್ವಲ್ಪ ಮರೆತುಕೊಂಡಿರುವಳು. ಇದಕ್ಕೆಲ್ಲ ಸ್ವಲ್ಪಕಾಲವು ಹಿಡಿದೇ ಇರಬೇಕು. ವಾಸವದತ್ತೆಯು ಚದರಿಹೋಗಿರುವ ಚೆಂಡನ್ನು ತಂದು ಕೊಡುವಳು. ಪದ್ಮಾವತಿಯ ಆಟಕ್ಕೆ ನೆರವಾಗಿ ದೂರ ಚದರಿಹೋದ ಚೆಂಡನ್ನು ತಂದುಕೊಡುವ ಕೆಲಸವನ್ನು ವಾಸವದತ್ತೆಯೇ ವಹಿಸಿರುವಳು. ವಾಸವದತ್ತೆಯೇನೂ ವಯಸ್ಸು ಕಳೆದ ವೃದ್ಧಳಲ್ಲ. ಅವಳು ಉದಯನ ನೊಡನೆ ಹೊರಟುಹೋಗಿ, ಅವರ ವಿವಾಹವು ನೆರವೇರಿದ ಸ್ವಲ್ಪಕಾಲಕ್ಕೇ ಅವಳಿಗೆ ಕಂಡು ಕೇಳದ ಕಷ್ಟವು ಒದಗಿತು. ಆದುದರಿಂದ ಅವಳ ವಯಸ್ಸು ಎಷ್ಟೇ ಹೆಚ್ಚೆಂದರೂ ಇಪ್ಪತ್ತು ಇಪ್ಪತ್ತೊಂದು ವರುಷಗಳಿಗೆ ಹೆಚ್ಚಾಗಿರಲಾರದು. ಪದ್ಮಾವತಿಗೆ ಹದಿನಾರು ಹದಿನೇಳು ವರುಷ ವಯಸ್ಸಾಗಿರಬಹುದು. ಆದುದರಿಂದ, ಅವರೀರ್ವರಿಗೂ ಸ್ನೇಹದ ಹೊಂದಿಕೆಗೆ ಸರಿಯಾದ ವಯಸ್ಸೇ. ವಾಸವದತ್ತೆಯು ಪದ್ಮಾವತಿಯನ್ನು ಸಹಾಸ್ಯದೃಷ್ಟಿಯಿಂದ ನೋಡುತ್ತ ಹೆಚ್ಚುಕಾಲ ಚೆಂಡಾಡಿದುದರಿಂದ ಅತ್ಯಂತವಾಗಿ ಕೆಂಪಾದ ಅವಳ ಕೈಗಳು ಪರಕೀಯರ ಕೈಗಳಂತೆ* ತೋರುವುವೆಂದು ಹೇಳುವಳು. ಪದ್ಮಾವತಿಗೆ ವಿವಾಹದ ವಯಸ್ಸೆಂಬುದನ್ನು ಅತಿಸೂಕ್ಷ್ಮವಾಗಿ ಸೂಚಿಸಿ ವಿನೋದ ಮಾಡುವ ಸೊಬಗು ಇದು! ಪದ್ಮಾವತಿಯು, "ಆರ್ಯೇ! ನನ್ನನ್ನು ಹಾಸ್ಯಮಾಡುವುದಕ್ಕೋ ಎಂದು ತೋರುವ ಹಾಗೆ ಹೀಗೇಕೆ ನೋಡುತ್ತಿರುವೆ?" ಎಂದು ಕೇಳುವಳು. ವಾಸವದತ್ತೆಯು, "ನಹಿ ನಹಿ! ಹಲಾ! ಅಧಿಕಂ ಅದ್ಯ ಶೋಭಸೇ। ಅಭಿತ ಇವ ತೇ ಅದ್ಯ ವರಮುಖಂ ಪಶ್ಯಾಮಿ॥" ಎಂದು ಹೇಳುವಳು. ನೀನು

---

* "ಹಳಾ! ಅದಿಚಿರಂ ಕಂದುಏಣ ಕೀಳಿಅ ಅಹಿಅಸಂಜಾದ ರಾಅ ಪರಕೇರಅ ವಿಅ ದೇ ಹತ್ಥಾ ಸಂವುತ್ತಾ॥ (ಹಲಾ! ಅತಿಚಿರಂ ಕಂದುಕೇನ ಕ್ರೀಡಿತ್ವಾಧಿಕ ಸಂಜಾತ ರಾಗೌ ಪರಕೀಯಾವಿವ ತೇ ಹಸ್ತೌ ಸಂವೃತ್ತೌ)

ಇಲ್ಲಿ "ಪರಕೀಯಾವಿವ" ಎಂಬುದರಿಂದ ಪಾಣಿಗ್ರಹಣ ಸೂಚನೆಯು ತಿಳಿಹಾಸ್ಯವು ರಮಣೀಯವಾಗಿದೆ. ಧ್ವನಿಯಿಂದ ಹಾಸ್ಯಮಾಡುವ ವಿಧಾನವನ್ನು ವಾಸವದತ್ತಾ ದೇವಿಯ ಅಂತಸ್ತಿಗೆ ತಕ್ಕಂತೆ ಕವಿಯು ಚಾತುರ್ಯದಿಂದ ಅಳವಡಿಸಿದ್ದಾನೆ.

ಇಂದು ಅತಿ ಸುಂದರಳಾಗಿ ಕಾಣುವೆ. ಅದುದರಿಂದ ಎಲ್ಲ ಕಡೆಗಳಿಂದಲೂ ದೃಷ್ಟಿಯನ್ನು ಸುತ್ತುಗಟ್ಟಿ ನಿನ್ನ ಮುಖವನ್ನೇ ನೋಡುತ್ತಿದ್ದೇನೆ-ಎಂಬ ಅರ್ಥವೂ ಇದಕ್ಕಾಗುತ್ತದೆ. "ವರಮುಖಂ" ಎಂದಿರುವುದರಿಂದ, ವಿನೋದಕ್ಕೋಸ್ಕರ ವರನ ಮುಖವೆಂದು ಸೂಚಿತವಾಗಿ ಮತ್ತಷ್ಟು ರಮಣೀಯವಾದ ಹಾಸ್ಯವೂ ಇದೆ. ಇದನ್ನು ಕೇಳಿ ಪದ್ಮಾವತಿಯು ಕಪಟ ಕೋಪವನ್ನು—ಮನಸ್ಸಿನ ತೃಪ್ತಿಯು ಮುಖದಮೇಲೆ ಮೂಡಿದ್ದರೂ ಹುಸಿಮುಳಿಸನ್ನು—ತೋರಿಸಿ, "ಹೋಗು. ನೀನು ನನ್ನನ್ನು ಅಪಹಾಸ್ಯ ಮಾಡಬೇಡ" ಎಂದು ಹೇಳುವಳು. ಅದಕ್ಕೆ ವಾಸವದತ್ತೆಯು, "ಮುಂದೆ ಮಹಾಸೇನನ ವಧುವಾಗುವವಳೆ! ಇದೋ ಸುಮ್ಮನಾಗುತ್ತೇನೆ" ಎಂದು ಉತ್ತರ ಕೊಟ್ಟು ಹಾಸ್ಯಮಾಡುವಳು. ಮೇಲೆ ನೋಡಲು ಇದು ಹಾಸ್ಯಮಯವಾಗಿ ತೋರಿದರೂ, ವಾಸವದತ್ತೆಯ ನಿಜವಾದ ಉದ್ದೇಶವೇ ಬೇರೆ.

ಮೊದಲನೆಯ ಅಂಕದಲ್ಲಿ ಉದಯನನ ಮೇಲಣ ಅನುರಾಗವು ಪದ್ಮಾವತಿಯ ಹೃದಯದಲ್ಲಿ ಅಂಕುರಿಸಿದ ಸುಳುಹು ನಮಗೆ ತೋರಿಬರುತ್ತದೆ. ಅಗಿನಿಂದ ಎರಡನೆಯ ಅಂಕವು ಪ್ರಾರಂಭವಾಗುವವರೆಗಿನ ಮಧ್ಯಕಾಲದಲ್ಲಿ ಅದು ಸ್ವಲ್ಪ ವೃದ್ಧಿಹೊಂದಿರುವಂತೆ ತೋರುತ್ತದೆ. ಪದ್ಮಾವತಿಯು ಉದಯನನನ್ನು ನೋಡಿಲ್ಲದೆ ಇದ್ದರೂ, ಅವನ ಗುಣಗಳಿಗೆ ಮನಸೋತು, ತನ್ನ ಹೃದಯವನ್ನು ಅವನಿಗೆ ಒಪ್ಪಿಸುವ ಯೋಚನೆ ಮಾಡಿರುವಂತೆಯೂ ತೋರುವುದು. ಅವಳು ಅನೇಕವೇಳೆ ಉದಯನನ ಗುಣಗಳನ್ನು ಕುರಿತು ವಾಸವದತ್ತೆಯೊಡನೆ ಪ್ರಸ್ತಾವಿಸಿದ್ದರೂ ಇರಬಹುದು. ಅಂತು, ಪದ್ಮಾವತಿಯು ಉದಯನನಲ್ಲಿ ಅನುರಾಗವನ್ನು ನೆಲೆಗೊಳಿಸಲು ಆರಂಭಿಸಿರಬಹುದೇ ಎಂಬುದಾಗಿ ವಾಸವದತ್ತೆಗೆ ಅಲ್ಪಸ್ವಲ್ಪ ಅನುಮಾನವು ಹುಟ್ಟಿರಬೇಕು. ಆದರೂ ಹೃದಯವು ಹೇಳುತ್ತಿರುವುದನ್ನು ಕೇಳದೆ, ಹಾಗೆಂದಿಗೂ ಇರಲಾರದೆಂದೂ, ಅವಳು ತನ್ನ ಸಹೋದರನನ್ನೇ ವರಿಸಬಹುದೆಂದೂ ವಾಸವದತ್ತಾ ದೇವಿಯು ಭಾವಿಸಿಕೊಂಡಿರಬೇಕು. ಆದರೂ ಪದ್ಮಾವತಿಯ ಮನೋಗತವನ್ನು ತಿಳಿದುಕೊಳ್ಳಲು ಅವಳು ಅಂಬಿನ ವೇಗದಲ್ಲಿ ಮಾತನಾಡಿ "ಭವಿಷ್ಯನ್ಮಹಾಸೇನವಧೂಃ" (ಮುಂದೆ ಮಹಾಸೇನನ ವಧುವಾಗತಕ್ಕವಳೆ) ಎಂದು ಸಂಬೋಧಿಸುವಳು. ಪದ್ಮಾ

ವತಿಯು, "ಈ ಮಹಾಸೇನನೆಂಬವನು ಯಾರು ?" ಎಂದು ಕೇಳು ವಳು. ಮಹಾಸೇನನು ಮಾವನಾಗುವ ಕಡೆಗೆ ಪದ್ಮಾವತಿಯ ದೃಷ್ಟಿಯು ತಿರುಗಿದರೆ ಸಾಕೆಂಬುದೇ ವಾಸವದತ್ತೆಯ ನಿರೀಕ್ಷೆ. ಆದುದರಿಂದ, ಅವಳು ಮಹಾಸೇನನ ವೈಭವವನ್ನು ಸಂಭ್ರಮದಿಂದ ವಿವರಿಸುತ್ತ "ಉಜ್ಜಯಿನಿಯಲ್ಲಿ ಪ್ರದ್ಯೋತನೆಂಬ ರಾಜನಿರುವನು ಅವನ ಸೈನ್ಯಬಲವು ಅಗಾಧವಾದುದು. ಹೀಗೆ ಅಪರಿಮಿತವಾದ ಸೈನ್ಯವಿರುವುದರಿಂದ ಅವನಿಗೆ ಮಹಾಸೇನನೆಂಬ ಹೆಸರು" ಎಂದು ಹೇಳುವಳು. ಪದ್ಮಾವತಿಯು ಆತನ ಮಗನನ್ನು ವರಿಸಲು ಇಷ್ಟಪಡುವುದಿಲ್ಲವೆಂದು ಚೇಟಿಯು ತಿಳಿಸುವಳು. ಆಗ, ವಾಸವದತ್ತೆಯ ಹೃದಯವು, "ನಾನು ಮೊದಲೇ ಸೂಚಿಸಲಿಲ್ಲವೆ?" ಎಂದು ಅವಳ ಕರ್ಣ ಕುಹರಗಳಲ್ಲಿ ಧ್ವನಿಯನ್ನೆಬ್ಬಿಸಿರಬೇಕು. ವಾಸವದತ್ತೆಯು ಜೀವವನ್ನು ಬಿಗಿಹಿಡಿದು "ಹಾಗಾದರೆ ಯಾರನ್ನು ವರಿಸಲಿಚ್ಛಿಸುವಳು ?" ಎಂದು ಕೇಳುವಳು. ಚೇಟಿಯು, "ವತ್ಸರಾಜನಾದ ಉದಯನನೆಂಬ ಅರಸನಿದ್ದಾನೆ. ರಾಜಕುಮಾರಿಯು ಅವನ ಗುಣಗಳನ್ನು ಮೆಚ್ಚಿ ಮನಸೋತಿದ್ದಾಳೆ." ಎಂದು ಉತ್ತರ ಹೇಳುವಳು. ಆಗ ವಾಸವದತ್ತಾ ದೇವಿಯು ತನ್ನಲ್ಲಿ ತಾನು, "ಆರ್ಯ ಪುತ್ರನನ್ನು ವರಿಸಲಿಚ್ಛಿಸುವಳು" ಎಂದು ಕೊಳ್ಳುವಳು. ಈ ಮಾತುಗಳನ್ನು ನೋಡಿದರೆ, ಮೊದಲಿನಿಂದಲೂ ಆ ವಿಚಾರದಲ್ಲಿ ಅಲ್ಪಸ್ವಲ್ಪ ಅನುಮಾನ ಹುಟ್ಟಿದ್ದರೂ ಹುಟ್ಟಿರಬಹುದೆಂದು ತೋರುವುದು. ಮಹಾಸೇನನ ರಾಣಿಯರಲ್ಲಿ ಅಂಗಾರವತಿಯೇ ಹಿರಿಯಳು. ಇದರ ಮೇಲೆ ಅಂಗಾರವತಿಯು ಮನುಷ್ಯ ಮಾತ್ರರಲ್ಲಿ-ಅವರು ಎಂತಹವರೇ ಆಗಿದ್ದರೂ-ದ್ವೇಷವನ್ನರಿಯದ ಸಾಧ್ವಿ. ಪ್ರೇಮ ಮೂರ್ತಿಯಾದ ಪರಿಶುದ್ಧಾತ್ಮಳು. ಉದಯನನಮೇಲೆ ಅವಳಿಗಿರುವ ವಾತ್ಸಲ್ಯದ ಒರತೆಯು ಮಗಳು ಮೃತಳಾದಳೆಂಬ ವಾರ್ತೆಬಂದಮೇಲೂ ಇಂಗಿ ಬರಿದಾಗಲೊಲ್ಲದು. ಅಂತಹವಳಿಂದ ಪಾಲಿತಳಾಗಿ, ತಾಯಿಗೆ ಹದಿನೈದು ಮಂದಿ ಸವತಿಯರಿರುವುದನ್ನು* ಕಂಡು ಅವರೊಡನೆ ಸೌಹಾರ್ದಭಾವದಿಂದಿದ್ದು, ಅಂಗಾರವತಿಯಂತಹವಳ ಪ್ರಿಯಪುತ್ರಿಯಾಗಿರತಕ್ಕವಳ ಹೃದಯ ವೈಶಾಲ್ಯವನ್ನು ವಿವ

---

* "ಷೋಡಶಾಂತಃಪುರ ಜ್ಯೇಷ್ಠಾ......" ಎಂದು ಮುಂತಾಗಿ ಹೇಳುವ ಉದಯನ ವಚನಗಳೇ ಇದಕ್ಕೆ ಪ್ರಮಾಣ.

ರಿಸುವುದು ತೀರ ಅಸಾಧ್ಯ. ಯಾವ ಕಾರಣದಿಂದ ಪದ್ಮಾವತಿಯು ಉದಯನನಲ್ಲಿ ಮನಸ್ಸಿಟ್ಟಿರುವಳೆಂದು ವಾಸವದತ್ತೆಯು ಕೇಳುವಳು. ಅವನು ಸದಯಹೃದಯನೆಂಬ ಕಾರಣದಿಂದ—ಎಂಬುದಾಗಿ ಚೇಟಿಯು ಉತ್ತರ ಹೇಳುವಳು. ವಾಸವದತ್ತೆಯು ಅದನ್ನು ಕೇಳಿ, "ಬಲ್ಲೆ, ಬಲ್ಲೆ; ಅದಕ್ಕಾಗಿಯೇ, ನಾನೂ ಉನ್ಮಾದಿನಿಯಾಗಿದ್ದೇನೆ" ಎಂದು ತನ್ನಲ್ಲಿ ತಾನು ಹೇಳಿಕೊಳ್ಳುವಳು. ಚೇಟಿಗೂ, ವಾಸವದತ್ತೆಗೂ, ಇಷ್ಟು ಮಾತುಗಳು ನಡೆಯುತ್ತಿದ್ದರೂ ಪದ್ಮಾವತಿಯು ಮರದ ಬೊಂಬೆಯಂತೆ ಮೌನವಾಗಿರುವಳು. ಅವಳ ಮನಸ್ಸು ಪ್ರೇಮ ಪ್ರವಾಹದಲ್ಲಿ ತೇಲಿಹೋಗುತ್ತಿರುವುದು ಮಾತನಾಡಲು ಅವಳಿಗೆ ಅವಕಾಶವೇ ಇಲ್ಲ. ಇದು ಚೇಟಿಗೂ ಗೊತ್ತು. ಆದುದರಿಂದಲೇ ಅವಳು, "ರಾಜಪುತ್ರಿ! ಆ ರಾಜನು ಕುರೂಪಿಯಾಗಿದ್ದರೆ ನೀನೇನು ಮಾಡುವೆ?" ಎಂದು ಸಿಡಿಮಿಂಚಿನಂತಹ ಪ್ರಶ್ನೆಯನ್ನು ಹಾಕುವಳು. ಉದಯನ ಪಕ್ಷಪಾತದಿಂದ ಸಮುದಾಚಾರದ ಹದ್ದನ್ನು ಮೀರಿ, ವಾಸವದತ್ತೆಯು ವೈಮರೆತು, "ಇಲ್ಲ, ಇಲ್ಲ, ಸುಂದರನಾಗಿಯೇ ಇದ್ದಾನೆ" ಎಂದು ಹೇಳಿಬಿಡುತ್ತಾಳೆ. ಪದ್ಮಾವತಿಯು, "ಆರ್ಯೇ! ನೀನು ಹೇಗೆ ಬಲ್ಲೆ?" ಎಂದು ಕೇಳುವಳು. ತಾನು ದುಡುಕಿ ನುಡಿದುದು ವಾಸವದತ್ತೆಗೆ ಆಗ ಗೋಚರವಾಗುವುದು. ಆದರೂ ಬುದ್ಧಿಮತಿಯಾದ ಅವಳು, ಏನು ಮಾಡಬೇಕೆಂಬುದನ್ನು ಕ್ಷಣಮಾತ್ರದಲ್ಲಿ ನಿರ್ಧರಿಸಿ "ಉಜ್ಜಯಿನಿಯ ಜನರು ಹೀಗೆ ಹೇಳಿಕೊಳ್ಳುತ್ತಾರೆ" ಎಂದು ಮಾತು ತಿರುಗಿಸುವಳು. ಪದ್ಮಾವತಿಯು, "ಯುಕ್ತವೇ ಸರಿ. ಉಜ್ಜಯಿನಿಯ ಜನರು ಆತನನ್ನು ನೋಡಿಯೇ ಇರಬೇಕು. ಸೌಂದರ್ಯವೆಂಬುದು ಸರ್ವರನ್ನೂ ಆಹ್ಲಾದಗೊಳಿಸತಕ್ಕುದು ತಾನೆ!" ಎಂದು ಉತ್ತರ ಹೇಳುವಳು. ಗಾಳಿಯ ಪರೆಯ ಹಾಗಿರುವ ಮುಸುಕಿನ ತೆರೆಯನ್ನು ಹಾರಿಸಿ ನಿಜತ್ವವನ್ನು ಅರಿಯಲು ಪದ್ಮಾವತಿಗೆ ಆಗಿನ ಸ್ಥಿತಿಯಲ್ಲಿ ಅಷ್ಟೊಂದು ಸಾಮರ್ಥ್ಯವಿರಲಿಲ್ಲ. ಒಂದುವೇಳೆ ಅವಳು ಅದಕ್ಕಾಗಿ ಪ್ರಯತ್ನಿಸಿದ್ದರೂ, ವಾಸವದತ್ತೆಯ ತೀಕ್ಷ್ಣಬುದ್ಧಿಯ ಎದುರಿಗೆ ಅವಳ ಸಾಹಸವು ನಡೆಯುವ ಹಾಗೂ ಇರಲಿಲ್ಲ. ಇದು ಹಾಗಿರಲಿ. ವಾಸವದತ್ತೆಯು ತನ್ನ ಮನಸ್ಸಿಗೇ ಮಂಕುಬೂದಿಯನ್ನೆರಚುವ ಮಾಯವು ಮತ್ತಷ್ಟು ಗೋಚರಿಸುವುದು, ಈ ಅಂಕದ ಮುಂದಣ ಕಥಾಭಾಗದಲ್ಲಿ.

ಧಾತ್ರಿಯು ಅವಸರದಿಂದ ದಿಗ್ಭ್ರಮೆ ಹಿಡಿದವಳಂತೆ ಓಡಿಬರುವಳು; ಪದ್ಮಾವತಿಯನ್ನು ಕೊಡುವಂತೆ ನಿಶ್ಚಯವಾದ ಸುದ್ದಿಯನ್ನು ಅವಳು ತಿಳಿಸುವಳು. "ಆರ್ಯಳೇ ! ಯಾರಿಗೆ ಕೊಡುವಂತೆ ?" ಎಂದು ವಾಸವದತ್ತೆಯು ಕೇಳುವಳು. "ವತ್ಸರಾಜನಾದ ಉದಯನನಿಗೆ" ಎಂದು ಧಾತ್ರಿಯು ಉತ್ತರ ಹೇಳುವಳು. ಸವತಿಯು ಬರುವ ದಾರುಣ ಸ್ಥಿತಿಯೊದಗುವಂತಿರುವ ಆಗಿನ ಸಮಯದಲ್ಲಿ ಕೂಡ ಪತಿಪರಾಯಣೆಯಾದ ಆ ಸಾಧ್ವಿಯು, "ಆ ರಾಜನು ಕುಶಲಿಯಾಗಿದ್ದಾನೆಯೆ ?" ಎಂದು ಕೇಳುವಳು. ಮರ್ಮಾಂತಿಕವಾದ ಯಾತನೆಯೂ ಈ ಪ್ರಶ್ನೆಯಲ್ಲಿದೆ. ವಾಸವದತ್ತೆಯ ಮನಸ್ಸು, "ನೋಡು, ನೋಡು, ನಿನ್ನನ್ನು ಅವನು ಮರೆತಿದ್ದಾನೆ" ಎನ್ನುತ್ತದೆ. ವಾಸವದತ್ತೆಯ ಅಂತರಾತ್ಮವು ಅದನ್ನು ವಂಚಿಸಿ, "ಇಲ್ಲ. ಅವನು ನನಗಾಗಿ ದುಃಖಿಸಿ ಕಂಗೆಟ್ಟಿದ್ದಾನೆ." ಎಂದು ಉತ್ತರ ಹೇಳುವುದು. ಆದರಿಂದಲೂ ಅವಳ ಬಾಯಿಂದ ಈ ಪ್ರಶ್ನೆಯು ಹೊರಡುವುದು. ವಾಸವದತ್ತೆಯೊಡನೆ ಧಾತ್ರಿಯು "ಆತನು ಕುಶಲಿಯಾಗಿಯೇ ಇಲ್ಲಿಗೆ ಬಂದನು. ರಾಜಪುತ್ರಿ ಪದ್ಮಾವತಿಯನ್ನು ಅವನಿಗೆ ಕೊಡುವುದಾಗಿ ನಿಶ್ಚಯವೂ ಆಯಿತು." ಎಂದು ಹೇಳುವಳು. ವಾಸವದತ್ತೆಯ ಭಾಗಕ್ಕೆ ಇವು ಸಿಡಿಲಿನಂತಹ ಮಾತುಗಳು. ಯಾತನೆಯನ್ನು ತಾಳಲಾರದೆ ಅವಳ ಹೃದಯವೇ ಕದಲಿ ಎದ್ದುಬರುವಂತಾಗುವುದು. ಆದರೂ, ಎಲ್ಲವನ್ನೂ ಅವಳು ಸಹಿಸಬೇಕು. ತಾನು ಇಂತಹವಳೆಂಬುದನ್ನು ಅವಳು ತಿಳಿಸಿದರೆ ಯೌಗಂಧರಾಯಣನ ಪ್ರಯತ್ನವು ಹದಗೆಡುವುದು. ಉದಯನನು ಮುಳುಗಿಹೋಗುವನು. ಅವಳು ತನ್ನ ಹೃದಯದಿಂದ ಏಳುವ ದುಃಖಾಗ್ನಿ ಜ್ವಾಲೆಯನ್ನು ತಾಳಲಾರದೆ ಕಳವಳಪಡುವಳು; "ಅಯ್ಯೋ ! ಇದು ಅತ್ಯಾಚಾರ" ಎಂದು ಬಿಡುವಳು. ಅತ್ಯಾಚಾರವೇನೆಂದು ಧಾತ್ರಿಯು ಕೇಳುವಳು. ತಾನು ದುಃಖಭರದಲ್ಲಿ ಬಾಯಿತಪ್ಪಿನುಡಿದುದು ಪೆಚ್ಚುಕೆಲಸವಾಯಿತೆಂದು ಬಗೆದು, ಅವಳು ತನ್ನ ಉದ್ವೇಗವನ್ನು ಅಡಗುಮೆಟ್ಟುವಳು. "ಇನ್ನೇನೂ ಇಲ್ಲ. ಅಷ್ಟುವಿಧವಾಗಿ ಹಾಗೆ ಸಂತಾಪ ಪಡುತ್ತಿದ್ದವನು ಈಗ ಉದಾಸೀನ ಭಾವವನ್ನು ಅವಲಂಬಿಸಿದನಲ್ಲಾ ಎಂದು ಹಾಗೆ ಹೇಳಿದೆ. ಅಷ್ಟೆ" ಎಂದು ಮಾತನ್ನು ತಿರುಗಿಸುವಳು. ಅವಳ ಚಿತ್ತಸಂಯಮಭಂಡಾರವು ಇನ್ನೆಷ್ಟು ದೊಡ್ಡದೋ ? ಇನ್ನೆಷ್ಟು

ಪೂರ್ಣವಾದುದೋ! ಅವಳಿಗೆ ಪದ್ಮಾವತಿಯ ವಿಷಯದಲ್ಲಿ ಎಳ್ಳಷ್ಟೂ ಕೋಪಮಾತ್ಸರ್ಯಗಳಿಲ್ಲ. ಮಿಡಿದರೆ ಸಿಡಿಯುವಷ್ಟು ಸಪತ್ನೀ ಮಾತ್ಸರ್ಯ ಪ್ರದರ್ಶನವು ಶ್ರೀಹರ್ಷನು ಸೃಷ್ಟಿಸಿದ ವಾಸವದತ್ತೆಗೇ ಸಾಧ್ಯ. ಉದಯನನು ಹೀಗೆ ಇಷ್ಟು ಬೇಗನೆ ತನ್ನನ್ನು ಮರೆತನಲ್ಲಾ-ಎಂಬುದೊಂದೇ ಅವಳ ಹೃದಯವೇದನೆ. ಆದರೂ, ಪತಿಯಮೇಲಣ ಪ್ರೇಮದ ದೆಸೆಯಿಂದ, ಅವನದು ಅಪರಾಧವಿಲ್ಲವೆಂದು ನಂಬಲು ಹೇಗಾದರೂ ಕಾರಣವನ್ನು ಹುಡುಕಬೇಕೆಂಬುದು ಅವಳ ಸಂಕಲ್ಪ. ಆದುದರಿಂದಲೇ, ಅವಳು ತನ್ನ ಮನಸ್ಸನ್ನು ತಾನೇ ವಂಚಿಸಿ, ಹುರುಳಿಲ್ಲದ ನೆಪಮಾತ್ರದ ಕಾರಣವನ್ನು ಹುಡುಕುವಳು. ಅವಳು ಸದುದ್ದೇಶದಿಂದ ಸದ್ಭಾವನೆಗೆ ನೆಪಮಾತ್ರದ ಕಾರಣವನ್ನು ಕಲ್ಪಿಸಿ ಕೊಳ್ಳುವಳು. ವಾಸವದತ್ತೆಯು, "ಆರ್ಯೇ! ಅವನು ತಾನಾಗಿಯೇ ವರಿಸಿದನೆ?" ಎಂದು ಧಾತ್ರಿಯನ್ನು ಕೇಳುವುದರ ಒಳಗುಟ್ಟೇ ಇದು. ಧಾತ್ರಿಯು, "ಇಲ್ಲ ಇಲ್ಲ; ಆತನು ಮತ್ತಾವುದೋ ಒಂದು ಕೆಲಸದಮೇಲೆ ಇಲ್ಲಿಗೆ ಬಂದನು. ಆತನ ಅಭಿಜಾತ್ಯ ವಿಜ್ಞಾನ ವಯೋ ರೂಪಗಳನ್ನು ನೋಡಿ, ಮಹಾರಾಜನು ಅವನು ಪದ್ಮಾವತಿಯನ್ನು ವರಿಸುವಂತೆ ತಾನಾಗಿಯೇ ಕೇಳಿದನು" ಎಂದು ಉತ್ತರ ಹೇಳುವಳು. ದರ್ಶಕ ಮಹಾರಾಜನು ತಾನಾಗಿಯೇ ಕೇಳಿರಬಹುದು. ಆದರೆ ಒಪ್ಪಿದವನು ಉದಯನನೇ ತಾನೆ? ವಾಸವದತ್ತೆಯ ಮನಸ್ಸು ಆ ಕಡೆಗೇ ಸುಳಿಯದು. ಅವಳು ತನ್ನ ಹೃದಯ ಮನಸ್ಸುಗಳಿಗೆ ತಾನೇ ಮಂಕು ಬೂದಿಯನ್ನು ತಳೆಯುತ್ತಿದ್ದಾಳೆ. ಕಾರ್ಯಕ್ಕೋಸ್ಕರ ಕಾರಣವನ್ನು ಕಲ್ಪಿಸಿಕೊಳ್ಳುತ್ತಿದ್ದಾಳೆ. ಉದಯನನು ನಿರ್ದೋಷಿಯೆಂಬುದನ್ನು ದೃಢಪಡಿಸಬೇಕಾದುದೇ ಕಾರ್ಯ. ಅದು ಮೊದಲೇ ಸಿದ್ಧವಾಗಿ ಹೋಗಿದೆ. ಕಾರಣವು ಮೊದಲು ಹುಟ್ಟಿ ಅದರ ದೆಸೆಯಿಂದ ಕಾರ್ಯವಾಗುವುದು ತಪ್ಪಿ, ಕಾರ್ಯವಾದಮೇಲೆ ಕಾರಣವು ಸಿದ್ಧವಾಗಬೇಕಾಗಿದೆ. ಧಾತ್ರಿಯ ಈ ಉತ್ತರದಿಂದ ವಾಸವದತ್ತೆಯು ತೃಪ್ತಳಾಗಿ, "ಹಾಗಾದರೆ ಈ ವಿಷಯದಲ್ಲಿ ಆರ್ಯಪುತ್ರನು ನಿರಪರಾಧಿಯೇ ಸರಿ" ಎಂದು ತನ್ನ ಮನಸ್ಸಿಗೆ ತಾನೆ ಉಪದೇಶ ಹೇಳಿಕೊಳ್ಳುವಳು. ಆದುದರಿಂದಲೇ ಅವಳು ಉಜ್ಜ್ವಲ ಪತಿಪ್ರೇಮದಿಂದ ಪತಿಯ ವಿಷಯದಲ್ಲಿ ಸದ್ಭಾವನೆಯಿಂದಿರಲು ಇಲ್ಲದ ಪೊಳ್ಳುಕಾರಣವನ್ನು

ಕಲ್ಪಿಸಿಕೊಂಡು ಅದೇ ನಿಜವೆಂದು ನಂಬಿ, ಅದಕ್ಕೇ ಪ್ರಾಧಾನ್ಯವನ್ನು ಕೊಟ್ಟು, ಆದರ ಕಡೆಗೇ ಬೆರಳನ್ನು ತೋರಿಸಿ, ಏತನ್ನಿಮಿತ್ತವಾಗಿ ಆರ್ಯ ಪುತ್ರನು ನಿರಪರಾಧಿಯೆಂದು ನಿರ್ಧರಿಸುವುದು. ಆದರೂ ಮನಸ್ಸಿನ ಕಳವಳವು ಇದ್ದೇ ಇವೆ. ಹೃದಯ ವೇದನೆಯು ಕಡೆಗೂ ತಲೆದೋರುತ್ತದೆ. ಮಂಗಳ ಕಾರ್ಯಗಳನ್ನು ಬೇಗಬೇಗ ಮುಗಿಸಲು ಧಾತ್ರಿಯು ಪದ್ಮಾವತಿ ಯನ್ನು ತ್ವರೆಗೊಳಿಸಿ ಕರೆದುಕೊಂಡು ಹೋಗಲು ಉದ್ಯುಕ್ತಳಾಗುತ್ತಾಳೆ. "ಇವರು ಎಷ್ಟೆಷ್ಟು ಹೆಚ್ಚಾಗಿ ತ್ವರೆಗೊಳಿಸುವರೋ, ಅಷ್ಟಷ್ಟು ಹೆಚ್ಚಾಗಿ ನನ್ನ ಹೃದಯವು ಅಂಧಕಾರಾವೃತವಾಗುತ್ತದೆ." ಎಂದು ವಾಸವದತ್ತೆಯು ತನ್ನಲ್ಲಿತಾನು ಹೇಳುಕೊಳ್ಳುತ್ತಾಳೆ. ಬಳಿಕ ಎಲ್ಲರೂ ಹೊರಟುಹೋಗುತ್ತಾರೆ.

**ಮೂರನೆಯ ಅಂಕ**:—ಅಂದು ಪದ್ಮಾವತಿಯ ವಿವಾಹವೇಳೆಯು ಸಮೀಪಿಸಿರುವುದು. ವಿವಾಹಾಮೋದ ಮಧ್ಯದಲ್ಲಿ ಪದ್ಮಾವತಿಯನ್ನು ಬಿಟ್ಟು, ವಾಸವದತ್ತೆಯು ನೊಂದ ಮನಸ್ಸನ್ನು ಸ್ವಲ್ಪ ಕಣ್ಣೀರುಸುರಿಸಿ ಸಂತವಿಟ್ಟುಕೊಳ್ಳಲು ಪ್ರಮದವನಕ್ಕೆ ಬರುವಳು. ಆಗ ಅವಳು ತನ್ನಲ್ಲಿ ತಾನು ಮಾತನಾಡಿಕೊಳ್ಳುವುದನ್ನು ನೋಡಿ ನಮ್ಮ ಮನಸ್ಸು ವ್ಯಥೆಯಿಂದ ತಲ್ಲಣಿಸುವುದು. ಅವಳು, "........ಈಗ ಆರ್ಯ ಪುತ್ರನೂ ಪರಕೀಯ ನಾಗಿ ಪರಿಣಮಿಸಿದನು. ಚಕ್ರವಾಕ ವಧುವೇ ಧನ್ಯಳು. ಪತಿಯನ್ನಗ ಲಿದ ಉತ್ತರಕ್ಷಣವೇ ಅವಳು ಮೃತಳಾಗುವಳು. ನನ್ನ ಪ್ರಾಣಗಳೂ ಹೋಗುವುದಿಲ್ಲ. ಆರ್ಯ ಪುತ್ರನನ್ನು ಮುಂದೆ ಕಾಣುವೆನೆಂಬ ಈ ಮನೋರಥವೊಂದರಿಂದಲೇ ಮಂದಭಾಗ್ಯಳಾದ ನಾನು ಜೀವಿಸಿರುವೆನು." ಎಂದುಹೇಳಿ ಪೇಚಾಡುವುದನ್ನು ನೋಡಿ ನಮ್ಮಹೃದಯವು ಅನುತಾಪದಿಂದ ಕರಗಿ ನೀರಾಗುವುದು. ಅವಳು ಇಲ್ಲದ ನೆವವನ್ನು ಕಲ್ಪಿಸಿಕೊಂಡು, ತನ್ನ ಮನಸ್ಸಿಗೆ ತಾನೇ ಮಂಕು ಕವಿಸಿಕೊಳ್ಳುವ ಅವಸ್ಥೆಯು ಮುಗಿದುಹೋ ಯಿತು. ಅವಳಿಗೆ ಈಗ ಸಹಿಸಲಾರದಷ್ಟು ಸಂಕಟವು ಒದಗಿದೆ. ಅವಳ ಈ ಮಾತುಗಳಿಂದ ಅವಳಿಗೆ ಒದಗಿರುವ ದಾರುಣವಾದ ಶೋಕವೂ. ಅವಳ ಪತಿಪ್ರೇಮವೂ ಎರಡೂ ವ್ಯಕ್ತವಾಗುತ್ತವೆ. ತನ್ನ ಪತಿಯು ಪರಕೀಯನಾದು ದೇ ಅವಳಿಗೆ ಮರಣಯಾತನೆ. ಅದಕ್ಕಾಗಿ ಅವಳು ತನ್ನ ದೌರ್ಭಾಗ್ಯವನ್ನು ಹಳಿದುಕೊಳ್ಳುವಳು. ಅವಳಿಗೆ ಸವತಿಮಾತ್ಸರ್ಯವಿಲ್ಲ. ಆದರೆ, ಇದು ಸ್ವಭಾವ

ವಿರುದ್ಧವಲ್ಲವೇ ಎಂದು ಕೆಲವರು ಶಂಕಿಸಬಹುದು. ಇದು ಸ್ವಭಾವ ವಿರುದ್ಧವೆಂದು ತೋರುವುದನ್ನು ತಪ್ಪಿಸುವುದಕ್ಕಾಗಿಯೇ ಕವಿಯು ಅವಳಿಗೆ ಪದ್ಮಾವತಿಯಲ್ಲಿ ಸೋದರಿಯಂತೆ ಆತ್ಮೀಯತೆಯನ್ನುಂಟುಮಾಡಿ ಕಾಲವು ಕಳೆದ ಹಾಗೆಲ್ಲ ಅದು ವೃದ್ಧಿಯಾಗುವಂತೆ ಮಾಡಿರುವುದು. ಸ್ವಭಾವತಃ ಅವಳು ಸಾನುಕ್ರೋಶ ಬುದ್ಧಿಯುಳ್ಳ ಸರಳಹೃದಯೆ. ಅಲ್ಲದೆ ಅವಳು ತನ್ನ ತಾಯಿಗೆ ಹದಿನೈದು ಮಂದಿ ಸವತಿಯರಿದ್ದುದನ್ನು ಕಂಡುಕಂಡು ಆ ಸನ್ನಿವೇಶದಲ್ಲಿ ಬಳೆದವಳು. ಎಲ್ಲಕ್ಕೂ ಮಿಗಿಲಾಗಿ ವಾಸವದತ್ತೆಯು ಸ್ವಾರ್ಥತ್ಯಾಗದ ಪರಮಪದ ಸೋಪಾನವನ್ನೇರಿ ಪತಿಯ ಸುಖಕ್ಕಾಗಿ ತನ್ನ ಸುಖವನ್ನೆಲ್ಲ ಬೇಕಾದರೂ ಸಮರ್ಪಿಸಲು ಸಿದ್ಧವಾಗಿ ನಿಂತಿರುವ ಸಾಧ್ವೀಮಣಿ.

ಅವಳ ಸತ್ವಪರೀಕ್ಷೆಯು ಅಲ್ಲಿಗೇ ಮುಗಿಯಲಿಲ್ಲ. ಹೂವಿನ ಬುಟ್ಟಿಯನ್ನು ಹಿಡಿದು ಚೇಟಿಯೊಬ್ಬಳು ಆವಂತಿಕೆಯ ಹೆಸರಿನ ವಾಸವದತ್ತೆಯನ್ನು ಹುಡುಕಿಕೊಂಡು ಬರುವಳು. ವಾಸವದತ್ತೆಯು (ಎಂದರೆ ಆವಂತಿಕೆಯು) "ಮಹಾಕುಲಪ್ರಸೂತೆಯು, ಸ್ನಿಗ್ಧಸ್ವಭಾವವುಳ್ಳವಳು, ನಿಪುಣೆಯು" ಎಂಬುದಾಗಿ ಮಹಾರಾಣಿಯು ಹೇಳಿದಳೆಂದು ತಿಳಿಸಿ, "ಆದಕ್ಕಾಗಿ ನೀನೇ ಕೌತುಕಮಾಲಿಕೆಯನ್ನು ಕಟ್ಟಬೇಕು" ಎಂದು, ಚೇಟಿಯು ಅವಳಿಗೆ ಹೇಳುವಳು. ಯಾರಿಗಾಗಿ ಮಾಲೆಯನ್ನು ಕಟ್ಟಬೇಕೆಂದು ವಾಸವದತ್ತೆಯು ಕೇಳುವಳು. "ಪದ್ಮಾವತಿಗಾಗಿ" ಎಂದು ಚೇಟಿಯು ಉತ್ತರ ಕೊಡುವಳು. ವಿವಾಹ ಮಾಲೆಯನ್ನೂ ತಾನೇ ಕಟ್ಟಬೇಕಾದ ಪ್ರಸಂಗವು ಒದಗಿದುದಕ್ಕಾಗಿ ವಾಸವದತ್ತೆಯು ವ್ಯಥೆಪಟ್ಟು "ಇದನ್ನೂ ನಾನೇ ಮಾಡಬೇಕಾಯಿತೆ? ಅಯ್ಯೋ! ದೇವರಿಗೆ ಕರುಣೆಯಿಲ್ಲ" ಎಂದು ತನ್ನಲ್ಲಿ ತಾನು ಹೇಳಿಕೊಳ್ಳುವಳು. ಮಾಲೆಯನ್ನು ಬೇಗನೆ ಕಟ್ಟುವಂತೆ ಚೇಟಿಯು ತ್ವರೆಗೊಳಿಸುವಳು. ಆ ಬಳಿಕ ನಡೆಯುವ ಸಂಭಾಷಣೆಯಲ್ಲಿ ಕರುಣಾರಸವು ತುಂಬಿದೆ:

**ವಾಸವದತ್ತೆ:**—(ತನ್ನಲ್ಲಿ ತಾನು) "ನನಗೆ ಇನ್ನಾವ ಮಾತಿನ ಯೋಚನೆಯೂ ಬೇಡವಾಗಿದೆ." (ಪ್ರಕಾಶವಾಗಿ) "ನೀನು ವರನನ್ನು ನೋಡಿದೆಯಾ?"

**ಚೇಟಿ:**—"ನೋಡಿದೆ; ನೋಡಿದೆ. ರಾಜಕುಮಾರಿ ಪದ್ಮಾವತಿಯ ಮೇಲಣ ಸ್ನೇಹದಿಂದಲೂ, ನಮಗಿದ್ದ ಕುತೂಹಲದಿಂದಲೂ, ನೋಡಿದೆ"

ವಾಸವದತ್ತೆ:—"ವರನು ಹೇಗಿದ್ದಾನೆ?"

ಚೇಟಿ:—"ಆರ್ಯಳೆ! ಇಂತಹವನನ್ನು ಹಿಂದೆ ನೋಡಿಯೇ ಇರಲಿಲ್ಲ."

ವಾಸವದತ್ತೆ:—"ಹೇಳು, ಹೇಳು; ಸುಂದರನಾಗಿದ್ದಾನೆಯೆ?"

ಚೇಟಿ:—"ಶರಚಾಪಗಳನ್ನು ಹಿಡಿಯದೇ ಇರುವ ಕಾಮದೇವನೆಂದೇ ಹೇಳಬಹುದು."

ವಾಸವದತ್ತೆ:—"ಸಾಕು, ಸಾಕು, ಇನ್ನು ಸಾಕು."

ಚೇಟಿ:—"ಹೀಗೇಕೆ ತಡೆಗಟ್ಟುವೆ?"

ವಾಸವದತ್ತೆ:—"ಪರಪುರುಷ ಸಂಕೀರ್ತನೆಯನ್ನು ಕೇಳುವುದು ಅಯುಕ್ತವಾದುದು."

ಚೇಟಿ:—"ಹೋಗಲಿ. ಆರ್ಯಳೆ, ಹೂ ಮಾಲೆಯನ್ನು ಬೇಗ ಕಟ್ಟುವುತ್ತೆ."

ವಾಸವದತ್ತೆ:—"ಆಗಲಿ, ಕಟ್ಟುತ್ತೇನೆ. ಇಲ್ಲಿ ತಾ."

ಚೇಟಿ:—"ಆರ್ಯಳೆ, ತೆಗೆದುಕೋ."

ವಾಸವದತ್ತೆ:—(ಬುಟ್ಟಿಯಲ್ಲಿದ್ದುದನ್ನು ಸುರಿದು ನೋಡಿ) "ಈ ಮೂಲಿಕೆಯು ಯಾವುದು?"

ಚೇಟಿ:—"ಇದು ಅವಿಧವಾಕರಣವೆಂಬ ಮೂಲಿಕೆ."

ವಾಸವದತ್ತೆ:—(ಆತ್ಮಗತ) "ಪದ್ಮಾವತಿಗಾಗಿಯೂ, ನನಗಾಗಿಯೂ, ಇದನ್ನು ಅಲ್ಲಲ್ಲಿ ಹೆಚ್ಚಾಗಿ ಸೇರಿಸಿ ಕಟ್ಟಬೇಕು." (ಪ್ರಕಾಶ) "ಇದು? ಈ ಮೂಲಿಕೆಯ ಹೆಸರೇನು?"

ಚೇಟಿ:—"ಇದು ಸಪತ್ನೀಮರ್ದನವೆಂಬ ಮೂಲಿಕೆ"

ವಾಸವದತ್ತೆ:—"ಇದನ್ನು ಸೇರಿಸಿ ಕಟ್ಟಬೇಕಾಗಿಲ್ಲ."

ಚೇಟಿ:—"ಅದೇಕೆ?"

ವಾಸವದತ್ತೆ:—"ಆ ರಾಜನ ಹೆಂಡತಿಯು ಮೃತಳಾಗಿಯೇ ಹೋಗಿದ್ದಾಳೆ. ಆದುದರಿಂದ ನಿಷ್ಪ್ರಯೋಜನವಾಗಿ ಅದನ್ನೇಕೆ ಕಟ್ಟಬೇಕು?"

ಈ ಸಂಭಾಷಣೆಯನ್ನು ಸೇರಿಸುವುದರಲ್ಲಿ ಕವಿಯು ರೂಪಕರಚನಾ ಸಾಮರ್ಥ್ಯ ನೈಪುಣ್ಯವು ಎಷ್ಟುಪುಟ್ಟನದೆಂಬುದು ವ್ಯಕ್ತವಾಗುತ್ತದೆ. ಸುಲಭವಾದ ಸರಳವಾದ ನುಡಿಗಳಿಂದ ಕವಿಯು ವಾಸವದತ್ತೆಯ ಹೃದಯವನ್ನೇ ನಮ್ಮೆದುರಿಗೆ ಹಿಡಿದುತೋರಿಸಿದ್ದಾನೆ. ಅವಳಿಗೆ ಉದಯನಲ್ಲಿರುವ ಪ್ರೇಮ; ಅವನ ರೂಪ ವರ್ಣನೆಯಿಂದ ಅವಳಿಗುಂಟಾಗುವ ಆದರೌತ್ಸುಕ್ಯಗಳಿಂದೊಡಗೂಡಿದ ಆನಂದ; ತನ್ನ ಪ್ರೇಮ ಮೂರ್ತಿಯು ಮತ್ತೊಬ್ಬಳಿಗೆ ಸೇರುವುದೆಂಬ ಅವಳಸಂತಾಪ; ಸಂಪ್ರದಾಯಕ್ಕೆ ಭಂಗ ಬಂದೀತೆಂಬ ಶಂಕೆಯಿಂದಲೋ, ಉದಯನನು ಇನ್ನು ತನ್ನವನಲ್ಲವೆಂಬ ಸಂಕಟದಿಂದಲೋ ಪರಪುರುಷನ ವರ್ಣನೆಯು ಸಾಕೆಂಬ ತೆರೆಯನ್ನೆಳೆದು ಅವಳು ತೋರಿಸುವ ಬೇಸರ;ಆಗಿನ ಅವಸ್ಥೆಯಲ್ಲಿಯೂ ಪದ್ಮಾವತಿಯ ವಿಚಾರದಲ್ಲಿ ಮಮತೆಯನ್ನೇ ತೋರಿಸುವ ಸಾತ್ವಿಕತೆ; ಉದಯನನು ದೀರ್ಘಾಯುವಾಗಿರಲೆಂದು ಬಯಸುವ ಸೌಜನ್ಯ; ಇವೆಲ್ಲ ನಮ್ಮ ಮನಸ್ಸಿಗೆ ಗೋಚರಿಸುವುವು. ಮತ್ತೊಬ್ಬಳು ಚೇಟಿಯು ಬಂದು, ವರನನ್ನು ಸುಮಂಗಲೆಯರು ಚತುಶ್ಶಾಲೆಗೆ ಕರೆದೊಯ್ದರೆಂದೂ, ಹೂಮಾಲೆಯು ಬೇಗನೆ ಬೇಕೆಂದೂ, ತ್ವರೆಗೊಳಿಸುವಳು. ವಾಸವದತ್ತೆಯು ಹೂಮಾಲೆಯನ್ನು ಪೂರೈಸಿ ಅವಳ ಕೈಗೆ ಕೊಡುವಳು. ಚೇಟಿಯರಿಬ್ಬರೂ ಹೊರಟುಹೋಗುವರು. ವಾಸವದತ್ತೆಯು, "ಇವಳು ಹೊರಟುಹೋದಳು. ಅಯ್ಯೋ! ಆರ್ಯಪುತ್ರನೂ ಪರಕೀಯನಾಗಿ ಪರಿಣಮಿಸಿದನು. (ನನ್ನ ದುಃಖವನ್ನು ಕೇಳುವರಾರು?) ಹಾಸಿಗೆಯಲ್ಲಿ ಮಲಗಿ ನಿದ್ರೆಯೇನಾದರೂ ಬಂದರೆ ದುಃಖವನ್ನು ಸ್ವಲ್ಪ ಮರೆತುಕೊಳ್ಳುವೆನು" ಎಂದುಕೊಂಡು ಹೊರಟುಹೋಗುವಳು.

**ನಾಲ್ಕನೆಯ ಅಂಕ:**—ಕವಿಯು ರೂಪಕ ರಚನಾ ಸಾಮರ್ಥ್ಯದ ಸೆಳೆಮಿಂಚನ್ನು ಬೀರತಕ್ಕವನೆಂಬುದಕ್ಕೆ ನಾಲ್ಕನೆಯ ಅಂಕದ ಪ್ರಾರಂಭವೇ ಸಾಕ್ಷಿ. ಮೂರನೆಯ ಅಂಕದ ಕೊನೆಯಲ್ಲಿ ಪ್ರೇಕ್ಷಕರು ಶೋಕರಸದಲ್ಲಿ ಮುಳುಗಿ ನಿಂತಿರುವರು. ಇನ್ನು ಹೆಚ್ಚು ಶೋಕರಸವೇ ಚಿತ್ರಿತವಾದರೆ, ಅವರ ಮನಸ್ಸು ಜರ್ಝರಿತವಾಗಿ ಹೋದೀತೆಂಬ ಶಂಕೆಯಿಂದ, ಕವಿಯು ವಿದೂಷಕನನ್ನು ರಂಗಸ್ಥಳಕ್ಕೆ ಕರೆದುತರುವನು. ವಿದೂಷಕನು ಪ್ರತಿಜ್ಞಾಯೌಗಂಧರಾಯಣದಲ್ಲಿ ನಮಗೆ ಪೂರ್ವಪರಿಚಿತವಾದ ವಸಂತಕ. ವಿದೂ

ಷಕನ ಆನಂದವೇ ಆನಂದ. ಅವನ ಮಾತುಗಳನ್ನಾದರೂ ನೋಡಿ:—
"ಪೂಜ್ಯನಾದ ವತ್ಸರಾಜನ ವಿವಾಹದ ಸುಖಮಯವಾದ ಕಾಲವನ್ನು ಕಂಡುದಾಯಿತು. ಅನರ್ಥ ಪರಂಪರೆಯ ಮಡುವಿನಲ್ಲಿ ಬಿದ್ದಿದ್ದ ನಾವು ಮೇಲಕ್ಕೆ ಬರುವೆವೆಂಬುದನ್ನು ಯಾರುತಾನೆ ಕಂಡಿದ್ದರು! ನಾವು ಈಗ ಅರಮನೆಗಳಲ್ಲಿ ವಾಸಮಾಡುತ್ತೇವೆ. ಅಂತಃಪುರದಲ್ಲಿಯ ಜಲಾಶಯದಲ್ಲಿ ಸ್ನಾನಮಾಡುತ್ತೇವೆ; ಪ್ರಕೃತಿ ಮಧುರವಾಗಿ ಸೌಕುಮಾರ್ಯದಿಂದ ಕೂಡಿರುವ ಮೋದಕಗಳನ್ನು ಮೆಲ್ಲುತ್ತೇವೆ. ನನಗೇನೋ ಜೊತೆಗೆ ಅಪ್ಸರಸ್ತ್ರೀಯರಿಲ್ಲದ ಸ್ವರ್ಗವಾಸವೇ ಈಗ ಒದಗಿರುವಂತಿದೆ. ಆದರೂ, ಒಂದು ದೊಡ್ಡ ಕಷ್ಟವಿದೆ. ನನಗೆ ಆಹಾರವು ಚೆನ್ನಾಗಿ ಜೀರ್ಣವಾಗುವುದಿಲ್ಲ. ಸೊಗಸಾದ ದುಪಟಿಗಳಿರುವ ಹಾಸಿಗೆಯಲ್ಲಿ ಮಲಗಿದರೂ ನಿದ್ರೆಯು ಬರುವುದಿಲ್ಲ................"

ವಸಂತಕನ ಆತ್ಮಗತ ಭಾಷಣವು ಮುಗಿಯುವ ವೇಳೆಗೆ ರಾಜನಿಗೆ ಸ್ನಾನವಾಯಿತೆ—ಎಂಬುದನ್ನು ಪದ್ಮಾವತಿಯು ವಿಚಾರಿಸ ಹೇಳಿದಳೆಂದು ಚೇಟಿಯೊಬ್ಬಳು ಬಂದು ತಿಳಿಸುವಳು. ವಿದೂಷಕನು ಆದೇಕೆಂದು ಕೇಳಿದ ಮೇಲೆ ಗಂಧಮಾಲ್ಯಾದಿಗಳನ್ನು ತರುವುದಕ್ಕೆಂದು ಅವಳು ಉತ್ತರ ಹೇಳುವಳು. ಊಟವೊಂದರ ಹೊರತು ಏನನ್ನು ಬೇಕಾದರೂ ತರಬಹುದೆಂದು ಅವಳಿಗೆ ತಿಳಿಸಿ, ತನ್ನ ಹೊಟ್ಟೆಯು ಮುಚ್ಚಿಹೋಗಿರುವ ಬಗೆಯನ್ನೂ ಅವನುಅವಳೊಡನೆ ಹೇಳಿಕೊಳ್ಳುವನು. ಪದ್ಮಾವತಿಯೊಡನೆ ಉದಯನನ ವಿವಾಹವು ನೆರವೇರಿ ಸ್ವಲ್ಪಕಾಲವಾಗಿರುವುದನ್ನು ಸೂಚಿಸುವ ಪ್ರವೇಶಕವು ಅಲ್ಲಿಗೆ ಮುಗಿಯುವುದು.

ಪದ್ಮಾವತಿಯು ಆವಂತಿಕಾ ವೇಷಧಾರಿಣಿಯಾದ ವಾಸವದತ್ತೆಯೊಡನೆ ಪ್ರಮದ ವನಕ್ಕೆ ಬರುವಳು. ಶೇಫಾಲಿಕಾ ಪುಷ್ಪಗಳು ಅರಳಿವೆಯೋ, ಇಲ್ಲವೋ ಎಂಬುದನ್ನು ಪದ್ಮಾವತಿಯು ನೋಡಲಿಚ್ಛಿಸುವಳು. ಹೂಗಳು ಅರಳಿವೆಯೆಂದು ಚೇಟಿಯು ತಿಳಿಸಿ, ಮುತ್ತುಗಳೊಳಗೆ ಹವಳವನ್ನು ಕೆತ್ತಿದಂತೆ ಶೇಫಾಲಿಕಾ ಪುಷ್ಪಗಳು ಶೋಭಿಸುವುವೆಂದೂ ವರ್ಣಿಸುವಳು. ಪದ್ಮಾವತಿಯೂ, ವಾಸವದತ್ತೆಯೂ, ಶಿಲಾಪಟ್ಟಕದಲ್ಲಿ ಕುಳಿತುಕೊಂಡಮೇಲೆ ಚೇಟಿಯು ಹೂಗಳನ್ನು ಕೊಯ್ದು ತಂದು ಬೊಗಸೆಯಲ್ಲಿ

ಹಿಡಿದು ತನ್ನ ಕೈಗಳು ಮಣಶಿಲೆಯ ಹರಳುಗಳಿಂದ ತುಂಬಿದಂತಿವೆಯೆಂದು ಹೇಳುವಳು. ಅವಳು ಎರಡುಸಾರಿ ಹೂಗಳನ್ನು ವರ್ಣಿಸುವುದೂ ಮನೋಹರವಾಗಿದೆ. ಇದರಿಂದ ಚೇಟಿಯು ಕೂಡ ಸುಶಿಕ್ಷಿತೆಯಾದ ರಸಿಕಳೆಂಬುದು ಗೊತ್ತಾಗುತ್ತದೆ. ಪದ್ಮಾವತಿಯು ಹೂಗಳ ಸೊಗಸನ್ನು ನೋಡಿ ಸಂತೋಷಿಸಿ ವಾಸವದತ್ತೆಗೂ ಅದನ್ನು ತೋರಿಸುವಳು. ನವವಧುವಾದ ಪದ್ಮಾವತಿಯು ಉತ್ಸಾಹ ಸಂತೋಷಗಳಿಂದ ತುಂಬಿದ್ದಾಳೆ. ವಾಸವದತ್ತೆಯೂ ಆ ವೇಳೆಗೆ ತನ್ನ ಮನಸ್ಸು ಶೋಕಸಂತಪ್ತವಾಗದಂತೆ ಬಿಗಿದು ಕಟ್ಟಿದ್ದಾಳೆ. ವಿವಾಹವು ಕಳೆದು ಸ್ವಲ್ಪ ಕಾಲವೂ ಕಳೆದಿದೆ. ಆದುದರಿಂದಲೇ, ಕುಸುಮಗಳು ಸೊಗಸಾಗಿವೆಯೆಂದು ಅವಳೂ ಸಂತೋಷಿಸುತ್ತಾಳೆ. ಅವಳು ಹಾಗೆ ಹೇಳದೆ ಹೋಗಿದ್ದರೆ, ಪದ್ಮಾವತಿಯ ಮನಸ್ಸಿಗೆ ಸರಿಬೀಳುತ್ತಲೂ ಇರಲಿಲ್ಲವೋ ಏನೋ! ಇಬ್ಬರೂ ಚೆನ್ನಾಗಿದೆಯೆಂದ ಮೇಲೆ ಇನ್ನು ಚೇಟಿಯ ಉತ್ಸಾಹವನ್ನು ಕೇಳಬೇಕೆ? ಇನ್ನಷ್ಟು ಹೂಗಳನ್ನು ತರಲೆ—ಎಂದು ಅವಳು ಕೇಳುತ್ತಾಳೆ. ಇನ್ನು ಹೂಗಳನ್ನು ಕೀಳಕೂಡದೆಂದು ಪದ್ಮಾವತಿಯು ಅಪ್ಪಣೆಮಾಡುತ್ತಾಳೆ.

ವಾಸವದತ್ತೆಯು ಅದಕ್ಕೆ ಕಾರಣವನ್ನು ಕೇಳಿದಾಗ, "ಆರ್ಯಪುತ್ರನು ಇಲ್ಲಿಗೆ ಬಂದು ಪುಷ್ಪಗಳು ಸಮೃದ್ಧಿಯಾಗಿರುವುದನ್ನು ನೋಡಿ ಸಂತೋಷಿಸಲಿ" ಎಂದು ಪದ್ಮಾವತಿಯು ಉತ್ತರ ಹೇಳುತ್ತಾಳೆ. ಇದರಿಂದ ಉದಯನನಿಗೆ ಪುಷ್ಪಗಳಲ್ಲಿ ಬಹಳ ಪ್ರೀತಿಯೆಂಬುದೂ ನವವಧುವಾದ ಪದ್ಮಾವತಿಯ ಉತ್ಸಾಹವೂ ಗೊತ್ತಾಗುತ್ತವೆ. ಅಲ್ಲದೆ, ಪದ್ಮಾವತಿಗೆ ಪತಿಯಲ್ಲಿ ಎಷ್ಟು ಪ್ರೀತಿಯಿರುವುದೆಂಬುದೂ, ಈ ವಿಧದ ಸಣ್ಣ ಪುಟ್ಟ ವಿಚಾರಗಳಲ್ಲಿ ಕೂಡ, ಆತನಿಗೆ ಸಂತೋಷವುಂಟಾಗಬೇಕೆಂಬುದಾಗಿ ಅವಳು ಎಷ್ಟು ಇಷ್ಟಪಡುವಳೆಂಬುದೂ ಸ್ಪಷ್ಟವಾಗುತ್ತವೆ. ಉದಯನನ ಪ್ರಸ್ತಾವವು ಬಂದೊಡನೆಯೇ ವಾಸವದತ್ತೆಯ ಪ್ರೇಮಪೂರಿತವಾದ ಹೃದಯವು ಎಲ್ಲಿಗೋ ತೇಲಿಹೋಗುತ್ತದೆ. ಔಚಿತ್ಯದ ಸೀಮೆಯನ್ನು ಕೂಡ ಅರಿಯದೆ, ಯಾವುದೋ ಸ್ವಪ್ನಪ್ರಪಂಚದಲ್ಲಿದ್ದವಳಹಾಗೆ "ನಿನ್ನ ಗಂಡನಲ್ಲಿ ನಿನಗೆ ಪ್ರೀತಿಯಿದೆಯೆ?" ಎಂದು ಅವಳು ಕೇಳಿಬಿಡುತ್ತಾಳೆ. ಇದು ಕೇಳತಕ್ಕ ಪ್ರಶ್ನೆಯೆ? ಪದ್ಮಾವತಿಯ ತಾಯಿಯೊಬ್ಬಳ ಹೊರತು ಮತ್ತಾವ ಹೆಂಗಸೂ ಅವಳನ್ನು ಹೀಗೆ ಕೇಳ

ತಕ್ಕುದು ಸರಿಯಲ್ಲವೆಂದು ತೋರುವುದು. ಅವಳ ತಾಯಿಯೂ ಇದನ್ನು ಕೇಳುವುದು ಅಷ್ಟೇನೂ ಉಚಿತವಲ್ಲ; ಒಂದು ವೇಳೆ ಕೇಳಿದರೂ ಬಾಧಕ ವಿಲ್ಲ. ಸರಳಹೃದಯೆಯೂ, ಪತಿಯ ಪ್ರಸ್ತಾವವು ಬಂದುದರಿಂದ ಉತ್ಸು ಕಳೂ, ಆದ ಪದ್ಮಾವತಿಯು ಇದೊಂದನ್ನೂ ಗಮನಿಸದೆ, "ಆರ್ಯಳೆ, ಅದನ್ನು ಹೇಳಲಾರೆ....ಆರ್ಯಪುತ್ರನನ್ನು ಕ್ಷಣಕಾಲ ಅಗಲಿದರೂ ಕಾತರೆ ಯಾಗುತ್ತೇನೆ" ಎನ್ನುವಳು. ತನಗೆ ಪತಿಯಲ್ಲಿ ಪೂರ್ಣ ಪ್ರೇಮ ವಿದೆಯೆಂಬುದನ್ನು ಸೂಚಿಸಲು ಎಷ್ಟು ಸೊಗಸಾದ ಉತ್ತರವಿದು! ವಾಸವದತ್ತೆಯು ಈ ಪ್ರಶ್ನೆಯನ್ನು ಕೇಳುವುದರಲ್ಲಿ, ಪದ್ಮಾವತಿಗೆ ಒಂದು ವೇಳೆ ತನ್ನಷ್ಟು ಪತಿಪ್ರೇಮವಿಲ್ಲದೆ ಇದ್ದರೂ ಇರಬಹುದೆಂಬುದು ಅವಳ ಆಶಯವಿದ್ದರೂ ಇರಬಹುದು. ಆದುದರಿಂದಲೇ ಪದ್ಮಾವತಿಯ ಉತ್ತರ ವನ್ನು ಕೇಳಿ ವಾಸವದತ್ತೆಯು, "ನನಗೆ ದುಷ್ಕರವಾದುದು ಒದಗಿತು. ಇವಳೂ ಹೀಗೆಯೇ ಹೇಳುವಳಲ್ಲಾ!" ಎಂದು ತನ್ನಲ್ಲಿ ತಾನೆ ಹೇಳಿ ಕೊಳ್ಳುವಳು. ಪದ್ಮಾವತಿಯು ತನ್ನ ಪತಿಯು ತನಗೆ ಪ್ರಿಯತಮ ನೆಂಬುದನ್ನು ಯಥೋಚಿತವಾಗಿ ಚಮತ್ಕಾರವಾದ ರೀತಿಯಲ್ಲಿ ತಿಳಿಸಿದ ಳೆಂದು ಚೇಟಿಯೂ ಕೊಂಡಾಡುವಳು. ವಾಸವದತ್ತೆಯು ಮಾತನಾಡದೆ ಮೌನದಿಂದಿರುವಳು. ಅವಳ ಮನಸ್ಸಿನಲ್ಲಿ ಯಾವ ಯಾವ ಆಲೋಚನಾ ತರಂಗಗಳು ಇದ್ದುವೋ ಯಾರಿಗೆ ಗೊತ್ತು? ಪದ್ಮಾವತಿಯು ತನಗೊಂದು ಸಂದೇಹವೆಂದು ತಿಳಿಸುವಳು. ವಾಸವದತ್ತೆಯು ಆತುರದಿಂದ "ಅದೇನು, ಅದೇನು?" ಎಂದು ಕೇಳುವಳು.

ಕವಿಯು ಈ ಒಟ್ಟು ದೃಶ್ಯವನ್ನು ಅದ್ಭುತವಾದ ಚಮತ್ಕಾರದಿಂದ ಕಲ್ಪಿಸಿದ್ದಾನೆ. ಆಯಾ ಪಾತ್ರಗಳ ಹೃದಯವನ್ನೇ ಹೊಕ್ಕು ಪರಿಶೋಧಿಸಿ ನೋಡಿ ಬರೆದಿದ್ದಾನೋ ಎನ್ನಿಸುತ್ತದೆ. ಪದ್ಮಾವತಿಯು "ನಾನು ಆರ್ಯ ಪುತ್ರನನ್ನು ಪ್ರೀತಿಸುವಷ್ಟು ಮಟ್ಟಿಗೆ ಆರ್ಯೆಯಾದ ವಾಸವದತ್ತೆಯು ಆರ್ಯಪುತ್ರನನ್ನು ಪ್ರೀತಿಸುತ್ತಲಿದ್ದಳೇ ಎಂದು ಸಂದೇಹ" ಎಂದು ಹೇಳು ತ್ತಾಳೆ. ವಾಸವದತ್ತೆಯು ತನ್ನಷ್ಟುಮಟ್ಟಿಗೆ ಪದ್ಮಾವತಿಯು ಪತಿಯನ್ನು ಪ್ರೀತಿಸಲಾರಳೆಂದುಕೊಂಡು, ತನ್ನ ಭಾವನೆಯು ಅಳಿದು ಹೋಗಬೇಕಾದ ಉತ್ತರವನ್ನು ಪಡೆದುದಾಯಿತು; ಈಗ ಪದ್ಮಾವತಿಯ ಸರದಿಯು ಬಂದು,

ಅವಳಿಂದ ಈ ಮಾತುಗಳು ಹೊರಡುವುವು. ಮಾನಧನೆಯೂ ಪತಿಪ್ರಾಣೆಯೂ ಆದ ವಾಸವದತ್ತೆಯು ಸುಮ್ಮನಿರಲಾರದೆ, "ಅವಳು ಇನ್ನೂ ಹೆಚ್ಚಾಗಿ ಪ್ರೀತಿಸುತ್ತಿದ್ದಳು" ಎಂದು ಬಿಡುವಳು. ತಾನು ಅವಂತಿಕೆಯೆಂಬ ವೇಷ ಧಾರಿಣಿಯೆಂಬುದನ್ನೂ ಮರೆತು ಆಗಿನ ಆವೇಗದಲ್ಲಿ ಹೀಗೆ ಹೇಳಿಬಿಡುವಳು. ಪದ್ಮಾವತಿಯು "ಅದು ನಿನಗೆ ಹೇಗೆ ಗೊತ್ತು?" ಎಂಬ ಪ್ರಶ್ನೆಯನ್ನು ಕೇಳಿದಾಗ ವಾಸವದತ್ತೆಯ ಮನಸ್ಸು ಈ ಪ್ರಪಂಚಕ್ಕೆ ಧುಮ್ಮಿಕ್ಕಿ ಅನುಚಿತ ವಾದ ಕೆಲಸವು ನಡೆದುಹೋಗಿದ್ದುದನ್ನು ಅರಿಯುವುದು.

ವಾಸವದತ್ತೆಯು ಆಗ ತನ್ನಲ್ಲಿ ತಾನು, "ಅಯ್ಯೋ! ಆರ್ಯಪುತ್ರನ ಮೇಲಣ ಪ್ರೇಮದಿಂದ ಸಮುದಾಚಾರವನ್ನತಿಕ್ರಮಿಸಿ ಮಾತನಾಡಿದೆನು. ಆಗಲಿ. ಹೀಗೆ ಹೇಳುವೆನು" ಎಂದುಕೊಂಡು ಪದ್ಮಾವತಿಯೊಡನೆ, "ಅವಳ ಪ್ರೀತಿಯು ಸ್ವಲ್ಪವಾಗಿದ್ದ ಪಕ್ಷಕ್ಕೆ ಅವಳು ಸ್ವಜನರನ್ನೂ ಬಿಟ್ಟು ಅವರಿಗೆ ಅರಿವಿಲ್ಲದಂತೆ ಇನಿಯನೊಡನೆ ಹೋಗುತ್ತಿರಲಿಲ್ಲ" ಎಂದು ಹೇಳುವಳು. ಅವಳ ಜಾಣ್ಮೆಯನ್ನು ಎಷ್ಟು ಕೊಂಡಾಡಿದರೂ ಸಾಲದು. ತಾನು ದುಡುಕಿ ಮಾತನಾಡಿದಾಗಲೆಲ್ಲ ಅವಳು ಒಡನೆಯೇ ಜಾಣ್ಮೆಯಿಂದ ಈ ಬಗೆಯ ಉತ್ತರವನ್ನು ಕೊಡುತ್ತಲೇ ಬಂದಿರುವಳು. ಅವಳೆಷ್ಟು ಚತುರೆಯೆಂಬುದು ಇದರಿಂದ ವ್ಯಕ್ತವಾಗುವುದು. ಪದ್ಮಾವತಿಯು ಸರಳಹೃದಯೆ. ತನ್ನ ದೊಡ್ಡ ವಂಶಕ್ಕೆ ತಕ್ಕಹಾಗೆ ಆವಳಲ್ಲಿ ಉದಾರ ಭಾವವೂ ಉಂಟು. ಅವಳಿಗೆ ವಾಸವ ದತ್ತೆಯಲ್ಲಿ—ಮೃತಪಟ್ಟಳೆಂದು ಅವಳು ತಿಳಿದುಕೊಂಡಿರುವ ವಾಸವದತ್ತೆ ಯಲ್ಲಿ—ಅತ್ಯಂತ ಗೌರವ. ಸವತಿಮಾತ್ಸರ್ಯದ ಲವಲೇಶವೂ ಅವಳ ಮನಸ್ಸಿನಲ್ಲಿಲ್ಲ. ತನ್ನ ಕೋಮಲ ಸ್ವಭಾವಕ್ಕನುಗುಣವಾಗಿ ಅವಳು "ನಿಜ; ಇರಬಹುದು" ಎಂದು ಒಪ್ಪಿಕೊಳ್ಳುವಳು. ಚೇಟಿಯು ಸುಮ್ಮನಿರದೆ, "ನನಗೂ ವೀಣೆಯನ್ನು ಕಲಿಯುವ ಅಪೇಕ್ಷೆಯುಂಟೆಂದು ಸವಿಮಾತಿನಿಂದ ಉದಯನನಿಗೆ ತಿಳಿಸು" ಎಂಬುದಾಗಿ ಪದ್ಮಾವತಿಗೆ ಹೇಳಿಕೊಡುವಳು. ತಾನು ಆಗಲೇ ಆತನಲ್ಲಿ ಈ ವಿಷಯವನ್ನು ಪ್ರಸ್ತಾವಿಸಿರುವೆನೆಂದು ಪದ್ಮಾ ವತಿಯು ತಿಳಿಸುವಳು. ವಾಸವದತ್ತೆಯು ಕುತೂಹಲದಿಂದ ಕೂಡಿ, ಅದಕ್ಕೆ ಅವನೇನು ಉತ್ತರ ಹೇಳಿದನೆಂದು ಕೇಳುವಳು. "ಆರ್ಯಪುತ್ರನು ಏನನ್ನೂ ಹೇಳದೆ ನಿಟ್ಟುಸಿರು ಬಿಟ್ಟು ಸುಮ್ಮನಾದನು" ಎಂದು ಪದ್ಮಾವತಿಯು

ತಿಳಿಸುವಳು. “ಇದರಿಂದ ನಿನಗೇನು ತೋರುವುದು?” ಎಂದು ವಾಸವದತ್ತೆಯು ಕೇಳುವಳು. “ಆರ್ಯಳಾದ ವಾಸದತ್ತೆಯ ಗುಣಗಳನ್ನು ಸ್ಮರಿಸಿಕೊಂಡು, ಆರ್ಯಪುತ್ರನು ನನ್ನೆದುರಿಗೆ ರೋದಿಸುವುದಕ್ಕಿಲ್ಲದೆ ದಾಕ್ಷಿಣ್ಯ ಬದ್ಧನಾಗಿ ದುಃಖವನ್ನು ತಡೆದನೆಂದು ತೋರುವುದು” ಎಂದು ಇಂಗಿತಜ್ಞೆಯಾದ ಪದ್ಮಾವತಿಯು ಉತ್ತರ ಹೇಳುವಳು.

ಆದನ್ನು ಕೇಳಿ ವಾಸವದತ್ತೆಗೆ ಬಹಳ ಸಂತೋಷ. “ಪತಿಯು ಪ್ರೀತಿಸಿದರೆ ಸಾಕು. ಪತಿಯು ಸುಖವಾಗಿದ್ದರೆ ಸಾಕು” ಎಂಬ ಎರಡು ವಾಕ್ಯಗಳೇ ಅವಳ ಜೀವನದ ಉಚ್ಚಧ್ಯೇಯದ ಸಾರಾಂಶವನ್ನು ಸೂಚಿಸುವ ಪಾರಾಯಣದ ನುಡಿಗಳು. ಇಲ್ಲಿ ಪದ್ಮಾವತಿಯ ಸದ್ಗುಣವೂ ಸ್ಪಷ್ಟವಾಗುತ್ತದೆ. ಉದಯನನು ನಿಟ್ಟುಸಿರು ಬಿಟ್ಟು ಸುಮ್ಮನಾದೊಡನೆಯೇ ಅವಳೂ ಸುಮ್ಮನಾದಳು. ಏನು ಮಾತನಾಡಿದರೆ ಏನೋ, ಪತಿಯು ಎಲ್ಲಿ ನೊಂದುಕೊಳ್ಳುವನೋ, ಎಂದು ಮೌನವನ್ನಲಂಬಿಸಿದಳು. ಅವಳ ಮನಸ್ಸು ಎಷ್ಟು ಮೃದುವೆಂಬುದೂ, ಅವಳ ಬುದ್ಧಿಯು ಎಷ್ಟು ಸೂಕ್ಷ್ಮವೆಂಬುದೂ, ಇದರಿಂದ ವ್ಯಕ್ತವಾಗುತ್ತವೆ. ಪದ್ಮಾವತಿಯ ಮಾತುಗಳನ್ನು ಕೇಳಿ ವಾಸವದತ್ತೆಗೆ ಇದ್ದುದರಲ್ಲೇ ಸ್ವಲ್ಪ ನೆಮ್ಮದಿ. ಅವಳಿಗೆ ಅವುಗಳನ್ನು ನಂಬಲಾರದಷ್ಟು ಸಂತೋಷ. ಆದುದರಿಂದ ಅವಳು “ಇದೇನಾದರೂ ನಿಜವಾಗಿದ್ದರೆ ನಾನು ಧನ್ಯಳೇ ಆದೆ” ಎಂದುಕೊಳ್ಳುವಳು. ಆ ವೇಳೆಗೆ ರಾಜನೂ, ವಿದೂಷಕನೂ, ಪ್ರಮದ ವನಕ್ಕೆ ಬರುವರು. ಆಗ ಪದ್ಮಾವತಿಯು ಸಭ್ಯಸಂಪ್ರದಾಯವನ್ನೇ ತೋರ್ಪಡಿಸುವಳು. ಸಮೃದ್ಧವಾಗಿ ಶೇಫಾಲಿಕಾ ಪುಷ್ಪಗಳಿರುವುದನ್ನು ಪತಿಗೆ ತೋರಿಸಿ ಸಂತೋಷಪಡಲು ಅವಳಿಗೆ ಆಸೆಯಿದ್ದರೂ, ಅವಳು ಆವಂತಿಕೆಯನ್ನು (ಎಂದರೆ, ವಾಸವದತ್ತೆಯನ್ನು) ಬಿಟ್ಟು ಪತಿಯ ಬಳಿಗೆ ಓಡುವುದಿಲ್ಲ. ಆದರೆ ಆವಂತಿಕೆಯು ಉದಯನನೆದುರಿಗೆ ಬರುವುದಕ್ಕಿಲ್ಲ. ಆದುದರಿಂದ ಉದಯನನು ಬರುವುದಕ್ಕೆ ಮೊದಲೇ ಅವಳು ಧಾತ್ರಿಯೊಡನೆ ಆವಂತಿಕೆಯನ್ನೂ ಕರೆದುಕೊಂಡು ಪಕ್ಕದಲ್ಲಿದ್ದ ಮಾಧವೀಲತಾ ಮಂಟಪಕ್ಕೆ ಹೋಗಿ, ಮರೆಯಾಗಿ ನಿಲ್ಲುವಳು. ಬರುತ್ತಿರುವವರು ಇನ್ನೂ ಮರೆಯಾಗಿರುವಾಗಲೇ ವಿದೂಷಕನ ಗಟ್ಟಿಯಾದ ನಗುವಿನ ಶಬ್ದವು ಕೇಳಿ ಬಂದುದು ಇದಕ್ಕೆ ಸಹಾಯವಾಗುವುದು.

ಉದಯನನು ವಾಸವದತ್ತೆಯನ್ನು ಸ್ಮರಿಸಿಕೊಳ್ಳಲುಪಕ್ರಮಿಸಿದುದನ್ನು ನೋಡಿ, ವಸಂತಕನು ಪದ್ಮಾವತಿಯು ಎಲ್ಲಿ ಹೋದಳೆಂದು ತವಕಪಡುವನು. ವಸಂತಕನು ಉದಯನನಿಗಾಗಿ ಪ್ರಾಣವನ್ನರ್ಪಿಸ್ಸುವುದಕ್ಕೂ ಸಿದ್ಧವಾಗಿದ್ದುದನ್ನು ನಾವು ಪ್ರತಿಜ್ಞಾ ಯೌಗಂಧರಾಯಣದಲ್ಲಿ ನೋಡಿದ್ದೇವೆ. ಅವನಿಗೆ ಹೊಟ್ಟೆಯಮೇಲೆ ಅತ್ಯಾದರವೆಂಬುದೂ ಮೊದಲಿನಿಂದಲೂ ಗೊತ್ತಾಗಿದೆ. ಅವನು ರಸಿಕನೂ ಹೌದು. ಬಂಧುಜೀವ ಕುಸುಮಗಳನ್ನು ನೋಡಿ ಅವನು "ಹ್ಹಿ ಹ್ಹೀ" ಎಂದು ಹಿಗ್ಗುವನು. ಅಸಮಕುಸುಮಗಳಿಂದ ತುಂಬಿರುವ ಪ್ರದೇಶವು ಹುಲಿಯ ಚರ್ಮವನ್ನು ಹಾಸಿದಂತೆ ಇರುವುದೆಂದು ವರ್ಣಿಸುವನು. ಅಂತರಿಕ್ಷದಲ್ಲಿ ಹಾರಿಹೋಗುತ್ತಿರುವ ಕೊಕ್ಕರೆಗಳ ಸಾಲನ್ನು ಕಂಡು ಸಂತೋಷಿಸಿ, ಅದು ಬಲದೇವನ ತೋಳಿನಂತೆ ನೀಳವಾಗಿ ನೀಡಿದ ಹಾಗೆ ರಂಜಿಸುವುದೆಂದು ಉದಯನನಿಗೆ ತಿಳಿಸುವನು. ಇದರಿಂದ ಅವನ ಪ್ರಕೃತಿ ಪ್ರೇಮವೂ, ಅವನ ರಸಿಕತೆಯೂ, ವ್ಯಕ್ತವಾಗುವುವು. ಅದೇ ಕೊಕ್ಕರೆಯ ಸಾಲನ್ನು ಕಂಡು ಉದಯನನೂ ಸಂತೋಷಿಸಿ, ಒಂದು ಕ್ಷಣದಲ್ಲಿ ಉದ್ದಕ್ಕೆ ನೀಡಿದ ಹಾಗೆ ನೆಟ್ಟಗೂ, ಒಂದು ಕ್ಷಣದಲ್ಲಿ ಒಟ್ಟುಗೂಡಿ ಗುಂಪಾಗಿಯೂ, ಒಮ್ಮೆ ಮೇಲೆ ಹಾರುತ್ತಲೂ, ಒಮ್ಮೆ ಕೆಳಕ್ಕೆ ಬರುತ್ತಲೂ, ಸಪ್ತರ್ಷಿ ಮಂಡಲದಂತೆ ಸೊಟ್ಟವಾಗಿಯೂ, ಇದ್ದು ಅಂತರಿಕ್ಷವನ್ನು ಎರಡುಭಾಗವಾಗಿ ವಿಭಾಗಿಸುವ ಗೆರೆಯಂತೆ ಶೋಭಿಸುತ್ತ, ಪರೆಯನ್ನು ಬಿಟ್ಟಹಾವಿನ ಅಡಿಹೊಟ್ಟೆಯಂತೆ ಹೊಳೆಯುತ್ತಿರುವ ಈ ಸಾರಸ ಪಙ್ಕ್ತಿಯು ಮನೋಹರವಾಗಿದೆ--ಎಂದು ವಿದೂಷಕನೊಡನೆ, ಹೇಳುವನು.* ಎಷ್ಟು ಮನೋಹರವಾದ, ಸ್ವಭಾವ ಸಿದ್ಧವಾದ, ಹೃದಯಂಗಮವಾದ ವರ್ಣನೆ! ಈ ಶ್ಲೋಕವು ಭಾಸನ ಸರಳವಾದ ಶೈಲಿಯ ಸೊಬಗನ್ನೂ ಸೂಚಿಸುವುದು. ವಿದೂಷಕನು ರಸಿಕನಾಗಿರುವುದರ ಜೊತೆಗೆ ಮೇಧಾವಿಯೂ, ಚತುರನೂ, ಆಗಿದ್ದನೆಂಬುದಕ್ಕೆ ಈ ಅಂಕದಲ್ಲಿ ಅನೇಕ

---

* "ಋಜ್ವಾಯತಾಂ ಚ ವಿರಲಾಂ ಚ ನತೋನ್ನತಾಂ ಚ
ಸಪ್ತರ್ಷಿ ವಂಶ ಕುಟಿಲಾಂ ಚ ನಿವರ್ತನೇಷು ।
ನಿರ್ಮುಚ್ಯಮಾನ ಭುಜಗೋದರ ನಿರ್ಮಲಸ್ಯ
ಸೀಮಾಮಿವಾಂಬರತಲಸ್ಯ ವಿಭಜ್ಯಮಾನಾಮ್॥"

ನಿದರ್ಶನಗಳಿವೆ. ಶಿಲಾಪಟ್ಟಿಕೆಯ ಬಳಿಯಲ್ಲಿ ಶೇಫಾಲಿಕಾ ಪುಷ್ಪಗಳು ಬಿದ್ದಿರುವುದನ್ನು ನೋಡಿ, ಪದ್ಮಾವತಿಯು ಅಲ್ಲಿಗೆ ಬಂದು ಹೋಗಿರಬೇಕೆಂದು ಅವನು ಶಂಕಿಸುವನು. ಏಕೆಂದರೆ, ಇತರರಿಗೆ ಅಲ್ಲಿಯ ಹೂವನ್ನು ಕೀಳುವುದಕ್ಕೇ ಧೈರ್ಯವಿಲ್ಲ. ಒಂದುವೇಳೆ ಅವರು ಕಿತ್ತಿದ್ದರೂ, ಒಡತಿಯಾದ ಪದ್ಮಾವತಿಯು ಕಂಡಾಳೆಂಬ ಭೀತಿಯು ಇರುವುದರಿಂದ ಅವರೆಂದಿಗೂ, ಹೂಗಳನ್ನು ಹಾಗೆ ಎರಚಿ ಹೊರಟುಹೋಗುವ ಸಂಭವವಿಲ್ಲ. ಇದನ್ನು ಗ್ರಹಿಸಿದ ವಸಂತಕನು ಬುದ್ಧಿವಂತನೇ ಹೌದು. ವಸಂತಕನು ಬುದ್ಧಿವಂತನಲ್ಲದೆಹೋಗಿದ್ದರೆ, ಅವನು ವೇಷಧಾರಿಯಾಗಿ ಶತ್ರುರಾಜ್ಯದಲ್ಲಿದ್ದು, ಯೌಗಂಧರಾಯಣನೇ ಸೆರೆಸಿಕ್ಕಿರುವಲ್ಲಿ ತಾನು ತಪ್ಪಿಸಿಕೊಂಡು ಹೋಗುತ್ತಿದ್ದನೆ ?

ತಾವಿಬ್ಬರೂ ಅದೇ ಶಿಲಾಪಟ್ಟಿಕೆಯ ಮೇಲೆ ಕುಳಿತು ತಾವು ಪದ್ಮಾವತಿಯ ಆಗಮನವನ್ನು ನಿರೀಕ್ಷಿಸಬೇಕೆಂದು ಉದಯನನು ಸೂಚಿಸುವನು. ವಸಂತಕನು ಸ್ವಲ್ಪ ಹೊತ್ತು ಅಲ್ಲಿ ಕುಳಿತಿದ್ದು, ಆ ಬಳಿಕ ಅಲ್ಲಿ ಬಹಳ ಬಿಸಿಲೆಂದೂ, ತಾವೀರ್ವರೂ ಮಾಧವೀ ಮಂಟಪಕ್ಕೆ ಹೋಗುವುದು ಉತ್ತಮವೆಂದೂ, ಹೇಳುವನು. ಒಳಗಿದ್ದ ಪದ್ಮಾವತಿಯು ಮುಂದೇನು ಗತಿಯೆಂದು ಯೋಚಿಸುವಳು. ಕವಿಯ ಕಲ್ಪನಾ ಸಾಮರ್ಥ್ಯವು ಎಷ್ಟೆಂದು ಕೊಂಡಾಡೋಣ! ಮಾಧವೀ ಮಂಟಪದ ಬಾಗಿಲಿನ ಸಮೀಪದಲ್ಲಿದ್ದ ಲತೆಗೆ ಮುತ್ತಿದ್ದ ದುಂಬಿಗಳನ್ನು ಓಡಿಸುವುದಾಗಿ ಚೇಟಿಯು ಸಲಹೆ ಹೇಳುವಳು. ಅವು ಬೆದರಿ ಬಾಗಿಲಿನಲ್ಲಿ ಹಾರಾಡತೊಡಗಿದರೆ, ವಸಂತಕನೂ, ರಾಜನೂ, ಒಳಕ್ಕೆ ಬರುವುದು ತಪ್ಪುವುದೆಂಬುದೇ ಅವಳ ಉದ್ದೇಶ. ಪದ್ಮಾವತಿಯು ಅವಳ ಸಲಹೆಯನ್ನೊಪ್ಪುವಳು. ವಿದೂಷಕನು ಉದಯನನಿಗೆ ದಾರಿಯನ್ನು ತೋರಿಸಿಕೊಂಡು ಮಾಧವೀ ಮಂಟಪದ ಬಾಗಿಲಿಗೆ ಹೋದೊಡನೆಯೆ ಒಂದೆರಡು ದುಂಬಿಗಳು ಅವನನ್ನು ಕಚ್ಚುವುವು. ಅವನು ಹಿಂದಕ್ಕೆ ಸರಿದು, ತನ್ನನ್ನು ದುಂಬಿಗಳು ಕಚ್ಚಿದುದನ್ನು ಉದಯನನನಿಗೆ ತಿಳಿಸುವನು. ಮಾಧವೀ ಮಂಟಪಕ್ಕೆ ಹೋಗುವ ಉದ್ಯಮವನ್ನು ಬಿಟ್ಟು ಅವರು ಅಲ್ಲಿಯೇ ಕುಳಿತುಕೊಳ್ಳುವರು. ಅದಕ್ಕೆ ಮೊದಲು ಕರುಣಾಳುವಾದ ಉದಯನನು ತಮ್ಮಿಂದ ದುಂಬಿಗಳಿಗೆ ಹಿಂಸೆಯುಂಟಾಗ ಕೂಡದೆಂದೂ

ತಿಳಿಸುವನು. ವಾಸವದತ್ತೆಯು ಉದಯನನು ಆರೋಗ್ಯವಾಗಿದ್ದಾನೆಂದು ತನ್ನ ಮನಸ್ಸಿನಲ್ಲಿಯೇ ಹೇಳಿಕೊಂಡು ಕಂಬನಿದುಂಬುವಳು.

ಚೇಟಿಯು ಅದನ್ನು ಕಾಣುವಳು. ದುಂಬಿಗಳ ಹಾರಾಟದಿಂದ ಕಾಶ ಕುಸುಮಧೂಳಿಯು ಕಣ್ಣಿಗೆ ಬಿದ್ದು ನೀರು ಬಂದಿತೆಂದು ವಾಸವದತ್ತೆಯು ತಿಳಿಸುವಳು. ಅತ್ತ ವಿದೂಷಕನು ರಾಜನಿಗೆ ಮೃತಳಾದ ವಾಸವದತ್ತೆಯು ಹೆಚ್ಚು ಪ್ರಿಯಳೋ ಪದ್ಮಾವತಿಯು ಹೆಚ್ಚು ಪ್ರಿಯಳೋ, ತಿಳಿಸಬೇಕೆಂದು ಕೇಳುವನು. ಉದಯನನು ಯಾವುದೊಂದನ್ನೂ ಹೇಳದೆ ಸುಮ್ಮನಿರುವನು. ವಿದೂಷಕನು ಬಲವಂತ ಮಾಡಿ, "ಒಬ್ಬಳು ಮೃತಪಟ್ಟಿದ್ದಾಳೆ. ಇನ್ನೊಬ್ಬಳು ಸಮೀಪದಲ್ಲಿಲ್ಲ. ಮೆಲ್ಲಗೆ, ಮೆಲ್ಲಗೆ, ಹೇಳಿಬಿಡು" ಎನ್ನುತ್ತಾನೆ. ಉದಯನನು, "ಮಿತ್ರನೆ, ಇಲ್ಲ, ಇಲ್ಲ, ಹೇಳುವುದಿಲ್ಲ. ನೀನು ರಹಸ್ಯವನ್ನು ಕಾಪಾಡಿ ಕೊಳ್ಳಲಾರದವನು. ಹರಟೆಹೊಡೆಯುವವನು." ಎಂದು ಉತ್ತರ ಹೇಳು ವನು. ಅಷ್ಟರಿಂದಲೇ ಪದ್ಮಾವತಿಗೆ ರಾಜನ ಇಂಗಿತವು ತಿಳಿದು ಹೋಗು ವುದು. ವಿದೂಷಕನ ಬುದ್ಧಿಯು ಅಷ್ಟು ಸೂಕ್ಷ್ಮವಿಲ್ಲ. ವಿದೂಷಕನು ತಾನು ನಾಲಗೆಯನ್ನು ಬಿಗಿಹಿಡಿದಿರುವುದಾಗಿ ಹೇಳುವನು. ಉದಯನನು ತಿಳಿಸಿದ ಸಂಗತಿಯನ್ನು ಯಾರಿಗೂ ಹೇಳುವುದಿಲ್ಲವೆಂದು ಪ್ರಮಾಣ ಮಾಡುವನು. ಉದಯನನು ಹೇಳುವುದಿಲ್ಲ, ವಿದೂಷಕನು ಬಿಡುವುದಿಲ್ಲ. ಬಹಳ ಹೋರಾಟವಾದಮೇಲೆ, ಕೊನೆಗೆ ನಿರ್ವಾಹವಿಲ್ಲದೆ, "ಪದ್ಮಾ ವತಿಯು ತನ್ನ ಸೌಶೀಲ್ಯದಿಂದಲೂ, ರೂಪಮಾಧುರ್ಯದಿಂದಲೂ, ನನಗೆ ಪ್ರಿಯಳೇನೋ ಹೌದು. ಆದರೆ, ವಾಸವದತ್ತೆಯ ಸ್ನೇಹದಿಂದ ಬದ್ಧ ವಾಗಿರುವ ನನ್ನ ಹೃದಯವನ್ನು ಅವಳು ಆಕರ್ಷಿಸಲಾರಳು"* ಎಂದು ಹೇಳುವನು. ವಾಸವದತ್ತೆಯು ಇದನ್ನು ಕೇಳಿ ಹರ್ಷಿಸಿ, "ಸಾಕು, ಸಾಕು. ನನ್ನ ಪರಿಖೇದಕ್ಕೆ ಯಥೇಷ್ಟವಾದ ವೇತನವು ದೊರೆತ ಹಾಗಾ ಯಿತು. ಆಹ! ನನ್ನ ಈಗಿನ ಅಜ್ಞಾತವಾಸದಿಂದ ಎಷ್ಟೋ ಗುಣವಿದೆ" ಎಂದು ತನ್ನಲ್ಲಿ ತಾನೆ ಹೇಳಿಕೊಳ್ಳುವಳು. ದೊರೆಯ ಉತ್ತರವು ಚೇಟಿಗೆ ಸಹಿಸದು. ಒಡೆಯನು ದಾಕ್ಷಿಣ್ಯರಹಿತನೆಂದು ಅವಳು ಪದ್ಮಾವತಿಯೊಡನೆ

---

* "ಪದ್ಮಾವತೀ ಬಹುಮತಾ ಮಮ ಯದ್ಯಪಿ ರೂಪಶೀಲ ಮಾಧುರ್ಯೈಃ।
ವಾಸವದತ್ತಾಬದ್ಧಂ ನ ತು ತಾವನ್ಮೇ ಮನೋ ಹರತಿ॥"

ಹೇಳುವಳು. ಪದ್ಮಾವತಿಯು, "ಹಾಗಲ್ಲ, ಹಾಗಲ್ಲ. ಆರ್ಯಪುತ್ರನು ದಾಕ್ಷಿಣ್ಯಯುತನೇ ಸರಿ. ಏಕೆಂದರೆ, ಈಗಲೂ ಕೂಡ ಅವನು ಆರ್ಯಳಾದ ವಾಸವದತ್ತೆಯ ಗುಣಗಳನ್ನು ಸ್ಮರಿಸುತ್ತಾನೆ" ಎಂದು ಸಮಾಧಾನ ಹೇಳುವಳು. ಪದ್ಮಾವತಿಯ ಹೃದಯವು ಎಷ್ಟು ಉದಾರ ಭಾವದಿಂದ ತುಂಬಿದುದು! ವಾಸವದತ್ತೆಯೂ ಅದನ್ನರಿತು, ಅದಕ್ಕೆ ಬೆಲೆಯನ್ನು ಕೊಟ್ಟು, "ಭದ್ರೆ! ನಿನ್ನ ಘನತೆಗೆ ತಕ್ಕ ಮಾತನಾಡಿದೆ." ಎನ್ನುವಳ್ನು ಅವಂತಿಕೆಯ ವೇಷವೊಂದು ಹೆಬ್ಬಾವಿನಂತೆ ತಡೆಯದೆ ಇದ್ದರೆ, ಅವಳು ಪದ್ಮಾವತಿಯನ್ನು ಬರಸೆಳೆದು ಬಿಗಿದಪ್ಪಿಕೊಂಡುಬಿಡುತ್ತಿದ್ದಳೋ ಏನೋ! ಪ್ರತಿಮಾನಾಟಕದಲ್ಲಿ ಭರತನು ಪಾದುಕೆಗಳನ್ನು ಕೇಳಿದಾಗ ಶ್ರೀರಾಮನು. "ನಾನು ಎಷ್ಟೋ ಹೆಚ್ಚು ಕಾಲದಲ್ಲಿ ಸ್ವಲ್ಪ ಯಶಸ್ಸನ್ನು ಸಂಪಾದಿಸಿದ್ದೆ. ಭರತನು ಇಂದು ಕ್ಷಣಮಾತ್ರದಲ್ಲಿ (ಯಶಸ್ಸನ್ನು) ಸಂಚಿತ ಮಾಡಿ ಕೊಂಡನು."* ಎಂದು ಸಂತೋಷದಿಂದ ಹೇಳಿದಂತೆ ಅವಳೂ ಈ ಸಂದರ್ಭಕ್ಕೆ ತಕ್ಕಂತೆ ಹೇಳುತ್ತಿದ್ದಳೋ ಏನೋ!

ವಿದೂಷಕನ ಸರದಿಯು ಪೂರ್ತಿಯಾಯಿತು. ಇನ್ನು ಉದಯನನ ಸರದಿ. ವಸಂತಕನಿಗೆ ವಾಸವದತ್ತೆಯಲ್ಲಿ ಹೆಚ್ಚು ಪ್ರೀತಿಯಿದ್ದಿತೋ, ಅಥವಾ ಪದ್ಮಾವತಿಯಲ್ಲಿ ಅವನಿಗೆ ಹೆಚ್ಚು ಪ್ರೀತಿಯೋ, ತಿಳಿಸಬೇಕೆಂದು ಉದಯನನು ಅವನನ್ನು ಕೇಳುವನು. ತನಗೆ ಇಬ್ಬರೂ ಪ್ರೀತಿಪಾತ್ರರೆಂದು ಅವನು ಹೇಳುವನು. ಉದಯನನು ಆ ಉತ್ತರಕ್ಕೆ ಒಪ್ಪದೆ ಕೊಸರಾಡಿದ ಮೇಲೆ, ವಸಂತಕನು "ಹೇಳುವೆನು ಕೇಳು. ಪೂಜ್ಯೆಯಾದ ವಾಸವದತ್ತೆಯಲ್ಲಿ ನನಗೆ ಪ್ರೀತಿಗೌರವಗಳಿದ್ದುವು. ಪೂಜ್ಯೆಯಾದ ಪದ್ಮಾವತಿಯು ತರುಣಿ; ಸುಂದರಿ; ಕೋಪರಹಿತಳು; ಅಹಂಕಾರವಿಲ್ಲದವಳು; ಮಧುರಭಾಷಿಣಿ ವಿನಯಶೀಲಳು. ಎಲ್ಲವೂ ಸರಿ. ಆದರೆ, ವಾಸವದತ್ತೆಯಲ್ಲಿ ಒಂದು ಹೆಚ್ಚಿನ ಗುಣವಿದ್ದಿತು. ದಿವ್ಯವಾದ ಭೋಜನವನ್ನು ಬಡಿಸಿ 'ಆರ್ಯ ವಸಂತಕನು ಎಲ್ಲಿ ಹೋದನೋ ಕಾಣೆನಲ್ಲಾ!' ಎಂದುಕೊಂಡು ಅವಳು ನನ್ನನ್ನು ಹುಡುಕಿಕೊಂಡು ಬರುತ್ತಿದ್ದಳು" ಎಂದು ಹೇಳುವನು.

---

* "ಸುಚಿರೇಣಾಪಿ ಕಾಲೇನ ಯಶಃ ಕಿಂಚಿನ್ಮಯಾರ್ಜಿತಂ ।
ಅಚಿರೇಣೈವ ಕಾಲೇನ ಭರತೇನಾದ್ಯ ಸಂಚಿತಂ॥"

ವಾಸವದತ್ತೆಯು ಬದುಕಿರುವುದನ್ನು ಅರಿತಿದ್ದೂ, ನಾವು ನಾಟಕವನ್ನೋದುವ ನೆನಪಿದ್ದೂ, ಈ ವಾಕ್ಯವನ್ನು ಓದಿದಾಗ ನಮಗೆ ಕಣ್ಣಿನಲ್ಲಿ ನೀರು ಬರುವ ಹಾಗಾಗುವುದು. ವಾಸವದತ್ತೆಯ ಹೃದಯವು ಎಷ್ಟು ಕೋಮಲವಾದುದೆಂಬುದೂ, ಎಷ್ಟು ಕರುಣವುಳ್ಳುದೆಂಬುದೂ, ಚಕ್ರವರ್ತಿಯ ಕೂರ್ಮೆಯ ಕುವರಿಯಾಗಿ ಮಹಾರಾಜನ ಮೋಹದ ಮಡದಿಯಾಗಿ ಚಿಕ್ಕವಯಸ್ಸಿನಲ್ಲಿ ಕೂಡ ಗರ್ವವನ್ನರಿಯದ ಆಕೆಯ ಮನಸ್ಸಿನಲ್ಲಿದ್ದ ಪರಿಜನವಾತ್ಸಲ್ಯವು ಎಷ್ಟು ಗಾಢವಾದುದೆಂಬುದೂ, ತೋರಿ ಬಂದು ನಮಗೆ ಹೀಗಾಗುವುದು. ವಸಂತಕನೂ ವ್ಯಸನದಿಂದ ಮಾತನಾಡುತ್ತಿದ್ದಾನೆಯೇ ಹೊರತು, ವಿನೋದದಿಂದಲ್ಲ. ಉದಯನನಿಗೆ ಹಿಂದಿನ ಅನುಭವವೆಲ್ಲ ಕಣ್ಣಿಗೆ ಕಟ್ಟಿದಂತಾಗಿ, "ಆಗಲಿ, ಆಗಲಿ; ವಸಂತಕ! ನಾನು ಇದನ್ನು ದೇವಿಯಾದ ವಾಸವದತ್ತೆಗೆ ಹೇಳುತ್ತೇನೆ" ಎನ್ನುವನು. ವಿದೂಷಕನಿಗೂ ಸಂಕಟವಾಗಿ "ಅಯ್ಯೋ! ವಾಸವದತ್ತೆ! ಇನ್ನೆಲ್ಲಿ ವಾಸವದತ್ತೆ. ವಾಸವದತ್ತೆಯು ಎಂದೋ ಮೃತಳಾದಳು" ಎಂದು ಪೇಚಾಡುವನು. ಉದಯನನೂ ವ್ಯಥೆಪಟ್ಟು "ನನ್ನ ಮನಸ್ಸಿಗೆ ಹಿಂದಿದ್ದಂತೆಯೇ ಭಾಸವಾಯಿತು. ಆಗಿನ ಅಭ್ಯಾಸದಂತೆ ಈ ಮಾತುಗಳನ್ನಾಡಿದೆ" ಎನ್ನುವನು. ಪದ್ಮಾವತಿಯು ಅಸಮಾಧಾನದಿಂದ "ರಮಣೀಯವಾಗಿದ್ದ ಕಥಾಸರಣಿಯನ್ನು ಈ ನೃಶಂಸನು ತಪ್ಪಿಸಿಬಿಟ್ಟನು" ಎನ್ನುವಳು. ಉದಯನನ ಮಾತುಗಳನ್ನು ಕೇಳಿ ವಾಸವದತ್ತೆಯು ಸಂತೋಷಿಸುವಳು. ಅವನು ಕಂಬನಿದುಂಬಿದನೆಂದು ಕಾಣುತ್ತದೆ. ವಿದೂಷಕನು ಅದನ್ನು ನೋಡಿ ದುಃಖವನ್ನು ಸಹಿಸಬೇಕೆಂದೂ ವಿಧಿಯು ಅನತಿಕ್ರಮಣೀಯನೆಂದೂ ಸಮಾಧಾನ ಹೇಳುವನು. ಉದಯನನು "ನನ್ನ ಅವಸ್ಥೆಯನ್ನು ನೀನರಿಯೆ. ಏಕೆಂದರೆ ದುಃಖವನ್ನು ಬಿಡಲು (ಸಾಧ್ಯವಿಲ್ಲ) ಅನುರಾಗವು ಬದ್ಧಮೂಲವಾಗಿದೆ. (ವಾಸವದತ್ತೆಯನ್ನು) ಸ್ಮರಿಸಿ ಸ್ಮರಿಸಿ ದುಃಖವು ನವತ್ವವನ್ನು ಪಡೆದಿದೆ ಕಣ್ಣೀರನ್ನು ಸುರಿಸಿ ಸಾಲವನ್ನು ತೀರಿಸಿದರೆ ಬುದ್ಧಿಯು ಆಗ ಸಮಾಧಾನಹೊಂದಿ ಸರಿಹೋಗುವುದು" *ಎಂದು ಹೇಳಿ ಅವನು ಕಣ್ಣೀರು

---

* "ನ ಜಾನಾತಿ ಭವಾನವಸ್ಥಾಂ ವರ್ ।  ಕುತಃ,
ದುಃಖಂ ತ್ಯಕ್ತುಂ ಬದ್ಧಮೂಲೋऽನುರಾಗಃ
ಸ್ಮೃತ್ವಾ ಸ್ಮೃತ್ವಾ ಯಾತಿ ದುಃಖಂ ನವತ್ವಮ್ ।
ಯಾತ್ರಾತ್ವೇಷಾ ಯದ್ವಿಮುಚ್ಯೇಹ ಬಾಷ್ಪಂ
ಪ್ರಾಪ್ತಾನೃಣ್ಯಾ ಯಾತಿ ಬುದ್ಧಿಃ ಪ್ರಸಾದಮ್ ॥"

ಬಿಡುವನು. ಉದಯನನಿಗೆ ಮುಖವನ್ನು ತೊಳೆದುಕೊಳ್ಳಲು ನೀರನ್ನು ತರುವುದಕ್ಕಾಗಿ ವಿದೂಷಕನು ಹೋಗುವನು. ಉದಯನನು ಕಣ್ಣು ಮುಚ್ಚಿಕೊಂಡು ರೋದಿಸುತ್ತಿರುವನು. ಅವನು ಕಾಣುವ ಸಂಭವವಿಲ್ಲ ವಾದುದರಿಂದ ತಾವು ಅದೇ ಸಮಯದಲ್ಲಿ ಹೊರಟು ಹೋಗುವುದು ಮೇಲೆಂದು ಪದ್ಮಾವತಿಯು ಸೂಚಿಸುವಳು. ಅದು ಸರಿಯಲ್ಲವೆಂದೂ, ಅವಳು ಆಗಿನ ಅವಸ್ಥೆಯಲ್ಲಿ ಗಂಡನನ್ನು ಬಿಟ್ಟು ಹೋಗಕೂಡದೆಂದೂ, ತಾನೊಬ್ಬಳೇ ಹೊರಟು ಹೋಗುವುದಾಗಿಯೂ, ಹೇಳಿ ವಾಸವದತ್ತೆಯು ಉದಯನನಿಗೆ ಕಾಣದ ಹಾಗೆ ಹೊರಟು ಹೋಗುವಳು

ತಾವರೆಯ ಎಲೆಯ ದೊನ್ನೆಯಲ್ಲಿ ನೀರನ್ನು ತೆಗೆದುಕೊಂಡು ಆ ಬಳಿಕ ವಿದೂಷಕನು ಬರುವನು. ಪದ್ಮಾವತಿಯೂ ಆವೇಳೆಗೆ ಅಲ್ಲಿಗೆ ಬಂದು "ಆರ್ಯ, ವಸಂತಕ, ಇದೇನಿದು ?" ಎಂದು ಕೇಳುವಳು. ಅದಕ್ಕೆ ವಸಂತಕನು "ಇದು ಅದು; ಅದು ಇದು" ಎಂದು ಉತ್ತರ ಹೇಳು ವುದನ್ನು ನೋಡಿ ನಮಗೆ ನಗುಬರುವುದು. ಅವನ ಜಾಣ್ಮೆಯು ಅಲ್ಲಿಗೇ ಮುಗಿಯಲಿಲ್ಲ. ಕಾಶಪುಷ್ಪ ರೇಣುವಿನಿಂದ ಉದಯನನ ಕಣ್ಣುಗಳಲ್ಲಿ ನೀರು ಬಂದಿತೆಂದು ಅವನು ಪದ್ಮಾವತಿಗೆ ತಿಳಿಸುವನು. ಆದೂ ಅವಳು ಬಲವಂತ ಮಾಡಿದಮೇಲೆ. ಮುಖೋದಕವನ್ನು ತೆಗೆದುಕೊಂಡು ಹೋಗೆಂದು ಅವಳ ಕೈಗೆ ಕೊಡುವನು. ಪದ್ಮಾವತಿಯು ಅವನೊಡನೆ ಮತ್ತೇನನ್ನೂ ಹೇಳದೆ, ಅನುನಯ ಪರರ ಬಳಿಯಲ್ಲಿರುವವರೂ ಅನುನಯ ಪರರೆಂದು ತನ್ನಲ್ಲಿತಾನು ಹೇಳಿಕೊಳ್ಳುವಳು. ಪದ್ಮಾವತಿಯು ಮುಖೋ ದಕವನ್ನು ತಂದುದನ್ನು ನೋಡಿ ಉದಯನನು ಅಪ್ರತಿಭನಾಗುವನು. ಇದೇನೆಂದು ವಿದೂಷಕನನ್ನು ಪ್ರಶ್ನೆಮಾಡುವನು. ವಿದೂಷಕನು ತಾನು ಮಾಡಿದ ಯುಕ್ತಿಯನ್ನು ಅವನ ಕಿವಿಯಲ್ಲಿ ಹೇಳಿ, ಅವನಿಂದ ಧನ್ಯವಾದ ಗಳನ್ನು ಪಡೆಯುವನು. ಕಾಶಪುಷ್ಪರೇಣುವು ತನ್ನ ಕಣ್ಣಿನಲ್ಲಿಬಿದ್ದು ನೀರು ಬಂದಿತೆಂದು ಉದಯನನೂ ಹೇಳುವನು. ಆದರೂ, ಅವನ ಆಗಿನ ಸ್ಥಿತಿ ಯಲ್ಲಿ ಪದ್ಮಾವತಿಯ ಬಳಿಯಲ್ಲಿಹೆಚ್ಚು ಕಾಲವಿರುವುದು ಸರಿಯಲ್ಲವೆಂದು ಬಗೆದು ವಸಂತಕನು ಒಂದು ಉಪಾಯಮಾಡುವನು ; ಮಗಧರಾಜನಾದ ದರ್ಶಕನು ತನ್ನ ಸ್ನೇಹಿತರನ್ನು ಉದಯನನಿಗೆ ಪರಿಚಯಮಾಡಿಸ

ಬೇಕೆಂದಿದ್ದುದನ್ನು ಜ್ಞಾಪಿಸಿ, ಅವನ ಬಳಿಗೆ ಹೊರಡಬೇಕೆಂದು ಸೂಚಿಸು ವನು. ಅವರೆಲ್ಲರೂ ನಿಷ್ಕ್ರಮಿಸುವರು.

**ಐದನೆಯ ಅಂಕ:**—ಪದ್ಮಾವತಿಗೆ ತಲೆನೋವಿನ ಬಾಧೆಯೆಂದು ಚೇಟಿಯರ ಮಾತಿನಿಂದ ನಮಗೆ ಗೊತ್ತಾಗುವುದು. ಆ ವಿಷಯವನ್ನು ಉದಯನನಿಗೆ ತಿಳಿಸುವಂತೆ ಒಬ್ಬ ಚೇಟಿಯು ವಸಂತಕನಿಗೆ ತಿಳಿಸುವಳು. ಉದಯನನು ವಾಸವದತ್ತೆಯನ್ನು ಸ್ಮರಿಸಿಕೊಂಡು ವ್ಯಥೆಪಡುತ್ತಿರುವನು ಆಗ ವಸಂತಕನು ಪದ್ಮಾವತಿಯ ತಲೆನೋವಿನ ವಿಷಯವನ್ನು ಆತನಿಗೆ ತಿಳಿಸುವನು.

ಆ ತಲೆನೋವಿನ ವಿಚಾರವನ್ನು ಪ್ರಸ್ತಾವಿಸುವಲ್ಲಿ ಡಾಕ್ಟರ್ ಎ. ಬೆರ್ರ್ರಿಡೇಲ್ ಕೀತ್ ರವರು "ಪದ್ಮಾವತಿಯು ರಾಜನ ಪ್ರೇಮದ ಕಾಣಿಕೆಯನ್ನು ಸ್ವೀಕರಿಸಲು ಇಷ್ಟವುಳ್ಳವಳಾಗಿರುವಳು. ಆದರೆ ಅವನು ತನ್ನ ಇನಿಯಳ (ವಾಸವದತ್ತೆಯ) ನೆನಪನ್ನು ತೊರೆಯದಿರುವುದನ್ನು ಕಂಡು ಅವಳಿಗೆ ಬಹಳ ತಲೆ ನೋವು ಬರುವುದು. ಅವಳನ್ನು ಸಂತೈಸಲು ರಾಜನು ಬರುವನು" ಎಂದು * ಬರೆದಿರುವುದು ವಿಲಕ್ಷಣವಾಗಿದೆ. ಇಷ್ಟು ದೊಡ್ಡ ಪಂಡಿತರು ಹೀಗೆ ಬರೆದು ಆಭಾಸಮಾಡಿರುವರಲ್ಲಾ ಎಂದು ವಿಷಾದಪಡ ಬೇಕಾಗಿದೆ. ಉದಯನನು ವಾಸವದತ್ತೆಯನ್ನು ಎಡೆಬಿಡದೆ ಸ್ಮರಿಸು ತ್ತಿದ್ದುದನ್ನು ಕಂಡು ಪದ್ಮಾವತಿಗೆ ತಲೆಶೂಲೆಯು ಬಂದಿತೆಂದು ಬರೆಯಲು ಇವರಿಗೆ ಎಲ್ಲಿ ಆಧಾರವು ದೊರೆಯಿತೋ ತಿಳಿಯದು. ಉದಯನನಿಗೆ ವಾಸವದತ್ತೆಯ ಮೇಲೆ ಪ್ರೀತಿಯಿರುವುದನ್ನು ಕಂಡು ಪದ್ಮಾವತಿಯು ಲೇಶ ಮಾತ್ರವೂ ಅಸಮಾಧಾನಮಾಡಿಕೊಂಡಿಲ್ಲ. ಅವಳು ಸವತಿಮಾತ್ಸರ್ಯ ವನ್ನೇ ಕಂಡರಿಯದ ದೇವಿ. ಅದನ್ನು ನಿದರ್ಶನಗಳೊಡನೆ ಹಿಂದೆಯೇ ಸೂಚಿಸಲಾಯಿತು. ನಾಲ್ಕನೆಯ ಅಂಕವನ್ನೂ ಆರನೆಯ ಅಂಕವನ್ನೂ ಪರಿಶೀಲಿಸಿದರೆ, ಈ ಪಂಡಿತರ ಅಭಿಪ್ರಾಯಕ್ಕೆ ಆಧಾರವೇ ಇಲ್ಲವೆಂಬುದು ಸ್ಪಷ್ಟವಾಗಿ ಗೊತ್ತಾಗುವುದು.

---

* "Padmavathi is willing to accept the love of the king, but learning that he has never ceased to cherish the memory of his beloved, she is seized by a severe headache, and the king comes to comfort her."

ಉದಯನನೂ, ವಸಂತಕನೂ, ಪದ್ಮಾವತಿಯನ್ನು ನೋಡಲು ಹೊರಡುವರು. ಒಂದು ದುಃಖವು ಕಡಿಮೆಯಾಗುವುದಕ್ಕೆ ಮೊದಲೇ ಮತ್ತೊಂದು ಒದಗಿತೆಂದು ಉದಯನನು ವ್ಯಥೆಪಡುವನು. ಅವನ ಮನಸ್ಸನ್ನು ಮತ್ತೊಂದು ಕಡೆಗೆ ತಿರುಗಿಸಲು ಕವಿಯು ತನ್ನ ರಚನಾ ಸಾಮರ್ಥ್ಯದಿಂದ ವಿನೋದವಾದುದೊಂದು ಘಟನೆಯನ್ನು ಕಲ್ಪಿಸಿರುವನು. ಮುಖತೋರಣದಿಂದ ಬಿದ್ದಿರುವ ಮಾಲೆಯೊಂದು ಗಾಳಿಯಲ್ಲಿ ಅಲುಗಾಡುತ್ತಿರುವುದು. ಅದನ್ನು ಸರ್ಪವೆಂದು ಭಾವಿಸಿ ವಿದೂಷಕನು ಭಯದಿಂದ ಕೂಗಿಕೊಳ್ಳುವನು. ಉದಯನನು ನಕ್ಕು, ಅದು ಮುಖತೋರಣ ಮಾಲೆಯೆಂದೂ, ಅದು ಕೆಳಗೆ ಬಿದ್ದು ಗಾಳಿಗೆ ಹಾವಿನಂತೆ ಅಲುಗುತ್ತಿದ್ದಿತೆಂದೂ ವಿವರಿಸಿ ಹೇಳುವನು. ಪದ್ಮಾವತಿಯು ಸಮುದ್ರಗೃಹದಲ್ಲಿರುವಳೆಂದು ಅವರು ಅಲ್ಲಿಗೆ ಹೋಗುವರು. ಅವಳು ಇನ್ನೂ ಅಲ್ಲಿಗೆ ಬಂದೇ ಇರುವುದಿಲ್ಲ. ಉದಯನನು ಹಾಸಿಗೆಯ ಮೇಲೆ ಕುಳಿತುಕೊಳ್ಳುವನು. ಅವನಿಗೆ ನಿದ್ರೆಯು ಬರುವ ಹಾಗಾಗುವುದು. ಅವನು ತನಗೊಂದು ಕಥೆಯನ್ನು ಹೇಳುವಂತೆ ವಿದೂಷಕನನ್ನು ಕೇಳುವನು. ವಸಂತಕನು "ಉಜ್ಜಯಿನಿ ಎಂಬುದೊಂದು ನಗರ" ಎಂದು ಪ್ರಾರಂಭಮಾಡುವನು. ಉದಯನನು "ಏನು ಉಜ್ಜಯಿನಿಯೆ?" ಎನ್ನುವನು. ಆ ಕಥೆಯು ಉದಯನನಿಗೆ ಇಷ್ಟವಿಲ್ಲದೆ ಇದ್ದರೆ ತಾನು ಮತ್ತೊಂದು ಕಥೆಯನ್ನು ಹೇಳುವುದಾಗಿ ವಸಂತಕನು ತಿಳಿಸುವನು. ಉದಯನನು ಹೇಳಿದುದು ಕಥೆಯು ಬೇಡವೆಂದಲ್ಲ. ಉಜ್ಜಯಿನಿಯೆಂಬ ಹೆಸರು ಕಿವಿಗೆ ಬಿದ್ದೊಡನೆಯೇ ಅವನಿಗೆ ವಾಸವದತ್ತೆಯ ಜ್ಞಾಪಕವು ತಟಕ್ಕನೆ ಬರುವುದು. ಅವಳು ತನ್ನ ಪ್ರಿಯನೊಡನೆ ಹೊರಡುವ ಕಾಲದಲ್ಲಿ ಸ್ವಜನರನ್ನು ಸ್ಮರಿಸಿಕೊಂಡು ಉದಯನನ ಎದೆಯ ಮೇಲೆ ತಲೆಯನ್ನಿಟ್ಟು, ಅವನ ಎದೆಯಮೇಲೆ ಕಣ್ಣೀರನ್ನು ಸುರಿಸಿದುದು; ಅವನು ವೀಣೆಯನ್ನು ನುಡಿಸುವುದನ್ನು ಅವಳಿಗೆ ಕಲಿಸುತ್ತಿದ್ದಾಗ, ಅವಳು ಆಗಾಗ ಅವನ ಮುಖವನ್ನೇ ನೋಡುತ್ತಾ ಇದ್ದು ಕೈಚಳಕವು ತಪ್ಪಿ, ವೀಣೆಯ ಮೆಟ್ಟಲುಗಳಿಂದ ಕೈಜಾರಿದಾಗ, ತಂತಿಯಮೇಲೆ ಬೆರಳುಗಳನ್ನಾಡಿಸುವುದಕ್ಕೆ ಬದಲು, ವೀಣೆಯನ್ನೇ ಬಿಟ್ಟು ಮತ್ತೆಲ್ಲಿಯೋ ಬೆರಳನ್ನಾಡಿಸಿ ಆಕಾಶವಾದಿತವನ್ನಾಚರಿಸುತ್ತಿದ್ದುದು; ಇವು ಅವನಿಗೆ ನೆನಪಾ

ಗುವುವು. ವ್ರೀಳೆಯಿಂದ ಕೈತಪ್ಪಿದುದೂ ಅರಿವಿಲ್ಲದೆ ಅವಳು ಬೆರಳನ್ನು ಆಡಿಸುತ್ತಾ, ಉದಯನನ ಮುಖವನ್ನೇ ನೋಡುತ್ತಿದ್ದಳೆಂದು ಕವಿಯು ವರ್ಣಿಸಿರುವುದೂ ಮನೋಹರವಾದ ಕಲ್ಪ. ಅದು ವಾಸವದತ್ತೆಯ ಅನುರಾಗ ಪಾರವಶ್ಯತೆಯನ್ನೂ ತೋರಿಸುವುದು; ಕವಿಯ ಪರಿಶೀಲನಾ ಸಾಮರ್ಥ್ಯವನ್ನೂ ತೋರಿಸುವುದು.

ವಸಂತಕನು ಮೇಧಾವಿಯೂ ಹೌದು. ಅವನು ತಟಕ್ಕನೆ ಬೇರೆ ಕಥೆಯನ್ನಾರಂಭಿಸಿ, ಉದಯನನ ಶೋಕಾವೇಗವು ಮುಂದು ವರಿಯದಂತೆ ಮಾಡುವುದೇ ಇದಕ್ಕೆ ನಿದರ್ಶನ. ವಿದೂಷಕನು ದೊಡ್ಡ ಪೌರಾಣಿಕನಂತೆ ಪರುಠವಣೆಯಿಂದ "ಬ್ರಹ್ಮದತ್ತವೆಂಬುದೊಂದು ಊರು. ಅಲ್ಲಿ ಕಾಂಪಿಲ್ಯನೆಂಬ ದೊರೆಯಿದ್ದನು." ಎಂದು ತಲೆಕೆಳಕು ಮಾಡಿ ಕಥೆಗೆ ಉಪಕ್ರಮಿಸುವನು. ಉದಯನನು ನಕ್ಕು, ಅದೇನೆಂದು ಕೇಳುವನು. ವಸಂತಕನು ಮತ್ತೆ ಅದೇ ರೀತಿಯಾಗಿ ಹೇಳುವನು. ಉದಯನನು "ಮೂರ್ಖ, 'ಕಾಂಪಿಲ್ಯ ನಗರದಲ್ಲಿ ಬ್ರಹ್ಮದತ್ತನೆಂಬ ರಾಜನಿದ್ದನು.' ಎಂದು ಹೇಳು" ಎನ್ನುವನು. ವಸಂತಕನು ಮೌಢ್ಯ ದಿಂದಲೇ ಹೀಗೆ ಹೇಳಿದನೋ, ಇಲ್ಲವೇ, ಉದಯನನನ್ನು ನಗಿಸಿ ಅವನ ಮನೋವ್ಯಥೆಯು ದೂರವಾಗುವಂತೆ ಮಾಡಬೇಕೆಂಬ ಸಂಕಲ್ಪದಿಂದ ಹೀಗೆ ಮಾಡಿದನೋ, ಹೇಳಲಸಾಧ್ಯ. ವಿದೂಷಕನು "ಸ್ವಲ್ಪ ತಡೆ. ಇದನ್ನು ಕಂಠ ಪಾಠಮಾಡುತ್ತೇನೆ." ಎಂದು ಹೇಳಿ "ಬ್ರಹ್ಮದತ್ತನೆಂಬ ರಾಜ. ಕಾಂಪಿಲ್ಯವೆಂಬ ನಗರ" ಎಂದು ಒರಲು ಸಂತೆಗೆ ಪ್ರಾರಂಭಿ ಸುತ್ತಾನೆ. ಅವನು ವಿನೋದಕ್ಕಾಗಿ ಹಾಗೆ ಮಾಡಿದನೋ, ಇಲ್ಲವೇ ನಿಜವಾಗಿ ಕಂಠಪಾಠಮಾಡಲು ಆರಂಭಿಸಿದನೋ ತಿಳಿಯದು. ವಸಂತಕನು ಮೇಧಾವಿಯಾಗಿರುವುದರಿಂದ, ನಮಗೆ ಈ ಸಂಶಯವು ಬರುತ್ತದೆ. ಅವನು ದಡ್ಡನಾದ ವಿದೂಷಕನಾಗಿದ್ದರೆ ಈ ಸಂಶಯವೇ ಬರುತ್ತಿರಲಿಲ್ಲ. ಉದಯನನ ಮನಸ್ಸಿನ ಸ್ಥಿತಿಯನ್ನು ತಿಳಿದು ಅವನು ಹೀಗೆ ವಿನೋದವನ್ನು ಹೂಡಿರಬೇಕೆಂದು ತೋರುತ್ತದೆ. ತಾನೂ, ತನ್ನ ಮಿತ್ರನೂ, ನಾಲ್ಕನೆಯ ಅಂಕದಲ್ಲಿ ಪ್ರಮದವನಕ್ಕೆ ಬಂದಾಗಲೂ, ವಿದೂಷಕನು ತನ್ನ ಚಾತುರ್ಯ ವನ್ನು ತೋರಿಸಿದುದು ನಮಗೆ ಈ ಸಂದರ್ಭದಲ್ಲಿ ನೆನಪಾಗುತ್ತದೆ. ತನ್ನ

ಮಿತ್ರನು ದುಃಖಪಟ್ಟರೆ ವಸಂತಕನು ತಲ್ಲಣಿಸುವನು. ಇದೊಂದು ದೊಡ್ಡ ಗುಣ. ಪ್ರಮದವನಕ್ಕೆ ಪ್ರವೇಶಿಸಿದಾಗ ಉದಯನನು ವಾಸವದತ್ತೆಯನ್ನು ಸ್ಮರಿಸಿಕೊಂಡುದನ್ನು ನೋಡಿ, ಹೊತ್ತುವ ಬೆಂಕಿಯನ್ನು ಅದು ಹೊತ್ತುತ್ತಿರುವಾಗಲೇ ಆರಿಸುವ ಸಂಭ್ರಮದಿಂದ, ವಸಂತಕನು ಒಂದು ಉಪಾಯ ಮಾಡುವನು. ಪದ್ಮಾವತಿಯ—ಪ್ರೇಮಮಯಿಯಾದ ನವವಧುವಾದ ಪದ್ಮಾವತಿಯ—ಹೆಸರನ್ನು ಗಟ್ಟಿಯಾಗಿ ಹೇಳಿಕೊಂಡು, "ಆರ್ಯಳಾದ ಪದ್ಮಾವತಿಯು ಎಲ್ಲಿ ಹೋದಳೋ ಕಾಣೆನಲ್ಲಾ! ಲತಾ ಮಂಟಪದಲ್ಲಿರುವಳೋ! ಇಲ್ಲವೇ ಪರ್ವತ ತಿಲಕವೆಂಬ ಶಿಲಾಪಟ್ಟಿಕೆಯಲ್ಲಿರುವಳೋ! ಇಲ್ಲವೇ ಸಪ್ತಚ್ಛದ ವನಕ್ಕೆ ಹೋಗಿರುವಳೋ!" ಎಂದು ಮುಂತಾಗಿ ಹೇಳಿಕೊಂಡು ಓಡಾಡುವನು. ಇಷ್ಟಾದರೂ ತನ್ನ ತಂತ್ರ ಪ್ರಭಾವವು ತಲೆದೋರದೆ ಹೋದುದನ್ನು ಕಂಡು, ಅವನು ನಿರ್ವಾಹವಿಲ್ಲದೆ ಮೇಲೆ ಹಾರಿ ಹೋಗುತ್ತಿರುವ ಕೊಕ್ಕರೆಗಳ ಸಾಲನ್ನು ಉದಯನನಿಗೆ ತೋರಿಸಿ, ಅವನ ಆಲೋಚನಾ ತರಂಗವನ್ನು ಮತ್ತೊಂದು ಕಡೆಗೆ ತಿರುಗಿಸುವನು. ವಸಂತಕನು ಇಂಗಿತಜ್ಞತೆಯಿಂದ ಕೂಡಿ ಜಾಣತನದಿಂದ ಕೆಲಸಮಾಡುವವನು. ಆದುದರಿಂದಲೇ ಅವನು ವಿನೋದಕ್ಕಾಗಿ ಒರಲು ಸಂತೆಗೆ ಆರಂಭಿಸಿದನೆಂದು ತೋರುತ್ತದೆ. ಒರಲು ಸಂತೆಯು ನಡೆಯುತ್ತಿರುವಾಗ ಉದಯನನಿಗೆ ನಿದ್ರೆಹತ್ತುವುದು. ವಸಂತಕನು ಅದನ್ನು ಕಂಡು, ಚಳಿಯ ಹೊತ್ತಾದುದರಿಂದ ತನಗೆ ಬಹಳ ಚಳಿಯೆಂದೂ, ತಾನು ಹೊದ್ದಿಕೆಯನ್ನು ತರುವುದಾಗಿಯೂ, ಹೇಳಿಕೊಂಡು ಹೊರಟುಹೋಗುವನು.

ಆ ವೇಳೆಗೆ ಪದ್ಮಾವತಿಯು ತಲೆನೋವಿನ ಬಾಧೆಯಿಂದ ನರಳುತ್ತ ಸಮುದ್ರ ಗೃಹದಲ್ಲಿ ಮಲಗಿರುವುದಾಗಿ ಚೇಟಿಯಿಂದ ಕೇಳಿ, ವಾಸವದತ್ತೆಯು ಅನುತಾಪದಿಂದ ಅವಳನ್ನು ನೋಡ ಬಯಸುವಳು. ಚೇಟಿಯು ಅವಳನ್ನು ಸಮುದ್ರಗೃಹದ ಬಾಗಿಲಿನವರೆಗೂ ಬಿಟ್ಟು, ತಾನು ಲೇಪನ ಸಾಮಗ್ರಿಯನ್ನು ತರುವುದಾಗಿ ಹೇಳಿ ಹೊರಟು ಹೋಗುವಳು. ವಾಸವದತ್ತೆಯು ಒಳಕ್ಕೆ ಹೋಗುವಳು. ಉದಯನನು ಮಲಗಿರುವುದನ್ನು ಕಾಣದೆ, ಪದ್ಮಾವತಿಯೇ ಮಲಗಿರಬೇಕೆಂದು ಆಕೆಯು ಭಾವಿಸುವಳು. ಪ್ರಮಾದವಶದಿಂದ ಅವಳು ಹೀಗೆ ಭಾವಿಸಿದುದು ಸ್ವಭಾವ ವಿರುದ್ಧ

ವಾದುದೇನೂ ಇಲ್ಲ. ಏಕೆಂದರೆ, ಅಲ್ಲಿ ಸಣ್ಣದೊಂದು ದೀಪವು ಉರಿಯು
ತ್ತಿರುವುದರಿಂದ, ಬೆಳಕು ಬಹಳ ಕಡಿಮೆಯಾಗಿರುವುದು. ಉದಯನನು
ಒಂದು ಪಾರ್ಶ್ವಕ್ಕೆ ತಿರುಗಿಕೊಂಡು ಹಾಸಿಗೆಯ ಅಂಚಿಗೆ ಮಲಗಿಕೊಂಡಿದ್ದ
ನೆಂದೂ, ವಾಸವದತ್ತೆಯು ಬೆನ್ನಿನ ಕಡೆಯಿಂದ ನೋಡಿದಳೆಂದೂ, ತೋರು
ವುದು. ಮುಂದೆ ಉದಯನನ ತೋಳು ಹಾಸಿಗೆಯಿಂದ ಆಚೆಗೆ ಬಿದ್ದ
ಸಂಗತಿಯು ಬರುತ್ತದೆ. ಅದನ್ನು ನೋಡಿದರೆ ಅವನು ಹಾಸಿಗೆಯ ಅಂಚಿ
ನಲ್ಲಿ ಮಲಗಿದ್ದನೆಂದೇ ಹೇಳಬಹುದು. ನಾವು ಇನ್ನೂ ಒಂದು ಸಂಗತಿ
ಯನ್ನು ಇಲ್ಲಿ ಗಮನಿಸಬಹುದು. ಚಳಿಯ ಹೊತ್ತೆಂದೂ, ತಾನು ಹೊದ್ದಿಕೆ
ಯನ್ನು ತಂದುಕೊಳ್ಳಬೇಕೆಂದೂ, ಹೇಳಿಕೊಂಡು ವಿದೂಷಕನು ಹೋಗಿ
ದ್ದಾನೆ. ಎಂದರೆ, ಆಗ ಬಹಳ ಚಳಿಯಾಗುತ್ತಿರಬೇಕು. ಆದುದರಿಂದ,
ಉದಯನನು ತನ್ನ ತಲೆಯೂ ಮುಚ್ಚುವಂತೆ ಮೈತುಂಬ ಹೊದ್ದಿಕೆಯ
ನ್ನೆಳೆದುಕೊಂಡು ಮಲಗಿರಬೇಕು. ಆದಕಾರಣ, ವಾಸವದತ್ತೆಗೆ ನಿಜ
ಸ್ಥಿತಿಯು ಗೊತ್ತಿಲ್ಲದೆ ಹೋಗಿರಬೇಕು. ವಾಸವದತ್ತೆಯು ಒಳಕ್ಕೆ ಹೋಗುವ
ಮೊದಲು "ಅಯ್ಯೋ! ದೈವಕ್ಕೆ ನನ್ನ ಮೇಲೆ ಕರುಣವೇ ಇಲ್ಲ. ವಿರಹ
ಪರ್ಯುತ್ಸುಕನಾಗಿರುವ ಆರ್ಯಪುತ್ರನಿಗೆ ವಿಶ್ರಮಸ್ಥಾನವೆನಿಸಿ ಸಂತೋಷ
ವನ್ನುಂಟುಮಾಡುವ ಈ ಪದ್ಮಾವತಿಯೂ ಅಸ್ವಸ್ಥಳಾಗಬೇಕೆ!" ಎಂದು
ತನ್ನಲ್ಲಿತಾನೇ ಹೇಳಿಕೊಳ್ಳುವಳು. ವಾಸವದತ್ತೆಯ ಮನೋವೃತ್ತಿಯು ಎಷ್ಟು
ಉದಾರವಾದುದೆಂಬುದನ್ನು ಕವಿಯು ನಮಗೆ ತೋರ್ಪಡಿಸಿದ್ದಾನೆ. ಪತಿಯ
ಸುಖವು ಒಂದೇ ಅವಳ ಪರಮಾರ್ಥ. ತನಗೆ ಸವತಿಯೊಬ್ಬಳು ಒದಗಿದ
ಳಲ್ಲಾ ಎಂಬುದು ಅವಳ ಮನಸ್ಸಿಗೆ ತೋರುವುದೇ ಇಲ್ಲ. ಪದ್ಮಾವತಿಯಲ್ಲಿ
ಅವಳಿಗೆ ಸಹೋದರಿಯಂತೆ ಪ್ರೀತಿ.

ವಾಸವದತ್ತೆಯ ಪರಿತಾಪವು ಅಲ್ಲಿಗೇ ನಿಲ್ಲುವುದಿಲ್ಲ. ಸಮುದ್ರ
ಗೃಹದಲ್ಲಿ ಪವಡಿಸಿರುವವನು ಉದಯನ. ಆದರೆ, ಪದ್ಮಾವತಿಯು
ಮಲಗಿರುವಳೆಂದು ಅವಳ ಭಾವನೆ. ಒಳಕ್ಕೆ ಹೋಗಿ ನೋಡಿ, "ಪರಿ
ಜನರ ಪ್ರಮಾದವನ್ನು ಎಷ್ಟೆಂದು ಹೇಳಲಿ! ಅಸ್ವಸ್ಥಳಾದ ಪದ್ಮಾವತಿ
ಯೊಡನೆ ಒಬ್ಬರೂ ಇಲ್ಲದೆ ದೀಪವೊಂದನ್ನು ಹೊತ್ತಿಸಿಟ್ಟು ಎಲ್ಲರೂ
ಹೊರಟು ಹೋಗಿದ್ದಾರಲ್ಲಾ! ಪದ್ಮಾವತಿಯು ಮಲಗಿದ್ದಾಳೆ. ನಾನೂ

ಸಮೀಪದಲ್ಲಿ ಕುಳಿತುಕೊಳ್ಳುವೆನು. ಬೇರೆ ಆಸನದಲ್ಲಿ ಕುಳಿತರೆ ಹೆಚ್ಚು ಪ್ರೀತಿಯಿಲ್ಲವೆಂದು ತೋರಿಬಂದರೂ ಬರಬಹುದು. ಆದಕಾರಣ, ಇವಳ ಹಾಸಿಗೆಯಮೇಲೇ ಕುಳಿತುಕೊಳ್ಳುವೆನು. ಇಂದು ಇವಳ ಪಕ್ಕದಲ್ಲಿ ಕುಳಿತಿರುವ ನನ್ನ ಹೃದಯದಲ್ಲಿ ಇಷ್ಟು ಆಹ್ಲಾದವಾಗುತ್ತಿರುವುದೇಕೆ? ಸದ್ಯ ನಿಶ್ವಾಸವು ಸುಖಮಯವಾಗಿರುವಂತೆ ತೋರುವ ಗತಿಯನ್ನಾಶ್ರಯಿಸಿದೆ. ಶಿರೋವೇದನೆಯು ಹೋಗಿರಬಹುದೋ ಏನೋ! ಇವಳು ಅರ್ಧ ಹಾಸಿಗೆಯನ್ನು ಹಾಗೆಯೇ ಬಿಟ್ಟು ಮಲಗಿರುವುದನ್ನು ನೋಡಿ ನಾನು ಆಲಿಂಗಿಸಬೇಕೆಂದು ಸೂಚಿಸುವಳೋ ಎಂಬಂತೆ ತೋರುತ್ತದೆ. (ಶಯನವನ್ನಭಿನಯಿಸಿ) ನಾನೂ ಇವಳ ಪಕ್ಕದಲ್ಲಿ ಮಲಗುವೆನು" ಎಂದು ಹೇಳುವಳು. ಇದರಿಂದ ಪದ್ಮಾವತಿಯಲ್ಲಿ ಅವಳಿಗೆಷ್ಟು ಪ್ರೀತಿಯೆಂಬುದು ವ್ಯಕ್ತವಾಗುವುದು. ಸವತಿಮಾತ್ಸರ್ಯವನ್ನರಿಯದೆ, ಅವಳನ್ನು ಪ್ರೀತಿಯಿಂದ ಆಲಿಂಗಿಸಲು ಬಯಸುವ ಅವಳ ಉದಾತ್ತ ಸ್ವಭಾವವನ್ನು ಎಷ್ಟೆಂದು ಕೊಂಡಾಡೋಣ! ಅವಳು ಪದ್ಮಾವತಿಯನ್ನು ಆಲಿಂಗಿಸದೆ ಸುಮ್ಮನಿದ್ದಂತೆ ಚಿತ್ರಿಸಿರುವುದೂ ಕವಿಯ ಪ್ರತಿಭೆಯನ್ನು ತೋರಿಸುತ್ತದೆ. ಪದ್ಮಾವತಿ ಯೆಂಬ ಭಾವನೆಯಿಂದ ಅವಳು ಉದಯನನನ್ನು ಆಲಿಂಗಿಸಿದ್ದರೆ ಎಂತಹ ಆಭಾಸ! ನಿದ್ರಾಭಂಗವಾದೀತೆಂಬ ಶಂಕೆಯಿಂದ ಅವಳು ಪದ್ಮಾವತಿಯನ್ನು ಆಲಿಂಗಿಸದೆ, ತನ್ನ ಮನಸ್ಸನ್ನು ಬಿಗಿಹಿಡಿದಿರಬೇಕು.

ವಾಸವದತ್ತೆಯು ಮಲಗಿಕೊಳ್ಳುವ ವೇಳೆಗೆ ಉದಯನನು "ಹಾ, ವಾಸವದತ್ತೆ" ಎಂದು ಸ್ವಪ್ನದಲ್ಲಿ ಕನವರಿಸುವನು. ವಾಸವದತ್ತೆಯು ಚಕಿತಳಾಗಿ ತಟ್ಟನೆ ಎದ್ದು ನಿಂತು, "ಹುಂ! ಆರ್ಯಪುತ್ರನು ನನ್ನನ್ನು ನೋಡಿದನೋ ಏನೋ ತಿಳಿಯದಲ್ಲಾ! ಆರ್ಯ ಯೌಗಂಧರಾಯಣನ ಪ್ರತಿಜ್ಞಾಭಾರವು ಮಹತ್ತರವಾದುದು. ಆರ್ಯಪುತ್ರನು ನನ್ನನ್ನು ನೋಡಿದುದರ ದೆಸೆಯಿಂದ ಅದು ನಿಷ್ಫಲವಾಯಿತು" ಎಂದು ಕೊಂಡು ಕಳವಳಪಡುವಳು. ಮತ್ತೆ ಉದಯನನು "ಹಾ, ಅವಂತಿ ರಾಜಪುತ್ರಿ" ಎಂದು ಕನವರಿಸುವನು. ಅವನು ಕನವರಿಸುತ್ತಿರುವುದನ್ನು ನೋಡಿ ಅವಳ ಮನಸ್ಸಿಗೆ ಸಮಾಧಾನವಾಗುವುದು. ಅವಳು, "ಇಲ್ಲಿ ಯಾರೂ ಇಲ್ಲ. ಒಂದು ಮುಹೂರ್ತಕಾಲ ಇಲ್ಲಿಯೇ ನಿಂತು ಹೃದಯ

ವನ್ನೂ, ಕಣ್ಣನ್ನೂ, ಸಂತೋಷಪಡಿಸಿ ತೃಪ್ತಿಗೊಳಿಸುವೆನು" ಎಂದು ಕೊಳ್ಳುವಳು. ಉದಯನನ ಈ ಸ್ವಪ್ನದ ದೆಸೆಯಿಂದಲೇ, ನಾಟಕಕ್ಕೆ ಸ್ವಪ್ನವಾಸದತ್ತವೆಂಬ * ಹೆಸರು. ಉದಯನನು, "ಹಾ, ಪ್ರಿಯಳೆ! ಹಾ, ಪ್ರಿಯಶಿಷ್ಯೆ! ನನಗೆ ಮಾರುತ್ತರಕೊಡು" ಎಂದು ಮತ್ತೆ ಕನವರಿಸುವನು. ವಾಸವದತ್ತೆಯು ಅದನ್ನು ಕೇಳಿ, "ಸ್ವಾಮಿಯೆ! ಮಾತನಾಡುತ್ತಲೇ ಇದ್ದೇನೆ, ನಾನು ಮಾತನಾಡುತ್ತಲೇ ಇದ್ದೇನೆ" ಎನ್ನುವಳು. ಉದಯನನು, "ಕೋಪಿಸಿಕೊಂಡಿರುವೆಯಾ ಹೇಗೆ?" ಎಂದು ಕನವರಿಸುವನು. ವಾಸವದತ್ತೆಯು, "ಇಲ್ಲ; ಇಲ್ಲ; ದುಃಖಿತಳಾಗಿದ್ದೇನೆ" ಎಂದು ಕೊಳ್ಳುವಳು. ಉದಯನನು ಹೀಗೆಯೇ ಕನವರಿಸುತ್ತ ಬರುವನು. ಈ ಒಟ್ಟು ದೃಶ್ಯವೇ ಮನೋಹರವಾಗಿರುವುದು; ಅದು ರಂಗಸ್ಥಳದಲ್ಲಿ ಪ್ರದರ್ಶಿಸಲ್ಪಟ್ಟಾಗ ಪ್ರೇಕ್ಷಕರ ಹೃದಯವನ್ನು ಮುಗ್ಧಗೊಳಿಸತಕ್ಕುದೂ ಹೌದು. ಅರಮನೆಯಲ್ಲಿ ಜನಸಂಚಾರವು ಹೆಚ್ಚಾಗಿರುವ ಪ್ರದೇಶಕ್ಕೆ ದೂರವಾಗಿರುವ ಸಮುದ್ರಗೃಹ, ಅಲ್ಲಿ ಪ್ರತಿಸಾನ್ನಿಧ್ಯ. ಪ್ರೇಮಮಯವಾದ ಪತಿ ಹೃದಯದಿಂದ ಹೊರಡುತ್ತ, ವಿರಹಿಣಿಗೆ ಉಲ್ಲಾಸಕರವಾಗಿರುವುದಲ್ಲದೆ ಉನ್ಮಾದಕರವಾಗಿಯೂ ಇರುವ ಪ್ರೇಮಾಲಾಪತರಂಗ. ಅಂತಹ ಸನ್ನಿವೇಶದಲ್ಲಿಯೂ ನಿಜಸ್ಥಿತಿಯನ್ನು ತಿಳಿಸದೆ ವಾಸವದತ್ತಾದೇವಿಯು ಅನನ್ಯಸುಲಭವಾದ ಚಿತ್ತಸಂಯಮಮಾಡುವಳು. ಕೊನೆಗೆ ಹಾಸಿಕೆಯಿಂದ ಆಚೆಗೆ ಬಿದ್ದ ಪತಿಯ ತೋಳನ್ನು ಸರಿಯಾಗಿಟ್ಟು ಆಕೆಯು ಹೊರಟುಹೋಗುವಳು.

ಉದಯನನಿಗೆ ತಟಕ್ಕನೆ ಎಚ್ಚರವಾಗುವುದು. ಆದರೂ, ನಿದ್ರೆಯ ಜೋಂಪು ಹರಿದಿಲ್ಲ. ಅವನು ಮೇಲಕ್ಕೆದ್ದು "ವಾಸವದತ್ತೆ, ನಿಲ್ಲು, ನಿಲ್ಲು" ಎಂದುಕೊಂಡು ಮುಂದೆಹೊರಟು, ಬಾಗಿಲುವಾಡವನ್ನು ತಲೆಗೆತಾಕಿಸಿಕೊಳ್ಳುವನು. ವಾಸವದತ್ತೆಯನ್ನು ತಾನುಕಂಡುದಾಗಿಯೂ, ರುಮಣ್ವಂತನು ಅವಳು ಅಗ್ನಿದಗ್ಧಳಾದಂತೆ ಹೇಳಿದ್ದುದು ಸುಳ್ಳುಮಾತೆಂದೂ ಉದಯನನು ಅವನಿಗೆ

* "ಸ್ವಪ್ನವಾಸವದತ್ತಮ್" ಎಂದು ರೂಪಕದ ಹೆಸರಿದೆ. ಇದು ವ್ಯಾಕರಣಾನುಸಾರವಾಗಿ "ಸ್ವಾಪ್ನವಾಸವದತ್ತಮ್" ಎಂದಿರಬೇಕಾಗಿದ್ದಿತು. ಆದರೂ ಈಗಿನ ರೂಪವನ್ನೂ "ವಾಸವದತ್ತಾ ಸಂಬಂಧಿ ವಾಸವದತ್ತಮ್, ಸ್ವಪ್ನೇ ವಾಸವದತ್ತಮ್ ಸ್ವಪ್ನವಾಸವದತ್ತಮ್" ಎಂದು ಹೇಳಿ ಸಮರ್ಥಿಸಬಹುದು.

ತಿಳಿಸುವನು. ವಿದೂಷಕನು ವಾಸವದತ್ತೆಯು ಎಂದೋ ಮೃತಳಾದ ಳೆಂದು ಉತ್ತರ ಹೇಳುವನು. ಉದಯನನು ಒಪ್ಪಲೊಲ್ಲನು. ಉಜ್ಜಯಿನೀ ಸಂಬಂಧವಾದ ಕಥೆಯನ್ನು ಹೇಳಲಾರಂಭಿಸಿದಾಗಿನಿಂದ ವಾಸವದತ್ತೆಯ ನೆನಪೇ ಇದ್ದುದರಿಂದ, ಉದಯನನು ಅದಕ್ಕನುಗುಣವಾಗಿ ವಾಸವದತ್ತೆ ಯನ್ನು ಸ್ವಪ್ನದಲ್ಲಿ ಕಂಡಿರಬೇಕೆಂದು ವಸಂತಕನು ಸಿದ್ಧಾಂತಮಾಡುವನು. ಉದಯನನು ಹಾಗಿದ್ದರೂ ಇರಬಹುದೆಂದು ಒಪ್ಪಿಕೊಳ್ಳುವನು "ಈ ನಗರ ದಲ್ಲಿ ಅವಂತಿಸುಂದರಿಯೆಂಬ ಯಕ್ಷಿಣಿಯು ಇದ್ದಾಳೆ. ನೀನು ಅವಳನ್ನು ನೋಡಿದ್ದರೂ ನೋಡಿರಬಹುದು" ಎಂದು ವಿದೂಷಕನು ತಿಳಿಸುವನು. ಉದಯನನು ಅದನ್ನೊಪ್ಪದೆ, ವಾಸವದತ್ತೆಯು ತೋಳನ್ನು ಸ್ಪರ್ಶಿಸಿದ ಳೆಂದೂ, ತನಗೆ ರೋಮಾಂಚಿತವಾದುದು ಇನ್ನೂ ಹಾಗೆಯೇ ಇರುವು ದೆಂದೂ, ವಿದೂಷಕನಿಗೆ ಹೇಳುವನು. ವಿದೂಷಕನು ಅವನ್ನು ನಂಬದೆ ಚತುಶ್ಶಾಲೆಗೆ ಅವನನ್ನು ಕರೆದೊಯ್ಯುವನು. ಆ ವೇಳೆಗೆ ಆರುಣಿಯ ಮೇಲೆ ಯುದ್ಧಕ್ಕೆ ಹೊರಡಲು ರುಮಣ್ವಂತನು ಸೇನಾಸಮೇತನಾಗಿ ಬಂದಿ ದ್ದುದನ್ನೂ, ದರ್ಶಕನು ಅವಶ್ಯವಾದ ಯುದ್ಧಸಾಮಗ್ರಿಗಳೇ ಮುಂತಾದು ವನ್ನು ತಾನೂ ಒದಗಿಸಿಕೊಟ್ಟಿರುವುದನ್ನೂ, ಶತ್ರುಗಳನ್ನು ನೆಗ್ಗಲು ಬೇಕಾದ ಸಮಸ್ತ ಸಮರ ಸನ್ನಾಹವೂ ಸಿದ್ಧವಾಗಿದ್ದುದನ್ನೂ, ಸೈನ್ಯವು ಆಗಲೇ ಗಂಗಾನದಿಯನ್ನು ದಾಟಿರುವುದೆಂಬುದನ್ನೂ, ಉದಯನನ ಗುಣಗಳಿಂದ ಸುಪ್ರೀತರಾಗಿದ್ದ ಪ್ರಜೆಗಳಿಗೆ ಸಮಾಧಾನಹೇಳಿದ್ದುದನ್ನೂ, ಉದಯನನು ಯುದ್ಧಕ್ಕೆ ಹೊರಡಬಹುದೆಂಬುದನ್ನೂ, ವತ್ಸರಾಜ್ಯವು ಅವನ ಕೈಸೇರಿದಹಾಗೆಯೇ ಸರಿಯೆಂಬುದನ್ನೂ, ದರ್ಶಕನು ತಿಳಿಸಹೇಳಿದ ನೆಂದೂ ಕಾಂಚುಕೀಯನು ಬಿನ್ನವಿಸುವನು. ಉದಯನನು ಆರುಣಿಯನ್ನು ನಿಪಾತಗೊಳಿಸುವುದಾಗಿ ವೀರವಾಣಿಯಿಂದ ಪ್ರತಿಜ್ಞೆಮಾಡುವನು. ಅಭಿ ನಯದ ದೃಷ್ಟಿಯಿಂದ ಈ ಅಂಕವು ಅತಿಮನೋಹರವಾಗಿದೆ; ಭಾವವೈವಿಧ್ಯ ಗಳಿಂದಲೂ, ಉತ್ತಮವಾದ ಸನ್ನಿವೇಶಗಳಿಂದಲೂ, ತುಂಬಿಕಳಕಳಿಸುತ್ತಿದೆ.

**ಆರನೆಯ ಅಂಕ:**—ಐದನೆಯ ಅಂಕಕ್ಕೂ, ಆರನೆಯ ಅಂಕಕ್ಕೂ, ನಡುವೆ ಸ್ವಲ್ಪ ಕಾಲವು ಕಳೆದಿದೆ. ವತ್ಸರಾಜನಿಗೆ ವಿಜಯಪ್ರಾಪ್ತಿಯಾಗಿ ಅವನು ಕೌಶಾಂಬಿಗೆ ಪದ್ಮಾವತಿಯೊಡನೆ ಬಂದುದನ್ನು ಕೇಳಿ ಅವನನ್ನು

ಅಭಿನಂದಿಸಲು ಮಹಾಸೇನನು ತನ್ನ ಕಡೆಯ ಕಾಂಚುಕೀಯನನ್ನು ಕಳುಹಿಸಿದ್ದಾನೆ. ಅಂಗಾರವತಿಯೂ ಸಹ ಹಿಂದೆ ತಾವು ಬರೆಯಿಸಿದ್ದ ಉದಯನನ ಚಿತ್ರವನ್ನೂ, ವಾಸವದತ್ತೆಯ ಚಿತ್ರವನ್ನೂ, ಕಳುಹಿಸಿ ಧಾತ್ರಿಯಾದ ವಸುಂಧರೆಯೊಡನೆ ಒಂದು ಸಂದೇಶವನ್ನೂ ಕಳುಹಿಸಿದ್ದಾಳೆ.

ಇತ್ತ ಉದಯನನಿಗೆ ಘೋಷವತಿಯೆಂಬ ವೀಣೆಯು ದೊರೆತು, ವಾಸವದತ್ತೆಯು ಮೃತಳಾದ ದುಃಖವು ದುಸ್ಸಹವಾಗಿ ಪರಿಣಮಿಸಿದೆ. ಈ ವೀಣೆಯ ವಿಷಯವು ಪ್ರತಿಜ್ಞಾಯೌಗಂಧರಾಯಣದಲ್ಲಿ ಕೂಡ ಬಂದಿದೆ. ಉದಯನನ ವೀಣೆಯು ಅದು. ಅವನು ಆನೆಗಳನ್ನು ಮುಗ್ಧಗೊಳಿಸಿ ಸೆರೆ ಹಿಡಿದು ಪಳಗಿಸುತ್ತಿದ್ದುದು, ಅದರಸಹಾಯದಿಂದಲೇ. ಮಹಾಸೇನನ ಕಡೆಯವರಿಗೆ ಅವನು ಸೆರೆಸಿಕ್ಕಿದಾಗ ಅವರು ಅದನ್ನು ತಮ್ಮ ರಾಜನಲ್ಲಿಗೆ ತೆಗೆದುಕೊಂಡು ಹೋಗಿ, ಅವನ ಅಪ್ಪಣೆಯಂತೆ ಅದನ್ನು ವಾಸವದತ್ತೆಗೆ ಕೊಡುತ್ತಾರೆ. ಮುಂದೆ ಅವಳು ಉದಯನನಿಂದ ಅದನ್ನು ನುಡಿಸುವುದನ್ನು ಕಲಿತು, ತನ್ನಲ್ಲಿಯೇ ಇಟ್ಟುಕೊಂಡಿರುತ್ತಾಳೆ. ಅವಳು ಯೌಗಂಧರಾಯಣನೊಡನೆ ವೇಷಧಾರಿಣಿಯಾಗಿ ಬಂದ ಬಳಿಕ, ಪರಿಜನರು ಅದರ ಬೆಲೆಯನ್ನರಿಯದೆ ವಾಸವದತ್ತೆಯೂ ಮೃತಳಾದಳೆಂದು ಬಗೆದು ಅದನ್ನು ಎಸೆದುಬಿಡುತ್ತಾರೆ.

ನರ್ಮದಾತೀರದ ಪೊದರಿನಲ್ಲಿ ಬಿದ್ದಿದ್ದ ಆ ವೀಣೆಯನ್ನು ಆಗಂತುಕನೊಬ್ಬನು ತರುತ್ತಾನೆ. ಅದರ ನಾದವು ಉದಯನನ ಕಿವಿಗೆ ಬೀಳುತ್ತದೆ. ಅದರ ಮಂಜುಳ ನಾದದಿಂದ ಅವನು ಅದನ್ನು ಗುರುತಿಸಿ ತಾನು ತರಿಸಿಕೊಳ್ಳುತ್ತಾನೆ. ಅವನು ಅದನ್ನು ತೊಡೆಯಮೇಲಿಟ್ಟುಕೊಂಡು ದುಃಖಿಸಿ ಕೊನೆಗೆ ಮೂರ್ಛಿತನಾಗುತ್ತಾನೆ. ಮೂರ್ಛೆ ತಿಳಿದಮೇಲೆ ವಾಸವದತ್ತೆಗೆ ಪ್ರಿಯವಾದ ಘೋಷವತಿಯನ್ನು ಬಣ್ಣಿಸಿಬಣ್ಣಿಸಿ ವಾಸವದತ್ತೆಯನ್ನು ನೆನೆದು ದುಃಖಿಸುತ್ತಾನೆ. ವೀಣೆಮುಂತಾದುವುಗಳಿಗೆ ಮುದ್ದಿಗಾಗಿ ಹೆಸರಿಡುತ್ತಿದ್ದ ಪದ್ಧತಿಯನ್ನೂ (ಘೋಷವತಿಯೆಂಬ ಹೆಸರನ್ನು ನೋಡಿ) ನಾವು ಗ್ರಹಿಸಬಹುದಾಗಿದೆ. ಉದಯನನ ದುಃಖವನ್ನು ನೋಡಿದರೆ ಶಾಕುಂತಲ ನಾಟಕದಲ್ಲಿ ಉಂಗುರವನ್ನುನೋಡಿದಾಗ ದುಷ್ಯಂತನು ಶಕುಂತಲೆಯನ್ನು ನೆನೆಸಿಕೊಂಡು ದುಃಖಿಸುವುದು ನಮಗೆ ಜ್ಞಾಪಕಬರುತ್ತದೆ. ವಿದೂಷಕನು ಉದಯನನಿಗೆ ಸಮಾಧಾನ ಹೇಳುತ್ತಾನೆ. ವೀಣೆಯು ಅಲ್ಲಲ್ಲಿ

ಮುರಿದುಹೋಗಿರುತ್ತದೆ. ಶಿಲ್ಪಿಗಳಿಂದ ಅದನ್ನು ಸರಿಮಾಡಿಸಿಕೊಂಡು ಬರುವಂತೆ ಉದಯನನು ತನ್ನ ಮಿತ್ರನಿಗೆ ಹೇಳುತ್ತಾನೆ. ವಿದೂಷಕನು ವೀಣೆಯನ್ನು ತೆಗೆದುಕೊಂಡು ಹೋಗುತ್ತಾನೆ.

ಬಳಿಕ ಪ್ರತೀಹಾರಿಯು ಪ್ರವೇಶಿಸಿ ಮಹಾಸೇನನ ಕಡೆಯವರು ಬಂದಿರುವುದನ್ನು ತಿಳಿಸುತ್ತಾಳೆ. ಪದ್ಮಾವತಿಯನ್ನು ಬರಹೇಳುವಂತೆ ಉದಯನನು ಅಪ್ಪಣೆಮಾಡುತ್ತಾನೆ. ಪದ್ಮಾವತಿಯು ಬಂದು, "ಆರ್ಯಪುತ್ರನಿಗೆ ಜಯವಾಗಲಿ" ಎಂದುಹೇಳಿ ಅಭಿವಂದಿಸುತ್ತಾಳೆ. ಸಹೃದಯಳಾದ ಪದ್ಮಾವತಿಯ ಸೌಶೀಲ್ಯಾದಿಗುಣಗಳ ಅಮೃತವರ್ಷವೇ ಸುರಿಯುವಂತೆ ಕವಿಯು ತನ್ನ ಕೌಶಲವನ್ನು ತೋರಿಸಿರುವನು. ಈ ದೃಶ್ಯದಲ್ಲಿ ಸುವರ್ಣ ಪಟದಂತೆ ಅವಳ ಮನಸ್ಸೇ ನಮ್ಮೆದುರಿಗೆ ನಿಲ್ಲುವುದು. ಉದಯನನು "ಪದ್ಮಾವತಿ! ಮಹಾಸೇನನ ಕಡೆಯಿಂದ ರೈಭ್ಯಸ ಗೋತ್ರೋದ್ಭವನಾದ ಕಾಂಚುಕೀಯನೂ, ಪೂಜ್ಯೆಯಾದ ಅಂಗಾರವತಿಯು ಕಳುಹಿಸಿರುವ ಆರ್ಯಳಾದ ವಸುಂಧರೆಯೆಂಬ ಹೆಸರಿನ ವಾಸವದತ್ತೆಯ ಧಾತ್ರಿಯೂ, ಬಂದು ದರ್ಶನಾಕಾಂಕ್ಷಿಗಳಾಗಿ ಕಾದಿರುವ ಸಂಗತಿಯನ್ನೂ ಕೇಳಿದೆಯಾ?" ಎಂದು ಪ್ರಶ್ನೆಮಾಡುವನು.

ಪದ್ಮಾವತಿಯು ಅದಕ್ಕೆ ಹೇಳುವ ಮುದ್ದಾದ ಉತ್ತರವನ್ನಾದರೂ ನೋಡಿ: "ಆರ್ಯಪುತ್ರ! ನಮ್ಮ ತವರಿನವರ ಕುಶಲವಾರ್ತೆಯನ್ನು ಕೇಳಲು ನನಗೆ ಸಂತೋಷವಾಗುವುದು" ಎಂದು ಅವಳು ಉತ್ತರಹೇಳುವಳು. ವಾಸವದತ್ತೆಗೂ ತನಗೂ ಭೇದಕಲ್ಪನೆಯೇ ಅವಳ ಮನಸ್ಸಿನಲ್ಲಿಲ್ಲ. ಅವಳ ಉತ್ತರದಿಂದ ಉದಯನನು ಸುಪ್ರೀತನಾಗಿ, "ವಾಸವದತ್ತೆಯ ಸ್ವಜನರು ನಿನ್ನ ಸ್ವಜನರೆಂದು ನೀನು ಹೇಳಿದುದು ನಿನಗೆ ಅನುರೂಪವಾದ ಉತ್ತರ. ಪದ್ಮಾವತಿ, ಬಾ, ಕುಳಿತುಕೊ; ಇದೇಕೆ, ನೀನು ಕುಳಿತುಕೊಳ್ಳುವುದಿಲ್ಲ?" ಎನ್ನುವನು. ಅದಕ್ಕೆ ಪದ್ಮಾವತಿಯು "ಆರ್ಯಪುತ್ರ! ನನ್ನನ್ನು ಸಮೀಪದಲ್ಲಿ ಕುಳ್ಳಿರಿಸಿಕೊಂಡು ಅವರನ್ನು ನೋಡುವೆಯಾ?" ಎಂದು ಕೇಳುವಳು. ಅದರಲ್ಲಿ ದೋಷವೇನೆಂದು ಉದಯನನು ಕೇಳಿದುದಕ್ಕೆ, "ನಾನು ಆರ್ಯಪುತ್ರನ ದ್ವಿತೀಯ ಭಾರ್ಯೆಯಾದಕಾರಣ. ನನ್ನೊಡನೆ ಕುಳಿತು ಹಾಗೆಮಾಡುವುದು ಸರಿಯಲ್ಲ" ಎಂದು ಅವಳು

ಉತ್ತರ ಹೇಳುವಳು. ಅವಳ ಔಚಿತ್ಯದೃಷ್ಟಿಯೂ ಇತರರ ಮನಸ್ಸಿಗೆ ನೋವಾಗದಂತೆ ವರ್ತಿಸಲಿಚ್ಛಿಸುವ ಅವಳ ದಾಕ್ಷಿಣ್ಯ ಬುದ್ಧಿಯೂ, ಅವಳ ವಿನೀತ ಭಾವವೂ,ಇದರಿಂದ ವ್ಯಕ್ತವಾಗುವುವು. ಉದಯನನು ಅವರು, "ಕಲತ್ರದರ್ಶನಾರ್ಹ" ರೆಂದು ಹೇಳಿ ಅವಳನ್ನು ತನ್ನ ಬಳಿಯಲ್ಲಿ ಕುಳ್ಳಿರಿಸಿ ಕೊಳ್ಳುವನು. ವಾಸವದತ್ತೆಯ ತಾಯಿತಂದೆಗಳು ತನ್ನ ತಾಯಿತಂದೆ ಗಳಾಗಿದ್ದಂತೆಯೇ ಭಾವಿಸಿ "ಆರ್ಯಪುತ್ರ! ತಾಯಿತಂದೆಗಳು ಏನು ಹೇಳಿಕಳುಹಿಸಿರುವರೋ ಎಂದು ಮನಸ್ಸಿಗೆ ಆತಂಕವಾಗುತ್ತದೆ" ಎಂದು ಪದ್ಮಾವತಿಯು ಹೇಳಿದುದನ್ನು ಕೇಳಿ, ಉದಯನನು ತಾನು ರಾಜಕನ್ಯೆ ಯನ್ನು ಅಪಹರಿಸಿದುದಲ್ಲದೆ ಅವಳನ್ನು ರಕ್ಷಿಸದೆಯೂ ಹೋದುದಕ್ಕಾಗಿ (ತಂದೆಯು ಕೋಪಿಸಿಕೊಂಡಾಗ ಮಗನು ಹೆದರುವಂತೆ) ತಾನೂ ಭೀತ ನಾಗಿರುವುದಾಗಿ ಅವಳೊಡನೆ ಹೇಳುವನು. ಮರಣಕಾಲಬಂದಾಗ ರಕ್ಷಿಸುವುದೆಲ್ಲಿ ಸಾಧ್ಯವೆಂದು ಪದ್ಮಾವತಿಯು ಸಮಾಧಾನ ಹೇಳುವಳು.

ಉದಯನನು ಮಹಾಸೇನನು ಕುಶಲವೇ ಎಂದು ತನ್ನೆಡೆಗೆ ಬಂದ ಕಾಂಚುಕೀಯನನ್ನು ಕೇಳುವನು. ಮಹಾಸೇನನು ಉದಯನನಿಗೆ ರಾಜ್ಯ ಪ್ರಾಪ್ತಿಯಾದುದಕ್ಕೆ ಅಭಿನಂದನವನ್ನು ತಿಳಿಸಿ ಸಂದೇಶವನ್ನು ಕಳುಹಿಸಿರು ವನು. ಮಹಾಸೇನನ ಸಂದೇಶವನ್ನು ಕೇಳಲು ಉದಯನನು ಗೌರವದಿಂದ ಎದ್ದು ನಿಲ್ಲುವನು. ಸಂದೇಶವನ್ನು ಕೇಳಿಎಲ್ಲವೂ ಮಹಾಸೇನನ ಪ್ರಭಾವ ವೆಂದು ಉದಯನನು ಉತ್ತರಹೇಳುವನು. ಇತಿಹಾಸದ ಪ್ರಚಂಡ ಪ್ರದ್ಯೋ ತನಲ್ಲಿದ್ದ ಕ್ರೌರ್ಯದ ಲವಲೇಶವೂ ಭಾಸನ ಮಹಾಸೇನನಲ್ಲಿಲ್ಲ. ಅವನು ಕರುಣಾರ್ದ್ರ ಹೃದಯನು. ಇಲ್ಲವಾದಲ್ಲಿ ಮಗಳು ಮೃತಳಾದ ಮೇಲೂ ಅಳಿಯನಲ್ಲಿ ಹೀಗೆ ಅಭಿಮಾನವನ್ನಿಟ್ಟು ರಾಜ್ಯ ಪ್ರಾಪ್ತಿಯಾದುದಕ್ಕಾಗಿ ಸಂತೋಷವನ್ನು ಸೂಚಿಸಿ ಅವನೆಂದಿಗೂ ಸಂದೇಶವನ್ನು ಕಳುಹಿಸುತ್ತಿರಲಿಲ್ಲ.

ಉದಯನನು ವಾಸವದತ್ತೆಯು ಮೃತಳಾದುದಕ್ಕಾಗಿ ತನ್ನ ವ್ಯಸನ ವನ್ನು ಸೂಚಿಸಿದಾಗ, ಧಾತ್ರಿಯು ಸಮಾಧಾನ ಹೇಳುವಳು. ಕಾಂಚು ಕೀಯನೂ ಕೂಡ, ಉದಯನನು ಈರೀತಿ ಅನುಕಂಪವನ್ನು ತೋರಿ ಸುತ್ತಿರುವುದರಿಂದ ವಾಸವದತ್ತೆಯು ಮೃತಳಾಗಿದ್ದೂ ಸಜೀವಳೇ ಸರಿ ಯೆಂದು ಹೇಳುವನು; "ಅಲ್ಲದೆ, ಮೃತ್ಯುಕಾಲವು ಸಮೀಪಿಸಿದಾಗ ಯಾರು

ಯಾರನ್ನು ರಕ್ಷಿಸಬಲ್ಲರು ? ಹಗ್ಗವು ಕಿತ್ತುಹೋದಾಗ, ಘಟವು ಬಾವಿಗೆ ಬೀಳದಂತೆ ಯಾರು ಹಿಡಿಯಬಲ್ಲರು? ವನವೃಕ್ಷಗಳು ಬೆಳೆಯುವುದು ಒಂದು ಕಾಲ; ಅವುಗಳು ಕಡಿಯಲ್ಪಡುವುದು ಒಂದುಕಾಲ. ಮನುಷ್ಯರಸ್ಥಿತಿಯೂ ಹೀಗೆಯೇ ಸರಿ." * ಎಂದು ಉಪದೇಶಮಾಡುವನು. ಉದಯನನು "ಆರ್ಯ ! ಹಾಗೆ ಹೇಳಬೇಡ. ಮಹಾಸೇನಪುತ್ರಿಯು ನನ್ನ ಶಿಷ್ಯಳು ; ನನ್ನ ಪಟ್ಟಮಹಿಷಿ ; ನನ್ನ ಪ್ರಿಯಭಾರ್ಯೆ. ಅವಳನ್ನು ಜನ್ಮಜನ್ಮಾಂತರಕ್ಕೂ ಸ್ಮರಿಸಿಕೊಳ್ಳದೆ ಇರುವುದು ಸಾಧ್ಯವೆ? "§ ಎಂದು ಉತ್ತರ ಹೇಳುವನು. ವಾಸವದತ್ತೆಯಲ್ಲಿ ಅವನಿಗಿರುವ ಪ್ರೇಮವು ಎಷ್ಟು ಗಾಢವಾದುದು !

ಬಳಿಕ ಧಾತ್ರಿಯು ಅಂಗಾರವತಿಯ ಸಂದೇಶವನ್ನು ತಿಳಿಸುವಳು : "ವಾಸವದತ್ತೆಯು ಮೃತಳಾದಳು. ನನಗೂ, ಮಹಾಸೇನನಿಗೂ, ಗೋಪಾಲಕ ಪಾಲಕರು ಹೇಗೆ ಮಕ್ಕಳೋ ನೀನೂ ಹಾಗೆಯೇ ಪುತ್ರಸಮಾನನು. ನೀನು ಅಳಿಯನಾಗಬೇಕೆಂದು ನಮಗೆ ಮೊದಲಿನಿಂದಲೂ ಅಭಿಲಾಷೆಯಿದ್ದಿತು. ಅದಕ್ಕೋಸ್ಕರವೇ ನಿನ್ನನ್ನು ಉಜ್ಜಯಿನಿಗೆ ಕರೆದುತಂದುದು. ವೀಣೆಯನ್ನು ನುಡಿಸುವುದನ್ನು ಕಲಿಸುವ ವ್ಯಾಜದಿಂದ ಅಗ್ನಿಸಾಕ್ಷಿಯಿಲ್ಲದೆಯೇ ನಿನ್ನ ಕೈಗೆ ಅವಳನ್ನೊಪ್ಪಿಸಿದೆವು. ಚಪಲತೆಯಿಂದ ಕೂಡಿ ನೀನು ವಿವಾಹಕ್ಕೆ ಮೊದಲೇ ಅವಳೊಡನೆ ಹೊರಟುಹೋದೆ. ನಾವು ಆ ಬಳಿಕ ನಿನ್ನ ಮತ್ತು ವಾಸವದತ್ತೆಯ ಪ್ರತಿಕೃತಿಗಳನ್ನು ಬರೆಯಿಸಿ, ಆ ಚಿತ್ರ ಪಟಗಳಿಗೇ ವಿವಾಹ ಕರ್ಮವನ್ನು ನೆರವೇರಿಸಿದೆವು. ಆ ಚಿತ್ರಪಟಗಳನ್ನು ಕಳುಹಿಸಿದ್ದೇವೆ. ಚಿತ್ರವನ್ನಾದರೂ ನೋಡಿ. ಸಮಾಧಾನಮಾಡಿಕೊ " ಎಂಬುದು ಅಂಗಾರವತಿಯ ಸಂದೇಶ.

---

* ಕಃ ಕಂ ಶಕ್ತೋ ರಕ್ಷಿತುಂ ಮೃತ್ಯುಕಾಲೇ
ರಜ್ಜುಚ್ಛೇದೇ ಕೇ ಘಟಂ ಧಾರಯನ್ತಿ ।
ಏವಂ ಲೋಕಸ್ತುಲ್ಯ ಧರ್ಮಾ ವನಾನಾಂ
ಕಾಲೇ ಕಾಲೇ ಛಿದ್ಯತೇ ರುಹ್ಯತೇ ಚ ॥

§ ಆರ್ಯ ! ಮಾ ಮೈವಮ್ ।
ಮಹಾಸೇನಸ್ಯ ದುಹಿತಾ ಶಿಷ್ಯಾ ದೇವೀ ಚ ಮೇ ಪ್ರಿಯಾ ।
ಕಥಂ ಸಾ ನ ಮಯಾ ಶಕ್ಯಾ ಸ್ಮರ್ತುಂ ದೇಹಾನ್ತರೇಷ್ವಪಿ ॥

ವಾತ್ಸಲ್ಯಪೂರಿತೆಯಾಗಿ ಆಕೆಯು ಕಳುಹಿಸಿದ ಆ ಸಂದೇಶದಿಂದ ತನಗೆ ನೂರು ರಾಜ್ಯಗಳು ದೊರಕಿದುದಕ್ಕಿಂತಲೂ ಹೆಚ್ಚು ಸಂತೋಷ ವಾಯಿತೆಂದು ಉದಯನನು ಹೇಳುವನು. § ಚಿತ್ರಗತೆಯೂ, ಹಿರಿಯಳೂ, ಆದ ವಾಸವದತ್ತೆಗೆ ಅಭಿವಂದನಮಾಡಲು ತನಗೆ ಇಷ್ಟವಾಗುವುದಾಗಿ ಪದ್ಮಾವತಿಯು ಬಯಸುವಳು. ಅದೆಂತಹ ಹೃದಯವೋ ಪದ್ಮಾವತಿಯದು! ಧಾತ್ರಿಯು ಚಿತ್ರವನ್ನು ತೋರಿಸುವಳು. ಆವಂತಿಕೆಯ ಮುಖಕ್ಕೂ, ಆ ಚಿತ್ರಕ್ಕೂ, ಹೋಲಿಕೆಯಿರುವುದನ್ನು ಕಂಡು ಪದ್ಮಾವತಿಯು ವಿಸ್ಮಿತಳಾಗುವಳು. ಆರ್ಯಳಾದ ವಾಸವದತ್ತೆಯನ್ನೇ ಚಿತ್ರವು ಹೋಲುವುದೇ ಎಂದು ಅವಳು ಉದಯನನನ್ನು ಕೇಳುವಳು. ಅವಳೇ ಚಿತ್ರದಲ್ಲಿದ್ದಂತಿದೆಯೆಂದು ಅವನು ಉತ್ತರ ಹೇಳುವನು. ಆದರೂ, ಪದ್ಮಾವತಿಗೆ ಅನುಮಾನ. ಉದಯನನ ಚಿತ್ರವು ಉದಯನನಂತಿದ್ದರೆ, ಆಬಳಿಕ ಈ ವಿಧದ ಸಂಶಯಕ್ಕೆ ಕಾರಣವಿರುವುದಿಲ್ಲವೆಂದು ಬಗೆದು ಅವಳು ಅದನ್ನೂ ನೋಡುವಳು. “ಆರ್ಯಪುತ್ರನ ಚಿತ್ರದ ಸಾದೃಶ್ಯವನ್ನು ನೋಡಿ, ಆರ್ಯಳ ಪ್ರತಿಕೃತಿಯು ಅವಳನ್ನೇ ಹೋಲುವುದಾಗಿ ಭಾವಿಸಬೇಕಾಗಿದೆ” ಎಂದು ಅವಳು ತನಗೆ ತಾನೆ ಹೇಳಿಕೊಂಡು ಉದಯನನ ಚಿತ್ರವನ್ನು ನೋಡುವಳು.

ಅವಳಿಗೆ ಶೋಕಸಂತೋಷಗಳು ಒಟ್ಟಿಗೆಒದಗುವುವು. ಆವಂತಿಕೆಯೇ ವಾಸವದತ್ತೆಯೆಂದು ಅವಳ ಭಾವನೆ. ಅದಕ್ಕಾಗಿ ಅವಳಿಗೆ ಸಂತೋಷ. ಆದರೆ, ಆಕೆಯನ್ನು ಯಥಾ ಯೋಗ್ಯವಾಗಿ ತಾನು ಆದರಿಸಿ ಗೌರವಿಸದೆ ಹೋದುದಕ್ಕಾಗಿ ಮನೋವ್ಯಥೆ.

ಪದ್ಮಾವತಿಯು ಚಿತ್ರವನ್ನು ನೋಡಿದಾಗಿನಿಂದ ಪ್ರಹೃಷ್ಟಳೂ, ಉದ್ವಿಗ್ನಮನಸ್ಕಳೂ ಆಗಿರುವುದಕ್ಕೇನು ಕಾರಣವೆಂದು ಉದಯನನು ಕೇಳುವನು. ವಾಸವದತ್ತೆಯ ಹೋಲಿಕೆಯಿರುವವಳೊಬ್ಬಳು ಇರುವಳೆಂದು ಪದ್ಮಾವತಿಯು ತಿಳಿಸುವಳು. ಉದಯನನು ಸಂಭ್ರಮದಿಂದ ಕೂಡಿ ಅವಳನ್ನು ಶೀಘ್ರವಾಗಿ ಕರೆದುಕೊಂಡು ಬರುವಂತೆ ಹೇಳುವನು.

---

§ “ವಾಕ್ಯಮೇತತ್ಪ್ರಿಯತರಂ ರಾಜ್ಯಲಾಭಶತಾದಪಿ ।
ಅಪರಾದ್ಧೇಷ್ವಪಿ ಸ್ನೇಹೋ ಯದಸ್ಮಾಸು ನ ವಿಸ್ಮೃತಃ” ॥

ಆದರೆ, ಬ್ರಾಹ್ಮಣನು ಆಕೆಯನ್ನು ನ್ಯಾಸವಾಗಿಟ್ಟಿದನ್ನು ಪದ್ಮಾವತಿಯಿಂದ ಕೇಳಿದೊಡನೆಯೇ ದೂರಗತವಾಗಿದ್ದ ಅವನ ಆಸೆಯು ಹಿಂದಕ್ಕೆ ಬರುವುದು. ವಿಪ್ರನ ತಂಗಿಯಾದಮೇಲೆ, ಕೇವಲ ರೂಪಸಾದೃಶ್ಯದಿಂದ ಹಾಗೆ ಕಂಡಿರಬೇಕೆಂದು ಅವನು ಅಭಿಪ್ರಾಯಪಡುವನು.

ಅದೇ ಸಮಯಕ್ಕೆ ಸರಿಯಾಗಿ ತಪಸ್ವಿ ವೇಷಧಾರಿಯಾದ ಯೌಗಂಧರಾಯಣನು ಪ್ರವೇಶಿಸುವನು. ಮಂತ್ರಿಯ ಬುದ್ಧಿಯು ಇಲ್ಲಿಯೂ ವ್ಯಕ್ತವಾಗುವುದು. ಪದ್ಮಾವತಿಯು ನ್ಯಾಸವನ್ನು ಹಿಂದಕ್ಕೆ ಒಪ್ಪಿಸಲು ಆವಂತಿಕೆಯನ್ನು ಕರೆದುಕೊಂಡು ಬರುವುದಕ್ಕೆಹೊರಟುಹೋಗುವಳು. ಸ್ವಾರ್ಥತ್ಯಾಗಿಗಳಲ್ಲಿ ಶ್ರೇಷ್ಠರೆನಿಸಿದವರ ಸಹಪಙ್ತಿಗೆ ಅರ್ಹನಾದ ಯೌಗಂಧರಾಯಣನಿಗೂ ತಾನು ಮಾಡಿದಕೃತ್ಯಕ್ಕೆ ಅರಸನೇನೆನ್ನುವನೋ ಎಂದು ಮನಸ್ಸಿನಲ್ಲಿ ಕಳವಳ. ಅವನ ಕಂಠಸ್ವರವು ತನಗೆ ಪೂರ್ವಪರಿಚಿತವೆಂದು ಉದಯನನು ತರ್ಕಿಸುವನು ತಪಸ್ವಿವೇಷಧಾರಿಯಾಗಿದ್ದ ಯೌಗಂಧರಾಯಣನು ಕೃತಕವಾದ ಗಡ್ಡಮೀಸೆಗಳನ್ನು ಕಟ್ಟಿಕೊಂಡಿದ್ದನೆಂದು ತೋರುತ್ತದೆ. ಆದುದರಿಂದ ಉದಯನನಿಗೆ ಗುರುತುಸಿಕ್ಕಲಿಲ್ಲ. ಆ ವೇಳೆಗೆ ಪದ್ಮಾವತಿಯು ಆವಂತಿಕೆಯೊಡನೆ ಬರುವಳು. ಪದ್ಮಾವತಿಯು ನ್ಯಾಸವನ್ನು ಬ್ರಾಹ್ಮಣನಿಗೆ ಒಪ್ಪಿಸಿಕೊಡುವಳು. ಧಾತ್ರಿಯು ಆವಳನ್ನು ದೃಷ್ಟಿಸಿ ನೋಡಿ ಗುರುತು ಹಿಡಿಯುವಳು. ಅಲ್ಲದೆ ಆಶ್ಚರ್ಯಚಕಿತೆಯಾಗಿ "ರಾಜಪುತ್ರಿ ವಾಸವದತ್ತೆ!" ಎನ್ನುವಳು.

ಉದಯನನು ಅದನ್ನು ಕೇಳಿ ಆಶ್ಚರ್ಯ ಸಂತೋಷಗಳಿಂದ ಕೂಡಿ "ಮಹಾಸೇನ ಪುತ್ರಿಯೆ! ದೇವಿ! ಪದ್ಮಾವತಿಯೊಡನೆ ಅಂತಃಪುರಕ್ಕೆ ನಡೆ" ಎನ್ನುವನು. ಅವನ ಸಂತೋಷವು, ಸನ್ನಿವೇಶ ಪರಿಜ್ಞಾನವನ್ನೂ ತಪ್ಪಿಸಿ ಅವನ ಬುದ್ಧಿ ಪಾಟವಕ್ಕೂ ತೆರೆಯನ್ನೆಳೆಯುವಷ್ಟು ಹೆಚ್ಚಿನದೆಂದು ತೋರುತ್ತದೆ. ಅವನ ಸ್ವಭಾವವು ಇಷ್ಟು ಹೆಚ್ಚಾಗಿ ಭಾವಪ್ರಧಾನವಾಗಿ (emotional) ಉದ್ರೇಕಗೊಳ್ಳಬಲ್ಲುದೆಂಬುದನ್ನು ನಮಗೆ ಪರಿಚಯ ಮಾಡಿಕೊಡುವುದಕ್ಕಾಗಿಯೇ ನಾಲ್ಕನೆಯ ಅಂಕದಲ್ಲಿ ವಿದೂಷಕನು ವಾಸವದತ್ತೆಯ ವಿಷಯವಾಗಿ ಆಡಿದ ಮಾತುಗಳನ್ನು ತಾನು ಆಕೆಗೆ ತಿಳಿಸುವುದಾಗಿ ಉದಯನನು ಹೇಳುವಹಾಗೆ ಕವಿಯು ಚಿತ್ರಿಸಿರುವುದು.

ವಾಸವದತ್ತೆಯು ಮೃತಳಾಗಿದ್ದಳೆಂಬ ನಂಬಿಕೆಯನ್ನೂ ತಾತ್ಕಾಲಿಕವಾಗಿ ಅವನು ಪರಿತ್ಯಜಿಸಿ ಅವಳು ಜೀವಂತಳಾಗಿದ್ದಂತೆಯೇ ಆಗ್ಗೆ ಭಾವಿಸುವ ನಷ್ಟೆ. ಅದೇ ಮನೋಧರ್ಮವೇ ಇಲ್ಲಿಕೂಡ ಸ್ವಲ್ಪಮಟ್ಟಿಗೆ ವ್ಯಕ್ತವಾಗಿದೆ ಯೆನ್ನಬಹುದಾಗಿದೆ. ಆದುದರಿಂದಲೇ, ಯೌಗಂಧರಾಯಣನು "ಕೂಡದು, ಕೂಡದು, ಪ್ರವೇಶಿಸಕೂಡದು. ಇವಳು ನನ್ನ ತಂಗಿ" ಎಂದಾಗಕೂಡ ಉದಯನನು, "ನೀನು ಏನೆಂದೆ! ಇವಳು ಮಹಾಸೇನಪುತ್ರಿಯೇ ಸರಿ" ಎಂದು ಉತ್ತರ ಹೇಳುವುದು. ಕೊನೆಗೆ ಯೌಗಂಧರಾಯಣನು "ಎಲೈ ರಾಜನೆ! ಭಾರತ ವಂಶದಲ್ಲಿ ಹುಟ್ಟಿ ವಿನೀತನೂ, ಜ್ಞಾನವಂತನೂ, ಪರಿ ಶುದ್ಧಾತ್ಮನೂ ಆಗಿದ್ದುಕೊಂಡು ರಾಜಧರ್ಮಕ್ಕೆ ಆದರ್ಶಪ್ರಾಯನೆನಿಸಿರ ತಕ್ಕ ನೀನು ಬಲಪ್ರಕಾಶದಿಂದ ಹೀಗೆ ಅಪಹರಿಸುವುದು ತರವಲ್ಲ"* ಎಂದು ಖಂಡಿತವಾಗಿ ಹೇಳಿದಾಗ ಉದಯನನ ಮನಸ್ಸು ಬಾಹ್ಯಪ್ರಪಂಚದ ಸನ್ನಿವೇಶವನ್ನು ಗಮನಿಸುವುದು. ಅವನು "ಆಗಲಿ! ರೂಪಸಾದೃಶ್ಯ ವನ್ನು ನೋಡೋಣ. ಅವಗುಂಠನವನ್ನು ತೆಗೆಯಲಿ" ಎನ್ನುವನು. ಒಡನೆಯೇ ಯೌಗಂಧರಾಯಣನು (ಬಹುಶಃ ತಪಸ್ವಿ ವೇಷಕ್ಕಾಗಿ ಕಟ್ಟಿ ಕೊಂಡಿದ್ದ ಕೃತಕವಾದ ಗಡ್ಡಮೀಸೆಗಳನ್ನು ಕಿತ್ತುಹಾಕಿ) "ಸ್ವಾಮಿಗೆ ಜಯ ವಾಗಲಿ!" ಎಂದು ಉದ್ಘೋಷಿಸುವನು. ವಾಸವದತ್ತೆಯೂ ಅವಗುಂಠನ ವನ್ನು ತೆಗೆದುಹಾಕಿ "ಆರ್ಯಪುತ್ರನಿಗೆ ಜಯವಾಗಲಿ" ಎಂದು ನಮ ಸ್ಕರಿಸುವಳು.

ಈ ಸಂದರ್ಭದಲ್ಲಿ ಸಂವಿಧಾನವನ್ನು ಬಹಳವಾಗಿ ಆಕ್ಷೇಪಿಸಿ ಡಾಕ್ಟರ್ ಬೆರ್ರಿಡೇಲ್ ಕೀತ್‌ರವರು ಕಟುವಾಗಿ ಟೀಕೆಮಾಡಿದ್ದಾರೆ. ಅವರು ಹೇಳಿರುವುದೇನೆಂದರೆ: "ಅನೇಕ ವಿಚಾರಗಳಲ್ಲಿ ಸ್ವಾರಸ್ಯವಾಗಿರುವ ಈ ಎರಡನೆಯ ನಾಟಕದ (ಸ್ವಪ್ನವಾಸವದತ್ತ ನಾಟಕದ) ಕೊನೆಯ ಅಂಕದಲ್ಲಿ ಮಹಾರಾಣಿಯು ತನ್ನ ಅನುಚರೆಯಂತಿರುವ ವಾಸವದತ್ತೆಯೊಡನೆ ಪ್ರವೇ

---

* ಭೋಃ ರಾಜನ್!

"ಭಾರತಾನಾಂ ಕುಲೇ ಜಾತೋ ವಿನೀತೋ ಜ್ಞಾನವಾಞ್ಛುಚಿಃ ।

ತನ್ನಾರ್ಹಸಿ ಬಲಾದ್ಧರ್ತುಂ ರಾಜಧರ್ಮಸ್ಯ ದೇಶಿಕಃ ॥"

ಕಿಸುವಂತೆಯೂ, ಆದರೆ ರಾಜನು ವಾಸವದತ್ತೆಯನ್ನು ನೋಡುವುದಿಲ್ಲ ವೆಂದೂ ಅಥವಾ ನೋಡಿದರೂ ಗುರುತುಹಿಡಿಯುವುದಿಲ್ಲವೆಂದೂ ಕವಿಯು ನಟವರ್ಗದವರಿಗೆ ಕೊಟ್ಟಿರುವ ಸೂಚನೆಗಳಿಂದ ತೋರಬರುತ್ತದೆ. ಇವೆರಡೂ (ಎಂದರೆ ರಾಜನು ವಾಸವದತ್ತೆಯನ್ನು ನೋಡದಿರುವುದೂ, ನೋಡಿದರೂ ಗುರುತಿಸದಿರುವುದೂ) ಬಹಳ ಅಸಂಭವ. ವಾಸವದತ್ತೆಯು ಪ್ರೇಕ್ಷಕರಿಗೆ ಮಾತ್ರ ಕಂಡು ರಾಜನಿಗೆ ಮರೆಯಾಗಿರುವಂತೆ ಅಡ್ಡತೆರೆ ಯೊಂದನ್ನು ಉಪಯೋಗಿಸಿ ಯಾವುದೋ ವಿಧಾನದಲ್ಲಿ ಏರ್ಪಾಡುಮಾಡಿರು ವುದನ್ನು ಅನುಮೇಯಿಸಿಕೊಂಡಿರುವಂತೆ ತೋರುತ್ತದೆ. ಆದರೆ ಅದನ್ನು ಊಹಿಸಿಕೊಳ್ಳಬೇಕಾಗಿದೆ. ಈ ಕಾರಣದಿಂದ, ಕಥಾವಸ್ತುವಿನ ಸಂವಿಧಾ ನವು ಖಂಡಿತವಾಗಿಯೂ ದೋಷಯುಕ್ತವಾಗಿದೆ. *

ಈ ಆಕ್ಷೇಪಣೆಯು ಸಾಧುವಾಗಿಲ್ಲ. ಡಾಕ್ಟರ್ ಬೆರ್ರಿಡೇಲ್ ಕೀತ್ ರವರು ಇದರೊಡನೆ ಷೇಕ್ಸ್‌ಪಿಯರ್ ಮಹಾಕವಿಯು "ಮರ್ಚೆಂಟ್ ಆಫ್ ವೆನಿಸ್" ನಾಟಕದಲ್ಲಿ ಬೆಸ್ಸಾನಿಯೋ ಎಂಬಾತನು ನ್ಯಾಯವಾದಿಯ ಉಡುಪನ್ನು ಹಾಕಿಕೊಂಡು ಬಂದ ತನ್ನ ಪತ್ನಿಯಾದ ಪೋರ್ಷಿಯಾ ಎಂಬಾಕೆಯನ್ನು ಗುರುತಿಸದೆ ಅವಳು ನ್ಯಾಯವಾದಿಯೇ ಎಂದು ನಂಬಿದ್ದ ಸನ್ನಿವೇಶವನ್ನೂ ಇದೇ ರೀತಿ ಸೂಚಿಸಿದ್ದರೆ ಚೆನ್ನಾಗಿದ್ದಿತು. ತುಲ ನಾತ್ಮಕ ದೃಷ್ಟಿಯಿಂದಲಾದರೂ ಅವರೇಕೆ ಹಾಗೆ ಮಾಡಲಿಲ್ಲವೋ ತಿಳಿ ಯದು. ಡಾಕ್ಟರ್ ಬೆರ್ರಿಡೇಲ್ ಕೀತ್‌ರವರ ಆಕ್ಷೇಪಣೆಗೆ ಸಮಾಧಾನ

---

* Thus even in the last Act of the latter drama (*Swapna-Vasavadatta*) which in many respects is effective, the stage directions assume that the queen appears with Vasavadatta as her attendant, but that the King does not see or recognize the latter, both obviously very improbable suggestions; possibly it is assumed that the presence of Vasavadatta though obvious to the audience is concealed from the king in some manner by the use of the curtain but this is left to be imagined. The working of the plot is certainly open to criticism on this score."

ಹೇಳುವುದಕ್ಕೆ ಮುಂಚೆ ಪ್ರಾಸಂಗಿಕವಾಗಿ ಈ ಸಂಗತಿಯನ್ನು ಸೂಚಿಸಲಾಯಿತು.

ಉದಯನನು ವಾಸವದತ್ತೆಯನ್ನು ನೋಡಲಿಲ್ಲವೆಂಬುದನ್ನಾಗಲಿ ನೋಡಿದ್ದರೂ ಗುರುತಿಸಲಿಲ್ಲವೆಂಬುದನ್ನಾಗಲಿ ನಂಬುವುದು ಕಷ್ಟವೇ ಎಂಬ ವಿಚಾರ. ಈ ಸಂಬಂಧದಲ್ಲಿ ನಾವು ಮುಖ್ಯವಾಗಿ ಎರಡು ಅಂಶಗಳನ್ನು ಗಮನಿಸಬೇಕಾಗಿದೆ: ಮೊದಲನೆಯದು, ಉದಯನನ ಮನಸ್ಸಿನ ಸ್ಥಿತಿ. ಎರಡನೆಯದು, ವಾಸವದತ್ತೆಯು ಬಂದು ನಿಲ್ಲುವ ಸನ್ನಿವೇಶ. ಇವೆರಡನ್ನೂ ಸಂಕ್ಷೇಪವಾಗಿ ವಿಚಾರ ಮಾಡೋಣ. ವಾಸವದತ್ತೆಯು ಅಗ್ನಿದಗ್ಧೆಯಾಗಿ ಮೃತಳಾದಳೆಂಬುದು ಉದಯನನ ಮನಸ್ಸಿನಲ್ಲಿ ಅಚಲವಾಗಿ ನೆಲಸಿರುವ ನಂಬಿಕೆ. ನ್ಯಾಸವಾಗಿ ಬ್ರಾಹ್ಮಣನಿಂದ ತನಗೆ ಸಮರ್ಪಿತಳಾಗಿರುವ ಅವನ ತಂಗಿಯಾದ ಆವಂತಿಕೆಯು ಚಿತ್ರಗತೆಯಾಗಿರುವ ವಾಸವದತ್ತಾದೇವಿಯನ್ನು ಹೋಲುವಳೆಂದು ಪದ್ಮಾವತಿಯು ತಿಳಿಸಿದಾಗ ಉದಯನನು "ವಿಪ್ರನ ತಂಗಿಯಾದ ಮೇಲೆ ಆಕೆಯು ಅನ್ಯಳೆಂಬುದು (ಎಂದರೆ ವಾಸವದತ್ತಾದೇವಿಯಲ್ಲವೆಂಬುದು) ವ್ಯಕ್ತವೇ. ಪ್ರಪಂಚದಲ್ಲಿ ಒಬ್ಬರ ರೂಪದಂತೆ ಮತ್ತೊಬ್ಬರ ರೂಪವಿರುವುದು ಉಂಟೇ ಉಂಟು" ಎಂದು ಹೇಳುವನು. ಆ ವೇಳೆಗೆ ಬ್ರಾಹ್ಮಣವೇಷಧಾರಿಯಾದ ಯೌಗಂಧರಾಯಣನೂ ಅಲ್ಲಿಗೆ ಬಂದು ರಾಜನಿಗೆ ಸ್ವಸ್ತಿವಾಚನ ಮಾಡುವನು. (ಆಗ ಉದಯನನು "ಇದು ನಾನು ಹಿಂದೆ ಕೇಳಿದ್ದ ಕಂಠಸ್ವರ" ಎಂದು ತನ್ನಲ್ಲಿ ತಾನು ಹೇಳಿಕೊಳ್ಳುವನೇ ಹೊರತು, ಆತನನ್ನು ಗುರುತು ಹಿಡಿಯುವುದಿಲ್ಲ. ಯೌಗಂಧರಾಯಣನು ತಪಸ್ವಿಯಾದ ಬ್ರಾಹ್ಮಣನಂತೆ ಕಾಣುವುದಕ್ಕಾಗಿ ಕೃತಕವಾದ ಗಡ್ಡಮೀಸೆಗಳನ್ನು ಕಟ್ಟಿಕೊಂಡಿರಬೇಕೆಂದು ತೋರುವುದು. ಇಲ್ಲವಾದಲ್ಲಿ ಉದಯನನಿಗೆ ಅವನ ಗುರುತು ಸಿಕ್ಕದಿರಲು ಕಾರಣವಿಲ್ಲ) ಉದಯನನು "ಎಲೈ ಬ್ರಾಹ್ಮಣನೆ! ನೀನು ನಿನ್ನ ತಂಗಿಯನ್ನು ಪದ್ಮಾವತಿಯ ಬಳಿಯಲ್ಲಿ ನ್ಯಾಸವಾಗಿ ಒಪ್ಪಿಸಿದ್ದೆಯಾ ?" ಎಂದು ಕೇಳುವನು. ಆ ಮಾತುಗಳಿಗೆ "ಹೌದು" ಎಂದು ಆಗಂತುಕನು ಉತ್ತರ ಹೇಳುವನು ಅದನ್ನು ಕೇಳಿದಮೇಲೆ ಉದಯನನ ಮನಸ್ಸಿಗೆ ಬ್ರಾಹ್ಮಣನ ತಂಗಿಯು ಪದ್ಮಾವತಿಯಲ್ಲಿ ನ್ಯಾಸವಾಗಿದ್ದಳೇ ಹೊರತು, ಅವಳು ವಾಸವದತ್ತೆಯಲ್ಲ

ವೆಂಬ ಅಭಿಪ್ರಾಯವೇ ಖಚಿತವಾಗುವುದು. ಆದ ಕಾರಣ, ಉದಯನನ ಮನಸ್ಸಿನಲ್ಲಿ ವಾಸವದತ್ತೆಯು ಬದುಕಿರಬಹುದೆಂಬ ಶಂಕೆಯು ಹುಟ್ಟುವುದಕ್ಕೂ ಅವಕಾಶವಿಲ್ಲ. ಹಾಗಿರುವಲ್ಲಿ ಉದಯನನು ವಾಸವದತ್ತೆಯನ್ನು ಗುರುತಿಸುವುದು ಹೇಗೆ? ಅಂತು, ಉದಯನನ ಮನಸ್ಸಿನ ಸ್ಥಿತಿಯು ಹೀಗಿರುವಾಗ್ಗೆ ವಾಸವದತ್ತೆಯನ್ನು ಪದ್ಮಾವತಿಯು ಕರೆದು ತರುವಳು.

ವಾಸವದತ್ತೆಯು ಉದಯನ ಮುಂತಾದವರಿಗೆ ಸ್ವಲ್ಪದೂರದಲ್ಲಿ ನಿಂತಿರಬೇಕೆಂದು ತೋರುವುದು. ಅಲ್ಲದೆ ತಾನು ವಾಸವದತ್ತೆಯೆಂಬುದು ಇನ್ನೂ ತನ್ನ ಪತಿಗೆ ತಿಳಿದಿಲ್ಲವಾದಕಾರಣ, ಆವಂತಿಕೆಯೆಂಬ ಹೆಸರಿನಿಂದ ನ್ಯಾಸವಾಗಿ ಸಮರ್ಪಿತಳಾಗಿರುವ ತನ್ನ ಸ್ಥಿತಿಗೆ ಸಹಜವಾದ ರೀತಿಯಲ್ಲಿ ಲಜ್ಜೆಯನ್ನು ನಟಿಸುತ್ತ, ರಾಜನ ಕಡೆಗೆ ಮುಖವನ್ನು ತಿರುಗಿಸದೆ ಸ್ವಲ್ಪ ದೂರದಲ್ಲಿ ತಲೆತಗ್ಗಿಸಿಕೊಂಡು ಆಕೆಯು ನಿಂತಿದ್ದಳೆಂದೂ ಹೇಳಬಹುದು. ಇದಲ್ಲದೆ ಅವಳು ಅವಗುಂಠನವನ್ನೂ † ಧರಿಸಿ ಮುಖವನ್ನು ಸ್ವಲ್ಪಮಟ್ಟಿಗೆ ಮರೆಮಾಡಿಕೊಂಡು ತಲೆತಗ್ಗಿಸಿ ನಿಂತಿರಬೇಕೆಂದೂ ತೋರುವುದು. ಏಕೆಂದರೆ, ಧಾತ್ರಿ ವಸುಂಧರೆಯು ವಾಸವದತ್ತೆಯನ್ನು ಗುರುತಿಸುವ ಸಂದರ್ಭದಲ್ಲಿ "ಆವಂತಿಕೆಯನ್ನು ದೃಷ್ಟಿಸಿ ನೋಡಿ" * ಎಂದಿದೆ. ಮುಖವು

† ಭಾಸನ ಕಾಲದಲ್ಲಿ ರಾಜಮನೆತನದ ಸ್ತ್ರೀಯರು ಅಂತಃಪುರವನ್ನು ಬಿಟ್ಟು ಹೊರಟಾಗ ಅವಗುಂಠನವನ್ನು ಧರಿಸುತ್ತಿದ್ದರೆಂದು ತೋರುವುದು. ಆದುದರಿಂದಲೇ ಪ್ರತಿಮಾ ನಾಟಕದಲ್ಲಿ ಪ್ರಜೆಗಳು ಸೀತಾದೇವಿಯನ್ನು ನೋಡಲನುಕೂಲಿಸಲೆಂಬ ಉದ್ದೇಶದಿಂದ ರಾಮನು ಸೀತೆಯನ್ನು ಕುರಿತು "ಅವಗುಂಠನವನ್ನು ತೆಗೆ" (ಅಪನೀಯತಾಮವಗುಣ್ಠನಮ್") ಎಂದು ಹೇಳುವಂತೆ ಭಾಸನು ಬರೆದಿದ್ದಾನೆ. ಕೌಸಲ್ಯೆಯೇ ಮುಂತಾದ ಮೂವರು ರಾಣಿಯರೂ ಅವಗುಂಠನವನ್ನು ತೆಗೆದಂತೆಯೂ ಪ್ರತಿಮಾನಾಟಕದಲ್ಲಿದೆ. ("ಅವಗುಣ್ಠನಮಪನಯನ್ತಿ") ಅವಗುಣ್ಠನ ಧಾರಣೆಯು ವಿವಾಹಿತೆಯರಾದ ಕುಲೀನ ಸ್ತ್ರೀಯರ ಲಕ್ಷಣವೆಂಬ ಭಾವನೆಯು ಶೂದ್ರಕನ ಕಾಲದಲ್ಲಿ ಕೂಡ ಇದ್ದಂತೆ ತೋರುವುದು. ಆದುದರಿಂದಲೇ ಆತನ ಮೃಚ್ಛಕಟಿಕದಲ್ಲಿ ವಸಂತಸೇನೆಗೆ ಅವಗುಂಠನವನ್ನು ಕೊಟ್ಟಂತೆ ಬರೆದಿದೆ.

* "ಆವಂತಿಕಾಂ ನಿರ್ವರ್ಣ್ಯ"

ಅವಗುಂಠನದಿಂದ ಸ್ವಲ್ಪಮಟ್ಟಿಗೆ ಮರೆಯಾಗಿದ್ದುದರಿಂದ ಧಾತ್ರಿಯು ಚೆನ್ನಾಗಿ ದೃಷ್ಟಿಸಿ ನೋಡಿದಮೇಲೆ ವಾಸವದತ್ತಾದೇವಿಯನ್ನು ಗುರುತು ಹಿಡಿಯುವಳು. ಆದುದರಿಂದ, ವಾಸವದತ್ತೆಯು ಜೀವಂತಳಾಗಿಲ್ಲವೆಂದೇ ನಂಬಿಕೊಂಡಿರುವ ಉದಯನನು ತನಗೆ ಅಭಿಮುಖವಾಗಿಲ್ಲದೆ ದೂರದಲ್ಲಿ ಅವಗುಂಠನವತಿಯಾಗಿ ನಿಂತಿರುವ ವಾಸವದತ್ತೆಯನ್ನು ಗುರುತಿಸದೆ ಹೋದುದರಲ್ಲಿ ಆಶ್ಚರ್ಯವೇನೂ ಇಲ್ಲ. ಇದಲ್ಲದೆ, ಮತ್ತೊಂದು ಅಂಶವನ್ನೂ ಡಾಕ್ಟರ್ ಬೆರ್ರಿಡೇಲ್ ಕೀತ್‌ರವರು ಗಮನಿಸಿಲ್ಲ. ಭರತಖಂಡದ ಧರ್ಮಶಾಸ್ತ್ರಗಳ ಪ್ರಕಾರ, ಪುರುಷನು ಪರಸ್ತ್ರೀಯನ್ನು ದೃಷ್ಟಿಸಿ ನೋಡುವುದು ನಿಷಿದ್ಧಕರ್ಮ. ಧರ್ಮರಕ್ಷಕನಾದ ರಾಜನು ಪರಸ್ತ್ರೀಯನ್ನು ದೃಷ್ಟಿಸಿ ನೋಡುವುದಂತು, ಅಕ್ಷಮ್ಯವಾದ ಅಪರಾಧ ಆದಕಾರಣ ಬ್ರಾಹ್ಮಣನ ತಂಗಿಯಾದ ಆವಂತಿಕೆಯೆಂದು ತಾನು ನಂಬಿರುವ ವಾಸವದತ್ತೆಯಲ್ಲಿ ಪರಸ್ತ್ರೀಯೆಂಬ ಭಾವನೆಯಿಂದ ಕೂಡಿ, ಅವಳು ಪ್ರವೇಶಿಸಿದಕಾಲದಲ್ಲಿ ಮುಖವು ತನಗೆ ಕಂಡಾಗಲೂ ಅವನು ಆವಳನ್ನು ದೃಷ್ಟಿಸಿ ನೋಡದೆಯೇ ಉಪೇಕ್ಷೆಯಿಂದಿದ್ದುದೂ ಸಹಜವಾಗಿಯೇ ಇದೆ.

ಧಾತ್ರಿಯಾದ ವಸುಂಧರೆಯು ವಾಸವದತ್ತೆಯನ್ನು ಹತ್ತಿರ ದೃಷ್ಟಿಸಿ ನೋಡಿ "ರಾಜಪುತ್ರಿ ವಾಸವದತ್ತೆ" ಎಂದಾಗ (ನಾವು ಮೊದಲೇ ಅರಿಕೆ ಮಾಡಿದಂತೆ) ಉದಯನನು "ದೇವಿ ! ಪದ್ಮಾವತಿಯೊಡನೆ ಅಂತಃಪುರಕ್ಕೆ ನಡೆ" ಎಂದು ಹೇಳುವನು. ಆಕೆಯು ತನ್ನ ತಂಗಿಯೆಂದು ಮುಂತಾಗಿ ಯೌಗಂಧರಾಯಣನು ವಾದಿಸಿದಾಗ ನಿಜವಿದ್ಯಮಾನವನ್ನು ನಿರ್ಧರಿಸಬೇಕಾಗುವುದು. ಆದಕ್ಕಾಗಿ ವಾಸವದತ್ತೆಯ ಮುಖವನ್ನು ಚೆನ್ನಾಗಿ ನೋಡಿದಲ್ಲದೆ ಯತ್ನವೇ ಇಲ್ಲ. ಆದುದರಿಂದ ಉದಯನನು "ಆಗಲಿ ಹಾಗಾದರೆ ರೂಪಸಾದೃಶ್ಯವನ್ನು ನೋಡೋಣ. ಜವನಿಕೆಯು ತೆರೆಯಲ್ಪಡಲಿ"* ಎಂದು ಹೇಳುವನು. ಇಲ್ಲಿ ಜವನಿಕೆಯೆಂದರೆ ಅವಗುಂಠನವೆಂದೇ ಅರ್ಥ ಮಾಡಬೇಕಾಗುವುದೇ ಹೊರತು, ಅಡ್ಡತೆರೆಯೆಂದು ಡಾಕ್ಟರ್ ಬೆರ್ರಿಡೇಲ್ ಕೀತ್‌ರವರು ಅರ್ಥಮಾಡಿರುವುದು ಸಮಂಜಸವಾಗಿ ತೋರುವು

* "ಭವತು, ಪಶ್ಯಾಮಸ್ತಾವದ್ರೂಪಸಾದೃಶ್ಯಮ್ । ಸಂಕ್ಷಿಪ್ಯತಾಮ್ ಜವನಿಕಾ ।"

ದಿಲ್ಲ. ಇಲ್ಲಿ ಜವನಿಕೆಯೆಂದರೆ ಅವಗುಂಠನವೆಂದು ಪ್ರೊಫೆಸರ್ ಭಿಡೆ ಅವರು ಅರ್ಥಮಾಡಿರುವುದೇ ಯುಕ್ತವೆಂದು ತೋರುವುದು. ಸೀತಾದೇವಿಯೂ, ಕೌಸಲ್ಯಾದೇವಿ ಮುಂತಾದವರೂ ಅವಗುಂಠನವನ್ನು ಧರಿಸಿದ್ದರೆಂದು ಕವಿಯು ಸೂಚಿಸಿರುವುದೂ ಇದಕ್ಕೆ ಉಪಷ್ಟಂಭಕವಾಗಿರುವುದು.

ಅಂತು ಉದಯನನು ವಾಸವದತ್ತೆಯನ್ನು ಗುರುತಿಸಲಿಲ್ಲವೆಂಬ ಕಾರಣದಿಂದ ಕಥಾವಸ್ತುವಿನ ಸಂವಿಧಾನವು ದೋಷಯುಕ್ತವಾಗಿದೆಯೆಂಬ ಆಕ್ಷೇಪಣೆಗೆ ಅವಕಾಶವಿಲ್ಲವೆಂಬುದು, ಮೇಲೆ ಸೂಚಿಸಿರುವ ಅಂಶಗಳಿಂದ ಸ್ಪಷ್ಟವಾಗಿ ವ್ಯಕ್ತವಾಗುವುದು. ಇದರ ಮೇಲೂ ಅದೇ ಆಕ್ಷೇಪಣೆಯನ್ನೇ ಮತ್ತಾರಾದರೂ ಸಮರ್ಥಿಸುವುದಾದರೆ, ವಾಸವದತ್ತಾದೇವಿಯು ಮೃತಳಾಗಿರುವಳೆಂಬ ನಂಬಿಕೆಯಿಂದ ಕೂಡಿರುವ ಉದಯನನು ಅವಗುಂಠನವತಿಯಾಗಿ ದೂರದಲ್ಲಿ ಮೌನವಾಗಿ ನಿಂತಿರುವ ಆಕೆಯನ್ನು ಗುರುತಿಸದೆ ಹೋದುದು, ಯಾವ ಅವಗುಂಠನವನ್ನೂ ಧರಿಸಿಲ್ಲದೆ ನ್ಯಾಯಸ್ಥಾನದಲ್ಲಿ ವಾದಿಸುತ್ತಿರುವ ತನ್ನ ಪತ್ನಿ ಪೋರ್ಷಿಯಾಳನ್ನು (ನಾವು ಮೊದಲೇ ಅರಿಕೆ ಮಾಡಿದಂತೆ) ಗುರುತಿಸದೆ ಹೋದ ಬೆಸ್ಸಾನಿಯೋ ಎಂಬಾತನ ವರ್ತನೆಯ ಮಟ್ಟಿಗೆ ನಂಬಿಕೆಗೆ ಅನರ್ಹವಲ್ಲವೆಂಬಷ್ಟನ್ನಾದರೂ ಅವರು ಒಪ್ಪಬೇಕಲ್ಲವೆ?

ಬ್ರಾಹ್ಮಣನ ತಂಗಿಯಾದ ಆವಂತಿಕೆಯೆಂದು ತಾನು ಭಾವಿಸಿದ್ದವಳು ವಾಸವದತ್ತೆಯೆಂಬುದನ್ನೂ ವಾಸವದತ್ತಾದೇವಿಯೂ ಯೌಗಂಧರಾಯಣನೂ ಅಗ್ನಿದಗ್ಧರಾದರೆಂಬುದು ಸುಳ್ಳೆಂಬುದನ್ನೂ ಅರಿತಾಗ, ಉದಯನನು ತಾನು ನೋಡುತ್ತಿರುವುದು ಸತ್ಯವೋ ಸ್ವಪ್ನವೋ ಎಂದು ವಿಸ್ಮಯಪಡುವನು. ವಾಸವದತ್ತಾದೇವಿಯನ್ನು ಅಜ್ಞಾತವಾಸದಲ್ಲಿಟ್ಟ ತನ್ನ ಅಪರಾಧವನ್ನು ಮನ್ನಿಸಬೇಕೆಂದುಬೇಡಿ ಯೌಗಂಧರಾಯಣನು ಉದಯನನ ಕಾಲುಗಳಿಗೆರಗುವನು. ತಾನು ನೋಡುತ್ತಿರುವುದು ಸತ್ಯವೆಂಬ ನಂಬಿಕೆಯೇ ಉದಯನನಿಗೆ ಇನ್ನೂ ಹುಟ್ಟಿಲ್ಲ. ಅವನು ಯೌಗಂಧರಾಯಣನನ್ನು ಮೇಲಕ್ಕೆಬ್ಬಿಸಿ "ನೀನೇ ಯೌಗಂಧರಾಯಣ! ಅಲ್ಲವೆ? ಸುಳ್ಳು ಹುಚ್ಚುಗಳಿಂದಲೂ, ಯುದ್ಧಗಳಿಂದಲೂ, ರಾಜನೀತಿಗನುಸಾರವಾಗಿ ಶಾಸ್ತ್ರೀಯ ಮಾರ್ಗಗಳಿಂದಲೂ ಕೂಡಿದ ನಿನ್ನ ಪ್ರಯತ್ನಗಳಿಂದಲೇ ಅಲ್ಲವೆ, ಮುಳುಗಿಹೋಗುವುದರಲ್ಲಿದ್ದ ನಾವು ಸಮುದ್ಧೃತರಾದುದು?" ಎಂದು

ಕೇಳುವನು. * ಯೌಗಂಧರಾಯಣನು ಆಗ ಹೇಳುವ “ನಾವು ಸ್ವಾಮಿ ಭಾಗ್ಯಾನುವರ್ತಿಗಳು” ಎಂಬ ಪ್ರತ್ಯುತ್ತರವು ಕಷ್ಟಸುಖಗಳಲ್ಲಿಯೂ ಪ್ರಭುವಿನ ಶ್ರೇಯೋಭಿಲಾಷಿಯಾಗಿ ಸಂತತವೂ ಸೇವಿಸುವ ಸ್ವಾಮಿ ಭಕ್ತನಾದ ಅವನಿಗೆ ಅನುರೂಪವಾದುದು. ಹಾಗೆ ಪ್ರತ್ಯುತ್ತರವನ್ನು ಕೊಡುವಲ್ಲಿ ಕೂಡ ಅವನು ತನ್ನ ಮತ್ತು ಇತರ ಸಚಿವರೆಲ್ಲರ ಪರವಾಗಿ “ನಾವು” ಎಂದು ಹೇಳುವನು. ಪ್ರಭುವಿನ ಶ್ಲಾಘನೆಗೆ ಇತರ ಸಚಿವರೂ ಅರ್ಹರೆಂಬುದನ್ನು ಮನೋಹರವಾಗಿ ಸೂಚಿಸಿರುವನು. ಸ್ವಾರ್ಥರಹಿತವಾದ ಈಬಗೆಯ ವರ್ತನೆಯು ಸಾಮಾನ್ಯರಿಗೆ ಸಾಧ್ಯವಿಲ್ಲ. ಯೌಗಂಧರಾಯಣನ ಮಾತುಗಳು ಮುಗಿದ ಬಳಿಕ ಪದ್ಮಾವತಿಯು ಆಶ್ಚರ್ಯವನ್ನು ಸೂಚಿಸಿ “ಈಕೆ ಆರ್ಯೆ ವಾಸವದತ್ತೆಯೆ?” ಎಂದುಕೊಂಡು, ವಾಸವದತ್ತಾದೇವಿಯಲ್ಲಿ ಸಖಿಯಂತೆ ವರ್ತಿಸಿ ಮರ್ಯಾದೆ ಮೀರಿ ನಡೆದ ಅಪರಾಧವನ್ನು ಮನ್ನಿಸಬೇಕೆಂದು ತಾನು ತಲೆಬಾಗಿ ಬೇಡುವುದಾಗಿ ತಿಳಿಸಿ, ಆಕೆಯ ಕಾಲಿಗೆರಗುವಳು. ವಾಸವದತ್ತಾದೇವಿಯು ತನ್ನ ಸಚ್ಚಾರಿತ್ರದ ಹಿರಿಮೆಗನುಗುಣವಾಗಿ ಪದ್ಮಾವತಿಯನ್ನು ಮೇಲಕ್ಕೆತ್ತಿ “ಏಳು, ಏಳು ಸುಮಂಗಲೆ! ನೀನು ಹೀಗೆ ನನ್ನನ್ನು ಪ್ರಾರ್ಥಿಸುತ್ತಿರುವುದೇ ನಿನ್ನ ಅಪರಾಧ” ಎನ್ನುವಳು.

ಬಳಿಕ ಉದಯನನು ದೇವಿಯನ್ನು ತಲೆಮರೆಯಿಸಿದುದೇಕೆಂದು ಯೌಗಂಧರಾಯಣನನ್ನು ಕೇಳುವನು. ಸ್ವಾಮಿಭಕ್ತನಾಗಿದ್ದರೂ ವಿಶೇಷತಃ ದೇಶಭಕ್ತನಾಗಿರುವ ಯೌಗಂಧರಾಯಣನು ಕೌಶಾಂಬಿಯನ್ನುಳಿಸಬೇಕೆಂಬುದೊಂದೇ ಅದರ ಕಾರಣವೆಂದು ಅರಿಕೆಮಾಡುವನು. ಅನಂತರ ಉದಯನನು ಪದ್ಮಾವತಿಯ ಬಳಿಯಲ್ಲಿ ವಾಸವದತ್ತಾದೇವಿಯನ್ನು ನ್ಯಾಸವಾಗಿಟ್ಟುದೇಕೆಂದು ಕೇಳುವನು. ಆಕೆಯು ಸ್ವಾಮಿಯ ಸಹಧರ್ಮಿಣಿಯಾಗುವಳೆಂದು ದೈವಜ್ಞರಾದ ಪುಷ್ಪಕ ಭದ್ರಾದಿಗಳು ಹೇಳಿದ್ದುದೇ ಕಾರಣವೆಂದು ಯೌಗಂಧರಾಯಣನು ತಿಳಿಸುವನು. ತನಗೆ ಕೂಡ ಗುಟ್ಟನ್ನು ತಿಳಿಸದಿದ್ದುದಕ್ಕಾಗಿ ಆಶ್ಚರ್ಯಪಡುತ್ತ, ಉದಯನನು “ಆಹ!

---

* “ಯೌಗಂಧರಾಯಣೋ ಭರ್ವಾ ನನು।

ಮಿಥ್ಯೋನ್ಮಾದೈಶ್ಚ ಯುದ್ಧೈಶ್ಚ ಶಾಸ್ತ್ರದೃಷ್ಟೈಶ್ಚ ಮಂತ್ರಿತೈಃ।
ಭವದ್ಯತ್ನೈಃ ಖಲು ವಯಂ ಮಜ್ಜಮಾನಾಃ ಸಮುದ್ಧೃತಾಃ॥”

ರುಮಣ್ವಂತನು ಶಠನಲ್ಲವೆ" ಎನ್ನುವನು. ಮಹಾಸೇನ ಮುಂತಾದವರಿಗೆ ವಾಸವದತ್ತೆಯ ಕುಶಲವಾರ್ತೆಯನ್ನು ತಿಳಿಸುವುದಕ್ಕಾಗಿ ಕಾಂಚುಕೀಯನನ್ನೂ ಧಾತ್ರಿಯನ್ನೂ ಆ ದಿನವೇ ಪ್ರಯಾಣಮಾಡಿಸಬೇಕೆಂದು ಉಚಿತಜ್ಞನಾದ ಯೌಗಂಧರಾಯಣನು ಉದಯನನಿಗೆ ಬಿನ್ನವಿಸುವನು. ಉದಯನನು, "ಕೂಡದು, ಕೂಡದು; ಪದ್ಮಾವತಿ, ನಾವೆಲ್ಲರೂ ದೇವಿಯೊಡನೆ ಅಲ್ಲಿಗೆ (ಉಜ್ಜಯಿನಿಗೆ) ಹೊರಡೋಣ" ಎಂದು ಉತ್ತರ ಹೇಳುವನು. ಇದನ್ನು ಕೇಳಿ ವಾಸವದತ್ತಾದೇವಿಯ ಮನಸ್ಸೂ, ಪದ್ಮಾವತೀ ದೇವಿಯ ಮನಸ್ಸೂ ಉಲ್ಲಾಸದಿಂದ ಉಬ್ಬಿಹೋಗಿರಬಹುದಲ್ಲವೆ?

**ರಸ:**—ಈ ರೂಪಕದ ರಸವು ಮುಖ್ಯವಾಗಿ ವಿಪ್ರಲಂಭ ಶೃಂಗಾರ. ಪದ್ಮಾವತಿಯ ವಿವಾಹವು ನಡೆಯುವ ಸನ್ನಿವೇಶದಲ್ಲಿ ಕೂಡ, ಕವಿಯು ಸಂಭೋಗ ಶೃಂಗಾರವನ್ನು ಬಳೆಯಿಸಿ ಪರಿಪೋಷಿಸಿಲ್ಲ. ಪದ್ಮಾವತಿಗೂ ಉದಯನನಿಗೂ ಪರಸ್ಪರವಾಗಿ ಅನುರಾಗವು ವೃದ್ಧಿಯಾದ ಬಗೆಯನ್ನೇ ನಾವು ಕಾಣುವಂತಿಲ್ಲ. ಅದು ಹಾಗಿರಲಿ. ಭಾಸಮಹಾಕವಿಯು ನಮ್ಮ ಮುಂದಿರಿಸಿರುವುದು ಕೇವಲ ಸಾತ್ವಿಕ ಶೃಂಗಾರದ ಚಿತ್ರ. ವಾಸವದತ್ತೆಯೂ ಪದ್ಮಾವತಿಯೂ ಸ್ಮರದ್ರೂಪಿಣಿಯರೆಂಬ ಅಂಶವು ಉತ್ತಮ ರೀತಿಯಲ್ಲಿ ಫಲಿತವಾಗುವುದು ಆದರೂ ಅವರ ಅಂಗಗಳ ವರ್ಣನೆ ಮುಂತಾದುವುಗಳಲ್ಲಿ ಕವಿಯು ಪ್ರವರ್ತಿಸಿಲ್ಲ. ಅವರ ಉದಾರಚರಿತ, ಧರ್ಮಪಕ್ಷಪಾತ, ಸೌಜನ್ಯ, ಮಾಧುರ್ಯ ಮುಂತಾದ ಸದ್ಗುಣಗಳನ್ನು ಮಾತ್ರವೇ ವಿವರಿಸಿ, ತನ್ಮೂಲಕ ಕವಿಯು ಅವರ ಆಂತರಿಕ ಸೌಂದರ್ಯವನ್ನೂ—ಅವರ ಅಂಗಸೌಷ್ಠವಕ್ಕಿಂತ ಹೆಚ್ಚಾಗಿ-ಅವರ ಸೌಶೀಲ್ಯವನ್ನೂ ನಮ್ಮ ಮುಂದಿಟ್ಟಿದ್ದಾನೆ. ಉದಯನನು ಆರುಣಿಯನ್ನು ಸೋಲಿಸುವುದಾಗಿ ಪ್ರತಿಜ್ಞೆಮಾಡುವಾಗ ವೀರರಸವೂ ಪರಿಪೋಷಿತವಾಗಿದೆ. ಕೇವಲ ಶೃಂಗಾರಸವೊಂದೇ ಕಂಡು ಬಂದಿದ್ದರೆ ಉಂಟಾಗಬಹುದಾಗಿದ್ದ ಅಲ್ಪಸ್ವಲ್ಪ ಬೇಸರವು ಇದರಿಂದ ಪರಿಹಾರವಾಗುತ್ತದೆ.

**ಕಥಾನಾಯಕಿ:**—ರೂಪಕದಲ್ಲಿ ಪದ್ಮಾವತಿಗೂ ಹೆಚ್ಚಿನ ಪ್ರಾಮುಖ್ಯಸ್ಥಾನವಿದೆ. ಅಲ್ಲದೆ ಅವಳ ಸದ್ಗುಣಗಳು ಪ್ರಕಾಶಕ್ಕೆ ಬರುವ ಸನ್ನಿವೇಶಗಳೇ ಹೆಚ್ಚಾಗಿವೆ. ವಾಸವದತ್ತಾದೇವಿಯ ಸ್ವಾರ್ಥತ್ಯಾಗದ ತೇಜಸ್ಸು

ರೂಪಕವನ್ನೆಲ್ಲ ಪಸರಿಸಿ ನಿಂತಿದೆ. ಅವಳ ಸದ್ಗುಣಗಳನ್ನು ಪ್ರಕಾಶಕ್ಕೆ ತರುವ ಸನ್ನಿವೇಶಗಳು ಕಡಿಮೆಯಾಗಿದ್ದರೂ, ಒಟ್ಟಿನಲ್ಲಿ ಅವರೀರ್ವರೂ ಉಜ್ಜ್ವಲತೇಜಸ್ವಿನಿಯರೆಂಬ ಭಾವನೆಯುಂಟಾಗುತ್ತದೆ. ಆದಕಾರಣ, ಅವರೀರ್ವರಲ್ಲಿ ಕಥಾನಾಯಕಿಯು ಯಾರೆಂಬ ಸಂದೇಹವೂ ಬರುವುದು ಅಸಂಭವವಲ್ಲ. ಆದಾಗ್ಯೂ, ರೂಪಕಕ್ಕೆ ಸ್ವಪ್ನವಾಸವದತ್ತವೆಂಬ ಹೆಸರಿರುವುದರಿಂದಲೂ, ರೂಪಕವು ಉದಯನನಿಗೆ ವಾಸವದತ್ತೆಯು ಮತ್ತೆ ದೊರೆಯುವವರೆಗೂ ಪೂರೈಸದೆ ಅವಂತಿಕೆಯೇ ವಾಸವದತ್ತೆಯೆಂಬುದು ಅವನಿಗೆ ಗೊತ್ತಾದ ಬಳಿಕ ಮುಗಿಯುವುದರಿಂದಲೂ, ಆಕೆಯೇ (ವಾಸವದತ್ತೆಯೇ) ಕಥಾನಾಯಕಿಯೆಂದು ಹೇಳಬಹುದಾಗಿದೆ.

**ವಸ್ತುರಚನೆಯಲ್ಲಿ ನಡೆದಿರುವ ಮಾರ್ಪಾಡುಗಳು:**—ರೂಪಕ ರಚನೆಯಲ್ಲಿ ಕವಿಯು ಗುಣಾಢ್ಯನ ಬೃಹತ್ಕಥೆಯ ಸಹಾಯವನ್ನೂ ಪಡೆದಿರಬೇಕು. ಆದರೆ, ಆ ಗ್ರಂಥವು ಈಗ ಉಪಲಬ್ಧವಾಗಿಲ್ಲ. ಆದರ ಆಧಾರದ ಮೇಲೆ ಹುಟ್ಟಿದವುಗಳಾಗಿರುವ ಎರಡು ಗ್ರಂಥಗಳಲ್ಲಿಯೂ * ಇರುವ ಕೆಲವು ಅಂಶಗಳು ಸ್ವಪ್ನವಾಸವದತ್ತದಲ್ಲಿಲ್ಲ; ಅವುಗಳಲ್ಲಿಯ ಕೆಲವು ಅಂಶಗಳು ಸ್ವಪ್ನವಾಸವದತ್ತದಲ್ಲಿವೆ. ಈ ಮಾರ್ಪಾಡುಗಳೆಲ್ಲ ಭಾಸಮಹಾಕವಿಯು ರಚಿಸಿದವುಗಳೆಂದು (ಗುಣಾಢ್ಯನ ಬೃಹತ್ಕಥೆಯು ಮುಂದೆ ಒಂದುವೇಳೆ ದೊರೆಯುವುದಾದರೆ ಅಗಿನವರೆಗೂ) ನಿರ್ಧರವಾಗಿ ಹೇಳುವುದು ಸಾಧ್ಯವಿಲ್ಲವಾದರೂ, ಸದ್ಯದಲ್ಲೇನೊ ಅವು ಆತನು ಕಲ್ಪಿಸಿದವುಗಳೇ-ಎಂದು ಅನುಮೇಯಿಸಬಹುದಾಗಿದೆ. ಆ ಮಾರ್ಪಾಡುಗಳಲ್ಲಿ ಕೂಡ ರೂಪಕ ರಚನೆಗೆ ಕಳೆಯನ್ನು ಬೀರುವಂಥವು ಮಾತ್ರವೇ ನಮಗೆ ಪ್ರಧಾನ ಉಳಿದವುಗಳು ಇಲ್ಲಿಗೆ ಅಪ್ರಕೃತ. ಆದುದರಿಂದ ಅವುಗಳನ್ನು ಮಾತ್ರವೇ ಇಲ್ಲಿ ಸೂಚಿಸಲಾಗುವುದು.

ವಾಸವದತ್ತೆಯು ಮೃತಳಾದಂತೆ ಹುಟ್ಟಿಸಿದ ವಾರ್ತೆಯು ಸುಳ್ಳೆಂಬ ಅಂಶವೂ ಯೌಗಂಧರಾಯಣನು ಉದಯನನಿಗೆ ರಾಜ್ಯಲಾಭವಾಗುವಂತೆ

---

* ಕ್ಷೇಮೇಂದ್ರನು ರಚಿಸಿರುವ **ಬೃಹತ್ಕಥಾಮಂಜರಿ** ಮತ್ತು ಸೋಮದೇವನು ರಚಿಸಿರುವ **ಕಥಾಸರಿತ್ಸಾಗರ.**

ಮಾಡುವುದಕ್ಕಾಗಿ ಕೈಕೊಳ್ಳುವ ಉಪಾಯವೂ ವಸಂತಕನಿಗೂ (ವಾಸವ ದತ್ತೆಯ ಇಬ್ಬರು ಸಹೋದರರಲ್ಲೊಬ್ಬನಾದ) ಗೋಪಾಲಕನಿಗೂ ತಿಳಿದಿರುವ ಪ್ರಸಂಗವನ್ನೂ, ವಾಸವದತ್ತೆಯ ಮರಣಕ್ಕಾಗಿ ಗೋಪಾಲಕನಿಗೆ ದುಃಖವೇ ಇಲ್ಲದಿದ್ದುದನ್ನು ಕಂಡಾಗ ಅವಳು ಮೃತಳಾದುದು ಸುಳ್ಳಾಗಿದ್ದರೂ ಇರಬಹುದೆಂದು ಉದಯನನಿಗೆ ಸಂದೇಹ ಬರುವ ಪ್ರಸಂಗವನ್ನೂ, ಭಾಸಮಹಾಕವಿಯು ಕೈಬಿಟ್ಟಿದ್ದಾನೆ. ಹಾಗೆ ಮಾಡದೆ ಹೋಗಿದ್ದರೆ, ಸ್ವಪ್ನವಾಸವದತ್ತದಲ್ಲಿ ಉದಯನನು ತನ್ನ ದುಃಖವನ್ನು ಸೂಚಿಸುವ ಸೊಗಸಾದ ಈಗಿನ ಸನ್ನಿವೇಶಗಳನ್ನು ತರುವುದಕ್ಕೇ ಆಗುತ್ತಿರಲಿಲ್ಲ ಆದ ಕಾರಣ ಈ ವಿಷಯದಲ್ಲಿ ಕವಿಯು ಬಹುದೊಡ್ಡ ಮಾರ್ಪಾಡನ್ನು ಮಾಡಿದ್ದಾನೆ.

ರೂಪಕದ ಸೊಗಸಿಗೆ ಭಂಗವನ್ನುಂಟುಮಾಡುತ್ತಿದ್ದ ಮತ್ತೆ ಕೆಲವು ಅಂಶಗಳನ್ನೂ ಅವನು ಬಿಟ್ಟಿದ್ದಾನೆ. ಪದ್ಮಾವತಿಯ ವಿನಾಪಕಾಲದಲ್ಲಿ ಅವಳು ಧರಿಸಿರುವ-ಮತ್ತು ವಾಸವದತ್ತೆಯೊಬ್ಬಳು ಮಾತ್ರವೇ ಅದನ್ನು ಕಟ್ಟುವ ವಿಧಾನವನ್ನರಿತ್ತಿದ್ದ-ಅಮ್ಲಾನ ಮಾಲೆಯನ್ನು ಉದಯನನು ನೋಡಿ ಅದರ ವಿಷಯವಾಗಿ ಅವಳನ್ನು ಪ್ರಶ್ನೆಮಾಡುವುದು; ಉದಯನ ಪದ್ಮಾವತಿಯರ ವಿವಾಹವು ಮುಗಿದ ಮೇಲೆ ವಾಸವದತ್ತೆಯು ವೇಷಧಾರಿಣಿಯಾಗಿ ಗೋಪ್ಯವಾಗಿ ಕೌಶಾಂಬಿಗೆ ಬಂದು ತನ್ನ ಸಹೋದರನಾದ ಗೋಪಾಲಕನ ಮನೆಯಲ್ಲಿರುವುದು; ಆಬಳಿಕ ಸ್ವಲ್ಪ ಕಾಲದ ಮೇಲೆ ಪದ್ಮಾವತಿಗೆ ಈ ವಿಚಾರವು ತಿಳಿದು ವಾಸವದತ್ತೆಯು ಅರಮನೆಗೆ ಬರಬೇಕೆಂಬ ಆಹ್ವಾನವು ಬರುವುದು; ಯೌಗಂಧರಾಯಣನು ಯಥಾಕಾಲದಲ್ಲಿ ನಿಜಸ್ಥಿತಿಯನ್ನು ತಿಳಿಸಿ, ವಾಸವದತ್ತೆಯು ಉದಯನನನ್ನು ಅಗಲಿ ಅಜ್ಞಾತವಾಸದಲ್ಲಿದ್ದಾಗ ಪರಿಶುದ್ಧೆಯಾಗಿದ್ದಳೆಂಬ ಅಂಶಕ್ಕೆ ಪದ್ಮಾವತಿಯಿಂದ ಭರವಸೆ ಹೇಳಿಸುವುದು; ವಾಸವದತ್ತೆಯು ಅದರಿಂದ ತೃಪ್ತಳಾಗದೆ ತನ್ನ ಪಾರಿಶುದ್ಧ್ಯಕ್ಕೆ ಅತಿಮಾನುಷವಾದ ಪ್ರಮಾಣವನ್ನು ಕೊಡುವುದಾಗಿ ತಿಳಿಸಿ ಕೃತಕಾರ್ಯಳಾಗಿ, ಕೊನೆಗೆ ಉದಯನನಿಂದ ಸ್ವೀಕೃತೆಯಾಗುವುದು; ಇವೇ ಮುಂತಾದ ಆಭಾಸ ಪ್ರಕರಣಗಳನ್ನು ಭಾಸನು ಕೈಬಿಟ್ಟಿದ್ದಾನೆ. ಅವಕ್ಕೆ ಪ್ರತಿಯಾಗಿ ತನ್ನ ಪ್ರತಿಭೆಯಿಂದ ಸೊಗಸಾದ ಸನ್ನಿವೇಶಗಳನ್ನು ಕಲ್ಪಿಸಿ ತನ್ನ ರೂಪಕ ರಚನಾ ಸಾಮರ್ಥ್ಯವನ್ನು ಮೆರೆದಿದ್ದಾನೆ.

ಉದಯನನು ಆರುಣಿಗೆ ಸೋತು, ತನ್ನ ರಾಜ್ಯವನ್ನು ಕಳೆದು ಕೊಂಡು, ದರ್ಶಕ ಮಹಾರಾಜನ ಸಹಾಯದಿಂದಲೂ, ತನ್ನ ಭುಜಬಲ ದಿಂದಲೂ ಆರುಣಿಯನ್ನು ಸೋಲಿಸಿ ಮತ್ತೆ ರಾಜ್ಯವನ್ನು ಸಂಪಾದಿಸಿದ ವಿಚಾರವು ಈಗ ಉಪಲಬ್ಧವಾಗಿರುವ ಮತ್ತಾವ ಗ್ರಂಥಗಳಲ್ಲಿಯೂ ಇಲ್ಲ. ಆದಕಾರಣ, ವಾಸವದತ್ತೆಯು ಸ್ವಾರ್ಥತ್ಯಾಗದಿಂದ ಅಜ್ಞಾತವಾಸಕ್ಕೆ ಸಮ್ಮತಿಸಲು ಚೋದಕವಾಗಿಯೂ, ವೀರರಸಪೋಷಣೆಗೆ ಸಾಧಕವಾಗಿಯೂ ಇರುವ ಈ ವಿಚಾರವನ್ನು ಕಲ್ಪಿಸಿದ ಖ್ಯಾತಿಯು ಭಾಸಮಹಾಕವಿಗೇ ಸಲ್ಲು ವುದೆಂದು ತೋರುವುದು.

ಭಾಸಮಹಾಕವಿಯು ಮತ್ತೊಂದು ಮಾರ್ಪಾಡನ್ನೂ ಮಾಡಿದ್ದಾನೆ. ಪದ್ಮಾವತಿಯ ತಂದೆಯಾದ ಮಗಧರಾಜನು ಪ್ರದ್ಯೋತನೆಂದು ಅವನು ಸೂಚಿಸಿಲ್ಲ. ಮಗಧರಾಜ್ಯವನ್ನು ಪದ್ಮಾವತಿಯ ಅಣ್ಣನಾದ ದರ್ಶಕನು ಆಳುತ್ತಿದ್ದಂತೆ ಅವನು ಚಿತ್ರಿಸಿದ್ದಾನೆ. ಇದು ಮಗಧರಾಜ್ಯದ ಇತಿಹಾಸಕ್ಕೆ ಸರಿಯಾಗಿದೆ. ಪದ್ಮಾವತಿಯು ಬುದ್ಧನ ಸಮಕಾಲೀನನಾದ ಅಜಾತಶತ್ರು ವಿನ ಮಗಳು. ಅಜಾತಶತ್ರುವಿನ ತರುವಾಯ ಅವನ ಮಗ ದರ್ಶಕನು ಮಗಧರಾಜ್ಯದ ಸಿಂಹಾಸನವನ್ನೇರಿದನು.

**ಪಾತ್ರರಚನೆ:**—ಪಾತ್ರರಚನೆಯಲ್ಲಿ ಭಾಸನು ತೋರಿಸಿರುವ ಕೌಶಲವು ಅಮೋಘವಾದುದು. ಈ ರೂಪಕದ ಸಂವಿಧಾನವನ್ನು ಕುರಿತು ಪ್ರಸ್ತಾವಿಸು ವಾಗಲೇ ಆಯಾಪಾತ್ರಗಳ ಗುಣಗಳನ್ನೂ ಅಲ್ಲಲ್ಲಿ ಸೂಚಿಸಲಾಗಿದೆ. ಆದುದ ರಿಂದ ಈ ವಿಷಯದಲ್ಲಿ ಹೆಚ್ಚೇನನ್ನೂ ಹೇಳಬೇಕಾಗಿಲ್ಲ. ಯೌಗಂಧ ರಾಯಣನೂ ವಸಂತಕನೂ ಪ್ರತಿಜ್ಞಾಯೌಗಂಧರಾಯಣದಲ್ಲಿಯೇ ನಾವು ಕಂಡ ಪಾತ್ರಗಳು ಉದಯನನೂ ವಾಸವದತ್ತೆಯೂ ಆ ರೂಪಕದಲ್ಲಿ ರಂಗಸ್ಥಳಕ್ಕೆ ಬಾರದೆಯೇ ನಮ್ಮ ಮನಸ್ಸನ್ನು ಸೆರೆಹಿಡಿದಿರುವ ಪೂರ್ವ ಪರಿಚಿತರು. ಇನ್ನುಳಿದ ಮುಖ್ಯಪಾತ್ರವು ಪದ್ಮಾವತಿ.

ಪೂರ್ವ ಪರಿಚಿತನಾದ ಯೌಗಂಧರಾಯಣನ ಸದ್ಗುಣಗಳು ಬಹು ಮಟ್ಟಿಗೆ ಪ್ರತಿಜ್ಞಾಯೌಗಂಧರಾಯಣದಲ್ಲಿಯೇ ನಮಗೆ ಗೋಚರವಾಗಿವೆ.

**ಯೌಗಂಧರಾಯಣ**

ಅವನ ಜಾಣ್ಮೆಯೂ ವಿವೇಕವೂ, ರಾಜನೀತಿಕುಶಲತೆಯೂ, ವ್ಯವಹಾರಜ್ಞಾನವೂ ಅಮೋಘವಾಗಿವೆ. ತಾನು ಅಗ್ನಿದಗ್ಧನಾದಂತೆ ವಾರ್ತೆಯನ್ನು ಹುಟ್ಟಿಸಿ ಯಾರ ಕಣ್ಣಿಗೂ ಗೋಚರವಾಗದ ಅಜ್ಞಾತವಾಸವನ್ನು ಕೈಕೊಂಡಿದ್ದೂ, ಉದಯನನ ರಾಜ್ಯಲಾಭಕ್ಕೆ ಮಾರ್ಗವನ್ನು ಕಲ್ಪಿಸಿರುವ ಚತುರನು ಯೌಗಂಧರಾಯಣ. ಉದಯನನ ರಾಜ್ಯಪ್ರಾಪ್ತಿಯೆಂಬ ನಾಟಕಕ್ಕೆ ಅವನೇ ಸೂತ್ರಧಾರ. ಉದಯನನ ರಾಜ್ಯಲಾಭದ ಪಗಡೆಯ ಆಟದಲ್ಲಿ ಅವನು ಕೇಳಿದ ಗರವು ಬಿದ್ದು, ಅವನು ಕೋರಿದೆಡೆಗೆ ಕಾಯಿಗಳು ನಡೆದು ಅವನ ಸಂಕಲ್ಪವು ಈಡೇರುವುದು ಯಾವ ಕಷ್ಟಕ್ಕೂ ಹೆದರದೆ ಎದೆಗೊಟ್ಟು ನಿಂತು ಮಂತ್ರಿತ್ವವನ್ನು ನಿರ್ವಹಿಸುವುದರಲ್ಲಾಗಲಿ, ಧೈರ್ಯದಲ್ಲಾಗಲಿ, ಸಾಮರ್ಥ್ಯದಲ್ಲಾಗಲಿ, ಚಾತುರ್ಯದಲ್ಲಾಗಲಿ, ಅವನಿಗೆ ಎದುರೇ ಇಲ್ಲ. ಉನ್ನತದಶೆಯಲ್ಲಿಯೂ, ಅವನತಿಯ ಅವಧಿಯಲ್ಲಿಯೂ, ಒಂದೇ ಬಗೆಯ ಸ್ವಾಮಿಭಕ್ತಿಯಿಂದ ಅವನು ಉದಯನನನ್ನು ಓಲೈಸುವನು. ಇದನ್ನು ಕಂಡು ಕೃತಜ್ಞತೆಯ ಭರದಲ್ಲಿ ಉದಯನನು ಅವನನ್ನು ಮಿತ್ರನೆಂದು * ಸಂಬೋಧಿಸುವನು. ಸ್ವಾಮಿಭಕ್ತನಿಗೆ ಇದಕ್ಕಿಂತ ಹೆಚ್ಚಿನದೇನು ಬೇಕು? ಯೌಗಂಧರಾಯಣನ ಸ್ವಾಮಿಭಕ್ತಿಗಿಂತ ಹೆಚ್ಚಿನದು ಸ್ವಾರ್ಥರಹಿತವಾದ ಮತ್ತು ಶುದ್ಧವಾದ ಅವನ ಸ್ವದೇಶಾಭಿಮಾನ. ಕೌಶಾಂಬಿರಾಜ್ಯದ ಮೇಲ್ಮೆಯನ್ನು ಮೆರೆಯಿಸುವ ಪ್ರಯತ್ನದಲ್ಲಿ ಅವನು ಸಾವಿಗೂ ಸಿದ್ಧ. ಸಂಸ್ಕೃತ ಭಾಷೆಯಲ್ಲಿ ಮತ್ತಾವ ಕವಿಯೂ ಉಜ್ಜ್ವಲಸ್ವದೇಶಾಭಿಮಾನದಿಂದ ಕೂಡಿರುವ ಇಂತಹ ಮತ್ತೊಂದು ಪಾತ್ರವನ್ನು ರಚಿಸಿಲ್ಲ.

**ವಸಂತಕ**

ವಸಂತಕನು ಉದಯನನ ಕಷ್ಟಕಾಲದಲ್ಲಿಯೂ ಆತನೊಡನೆ ಮೊದಲಿನಂತೆಯೇ ಮೈತ್ರಿಯಿಂದಿದ್ದು, ಅನುಕಂಪದಿಂದ ಆತನೊಡನೆ ತಾನೂ ಸಂಕಟಪಟ್ಟು, ಕೊನೆಗೆ ತನ್ನ ಮಿತ್ರನ ಸಂತೋಷದಲ್ಲಿ ಭಾಗಿಯಾಗುವನು. ಆದಕಾರಣ, ಆತನು ಇನ್ನೂ ಒಂದೆರಡು ಮೋದಕಗಳನ್ನು ತಿನ್ನಲೆಂದು ನಮಗೆ

* "ವಯಸ್ಯ ! ಯೌಗಂಧರಾಯಣ ! ...... "

ಆಸೆ. ಹೊಟ್ಟೆಯೇನೊ ಅವನ ಆರಾಧ್ಯ ದೈವತವು. ಆದರೂ ಅವನು ಮೇಧಾವಿಯೂ ಗುಣಶಾಲಿಯೂ ಆಗಿದ್ದಾನೆ. ಅವನು ಮೇಧಾವಿಯೆಂಬು ದಕ್ಕೂ ಪ್ರಕೃತಿಸೌಂದರ್ಯದಲ್ಲಿ ಅವನಿಗಿರುವ ಪ್ರೀತಿಗೂ, ಅವನ ರಸಿ ಕತೆಗೂ ನಾನಾ ನಿದರ್ಶನಗಳಿವೆ. ಅವುಗಳನ್ನು ಮೊದಲೇ ತಿಳಿಸಲಾಗಿದೆ. ವಾಸವದತ್ತೆಯು ಮೃತಳಾದಳೆಂದೇ ಅವನೂ ನಂಬಿರುವುದರಿಂದ ಆಕೆಯ ಮರಣಕ್ಕಾಗಿ ಅವನಿಗೂ ಬಹಳ ವ್ಯಥೆ. ಮಾತೃವಾತ್ಸಲ್ಯದಿಂದ ಅವಳು ತನ್ನನ್ನು ಹುಡುಕಿಹುಡುಕಿ ಸವಿಯೂಟಗಳನ್ನು ಬಡಿಸುತ್ತಿದ್ದುದನ್ನು ಅವನು ಮರೆತಿಲ್ಲ. ಆಕೆಯ ವಿಷಯದಲ್ಲಿ ಅವನಿಗಿರುವ ಪ್ರೀತಿ ಕೃತಜ್ಞತೆ ಗಳು ಮೆಚ್ಚಿಕೆಗರ್ಹವಾಗಿವೆ. ಅವನಲ್ಲಿ ಪ್ರತಿಭೆಯೂ ವಿವೇಚನಾಶಕ್ತಿಯೂ ಇವೆ. ಪ್ರಮದವನದಲ್ಲಿರುವಾಗ ಅವನು ಪದ್ಮಾವತಿಯ ಗುಣಗಳ ವಿಷಯ ವಾಗಿ ಹೇಳುವ ವರ್ಣನೆಯು ಹೃದಯಂಗಮವಾಗಿದೆ. ವಸಂತಕನು ಅಂಜುಗುಳಿಯಾದ ಬ್ರಾಹ್ಮಣ. ಗಾಳಿಗೆ ಚಲಿಸುತ್ತ ಹಾವಿನಂತೆ ಕಾಣುವ ತೋರಣಮಾಲೆಯ ತುಂಡನ್ನು ನೋಡಿ ಅದು ಹಾವೆಂದು ಭ್ರಮಿಸಿ ಭಯ ಪಡುವನು. ಅದನ್ನು ಚೆನ್ನಾಗಿ ನೋಡಿ ಅದೇನೆಂಬುದನ್ನು ನಿರ್ಧರಿಸು ವಷ್ಟು ಧೈರ್ಯವಂತು ಅವನಲ್ಲಿಲ್ಲ. ಸರ್ಪಭ್ರಾಂತಿಯಿಂದ ಕೂಡಿ ತಾನು ಭಯದಿಂದ ನಡುಗುತ್ತಿರುವಾಗಲೂ ತನ್ನಮಿತ್ರನಿಗೆಲ್ಲಿ ಅಪಾಯ ಬಂದೀತೋ ಎಂಬ ತಲ್ಲಣದಿಂದ "ಅಲ್ಲಿಯೇ ನಿಲ್ಲು" ಎಂದು ವಸಂತಕನು ಎಚ್ಚರಿಕೆ ಹೇಳುವನು; ಪ್ರಮದವನದಲ್ಲಿ ದುಂಬಿಗಳು ತನ್ನನ್ನು ಕಡಿದಾಗಲೂ ಅವನು ಅದೇ ರೀತಿ ಮಾಡುವನು; ಉದಯನನು ಮುಂದಕ್ಕೆ ಬಂದರೆ ಅವನನ್ನೂ ದುಂಬಿಗಳೆಲ್ಲಿ ಕಡಿಯುವುವೋ—ಎಂದು ಅವನಿಗೆ ಕಾತರ. ಅವನ ಪ್ರೀತಿಯೂ, ಸ್ನೇಹವೂ ಎಷ್ಟು ಗಾಢವಾದವುಗಳೆಂಬುದು ಇದರಿಂದ ವ್ಯಕ್ತವಾಗುವುದು. ಉದಯನನೇ ಹೇಳುವಂತೆ ಅವನು ಗುಟ್ಟನ್ನು ಕಾಪಾಡಿ ಕೊಳ್ಳಲಾರದ ವಾಚಾಳಿ. ಹಾಗಿದ್ದೂ ಅವನು ಪ್ರತಿಜ್ಞಾಯೌಗಂಧರಾಯ ಣದ ಘಟನೆಗಳಲ್ಲಿ ತನ್ನ ನಾಲಗೆಯನ್ನು ಹದ್ದಿನಲ್ಲಿಟ್ಟುಕೊಂಡಿರುವನು. ಅವನ ಮಿತ್ರ ಪ್ರೇಮವೂ, ಯೌಗಂಧರಾಯಣನ ಅಂಕೆಯೂ ಅದಕ್ಕೆ ಕಾರಣವೆಂದು ತೋರುವುದು. ಅವಂತಿಸುಂದರಿಯೆಂಬ ಯಕ್ಷಿಣಿಯೊಬ್ಬ ಳಿರುವಳೆಂದು ಅವನು ನಂಬಿರುವುದರಿಂದ ಅವನಿಗೆ ಮೂಢನಂಬಿಕೆಗಳೂ ಉಂಟೆಂಬುದು ಗೊತ್ತಾಗುವುದು.

**ಉದಯನ**

ಉದಯನನು ಶೂರ. ಕಲಾಪ್ರವೀಣ. ರೂಪದಲ್ಲಿ ಅವನು (ಚೇಟಿಯು ಹೇಳುವಂತೆ) ಶರಚಾಪಗಳನ್ನು ಧರಿಸಿಲ್ಲದ ಕಂದರ್ಪ. ಅರಮನೆಯಲ್ಲಿ ಸಮುದ್ರಗೃಹದ ಬಾಗಿಲುವಾಡಕ್ಕೆ ಅವನ ಹಣೆಯು ಬಡಿಯುವುದು; ಆದುದರಿಂದ ಅವನು ತುಂಬ ಎತ್ತರವಾಗಿದ್ದನೆಂದೂ ಗೊತ್ತಾಗುವುದು. ಅವನು ಆರುಣಿಯೊಡನೆ ಯುದ್ಧಕ್ಕೆ ಸಿದ್ಧವಾಗುವಾಗ ವೀರವಾಣಿಯಿಂದ ಪ್ರತಿಜ್ಞೆಮಾಡುವನು. ಪ್ರತಿಜ್ಞಾ ಯೌಗಂಧರಾಯಣದಲ್ಲಿ ಅವನ ಶೌರ್ಯಾದಿ ಸದ್ಗುಣಗಳ ಪರಿಚಯವೂ, ಅವನ ಸಂಗೀತ ಪರಿಶ್ರಮದ ಪರಿಚಯವೂ ನಮಗೆ ಚೆನ್ನಾಗಿ ಆಗಿದೆ. ವಾಸವದತ್ತೆಯೊಡನೆ ವಿವಾಹವಾದ ಬಳಿಕ ಅವನಿಗೆ ಮಹಾಸೇನನಲ್ಲಿ ಬಹಳ ಗೌರವ. ಮೊದಲಿನ ದ್ವೇಷವೆಲ್ಲ ಮಾಯವಾಗಿ, ಮಹಾಸೇನನ ಸಂದೇಶಬಂದಾಗ ಪೀಠದಿಂದೆದ್ದು ನಿಂತು ಗೌರವತೋರಿಸಿ "ಮಹಾಸೇನನು ಏನೆಂದು ಆಜ್ಞಾಪಿಸಿದ್ದಾನೆ?" ಎಂದು ಕೇಳುವಮಟ್ಟಿಗೆ ಅವನ ಮನಸ್ಸಿನ ಮೇಲೆ ಪರಿಣಾಮವುಂಟಾಗಿದೆ. ಅಂಗಾರವತಿಯಲ್ಲಂತು ಅವನಿಗೆ ಪೂರ್ಣಗೌರವ. "ಮಹಾಸೇನನ ಹದಿನಾರು ಮಂದಿ ಪತ್ನಿಯರಲ್ಲಿ ಜ್ಯೇಷ್ಠಳೂ, ಪುಣ್ಯಸ್ವರೂಪಳೂ, ನಗರಲಕ್ಷ್ಮಿಯೂ, ನನ್ನ ಪ್ರವಾಸದಿಂದ ದುಃಖಿನಿಯೂ ಆದ ಮಾತೆಯು ಕ್ಷೇಮವಾಗಿರುವಳಷ್ಟೆ?" ಎಂಬ* ನುಡಿಗಳೇ ಆಕೆಯಲ್ಲಿ ಆತನಿಗಿರುವ ಪ್ರೀತಿ ಗೌರವಗಳನ್ನು ವ್ಯಕ್ತಪಡಿಸುವುವು. (ವಾಸವದತ್ತೆಯು ಮೃತಳಾಗಿರುವಳೆಂದು ಭಾವಿಸಿದ್ದೂ ರಾಜ್ಯಭೋಗವು ಉತ್ಸಾಹಶಾಲಿಗಳಿಗೆ ಮಾತ್ರವೇ ಲಭಿಸುವುದೆಂದು ಮುಂತಾಗಿ ಮಹಾಸೇನನು ಸಂದೇಶವನ್ನು ಕಳುಹಿಸಿರುವನು. ಅಂಗಾರವತಿಯೂ ಪ್ರೀತಿಪೂರ್ವಕವಾಗಿ ಸಂದೇಶವನ್ನು ಕಳುಹಿಸಿರುವಳು. ಇದು ಅವರೀರ್ವರ ದೊಡ್ಡತನವನ್ನು ಸೂಚಿಸುವುದು.) ಪದ್ಮಾವತಿಯೊಡನೆ ವಿವಾಹವಾದಮೇಲೆ ಸಹ ವಾಸವದತ್ತಾದೇವಿಯ ವಿಯೋಗ ದುಃಖವು ಅವನನ್ನು ಬಾಧಿಸುತ್ತಲೇ ಇರುವುದು. ಆದರೆ ಪದ್ಮಾವತಿಯಲ್ಲಿ ಅವನಿಗೆ ಪ್ರೀತಿಯಿಲ್ಲವೆಂದು ಅರ್ಥವಲ್ಲ. ಅವನೇ ಹೇಳುವಂತೆ ರೂಪ ಶೀಲ ಮಾಧುರ್ಯಗಳಿಂದ ಪದ್ಮಾ

---

* "ಷೋಡಶಾಂತಃಪುರ ಜ್ಯೇಷ್ಠಾ ಪುಣ್ಯಾ ನಗರ ದೇವತಾ ।
ಮಮ ಪ್ರವಾಸದುಃಖಾರ್ತಾ ಮಾತಾ ಕುಶಲಿನೀ ನನು ॥"

ವತಿಯು ಅವನಿಗೆ ಪ್ರಿಯಳಾದರೂ ವಾಸವದತ್ತೆಯಲ್ಲಿ ಅವನ ಮನಸ್ಸು ಬದ್ಧವಾಗಿರುವುದು. ಕಾಶಕುಸುಮ ರೇಣುವಿನಿಂದ ಕಂಬನಿ ಬಂದಿತೆಂದು ಅವನು ಪದ್ಮಾವತಿಯೊಡನೆ ತಿಳಿಸಿದ ಮೇಲೆ "ಇವಳು ಇನ್ನೂ ಬಾಲೆ. ಹೊಸದಾಗಿ ವಿವಾಹಿತಳಾಗಿರುವಳು. ಸತ್ಯವನ್ನು ಕೇಳಿದರೆ ವ್ಯಥೆಪಡು ವಳು ಅವಳು ಧೀರೆಯೇನೋ ಹೌದು. ಆದರೂ (ಇಂತಹ ಸನ್ನಿವೇಶ ದಲ್ಲಿ) ಕಾತರೆಯಾಗುವುದು ಸ್ತ್ರೀಸ್ವಭಾವ" ಎಂದು § ತನ್ನಲ್ಲಿ ತಾನು ಹೇಳಿ ಕೊಳ್ಳುವನು. ಇದರಿಂದ ಅವನ ದಾಕ್ಷಿಣ್ಯ ಸ್ವಭಾವವೂ, ಪದ್ಮಾವತಿಯಲ್ಲಿ ಅವನಿಗಿರುವ ಪ್ರೀತಿಯೂ ವ್ಯಕ್ತವಾಗುವುವು. ಪದ್ಮಾವತಿಯು ಶಿರೋ ವೇದನೆಯಿಂದ ದುಃಖಿತೆಯಾಗಿರುವುದನ್ನು ಕೇಳಿದಾಗ ಅವನು ಮನಮರು ಗುವನು. ಆದರೂ ಅವನ ಹೃದಯದಲ್ಲಿ ವಾಸವದತ್ತೆಯ ಮೇಲಣ ಪ್ರೇಮವೇ ರೂಢಮೂಲವಾಗಿ ನೆಲೆಗೊಂಡಿದೆ ವಾಸವದತ್ತಾದೇವಿಯ ಸುಸ್ವಭಾವವೂ, ಉದಯನನಿಗೆ ಆಕೆಯಲ್ಲಿ ನೆಲಸಿರುವ ಪ್ರೇಮವೂ ಸಹ, "ಕಾಲಕ್ರಮದಲ್ಲಿ ನಾನು ಮತ್ತೆ ವಿವಾಹಿತನಾಗಿರುವೆನಾದರೂ ಅವಂತಿ ರಾಜನಿಗೆತಕ್ಕಮಗಳಾಗಿ ಶ್ಲಾಘಾರ್ಹೆಯಾಗಿದ್ದು ಹಿಮಹತವಾದ ಪದ್ಮ ದಂತೆ ಲಾವಾಣಕದಲ್ಲಿ ಅಗ್ನಿದಗ್ಧಳಾದ ವಾಸವದತ್ತೆಯನ್ನು ಸ್ಮರಿಸುತ್ತಿರು ವೆನು" ಎಂಬ ಅವನ ಮಾತುಗಳಿಂದ ವ್ಯಕ್ತವಾಗುತ್ತವೆ. ಪದ್ಮಾವತಿಯ ಸಹವಾಸದಿಂದ ವಾಸವದತ್ತೆಯ ವಿಯೋಗ ದುಃಖವು ಅಲ್ಪಸ್ವಲ್ಪ ಕಡಮೆ ಯಾದಂತೆ ತೋರುತ್ತಿರುವವೇಳೆಗೆ ಸರಿಯಾಗಿ ಘೋಷವತಿಯುಸಿಕ್ಕುವುದು. ಸಂಗಡಲೇ ಅವನ ದುಃಖವು ಉಕ್ಕಿಬರುವುದು. ತಾನು ವಾಸವದತ್ತಾದೇವಿ ಯನ್ನು ಅಪಹರಿಸಿ ತಂದ ಕಾರಣದಿಂದ ಆಕೆಯನ್ನು ಅತ್ಯಂತ ಸುಖವಾಗಿ ಕಾಪಾಡಬೇಕಾಗಿದ್ದುದು ತನ್ನ ಮೇಲಣ ಗುರುತರವಾದ ಕರ್ತವ್ಯವೆಂಬುದು ಉದಯನನ ಭಾವನೆ; ಆ ಕರ್ತವ್ಯವನ್ನು ತಾನು ನಿರ್ವಹಿಸಲಿಲ್ಲವೆಂಬುದು ಅವನ ಮನಸ್ಸಿನ ದಾರುಣಯಾತನೆ. ಅವನ ಉದಾತ್ತಸ್ವಭಾವವು ಇದ ರಿಂದ ವ್ಯಕ್ತವಾಗುವುದು. ಮಹಾಸೇನನ ಸಂದೇಶವನ್ನು ತಿಳಿಸಲು ಬಂದಿ ರುವ ಕಾಂಚುಕೀಯನು ಕೂಡ "ಆರ್ಯನು ಸಮಾಧಾನ ಹೊಂದಬೇಕು.

---

§ " ಇಯಂ ಬಾಲಾ ನವೋದ್ವಾಹಾ ಸತ್ಯಂ ಶ್ರುತ್ವಾ ವ್ಯಥಾಂ ವ್ರಜೇತ್ ।
ಕಾಮಂ ಧೀರ ಸ್ವಭಾವೇಯಂ ಸ್ತ್ರೀ ಸ್ವಭಾವಸ್ತು ಕಾತರಃ ॥ "

ಆರ್ಯನು ಹೀಗೆ ಅನುಕಂಪದಿಂದ ಹೇಳುತ್ತಿರುವುದರಿಂದ ಮಹಾಸೇನನ ಪುತ್ರಿಯು ಮೃತಳಾಗಿದ್ದೂ ಜೀವಂತಳೇ ಸರಿ. ಮೃತ್ಯುಕಾಲದಲ್ಲಿ ಯಾರು ತಾನೆ ಯಾರನ್ನು ರಕ್ಷಿಸಲು ಶಕ್ಯ? ಹಗ್ಗವು ಕಿತ್ತುಹೋದಾಗ ಬಿಂದಿಗೆಯು (ಬಾವಿಗೆ) ಬೀಳದಂತೆ ಯಾರು ಹಿಡಿಯಬಲ್ಲರು? ಜೀವನವೇ ಹೀಗೆ. ಉರುಳುವುದೂ ವೃದ್ಧಿಯಾಗುವುದೂ ಮರಗಳಿಗೂ ಮನುಷ್ಯನಿಗೂ ಸಮಾನ ಧರ್ಮ. ಎಂದು * ಸಮಾಧಾನ ಹೇಳುವನು. ಉದಯನನು ಅದರಿಂದಲೂ ಸಮಾಧಾನ ಹೊಂದದೆ "ಮಹಾಸೇನ ಪುತ್ರಿಯು ನನ್ನ ಶಿಷ್ಯೆ; ರಾಣಿ; ನನಗೆ ಪ್ರಿಯಳು. ಜನ್ಮಾಂತರದಲ್ಲಿ ಕೂಡ ನಾನು ಅವಳನ್ನು ಮರೆಯಲು ನನಗೆ ಶಕ್ಯವಾಗುವ ಬಗೆ ಹೇಗೆ?" ಎಂದು ‡ ಉತ್ತರಹೇಳುವನು. ಅವನ ಪ್ರೇಮವೆಷ್ಟು ಗಾಢವಾದುದೆಂಬುದೂ, ಅವನ ಸ್ವಭಾವವೆಷ್ಟು ಸಂಸ್ಕೃತವಾದುದೆಂಬುದೂ, ಈ ಅಂಶಗಳಿಂದ ಗೊತ್ತಾಗುವುವು. ಪದ್ಮಾವತಿಯೂ ಅನರ್ಘ್ಯವಾದ ಜೀವ ರತ್ನವೆಂಬುದು ಅವನಿಗೆ ಮನದಟ್ಟಾಗಿ ಅವಳಲ್ಲಿಯೂ ಅವನಿಗೆ ಪ್ರೀತಿಯು ಹುಟ್ಟುವುದು.

ರಾಜ್ಯವು ಶತ್ರುವಶವಾಗಿ ವಾಸವದತ್ತಾದೇವಿಯ ಅಗಲಿಕೆಯುಂಟಾದ ಮೇಲೆ ಉದಯನನ ಮನಸ್ಸು ಕಷ್ಟಗಳಿಂದಲೂ, ದುಃಖದಿಂದಲೂ ಪಕ್ವವಾಗುವುದು. ಪ್ರಾಣಿಮಾತ್ರಕ್ಕೆ ಹಿಂಸೆಮಾಡಕೂಡದೆಂಬ ಸಂಕಲ್ಪವು ಹುಟ್ಟುವುದು. ದುಂಬಿಗಳಿಗೆ ತಮ್ಮಿಂದ ತೊಂದರೆಯಾಗಕೂಡದೆಂದು ಅವನು ಹೇಳುವುದೇ ಅದಕ್ಕೆ ನಿದರ್ಶನ ಪ್ರಕೃತಿಸೌಂದರ್ಯದಲ್ಲಿ ಅವನಿಗಿರುವ ಪ್ರೇಮವನ್ನೂ ವಸಂತಕ ಯೌಗಂಧರಾಯಣರಲ್ಲಿ ಅವನಿಗಿರುವ ಸ್ನೇಹಮಮತೆಗಳನ್ನೂ ಹಿಂದೆಯೇ ಸೂಚಿಸಲಾಗಿದೆ. ಅವನು ಸದ್ಗುಣ

---

* "ಕಃ ಕಂ ಶಕ್ತೋ ರಕ್ಷಿತುಂ ಮೃತ್ಯುಕಾಲೇ
ರಜ್ಜುಚ್ಛೇದೇ ಕೇ ಘಟಂ ಧಾರಯನ್ತಿ।
ಏವಂ ಲೋಕಸ್ತುಲ್ಯ ಧರ್ಮಾ ವನಾನಾಂ
ಕಾಲೇ ಕಾಲೇ ಛಿದ್ಯತೇ ರುಹ್ಯತೇ ಚ ॥"

‡ "ಮಹಾಸೇನಸ್ಯ ದುಹಿತಾ ಶಿಷ್ಯಾ ದೇವೀ ಚ ಮೇ ಪ್ರಿಯಾ।
ಕಥಂ ಸಾ ನ ಮಯಾ ಶಕ್ಯಾ ಸ್ಮರ್ತುಂ ದೇಹಾನ್ತರೇಷ್ವಪಿ ॥"

ಛರಿತನಾದ ಪ್ರಭುವಾದುದರಿಂದ ಪ್ರಜೆಗಳೆಲ್ಲರಿಗೂ ಅವನಲ್ಲಿ ಪ್ರೀತಿ. ಅವನೆಂದಿಗೆ ಮತ್ತೆ ನಮ್ಮ ಪ್ರಭುವಾಗುವನೋ ಎಂಬ ಹಾರೈಕೆ. ರಾಜರೆಲ್ಲರನ್ನೂ ನಡುಗಿಸುತ್ತಿದ್ದ ಮಹಾಸೇನನಿಗೆ ಕೂಡ, ಉದಯನನು ತನ್ನ ಅಳಿಯನಾದರೆ ಸಾಕೆಂಬ ಬಯಕೆಯಿದ್ದಿತು. ಪದ್ಮಾವತಿಯ ಅಣ್ಣನಾದ ದರ್ಶಕನು ಉದಯನನ ಪಾಂಡಿತ್ಯವೇ ಮುಂತಾದ ಗುಣಗಳನ್ನು ಮೆಚ್ಚಿ ತನ್ನ ತಂಗಿಯನ್ನು ಕೊಟ್ಟು ವಿವಾಹ ಮಾಡುವನು.

ವಾಸವದತ್ತೆಯ ಸದ್ಗುಣಗಳನ್ನೂ, ಪದ್ಮಾವತಿಯ ಸದ್ಗುಣಗಳನ್ನೂ ಈ ಮೊದಲೇ ಸಂವಿಧಾನ ಭಾಗದಲ್ಲಿ ವಿಶದವಾಗಿ ಸೂಚಿಸಲಾಗಿದೆ. ಆದ ಕಾರಣ, ಅವರೀರ್ವರ ವಿಚಾರದಲ್ಲಿಯೂ ಹೆಚ್ಚೇನನ್ನೂ

**ವಾಸವದತ್ತೆ ಪದ್ಮಾವತಿ**

ಹೇಳಬೇಕಾದುದಿಲ್ಲ. ಸಂಸ್ಕೃತ ಸಾಹಿತ್ಯದಲ್ಲಿ ಅವರೀರ್ವರೂ ಚಿರಜೀವಿಗಳೆನಿಸಿ ರಾಜಿಸುವ ಸಾಧ್ವೀರತ್ನಗಳು; ಅವರು ಒಟ್ಟು ಸ್ತ್ರೀತ್ವಕ್ಕೇ ಆದರ್ಶಪ್ರಾಯರಾದ ರಮಣಿಯರ ಜೊತೆಗೆ ಸೇರಬೇಕಾದ ಸತೀಮಣಿಗಳು. ಅವರೀರ್ವರೊಡನೆಯೂ, ವಾಲ್ಮೀಕಿ ಮಹರ್ಷಿಗಳ ಕಾವ್ಯದ ಆಧಾರದ ಮೇಲೆ ಭಾಸನು ಚಿತ್ರಿಸಿರುವ ಸೀತಾದೇವಿಯೊಡನೆಯೂ ಮಂಡಿಸಲು ಅರ್ಹರಾದ ಸ್ತ್ರೀಪಾತ್ರಗಳು ವಿಶ್ವಸಾಹಿತ್ಯದಲ್ಲಿಯೇ ಹೆಚ್ಚು ಸಂಖ್ಯೆಯಲ್ಲಿಲ್ಲವೆಂದರೆ ಅತಿಶಯೋಕ್ತಿಯೆನಿಸದು. ವಾಸವದತ್ತೆಯು ತೇಜಸ್ವಿನಿಯಾದ ರಾಣಿ. ಪತಿಸಾನ್ನಿಧ್ಯದ ಸ್ವಂತ ಸುಖಕ್ಕಿಂತ ಕೌಶಾಂಬಿಯ ಯೋಗಕ್ಷೇಮವೂ, ವತ್ಸರಾಜನಾಗಿರುವ ತನ್ನ ಪತಿಯ ಶ್ರೇಯಸ್ಸೂ, ಹೆಚ್ಚೆಂದು ಭಾವಿಸಿ ಸ್ವಸುಖವನ್ನು ಸೂರೆಗೊಡಲು ಸಿದ್ಧಳಾಗುವ ಮಹಾಮಾನಿನಿಯು ವಾಸವದತ್ತಾದೇವಿ. ತನ್ನ ಸುಖಕ್ಕಿಂತ ಪತಿಯ ಸೌಖ್ಯವು ಮೇಲೆಂದು ಭಾವಿಸಿರುವ ಸಾಧ್ವೀರತ್ನವು ವಾಸವದತ್ತಾದೇವಿ. ಪದ್ಮಾವತಿಯೂ ರೂಪ ಶೀಲ ಮಾಧುರ್ಯಯುಕ್ತಳು. ಆಕೆಯು ತರುಣಿ, ದರ್ಶನೀಯಳು, ಕೋಪರಹಿತಳು, ಅಹಂಕಾರವಿಲ್ಲದವಳು, ಮಧುರ ಭಾಷಿಣಿ, ದಾಕ್ಷಿಣ್ಯಯುಕ್ತೆ ; ಅಲ್ಲದೆ, ಧರ್ಮಪ್ರೀತಿಯು ಅವಳು ಕುಲವ್ರತ. ವಾಸವದತ್ತೆಯಂತೆಯೇ ಅವಳಿಗೂ ಸಹ ಸವತಿಮಾತ್ಸರ್ಯವಿಲ್ಲ. ಆದರೂ, ವಾಸವದತ್ತೆಯಂತೆಯೇ ತಾನು ಅಜ್ಞಾತಳಾಗಿದ್ದು ಸವತಿಯ ವಿವಾಹ ಮಾಲೆಯನ್ನೂ ತಾನೇ ಕಟ್ಟಬೇಕಾಗಿ ಬಂದಿದ್ದರೆ ಅವಳು

ವಾಸವದತ್ತೆಯಂತೆಯೇ ವರ್ತಿಸುತ್ತಿದ್ದಳೆ—ಎಂಬ ಸಂಶಯವು ಬರುತ್ತದೆ. ಆದರೆ, ಪದ್ಮಾವತಿಯು ಆರೋಗ್ಯದಿಂದಿದ್ದು ತನ್ನ ಪತಿಗೆ ಸೌಖ್ಯವಾಗುವಂತಾಗಲೆಂದು ಬಯಸುವ ವಾಸವದತ್ತೆ, ವಾಸದತ್ತೆಯ ಮಾತಾಪಿತೃಗಳೇ ತನ್ನ ತಾಯಿತಂದೆಗಳೆಂದು ಭಾವಿಸಿ ವಾಸವದತ್ತೆಯಲ್ಲಿ ಪ್ರೀತಿಗೌರವಗಳನ್ನು ತೋರಿಸುವ ಪದ್ಮಾವತಿ, ಇವರೀರ್ವರ ನಾನಾ ಗುಣಗಳನ್ನೂ ತೂಗಿ ನೋಡಿದರೆ ಆ ಸಂಶಯವು ಮಾಯವಾಗಿ ಅವರಿಬ್ಬರಲ್ಲಿ ಯಾರು ಹೆಚ್ಚೆಂಬುದನ್ನು ನಿರ್ಧರಿಸಲಾರದೆ ಮನಸ್ಸು ಮುಗ್ಧತೆಯ ತೆರೆಯಹಿಂದೆ ಹುದುಗಿಕೊಳ್ಳುತ್ತದೆ.

—o—

# ನಾಲ್ಕನೆಯ ತರಂಗ

——:——

## ಮಹಾಭಾರತ ಸಂಬಂಧವಾದ ರೂಪಕಗಳು



ಮಧ್ಯಮ ವ್ಯಾಯೋಗ

ಪಂಚರಾತ್ರ

ದೂತವಾಕ್ಯ

ದೂತ ಘಟೋತ್ಕಚ

ಕರ್ಣಭಾರ

ಊರುಭಂಗ

# ಮಧ್ಯಮ ವ್ಯಾಯೋಗ

## ಅವತರಣಿಕೆ

ಭಾಸಮಹಾಕವಿಯು ಮಹಾಭಾರತದ ಆಧಾರದ ಮೇಲೆ ಬರೆದಿರುವ ಆರು ರೂಪಕಗಳಲ್ಲಿ ಮಧ್ಯಮವ್ಯಾಯೋಗವೂ ಒಂದು. ಇದು ಪಾಂಡವರ ವನವಾಸದ ಅವಧಿಗೆ ಸಂಬಂಧಪಟ್ಟುದಾಗಿದೆ; ಆದರೆ ಇದರ ಕಥಾಭಾಗವೇನೊ ಸಂಪೂರ್ಣವಾಗಿ ಕವಿಕಲ್ಪಿತವಾದುದು. ಉಳಿದ ಐದು ರೂಪಕಗಳಲ್ಲಿ, ಪಂಚರಾತ್ರವು ವಿರಾಟಪರ್ವದ ಕಥಾಭಾಗಕ್ಕೂ, ದೂತವಾಕ್ಯವು ಉದ್ಯೋಗಪರ್ವದ ಕಥಾಭಾಗಕ್ಕೂ, ದೂತಘಟೋತ್ಕಚವು ದ್ರೋಣಪರ್ವದ ಕಥಾಭಾಗಕ್ಕೂ, ಕರ್ಣಭಾರವು ಕರ್ಣಪರ್ವದ ಕಥಾಭಾಗಕ್ಕೂ, ಊರುಭಂಗವು ಶಲ್ಯಪರ್ವದ ಕಥಾಭಾಗಕ್ಕೂ ಸಂಬಂಧಪಟ್ಟಿವೆ. ಪಂಚರಾತ್ರವು ಮೂರು ಅಂಕಗಳ ರೂಪಕ. ಉಳಿದ ಐದರಲ್ಲಿ ಪ್ರತಿಯೊಂದೂ ಏಕಾಂಕರೂಪಕ. ಕವಿಯು ನೆಪಮಾತ್ರಕ್ಕೆ ಕಥಾವಸ್ತುವನ್ನು ಮಹಾಭಾರತದಿಂದ ತೆಗೆದುಕೊಂಡಿದ್ದರೂ, ಅವನ ಸ್ವಂತ ಪ್ರತಿಭೆಯೂ ಚಮತ್ಕಾರವೂ ಕಲ್ಪನಾಸಾಮರ್ಥ್ಯವೂ ಈ ಆರು ರೂಪಕಗಳಲ್ಲಿ ಉಜ್ಜ್ವಲವಾಗಿ ತೋಳಗುತ್ತಿವೆ; ಇತರ ರೂಪಕಗಳಂತೆಯೇ ಇವೂ ಮನೋಹರವಾಗಿವೆ.

## ೧. ಕಥಾಸಾರಾಂಶ

ಜೂಜಿನಲ್ಲಿ ಸೋತು ಕಾಡಿಗೆಹೋದ ಪಾಂಡವರ ಆಶ್ರಮವಿರುವ ಅರಣ್ಯಕ್ಕೆ ಸ್ವಲ್ಪದೂರದಲ್ಲಿ ಹಿಡಿಂಬೆಯು ವಾಸಮಾಡುತ್ತಿರುವಳು. ಒಂದು ದಿನ ಆಕೆಯು ತನ್ನ ಮಗನಾದ ಘಟೋತ್ಕಚನನ್ನು ಕುರಿತು ತನಗೆ ಆಹಾರಕ್ಕಾಗಿ ಒಬ್ಬ ಮನುಷ್ಯನನ್ನು ಒದಗಿಸಬೇಕೆಂದು ಆಜ್ಞಾಪಿಸುವಳು.

ಅವನು ಮನುಷ್ಯನನ್ನು ಹುಡುಕಿಕೊಂಡು ಹೊರಡುವನು. ಯೂಪಗ್ರಾಮ ದವನಾದ ಕೇಶವದಾಸನೆಂಬ ಬ್ರಾಹ್ಮಣನು ತನ್ನ ಪತ್ನೀಪುತ್ರರೊಡನೆ ಉದ್ಯಾಮಕ ಗ್ರಾಮದಲ್ಲಿರುವ ತನ್ನಸೋದರಮಾವನಾದ ಯಜ್ಞಬಂಧು ವೆಂಬಾತನ ಮನೆಯಲ್ಲಿ ನಡೆಯುವ ಉಪನಯನಕ್ಕೆ ಆಹ್ವಾನಿತನಾಗಿ ಪ್ರಯಾಣಮಾಡುತ್ತಿರುವುದನ್ನು ಕಂಡು, ಘಟೋತ್ಕಚನು ಅವರಲ್ಲೊ ಬ್ಬರು ತಮ್ಮ ತಾಯಿಯ ಆಹಾರಕ್ಕಾಗಿ ಬರಬೇಕೆಂದು ಪೀಡಿಸುವನು. ಅವರಲ್ಲಿ ಪ್ರತಿಯೊಬ್ಬರೂ ತಾವು ಹೋಗುವುದಾಗಿ ಹೇಳಿ ಚರ್ಚೆಮಾಡಿದ ಬಳಿಕ, ಕೇಶವದಾಸನ ಮೂವರು ಪುತ್ರರಲ್ಲಿ ಮಧ್ಯಮನು ಘಟೋ ತ್ಕಚನೊಡನೆ ಹೋಗಬೇಕೆಂದು ತೀರ್ಮಾನವಾಗುವುದು. ಅವನು ಆಚ ಮನಮಾಡಿ ನೀರನ್ನು ಕುಡಿದು "ಆತ್ಮತರ್ಪಣ" ಮಾಡಿಕೊಂಡು ಬರಲು ಘಟೋತ್ಕಚನ ಅಪ್ಪಣೆಯನ್ನು ಪಡೆದು ಸಮೀಪದಲ್ಲಿದ್ದ ಸರೋವರಕ್ಕೆ ಹೋಗುವನು. ಸ್ವಲ್ಪಕಾಲವಾದೊಡನೆಯೇ ಘಟೋತ್ಕಚನು ಹಿಂದಿನದಿನ ಉಪವಾಸ ಮಾಡಿದ್ದ ತಮ್ಮ ತಾಯಿಯ ಆಹಾರ ಕಾಲವು ಮೀರುವು ದೆಂದು ವ್ಯಗ್ರಚಿತ್ತನಾಗಿ " ಮಧ್ಯಮ, ಮಧ್ಯಮ " ಎಂದು ಗಟ್ಟಿಯಾಗಿ ಕೂಗುವನು. ಅಲ್ಲಿಗೆ ಸಮೀಪದಲ್ಲಿ ವ್ಯಾಯಾಮ ಮಾಡುತ್ತಿದ್ದ ಭೀಮ ಸೇನನು ತನ್ನನ್ನು ಕೂಗಿದವರಾರೆಂಬು ಬಂದು ವಾಸ್ತವಸ್ಥಿತಿಯನ್ನು ಅರಿತುಕೊಳ್ಳುವನು ; ಅಲ್ಲದೆ ಮಧ್ಯಮನ ಪ್ರಾಣರಕ್ಷಣೆ ಮಾಡುವುದಾಗಿ ವಾಗ್ದಾನಮಾಡುವನು. ಭೀಮಸೇನನು ತನ್ನ ತಂದೆಯೆಂಬುದು ಘಟೋ ತ್ಕಚನಿಗೆ ಗೊತ್ತಿದ್ದರೂ ತನ್ನೆದುರಿಗಿರುವವನು ಭೀಮಸೇನನೆಂಬುದು ಅವ ನಿಗೆ ತಿಳಿಯದು. ಭೀಮಸೇನನು ತಾನಾರೆಂಬುದನ್ನು ತಿಳಿಸದೆ, ಆ ಭೀಮ ನೆಂಬುವನಾರೆಂದು ಮುಂತಾಗಿ ಅವಹೇಳನಮಾಡಿ ಘಟೋತ್ಕಚನನ್ನು ಕೆರಳಿಸಿ, ಅವನ ವೀರವಾಣಿಗಳನ್ನಾಲಿಸಿ ಹರ್ಷಿಸುವನು ; ಅಲ್ಲದೆ ತನ್ನನ್ನು ಬಲಾತ್ಕಾರವಾಗಿ ಬೇಕಾದರೆ ಕರೆದೊಯ್ಯಬಹುದೆಂದೂ ತಾನು ಬರಲೊಲ್ಲೆ ನೆಂದೂ ಹೇಳುವನು. ಅವರೀರ್ವರಿಗೂ ಯುದ್ಧವಾಗುವುದು. ಭೀಮ ಸೇನನನ್ನು ಸೋಲಿಸಲಾರದೆ ತಲ್ಲಣಗೊಂಡ ಘಟೋತ್ಕಚನು, ತನ್ನ ಆ ಶತ್ರುವು ವಾಗ್ದಾನದಂತೆ ತನ್ನೊಡನೆ ಬರಬೇಕೆಂದು ಕೋರುವನು. ಅವರೆಲ್ಲರೂ ಹಿಡಿಂಬೆಯ ಆಶ್ರಮಕ್ಕೆ ಹೋಗುವರು. ಹಿಡಿಂಬೆಯು ಮಗ

ನಿಗೆ ತಂದೆಯ ಪರಿಚಯಮಾಡಿಸಿದ ಬಳಿಕ, ಕೇಶವದಾಸನು ಆತಿಥ್ಯ ಸ್ವೀಕಾರ ಮಾಡಬೇಕೆಂದು ಆತನನ್ನು ಭೀಮಸೇನನು ಪ್ರಾರ್ಥಿಸುವನು. ಪ್ರಯಾಣ ಮಾಡಲೇಬೇಕೆಂದು ತಿಳಿಸಿದ ಕೇಶವದಾಸನನ್ನೂ ಅವನ ಕುಟುಂಬದವರನ್ನೂ ಆಶ್ರಮಪ್ರಾಂತದವರೆಗೆ ಹಿಂಬಾಲಿಸಿ ಬೀಳ್ಕೊಡಲು ಭೀಮನು ತನ್ನ ಪತ್ನೀಪುತ್ರರೊಡನೆ ಅನುವಾಗುವಲ್ಲಿಗೆ ರೂಪಕವು ಮುಗಿಯುವುದು.

## ೨. ವಿಮರ್ಶೆ

**ಸಂವಿಧಾನ ಕೌಶಲ:–** ಈ ರೂಪಕಕ್ಕೆ ಮಧ್ಯಮ ವ್ಯಾಯೋಗವೆಂದು ಹೆಸರಿಟ್ಟಿರುವುದು ಅನುಚಿತವೆಂದೂ, ಪಾಂಡವರಲ್ಲಿ ಅರ್ಜುನನೇ ಮಧ್ಯಮನಾದ ಕಾರಣ ಭೀಮನಿಗೆ ಮಧ್ಯಮನೆಂಬ ಹೆಸರೇ ಸಲ್ಲದೆಂದೂ ಡಾಕ್ಟರ್ ಎ. ಬೆರಿಡೇಲ್ ಕೀತ್‌ರವರು ಅಭಿಪ್ರಾಯ ಪಟ್ಟಿದ್ದಾರೆ. ಮಾದ್ರೀದೇವಿಯ ಮಕ್ಕಳಾದ ನಕುಲಸಹದೇವರನ್ನು ಲೆಕ್ಕಕ್ಕೆ ಸೇರಿಸದೆ ಕುಂತಿಯ ಮಕ್ಕಳಾದ ಮೂವರನ್ನೇ ಪರಿಗಣಿಸಿದಲ್ಲಿ, ಅವರಲ್ಲಿ ಎರಡನೆಯವನಾದ ಭೀಮನಿಗೆ ಮಧ್ಯಮನೆಂಬ ಹೆಸರು ಸಲ್ಲುವುದು. ಈ ದೃಷ್ಟಿಯಿಂದ ವಿಮರ್ಶಿಸಿ ನೋಡಿದರೆ ಈ ರೂಪಕಕ್ಕೆ ಮಧ್ಯಮ ವ್ಯಾಯೋಗವೆಂದು ಕವಿಯು ಹೆಸರಿಟ್ಟಿರುವುದೇನೂ ತೀರ ಅನುಚಿತವಲ್ಲವೆಂಬುದು ವ್ಯಕ್ತವಾಗುವುದು.

ಈ ರೂಪಕದಲ್ಲಿ ನಾವು ಗಮನಿಸಬೇಕಾದ ಮುಖ್ಯ ವಿಚಾರಗಳು ಮೂರು: **ಮೊದಲನೆಯದು,** ಮಧ್ಯಮ ವ್ಯಾಯೋಗವೆಂಬ ಹೆಸರೇ ಸೂಚಿಸುವಂತೆ ಇದು ಶೃಂಗಾರರಸ ದೂರವಾದ ಶೌರ್ಯಪ್ರದರ್ಶನದ ರೂಪಕ; ತಂದೆಯೆಂಬುದನ್ನರಿಯದ ಮಗನನ್ನು ಭೀಮನು ಕೆರಳಿಸಿ ಅವನ ಶೌರ್ಯಪ್ರದರ್ಶನದಿಂದ ಸಂತುಷ್ಟನಾದುದು ಇದರ ಕಥಾವಸ್ತುವಿನ ಮುಖ್ಯಭಾಗ*

---

*ಲವಕುಶರು ರಾಮನೊಡನೆ ಯುದ್ಧಮಾಡಿದುದೂ, ಬಭ್ರುವಾಹನನು ಅರ್ಜುನನೊಡನೆ ಯುದ್ಧಮಾಡಿದುದೂ ತಂದೆ ಮಕ್ಕಳಿಗೆ ಯುದ್ಧವಾದುದಕ್ಕೆ ಸಾಹಿತ್ಯದಲ್ಲಿ ನಮಗಿರುವ ಇತರ ನಿದರ್ಶನಗಳು. ಮಧ್ಯಮ ವ್ಯಾಯೋಗವನ್ನು ರಚಿಸುವುದರಲ್ಲಿ ಭಾಸನ ಮನಸ್ಸಿನಮೇಲೆ ಲವಕುಶರ ಕಾಳಗದಿಂದ ಹೆಚ್ಚು ಪರಿ

**ಎರಡನೆಯದು,** ರಾಕ್ಷಸಿಯಾದ ಹಿಡಿಂಬಾದೇವಿಯು ಘೋರರೂಪಿಣಿಯಾದ ಅಸಹ್ಯ ಸ್ವಭಾವದವಳೆಂದು ಚಿತ್ರಿಸದೆ ಕವಿಯು ತನ್ಮೂಲಕ ವ್ಯಕ್ತಗೊಳಿಸಿರುವ ಅನುಕಂಪ. ಘಟೋತ್ಕಚನೂ ಸಹ, ಶೂರನೂ ಸ್ವಲ್ಪ ದುಷ್ಟನೂ ಆದ ಕ್ಷತ್ರಿಯ ಬಾಲಕನಂತೆ ಚಿತ್ರಿತನಾಗಿರುವುದೂ ಕವಿಯ ಸಹಾನುಭೂತಿ ಸ್ವಭಾವಕ್ಕೆ ನಿದರ್ಶನ. ಘಟೋತ್ಕಚನು ಅಸಹ್ಯವಾದ ತೊಗಲನ್ನು ಸುತ್ತಿಕೊಂಡಿದ್ದನೆಂದು ಕವಿಯು ವರ್ಣಿಸಿಲ್ಲ. ಅವನು ಹಳದಿಯ ಬಣ್ಣದ ಕೌಶೇಯವನ್ನು ಧರಿಸಿದ್ದನೆಂದು ಕವಿಯು ವರ್ಣಿಸಿದ್ದಾನೆ. **ಮೂರನೆಯದು,** ಕವಿಯ ಕಲ್ಪನಾ ಸಾಮರ್ಥ್ಯ. ಭೀಮನು ಹಿಡಿಂಬನನ್ನು ಕೊಂದಮೇಲೆ ಅವನ ತಂಗಿಯೂ ತನ್ನಲ್ಲಿ ನೋಹಿತಳೂ ಆದ ಹಿಡಿಂಬೆಯನ್ನು ವಿವಾಹ ಮಾಡಿಕೊಳ್ಳುವನೆಂದು ಮಹಾಭಾರತದಲ್ಲಿ ಹೇಳಿದೆ. ಆ ಬಳಿಕ ಯುದ್ಧಕಾಲದ ವರೆಗೆ ಮತ್ತಾವಾಗಲೂ ಹಿಡಿಂಬೆಯ ಸುದ್ದಿಯೂ ಘಟೋತ್ಕಚನ ಸುದ್ದಿಯೂ ಬರುವುದಿಲ್ಲ. ರಾಮಾಯಣದ ಊರ್ಮಿಳೆಯಂತೆ ಮಹಾಭಾರತದ ಹಿಡಿಂಬೆಯೂ ಉಪೇಕ್ಷಿತಳು. ಹಿಡಿಂಬಾ ಘಟೋತ್ಕಚರೊಡನೆ ಸೇರಿ ಭೀಮಸೇನನು ಆನಂದಿಸುವ ಸನ್ನಿವೇಶವನ್ನು ಕಲ್ಪಿಸುವುದಕ್ಕಾಗಿ ಭಾಸ ಮಹಾಕವಿಯು ಬಹಳ ಚಮತ್ಕಾರದಿಂದ ಈ ರೂಪಕವನ್ನು ಬರೆದಿದ್ದಾನೆ. ಮುಖ್ಯ ಪಾತ್ರಗಳನ್ನು ಮಹಾಭಾರತದಿಂದ ತೆಗೆದುಕೊಂಡಿದ್ದರೂ, ಘಟನೆಗಳನ್ನೆಲ್ಲ ಸ್ವತಂತ್ರವಾಗಿ ಕಲ್ಪಿಸಿಕೊಂಡು ರೂಪಕರಚನೆ ಮಾಡಿರುವುದರಿಂದ ಆತನ ಸಾಮರ್ಥ್ಯವು ಬಹು ಚೆನ್ನಾಗಿ ವ್ಯಕ್ತವಾಗುತ್ತದೆ.

---

ಣಾಮವಾಗಿರಬೇಕು. ಏಕೆಂದರೆ, ಯುದ್ಧಮಾಡಿ ಕ್ಷಾತ್ರ ತೇಜಸ್ಸಿನಿಂದ ಮೆರೆಯದೆ ಮಗನೆಂದು ಹೇಳಿಕೊಂಡು ಯಜ್ಞದ ಕುದುರೆಯನ್ನೊಪ್ಪಿಸಲು ಸಿದ್ಧನಾಗಿ ತನ್ನಲ್ಲಿಗೆ ಬಂದವನೆಂದಿಗೂ ಶೂರನಾದ ತನ್ನ ಮಗನಾಗಿರಲಾರನೆಂದು ಅರ್ಜುನನು ಖತಿಗೊಂಡು ಬಭ್ರುವಾಹನನನ್ನು ಜರಿದು ಕೆರಳಿಸಿದುದರಿಂದ ಯುದ್ಧವಾಗುವ ಸನ್ನಿವೇಶಕ್ಕಿಂತಲೂ, ಮಕ್ಕಳಿಗೆ ತಂದೆಯ ಪರಿಚಯವಿಲ್ಲದೆ ಯುದ್ಧವಾಗುವ ಲವಕುಶರ ಕಾಳಗದ ಸನ್ನಿವೇಶವೇ ಹೆಚ್ಚು ಚಿತ್ತಾಕರ್ಷಕವಾಗಿದೆ. ತಂದೆ ಮಕ್ಕಳು ಪರಸ್ಪರ ಪರಿಚಯವಿಲ್ಲದೆ ಕಾಳಗವಾಡಿದ ಸನ್ನಿವೇಶಕ್ಕೆ ವಿದೇಶೀಯ ಸಾಹಿತ್ಯದಲ್ಲಿ ಕೂಡ ನಿದರ್ಶನವುಂಟು. ಸೊಹ್ರಾಬ್ ಮತ್ತು ರುಸ್ತುಂ ಎಂಬೀರ್ವರಿಗೆ ನಡೆದ ಕದನವು ಇದಕ್ಕೆ ನಿದರ್ಶನ.

ರೂಪಕಾರಂಭದಲ್ಲಿ ಕೇಶವದಾಸನ ಕುಟುಂಬದವರನ್ನು ಘಟೋತ್ಕಚನು ಪೀಡಿಸುತ್ತಿರುವುದನ್ನು ಸೂತ್ರಧಾರನು "ತರುಣರೂ ಬಳಲಿದವರೂ ಆದ ಸುತರಿಂದಲೂ ಸತಿಯಿಂದಲೂ ಕೂಡಿರುವ ಈ ವೃದ್ಧ ಬ್ರಾಹ್ಮಣನು ರಾಕ್ಷಸನಿಂದ ಹಿಂಬಾಲಿಸಲ್ಪಟ್ಟು, ಹುಲಿಯು ಹಿಂದೆ ಬರುತ್ತಿರುವ ಕಾರಣದಿಂದ ನಡುಗುತ್ತಿರುವ ಕರುಗಳಿಂದಲೂ ಹಸುವಿನಿಂದಲೂ ಕೂಡಿದ ವೃಷಭದಂತೆ ಆಕುಲತೆಯನ್ನು ಹೊಂದಿದ್ದಾನೆ." ಎಂದು ಹೇಳಿ ಬಣ್ಣಿಸಿ ಹೊರಟುಹೋಗುವನು. (ಆ ಉಪಮೆಯು ನಮ್ಮ ಮನಸ್ಸನ್ನು ಕರಗಿಸುವುದು). ಕೇಶವದಾಸನ ಕುಟುಂಬದವರು ಆ ಬಳಿಕ ಪ್ರವೇಶಿಸಿ ದೂರದಲ್ಲಿ ಬರುತ್ತಿರುವ ಘಟೋತ್ಕಚನನ್ನು ವರ್ಣಿಸುವ ವೇಳೆಗೆ ಅವನು ಸಮೀಪಕ್ಕೆ ಬಂದು "ಎಲೈ ಬ್ರಾಹ್ಮಣ! ನಿಲ್ಲು ನಿಲ್ಲು" ಎಂದು ಕೂಗುವನು. ಕೇಶವದಾಸನು ಭಯಪಡಬೇಡಿರೆಂದು ತನ್ನ ಕುಟುಂಬದವರಿಗೆ ಧೈರ್ಯ ಹೇಳಿ ಸಂತೈಸುವನು. ರಾಕ್ಷಸ ಕುಲದವನಾದರೂ ಪಾಶವ ವೃತ್ತಿಯವನಲ್ಲದ ಘಟೋತ್ಕಚನು ಅವರ ಸ್ಥಿತಿಯನ್ನು ಕಂಡು ಮನಮರುಗಿ "ಅಯ್ಯೋ ಕಷ್ಟ! ದ್ವಿಜೋತ್ತಮರು ಸರ್ವದಾ ಪೂಜ್ಯರೆಂಬುದನ್ನು ಬಲ್ಲೆ. ಇದಾದರೋ ಅಕಾರ್ಯ. ತಾಯಿಯ ಆಜ್ಞೆಯೆಂಬ ಕಾರಣದಿಂದ ಶಂಕೆಯು ಹೋಗಿರುವ ಈ ಅಕಾರ್ಯ ಮಾಡಬೇಕಾಗಿ ಬಂದಿದೆ.* ಎಂದು ತನ್ನಲ್ಲಿ ತಾನು ಹೇಳಿಕೊಳ್ಳುತ್ತಾನೆ. ಆಹಾರಾರ್ಥವಾಗಿ ಮನುಷ್ಯರನ್ನು ಸಾಗಿಸಿಕೊಂಡು ಹೋಗುವುದು "ಅಕಾರ್ಯ" ವೆಂಬುದು ಅವನ ಭಾವನೆ; ನಮ್ಮ ಕವಿಯ ಹೃದಯ ವೈಶಾಲ್ಯದಿಂದ ಅವನು ನರಭಕ್ಷಕನಾಗಿ ಚಿತ್ರಿತನಾಗಿಲ್ಲದಿರುವುದೇ ಅದಕ್ಕೆ ಕಾರಣ. ತಾಯಿಯು ಅಪ್ಪಣೆ ಮಾಡಿರುವುದರಿಂದ ಅವನ ಮನಸ್ಸಿನ ಶಂಕೆಯು ಪರಿಹಾರವಾಗಿದೆ. ಆದರೆ ತನ್ನ ಪಾರಣೆಗಾಗಿ ಆಕೆಯು ಮನುಷ್ಯರನ್ನು ಬಯಸಿರುವುದರ ನಿಜವಾದ ಆಶಯವೇನೆಂಬುದು ಬಾಲಕನಾದ ಘಟೋತ್ಕಚನಿಗೆ ತಿಳಿಯದು.

---

* "ಜಾನಾಮಿ ಸರ್ವತ್ರ ಸದಾ ಚ ನಾಮ
ದ್ವಿಜೋತ್ತಮಾಃ ಪೂಜ್ಯತಮಾಃ ಪೃಥಿವ್ಯಾಮ್ ।
ಅಕಾರ್ಯಮೇತಚ್ಚ ಮಯಾದ್ಯ ಕಾರ್ಯಂ
ಮಾತುರ್ನಿಯೋಗಾದಪನೀತಶಙ್ಕಮ್ ॥"

ವನವು ರಾಕ್ಷಸರಿಂದ ತುಂಬಿದ್ದುದಾಗಿ ಜಲಕ್ಲಿನ್ನಮುನಿಯು ಎಚ್ಚರಿಕೆ ಹೇಳಿದ್ದೂ ತಾನು ಪ್ರಮಾದವಶದಿಂದ ಅಲ್ಲಿಗೇ ಬಂದುದಕ್ಕಾಗಿ ಕೇಶವದಾಸನು ಖಿನ್ನನಾಗಿರುವನು. ಅವನ ಪತ್ನಿಯು ವಿಪತ್ತಿನ ಮುಖದಲ್ಲಿ ಅವನು ಉಪೇಕ್ಷೆಯಿಂದಿದ್ದುದೇಕೆಂದು ಕೇಳುವಳು. "ಮಂದಭಾಗ್ಯನಾದ ನಾನು ಮತ್ತೇನನ್ನು ಮಾಡಲಿ?" ಎಂದು ಅವನು ಉತ್ತರವನ್ನು ಕೊಡುವನು. ಸಹಾಯಕ್ಕಾಗಿ ಕೂಗಿಕೊಳ್ಳೋಣವೆಂದು ಅವಳು ಸಲಹೆ ಕೊಡುವಳು. ಹಿರಿಯ ಮಗನು ಜನಗಳ ಸುಳಿವೇ ಇಲ್ಲದೆ ಮೃಗಪಕ್ಷಿಗಳಿಂದಲೂ, ಮರಗಳಿಂದಲೂ ತುಂಬಿ ಅಂಧಕಾರಮಯವಾಗಿದ್ದ ಘೋರಾರಣ್ಯದಲ್ಲಿ ಸಹಾಯಕ್ಕಾಗಿ ದೊರೆಯಿಡುವುದಾರಿಗೆಂದು ಕೇಳುವನು. ಸಮೀಪದಲ್ಲಿ ಪಾಂಡವರ ಆಶ್ರಮವಿದ್ದುದಾಗಿ ತಾನು ಕೇಳಿದ್ದುದು ಕೇಶವದಾಸನಿಗೆ ತಟಕ್ಕನೆ ನೆನಪಾಗುವುದು. ಅವನು ತನ್ನ ಹೆಂಡತಿಗೆ ಆ ಸಂಗತಿಯನ್ನು ತಿಳಿಸಿ ಧೈರ್ಯ ಹೇಳಿ, ಪಾಂಡವರು ಯುದ್ಧಪ್ರಿಯರೆಂದೂ, ಶರಣಾಗತ ರಕ್ಷಕರೆಂದೂ, ದೀನ ಪಕ್ಷಪಾತಿಗಳಾಗಿ ದಯೆಯುಳ್ಳವರೆಂದೂ, ಸಾಹಸಿಗಳೆಂದೂ, ಶೂರರೆಂದೂ, (ಘಟೋತ್ಕಚನಂತಹ) ಈ ವಿಧದ ಭಯಂಕರ ಸ್ವಭಾವದ ಹಿಂಸಕರಿಗೆ ತಕ್ಕ ಶಾಸ್ತಿ ಮಾಡಲು ಸಮರ್ಥರೆಂದೂ ಬಣ್ಣಿಸುವನು * ಪಾಂಡವರನ್ನು ಕುರಿತ ಈ ವರ್ಣನೆಯು ಮನೋಹರವಾಗಿದೆ. ತಾನು ಮಾಡುತ್ತಿದ್ದುದು ಕೆಟ್ಟ ಕೆಲಸವೆಂಬುದನ್ನರಿತು ಕೊರಗುತ್ತಿದ ಘಟೋತ್ಕಚನು ತನ್ನ ನಿಂದೆಯಿದ್ದರೂ ತನ್ನವರಾದ ಪಾಂಡವರ ಹೊಗಳಿಕೆಯೂ ಇದ್ದುದರಿಂದ ಕೇಶವದಾಸನ ಮಾತುಗಳನ್ನು ಕೇಳಿ ಹರ್ಷಿಸಿರಬೇಕು. ಪಾಂಡವರು ತಮ್ಮನ್ನು ರಕ್ಷಿಸಬಹುದೆಂಬ ಆಶೆಯಿಂದ ಕೇಶವದಾಸನೂ ಅವನ ಪತ್ನಿಯೂ ಧೈರ್ಯ ತಾಳುವಷ್ಟರಲ್ಲಿ, ಪಾಂಡವರು ತಮ್ಮ ಆಶ್ರಮವನ್ನು ಬಿಟ್ಟು ಶತಕುಂಭಯಜ್ಞವನ್ನು ನೋಡಲು ಧೌಮ್ಯಮಹರ್ಷಿ

---

* "ಯುದ್ಧ ಪ್ರಿಯಾಶ್ಚ ಶರಣಾಗತ ವತ್ಸಲಾಶ್ಚ
ದೀನೇಷು ಪಕ್ಷಪತಿತಾಃ ಕೃತಸಾಹಸಾಶ್ಚ ।
ಏವಂವಿಧಪ್ರತಿಭಯಾಕೃತಿ ಚೇಷ್ಟಿತಾನಾಂ
ದಂಡಂ ಯಥಾರ್ಹಮಿಹ ಧಾರಯಿತುಂ ಸಮರ್ಥಾಃ ॥

ಗಳ ಆಶ್ರಮಕ್ಕೆ ಹೋಗಿದ್ದರಿಂದು ಅವರ ಆಶ್ರಮದಿಂದ ಬಂದ ಬ್ರಾಹ್ಮಣ ನೊಬ್ಬನು ತನ್ನೊಡನೆ ಹೇಳಿದ್ದುದಾಗಿ ಹಿರಿಯಮಗನು ತಿಳಿಸುವನು.

ಬರಸಿಡಿಲಿನಂತಿದ್ದ ಆ ಮಾತುಗಳನ್ನು ಕೇಳಿ ಹತಾಶನಾದ ವೃದ್ಧ ಕೇಶವದಾಸನು, "ಅಯ್ಯೋ, ನಾವೆಲ್ಲರೂ ಹತರಾದಂತೆಯೇ ಸರಿ" ಎನ್ನು ವನು. ಆದರೆ ಹಿರಿಯಮಗನು ಒಡನೆಯೆ, "ತಂದೆಯೆ ! ಪಾಂಡವರೆಲ್ಲರೂ ಅಲ್ಲ. ಆಶ್ರಮ ರಕ್ಷಣೆಗಾಗಿ ಭೀಮಸೇನನನ್ನು ಬಿಟ್ಟು ಹೋಗಿದ್ದಾರೆ" ಎಂದು ಹೇಳಿ ನಿರಾಶೆಯಿಂದ ಜರ್ಝರಿತವಾಗಿದ್ದ ವೃದ್ಧನ ಮನಸ್ಸಿನಲ್ಲಿ ಮತ್ತೆ ಧೈರ್ಯವು ಬೇರೂರುವಂತೆ ಮಾಡುವನು. ಹೀಗೆ ಬೇರೆ ಬೇರೆ ಭಾವ ಗಳು ಹುಟ್ಟುವಂತೆ ಮಾಡಿರುವುದರಿಂದ ಕವಿಯು ರಂಗಸ್ಥಳದಲ್ಲಿ ನಟರ ಅಭಿ ನಯಕ್ಕೆ ಅವಕಾಶವನ್ನು ಕಲ್ಪಿಸುವುದಕ್ಕೂ ಹೇಗೆ ಗಮನ ಕೊಡುತ್ತಿರುವ ನೆಂಬ ಅಂಶವು ಗೊತ್ತಾಗುವುದು. ಭೀಮಸೇನನು ಆಶ್ರಮದಲ್ಲಿರುವ ನೆಂಬುದನ್ನು ಕೇಳಿ ಹರ್ಷಿಸಿ ಕೇಶವದಾಸನು, "ಹಾಗೆ ಭೀಮಸೇನನಿದ್ದ ಪಕ್ಷ ದಲ್ಲಿ ಪಾಂಡವರೆಲ್ಲರೂ ಇದ್ದಂತೆಯೇ ಸರಿ" ಎಂದು ಹೇಳಿ ಧೈರ್ಯ ವನ್ನು ತಾಳುವನು. ಆದರೆ ಹಿರಿಯ ಮಗನು, "ಆದರೆ ಈಗ ವ್ಯಾಯಾ ಮಾರ್ಥವಾಗಿ ಅವನೂ ದೂರ ಹೊರಟು ಹೋಗಿದ್ದಾನೆಂದು ಕೇಳಿದೆ" ಎಂದು ಹೇಳುವನು. ಕೇಶವದಾಸನ ಮನಸ್ಸು ಭಯಗ್ರಸ್ತವಾಗಿ ಮತ್ತೆ ಉಡುಗಿ ಹೋಗುವುದು; ಅವನು, "ಅಯ್ಯೋ! ಇನ್ನು ನಿರಾಶೆಯಾಯಿತು" ಎಂದು ಹೇಳಿ ತಮ್ಮನ್ನು ಬಿಟ್ಟುಬಿಡುವಂತೆ ಘಟೋತ್ಕಚನನ್ನೇ ಕೇಳಿ ಕೊಳ್ಳುವನು. ಮೂವರು ಮಕ್ಕಳಲ್ಲೊಬ್ಬನು ತನ್ನ ತಾಯಿಯ ಆಹಾರ ಕ್ಕಾಗಿ ತನ್ನೊಡನೆ ಬರಬೇಕೆಂದೂ, ಉಳಿದವರನ್ನು ತಾನು ಬಿಟ್ಟುಕೊಡುವು ದಾಗಿಯೂ, ಅವನು ಹೇಳುವನು. ಕೇಶವದಾಸನು ಕೊಂಚ ರೇಗಿ ಸದ್ಗತಿಗೆ ಸಾಧಕನಾದ ಮಗನನ್ನು ಬಿಟ್ಟುಕೊಡುವ ಬಗೆ ಹೇಗೆಂದು ಕೇಳುವನು. ಒಬ್ಬ ಮಗನನ್ನು ಕಳುಹದೆ ಹೋದಲ್ಲಿ ಒಟ್ಟು ಕುಟುಂಬವನ್ನೇ ಧ್ವಂಸ ಮಾಡುವುದಾಗಿ ಘಟೋತ್ಕಚನು ಬೆದರಿಸುವನು. ಆಗ ಕೇಶವದಾಸನು ತನ್ನ ಶರೀರವನ್ನೇ ಒಪ್ಪಿಸುವುದಾಗಿ ಹೇಳುವನು. ಅವನ ಪತ್ನಿಯು ಪತಿ ವ್ರತಾ ಧರ್ಮವನ್ನನುಸರಿಸಿ ತಾನು ಘಟೋತ್ಕಚನ ಹಿಂದೆ ಹೋಗಿ ಕುಲ ವನ್ನು ರಕ್ಷಿಸುವುದಾಗಿ ಹೇಳುವಳು. ಸ್ತ್ರೀಯನ್ನು ಕರೆದುಕೊಂಡು ಹೋಗು

ವುದು ತನ್ನ ತಾಯಿಗೆ ಇಷ್ಟವಿಲ್ಲವೆಂದು ಘಟೋತ್ಕಚನು ಉತ್ತರ ಹೇಳು ವನು. ತಾನು ಬರುವುದಾಗಿ ಕೇಶವದಾಸನು ಮತ್ತೊಮ್ಮೆ ಸೂಚಿಸುವನು. ಘಟೋತ್ಕಚನು ಮುದುಕನಾದ ಆತನು ತನಗೆ ಬೇಡವೆನ್ನುವನು.

ಆ ಬಳಿಕ ಮೂವರು ಮಕ್ಕಳೂ ಘಟೋತ್ಕಚನೊಡನೆ ಹೋಗಲು ನಾನು ತಾನೆಂದು ಹೋರಾಡುವುದು ಮನಸ್ಸನ್ನು ಮರುಗಿಸುವಂತಿದೆ. ಕುಲವನ್ನುಳಿಸುವ ನಿಮಿತ್ತವಾಗಿ ರಾಕ್ಷಸನೊಡನೆ ತಾನು ಹೋಗುವು ದಾಗಿ ಹಿರಿಯಮಗನು ತಿಳಿಸುವನು. ಎರಡನೆಯ ಮಗನು-ಮಧ್ಯಮನು- "ಆರ್ಯ, ಕೂಡದು, ಕುಟುಂಬದಲ್ಲಿ ಜ್ಯೇಷ್ಠನು ಶ್ರೇಷ್ಠನು. ಜ್ಯೇಷ್ಠನು ಪಿತೃಗಳಿಗೆ ಪ್ರಿಯನು, ಆದಕಾರಣ ನಾನು ಹೋಗುವೆನು" ಎನ್ನುವನು. ಕೊನೆಯವನು, "ಆರ್ಯರೆ, ಕೂಡದು. ಜ್ಯೇಷ್ಠಭ್ರಾತೃವು ಪಿತೃಸಮಾನ ನೆಂದು ಬ್ರಹ್ಮವಾದಿಗಳು ಹೇಳುತ್ತಾರೆ. ಆದಕಾರಣ, ನಿಮ್ಮೆಲ್ಲರ ಪ್ರಾಣ ರಕ್ಷಣೆ ಮಾಡಲು ನಾನೇ ತಕ್ಕವನು" ಎಂದು ವಾದಿಸುವನು. ಆಗ ಹಿರಿಯನು, "ವತ್ಸ, ಹಾಗಲ್ಲ. ತಂದೆಗೆ ವಿಪತ್ತುಬಂದಾಗ ಜ್ಯೇಷ್ಠಪುತ್ರನೇ ಅದನ್ನು ತಪ್ಪಿಸಬೇಕು. ಆದಕಾರಣ, ಮಾತಾಪಿತೃಗಳ ಪ್ರಾಣರಕ್ಷಣೆ ಗಾಗಿ ನಾನು ಹೋಗುವೆನು" ಎಂದು ಉತ್ತರಕೊಡುವನು. ಆಗ ಕೇಶವದಾಸನು, "ಅತ್ಯಂತ ಪ್ರಿಯನಾಗಿರುವ ಜ್ಯೇಷ್ಠನನ್ನು ಬಿಡಲಾರೆ" ಎನ್ನುವನು. ಅವನ ಪತ್ನಿಯು, "ಆರ್ಯನು ಜ್ಯೇಷ್ಠನನ್ನು ಇಚ್ಛಿಸು ವಂತೆಯೇ ನಾನು ಕನಿಷ್ಠನನ್ನು ಇಚ್ಛಿಸುವೆನು" ಎಂದು ಹೇಳುವಳು. ಎರಡನೆಯ ಮಗನು ವ್ಯಥೆಪಟ್ಟು, "ತಾಯಿತಂದೆಗಳಿಗೆ ಬೇಡದವನಾದ ನಾನು ಮತ್ತಾರಿಗೆ ಪ್ರಿಯನು" ಎನ್ನುವನು. ಘಟೋತ್ಕಚನು, "ನಾನು ಪ್ರೀತನಾಗಿದ್ದೇನೆ. ಶೀಘ್ರವಾಗಿ ಬಾ ಮತ್ತೆ" ಎಂದು ತಟಕ್ಕನೆ ಉತ್ತರ ಹೇಳುವನು. ಆ ಮಾತುಗಳನ್ನು ಕೇಳಿ ಆ ಸನ್ನಿವೇಶದಲ್ಲಿ ಕೂಡ ನಮಗೆ ನಗು ಬರುವುದು. ಅವನು ಪ್ರೀತನಾಗಿರುವುದರ ಪರಿಣಾಮವು ವಧೆಗಾಗಿ ಕರೆದೊಯ್ಯುವುದೇ !

ಈ ಸಂದರ್ಭದಲ್ಲಿ ನಮಗೆ ಶುನಶ್ಶೇಫನ ಕಥೆಯು ನೆನಪಿಗೆ ಬರು ವುದು. ತಂದೆಯು ಹಿರಿಯಮಗನನ್ನೂ ತಾಯಿಯು ಕಿರಿಯ ಮಗ

ನನ್ನೂ ಉಳಿಸಿಕೊಂಡು ನರಮೇಧಯಜ್ಞದ ಪಶುವಾಗಲು ಎರಡನೆಯ ಮಗನಾದ ಶುನಶ್ಶೇಫನನ್ನು ಬಿಟ್ಟುಕೊಟ್ಟಂತೆಯೇ ಈ ಸಂದರ್ಭದಲ್ಲಿ ಸಹ ನಡೆಯುವುದು. ತಾಯಿತಂದೆಗಳು ನಿರ್ದಾಕ್ಷಿಣ್ಯವಾಗಿ ಎರಡನೆಯ ಮಗನನ್ನು ರಾಕ್ಷಸಿಯ ಆಹಾರಕ್ಕಾಗಿ ಬಿಟ್ಟುಕೊಡುವಂತೆ- ಶುನಶ್ಶೇಫನ ಕಥೆಯಲ್ಲಿರುವಂತೆ- ಚಿತ್ರಿತವಾಗಿರುವುದು ಹಿತವಾಗಿಲ್ಲ. ಕಲಾವಿದನಾದ ಭಾಸಕವಿಯು ಇಲ್ಲಿ ಕೊಂಚ ಮುಗ್ಗರಿಸಿ ತೇಪೆತೇಪೆಯಾಗಿ ಕಾಣುವ ಈ ಕಥಾಭಾಗವನ್ನು ಕಲ್ಪಿಸಿಕೊಂಡನೋ ಅಥವಾ ರಾಕ್ಷಸರು ಮಾತ್ರವೇ ಕ್ರೂರಕರ್ಮಿಗಳಲ್ಲವೆಂಬ ಭಾವನೆಯು ಹೃದಯಂಗಮವಾಗಿ ಗೋಚರಿಸುವಂತೆ ಮಾಡುವುದಕ್ಕಾಗಿ ವಿಡಂಬನರೂಪವಾಗಿ ಉದ್ದೇಶಪೂರ್ವಕವಾಗಿ ಹೀಗೆ ಚಿತ್ರಿಸಿದನೋ ಎಂದು ಸಂದೇಹವಾಗುತ್ತದೆ. ಆದರೆ, ತಾಯಿಯು ಕೂಡ ಸಾವಿಗಾಗಿ ತಾನೇ ಬಿಟ್ಟುಕೊಟ್ಟಿರುವ ಮಗನನ್ನು-ಅವನು ತನಗೆ ನಮಸ್ಕರಿಸಿದಾಗ- ಚಿರಂಜೀವಿಯಾಗಿರೆಂದು ಆಶೀರ್ವದಿಸುವ ಹಾಸ್ಯಾಸ್ಪದವಾದ ಮುಂದಿನ ಸನ್ನಿವೇಶವನ್ನು ತೂಗಿನೋಡಿದರೆ ಇದು ವಿಡಂಬನಾತ್ಮಕವಾದ ಚಿತ್ರವೇ ಆಗಿರಬೇಕೆಂದು ತೋರುವುದು ; ಅಲ್ಲದೆ ಮಧ್ಯಮನನ್ನು ತಾಯಿತಂದೆಗಳು ಬಿಟ್ಟು ಕೊಡುವಂತೆ ಸನ್ನಿವೇಶವನ್ನು ತಂದಲ್ಲದೆ ಮುಂದಿನ ಕಥೆಯ ಬಳೆವಣಿಗೆಗೆ ಅವಕಾಶವಿಲ್ಲವೆಂದೂ ಕವಿಯು ಆ ರೀತಿ ಮಾಡಿರಬೇಕು.

ಅಂತು, ತಾಯಿತಂದೆಗಳು ತನ್ನನ್ನು ಬಿಟ್ಟುಕೊಟ್ಟುದಕ್ಕಾಗಿ ಕ್ಷಣಕಾಲ ಮಧ್ಯಮನು ವ್ಯಥೆಪಡುವನು. ಆದರೂ ಆ ಕೂಡಲೆ, ತನ್ನ ಪ್ರಾಣಗಳನ್ನು ಕೊಟ್ಟು ತಾಯಿತಂದೆಗಳ ಮತ್ತು ಸಹೋದರರ ಪ್ರಾಣಗಳನ್ನುಳಿಸುವ ಅವಕಾಶವು ದೊರೆತುದರಿಂದ ತಾನೇ ಧನ್ಯನೆಂದು ಹೇಳುವನು. ಬಂಧುಸ್ನೇಹದ ದೆಸೆಯಿಂದ, ದುರ್ಲಭವಾದ ಕಾಲಸ್ನೇಹವು ದೊರೆಯುವಂತಾಯಿತೆಂದು ಹರ್ಷಿಸುವನು. ತನ್ನ ಕುಟುಂಬದವರ ರಕ್ಷಣೆಯ ಉದ್ದೇಶದಿಂದ, ನಿರ್ಭೀತನಾಗಿ ಸಾವಿಗೂ ಸಿದ್ಧವಾಗಿರುವ ಮತ್ತು ಆ ಸಾವು ದೊರೆತುದರಿಂದ ತಾನು ಧನ್ಯನೆಂದುಕೊಳ್ಳುತ್ತಿರುವ ಮಧ್ಯಮನ ತ್ಯಾಗಬುದ್ಧಿಯನ್ನು ಕಂಡು ಆಶ್ಚರ್ಯಚಕಿತನಾದ ಘಟೋ

ತ್ಕಚನು, "ಅಬ್ಬ! ಈ ಬ್ರಾಹ್ಮಣ ವಟುವಿನ ಸ್ವಜನವಾತ್ಸಲ್ಯವೆಂತಹದು!" ಎನ್ನುವನು. ಅವನ ಮನಸ್ಸಿಗೆ ಒಳ್ಳೆಯ ಸಂಸ್ಕಾರವಾಗಿದೆಯೆಂಬುದು ಇದರಿಂದ ವ್ಯಕ್ತವಾಗುತ್ತದೆ.

ಆ ಬಳಿಕ ಮಧ್ಯಮನು ತಾಯಿತಂದೆಗಳನ್ನೂ ಸಹೋದರರನ್ನೂ ಬೀಳ್ಕೊಂಡು ಘಟೋತ್ಕಚನೊಡನೆ ಹೋಗುವ ಸನ್ನಿವೇಶ. ಅದನ್ನು ನೋಡಿದರೆ, ಕವಿಯು ವಿವೇಚನೆಯಿಲ್ಲದೆ ಶುನಶ್ಶೇಫನ ಕಥೆಯನ್ನು ಅನುಕರಿಸಿ ಮುಗ್ಗರಿಸಿದನೆನ್ನುವುದಕ್ಕಿಂತ, ಪುರಾಣದ ಕಥೆಗಳಲ್ಲಿ ರಾಕ್ಷಸರಿಗೆ ಅನ್ಯಾಯವಾಗಿರುವುದನ್ನು ಮನಸ್ಸಿನಲ್ಲಿಟ್ಟುಕೊಂಡು ವಿಡಂಬನ ಚಿತ್ರವನ್ನು ಕೊಟ್ಟಿದ್ದಾನೆಂದು ಹೇಳುವುದಕ್ಕೇ ಹೆಚ್ಚುಕಾರಣವಿರುವಂತೆ ತೋರುವುದೆನ್ನಬಹುದಾಗಿದೆ. ತನಗೆ ನಮಸ್ಕಾರ ಮಾಡಿದ ಪುತ್ರನನ್ನು ಕುರಿತು ಕೇಶವದಾಸನು, "ಬಾ ಬಾ ಮಗುವೆ! ಸ್ವಂತ ಪ್ರಾಣಗಳಿಂದ ತಂದೆತಾಯಿಗಳ ಪ್ರಾಣಗಳನ್ನುಳಿಸಿ ದುಸ್ಸಾಧ್ಯವನ್ನೆಸಗಿರುವ ಗುರುವತ್ಸಲನಾದ ನೀನು ಬ್ರಹ್ಮಲೋಕವನ್ನು ಹೊಂದು" ಎನ್ನುವನು. ಆ ಬಳಿಕ ಬಾಲಕನು, "ಅನುಗೃಹೀತನಾದೆನು. ಅಮ್ಮ! ನಮಸ್ಕರಿಸುವೆನು" ಎನ್ನುವನು. ನಮಸ್ಕರಿಸಿದ ತನ್ನ ಮಗನಿಗೆ ಬ್ರಾಹ್ಮಣಿಯು, "ಜಾತ! ಚಿರಂಜೀವಿಯಾಗು" ಎಂದು ಆಶೀರ್ವಾದ ಮಾಡುವಳು. ಆ ಬ್ರಾಹ್ಮಣ ವಟುವು ತನ್ನ ಅಣ್ಣನಿಗೆ ನಮಸ್ಕಾರಮಾಡಿ, "ಬಾ, ಬಾ, ವತ್ಸ! ಸದ್ಗುಣಗಳಿಂದ ಕೂಡಿರುವ ನೀನು ನನ್ನನ್ನು ಗಾಢಾಲಿಂಗನಮಾಡು. ನಿನ್ನ ಕೀರ್ತಿಯು ಭೂಲೋಕವನ್ನೇ ಆವರಿಸುವುದಾಗಿದೆ" ಎಂಬ ಆಶೀರ್ವಚನವನ್ನು ಪಡೆಯುವನು. ಅನಂತರ ಅವನು, "ಅನುಗೃಹೀತನಾದೆನು" ಎಂದು ಹೇಳಿ, ತನಗೆ ನಮಸ್ಕಾರ ಮಾಡಿದ ತನ್ನ ತಮ್ಮನಿಗೆ "ಸ್ವಸ್ತಿ" ಎಂದು ಆಶೀರ್ವಾದಮಾಡುವನು. ಒಂದೇ ಒಂದು ಮಾತಿನಲ್ಲಿ ಆಶೀರ್ವಾದವನ್ನು ಮುಗಿಸಿರುವ ಅವನ ವರ್ತನೆಯ ಔಚಿತ್ಯವು ಮನೋಹರವಾಗಿದೆ.

ಕೊನೆಗೆ ಮಧ್ಯಮನು (ಎಂದರೆ ಮೂವರು ಮಕ್ಕಳಲ್ಲಿ ಮಧ್ಯದವನು) ಘಟೋತ್ಕಚನ ಹಿಂದೆ ಹೊರಡಲು ಸಿದ್ಧವಾಗುವನು. ಅವನ

ತಾಯಿತಂದೆಗಳೂ, ಸಹೋದರರೂ ಸಂಕಟಪಡುವರು. ಇದನ್ನು ನೋಡಿದರೆ, ಕವಿಯು ಒಂದು ವೇಳೆ (ಮೇಲೆ ಸೂಚಿಸಿದಂತೆ) ವಿಡಂಬನ ಚಿತ್ರವನ್ನು ಕೊಟ್ಟಿದ್ದರೂ ಆತನೇನೂ ಕಟುಹಾಸ್ಯಪ್ರಿಯನಾದ ಕಠಿನ ಹೃದಯನಲ್ಲವೆಂಬ ಅಂಶವು ಸ್ಪಷ್ಟವಾಗುತ್ತದೆ. ಮಧ್ಯಮನು ಘಟೋತ್ಕಚನನ್ನು ಕುರಿತು ಒಂದು ಪ್ರಾರ್ಥನೆ ಮಾಡಿಕೊಳ್ಳುವನು. ಸಮೀಪದಲ್ಲಿರುವ ಜಲಾಶಯಕ್ಕೆ ಹೋಗಿ ಪರಲೋಕದಲ್ಲಿ ಪಿಪಾಸೆಯಾಗದಂತೆ ಕರ್ಮಾಚರಣೆಮಾಡಿಕೊಂಡು ಬರುವುದಾಗಿ ಕೇಳಿಕೊಳ್ಳುವನು. ಅವನು ಶೀಘ್ರವಾಗಿ ಬರಬೇಕೆಂದೂ, ಮಾತೆಯ ಆಹಾರಕಾಲವು ಮೀರುತ್ತಿದೆಯೆಂದೂ, ಕಟ್ಟುಮಾಡಿ, ಘಟೋತ್ಕಚನು ಅವನನ್ನು ಕಳುಹಿಸಿಕೊಡುವನು. ಮಧ್ಯಮನು ಬರುವುದು ತಡವಾದುದನ್ನು ಕಂಡು, ಘಟೋತ್ಕಚನು (ಹುಡುಗನ ಹೆಸರು ತನಗೆ ಗೊತ್ತಿಲ್ಲವಾದುದರಿಂದ) "ನಿನ್ನ ಮಗನನ್ನು ಕೂಗಿ ಕರೆ" ಎಂಬುದಾಗಿ ವೃದ್ಧನನ್ನು ಕೇಳುವನು. ಅದಕ್ಕೆ ವೃದ್ಧನು, "ನಿನ್ನ ಮಾತು ರಾಕ್ಷಸ ಸ್ವಭಾವಕ್ಕೂ ಮೀರಿದಷ್ಟು ಕಾಠಿನ್ಯವುಳ್ಳದು" ಎಂದು ಜರಿಯುವನು. ಕೊನೆಗೆ ಕೇಶವದಾಸನ ಹಿರಿಯಮಗನಿಂದ ಅವನ ತಮ್ಮನ ಹೆಸರು ಮಧ್ಯಮನೆಂಬುದನ್ನು ತಿಳಿದುಕೊಂಡು, ಘಟೋತ್ಕಚನೇ "ಎಲೈ ಮಧ್ಯಮ! ಮಧ್ಯಮ! ಬೇಗ ಬಾ" ಎಂದು ಗಟ್ಟಿಯಾಗಿ ಕೂಗುವನು. ಅಲ್ಲಿಗೆ ಸಮೀಪದಲ್ಲಿ ವ್ಯಾಯಾಮೋದ್ಯುಕ್ತನಾಗಿದ್ದ ಭೀಮಸೇನನು ಕೂಗನ್ನು ಕೇಳಿ, ತನ್ನನ್ನು ಯಾವನೋ ಕೂಗಿದನೆಂದುಭಾವಿಸಿ ಘಟೋತ್ಕಚನ ಬಳಿಗೆ ಬರುವನು. ಭೀಮನು ತನ್ನ ತಂದೆಯೆಂಬುದು ಘಟೋತ್ಕಚನಿಗೆ ತಿಳಿಯದು. ಭೀಮನು ತನ್ನ ಹೆಸರೂ ಮಧ್ಯಮನೆಂದು ಹೇಳಿಕೊಳ್ಳುವನು. ಆ ವೇಳೆಗೆ ಮಧ್ಯಮನೂ ಜಲಾಶಯದಿಂದ ಹಿಂತಿರುಗಿ ಅಲ್ಲಿಗೆ ಬರುವನು.

ಕೇಶವದಾಸನು ತನ್ನನ್ನು ರಕ್ಷಿಸಬೇಕೆಂದು ಭೀಮನನ್ನು ಬೇಡಿಕೊಂಡು, ತನ್ನ ಮಗ ಮಧ್ಯಮನಿಗೆ ಒದಗಿರುವ ಅವಸ್ಥೆಯನ್ನು ಸಾಂಗೋಪಾಂಗವಾಗಿ ಹೇಳಿಕೊಳ್ಳುವನು. ಕೇಶವದಾಸನಿಂದ ಅವನ ವೃತ್ತಾಂತವನ್ನು ಹೇಳಿಸುವುದರಲ್ಲಿ ಕೂಡ ಕವಿಯು ಚಮತ್ಕಾರವನ್ನು ತೋರಿ

ಸಿರುವನು : ಹಿಂದೆ ಯುಧಿಷ್ಠಿರನು ಆಳುತ್ತಿದ್ದ ಕುರುಜಾಂಗಲದ ಯೂಪ ಗ್ರಾಮದವನು ತಾನೆಂದು ಕೇಶವದಾಸನು ತನ್ನ ವೃತ್ತಾಂತವನ್ನು ಪ್ರಾರಂಭಿಸುವನು. ಈ ಮಾತುಗಳಿಂದ ಭೀಮನ ಮನಸ್ಸಿನಲ್ಲಿ ಒಮ್ಮೆ ಯುಧಿಷ್ಠಿರನ ಪ್ರಜಾವರ್ಗಕ್ಕೆ ಸೇರಿದ್ದ ಕೇಶವದಾಸನ ಮೇಲೆ ಕರುಣೆ ಹುಟ್ಟುವುದು ಸಹಜವಾಗಿಯೇ ಇದೆ. ಭೀಮನು ಘಟೋತ್ಕಚನೊಡನೆ, "ಪುತ್ರನಕ್ಷತ್ರಕೀರ್ಣನಾಗಿಯೂ, ಪತ್ನೀಕಾಂತಪ್ರಭನಾಗಿಯೂ ಇರುವ ವೃದ್ಧನಾದ ವಿಪ್ರಚಂದ್ರಮನಿಗೆ ನೀನು ರಾಹುವಿನಂತೆ ಒದಗಿದೆ." ಎಂದು ಹೇಳುವನು. * ಇಲ್ಲಿಯ ಅಲಂಕಾರವು ರಮ್ಯವಾಗಿದೆ. ಘಟೋತ್ಕಚನು ಗಟ್ಟಿಮುಟ್ಟಾಗಿರುವ ಬಾಲಕನ ಸ್ವಭಾವಜನ್ಯವಾದ ಚಪಲತೆಯೊಡನೆ, "ಹೌದು, ನಾನು ರಾಹುವೇ" ಎನ್ನುವುದನ್ನು ನೋಡಿ ನಮಗೆ ವ್ಯಸನಕರವಾದ ಆ ಸನ್ನಿವೇಶದಲ್ಲಿಯೂ ನಗುಬರುವುದು. ಹುಡುಗನನ್ನು ಬಿಟ್ಟುಬಿಡೆಂದು ಎಷ್ಟು ಸಾರಿ ಭೀಮನು ಹೇಳಿದರೂ ಘಟೋತ್ಕಚನು ಕಿವಿಗೊಂಡನು. ಅಲ್ಲದೆ, "ತಾಯಿಯ ಆಜ್ಞೆಯಂತೆ ಇವನನ್ನು ಕರೆದುಕೊಂಡು ಹೋಗುತ್ತಿದ್ದೇನೆ. ನಮ್ಮ ತಂದೆಯೇ ಬಂದು ಇವನನ್ನು ಬಿಡಬೇಕೆಂದರೂ ನಾನು ಬೇರೆ ಇವನನ್ನು ಬಿಡುವವನಲ್ಲ" ಎಂದು ಹೇಳುವನು. ಭೀಮಸೇನನು ಅವನ ತಾಯಿಯ ಹೆಸರನ್ನು ತಿಳಿಸುವಂತೆ ಕೇಳುವನು. ಅವಳ ಹೆಸರು ಹಿಡಿಂಬೆಯೆಂಬುದನ್ನು ಕೇಳಿ, ಘಟೋತ್ಕಚನು ತನ್ನ ಮಗನೆಂದು ತಿಳಿದು ಸಂತೋಷಿಸುವನು. ತನ್ನ ನಿಜತ್ವವನ್ನು ತಿಳಿಸದೆ ಕ್ಷತ್ರಿಯನಾದ ತಾನು ಮಧ್ಯಮನಿಗೆ ಬದಲಾಗಿ ಹೋಗುವುದಾಗಿ ಭೀಮಸೇನನು ಹೇಳುವನು. ಮಧ್ಯಮನೂ ಮೊದಲು ಅದಕ್ಕೊಪ್ಪುವುದಿಲ್ಲ. ಬಳಿಕ ಸುಮ್ಮನಾಗುವನು; ಭೀಮಸೇನನ ಭುಜಬಲವನ್ನು ನೋಡಿ ಅವನು ಸುಮ್ಮನಾಗಿರಬೇಕು.

ಭೀಮಸೇನನು ವಿನೋದಾರ್ಥವಾಗಿ ಅವನನ್ನು (ಘಟೋತ್ಕಚನನ್ನು) ರೇಗಿಸುವನು. ಇಲ್ಲಿಯೂ ಕವಿಯು ತನ್ನ ಸಾಮರ್ಥ್ಯವನ್ನು

---

* ಪುತ್ರ ನಕ್ಷತ್ರ ಕೀರ್ಣಸ್ಯ ಪತ್ನೀಕಾಂತ ಪ್ರಭಸ್ಯ ಚ ।
ವೃದ್ಧಸ್ಯ ವಿಪ್ರಚಂದ್ರಸ್ಯ ಭವಾನ್ ರಾಹುರಿವಾಗತಃ ॥

ಬಹು ಚೆನ್ನಾಗಿ ತೋರ್ಪಡಿಸಿದ್ದಾನೆ. ಭೀಮಸೇನನು ತನ್ನನ್ನು ಘಟೋತ್ಕಚನು ಬಲಾತ್ಕಾರದಿಂದ ಬೇಕಾದರೆ ಕರೆದುಕೊಂಡು ಹೋಗಬಹುದೆಂದು ಹೇಳುವನು. ಘಟೋತ್ಕಚನು ದರ್ಪದಿಂದ "ನೀನು ನನ್ನನ್ನು ಯಾರೆಂದು ತಿಳಿದಿರುವೆ?" ಎಂದು ಕೇಳುವನು. ಭೀಮನು ಉಕ್ಕಿಬರುವ ಪ್ರೀತಿಯನ್ನು ತಡೆಯಲಾರದೆ, "ನನ್ನ ಮಗನೆಂದು ತಿಳಿದಿರುವೆನು" ಎಂದು ಬಾಯಿತಪ್ಪಿ ನುಡಿಯುವನು. ಯಾವನೋ ಈ ಮಧ್ಯಮನೆಂಬ ಮನುಷ್ಯನು ತನ್ನನ್ನು ಮಗನೆಂದು ಕರೆದನೆಂದು ಘಟೋತ್ಕಚನು ಕೋಪಿಸಿಕೊಂಡು, "ಏನು, ಏನು, ನಾನು ನಿನ್ನ ಮಗನೆ?" ಎಂದು ಗರ್ಜಿಸುವನು. ಭೀಮನು, "ಕೋಪಬಂದಿದೆ. ಕ್ಷಮಿಸು, ಕ್ಷಮಿಸು, ಪ್ರಜೆಗಳನ್ನೆಲ್ಲ ಕ್ಷತ್ರಿಯರು ಪುತ್ರಶಬ್ದದಿಂದಲೇ ಸಂಬೋಧಿಸುತ್ತಾರೆ" ಎನ್ನುವನು. ಘಟೋತ್ಕಚನು, "ಭಯಗ್ರಸ್ತರ ಆಯುಧವನ್ನು ಹಿಡಿದೆ" ಎಂದು ಹೇಳಿ- ಪುತ್ರವಾತ್ಸಲ್ಯದ ಸುದ್ದಿಯನ್ನೆತ್ತಿ ಅಪಾಯದಿಂದ ಭೀಮನು ಪಾರಾಗಲಿಚ್ಛಿಸಿದನೆಂದು ಸೂಚಿಸಿ–ಜರಿಯುವನು. ಭೀಮಸೇನನು ಅದಕ್ಕೆ "ಭಯವೆಂದರೇನೆಂಬುದನ್ನು ಸತ್ಯವಾಗಿಯೂ ನಾನರಿಯೆ. ನಿನ್ನಿಂದ ಅದನ್ನು ತಿಳಿಯಲಿಚ್ಛಿಸುವೆನು. ಮಂಗಳಕರನೆ! ಅದರ ರೂಪವು ಹೇಗಿರುವುದು? ಅದರ ಗುಣಾವಗುಣಗಳನ್ನು ತಿಳಿದುಕೊಂಡು ಆ ಬಳಿಕ ತದನುಸಾರವಾಗಿ ವರ್ತಿಸುತ್ತೇನೆ" ಎನ್ನುವನು. ಘಟೋತ್ಕಚನು ಕೆರಳಿ ಭಯವನ್ನು ಅನುಭವಮಾಡಿಸಿ ತೋರಿಸಿಕೊಡುತ್ತೇನೆ. ಆಯುಧವನ್ನು ತೆಗೆದುಕೊ" ಎನ್ನುವನು. ಭೀಮನು, "ಆಯುಧವೆಂದೆಯಾ? ಇದೋ ಧರಿಸಿದೆ" ಎಂದು ಹೇಳುವನು. ಘಟೋತ್ಕಚನು ವಿಸ್ಮಿತನಾಗಿ, "ಎಲ್ಲಿ" ಎಂದುದಕ್ಕೆ ಭೀಮಸೇನನು "ಶತ್ರುನಿಗ್ರಹದ ಆಸಕ್ತಿಯಿಂದ ಕೂಡಿ ಚಿನ್ನದ ಕಂಬದಂತಿರುವ ಈ ಬಲ ತೋಳೇ ನನಗೆ ತಕ್ಕ ಆಯುಧ" ವೆಂದು ಹೇಳುವನು. ಆಗ ಘಟೋತ್ಕಚನು ಅವನನ್ನು ಹಾಸ್ಯಮಾಡುವ ಉದ್ದೇಶದಿಂದ, "ಇದು ನನ್ನ ತಂದೆಯಾದ ಭೀಮಸೇನನಿಗೆ ಒಪ್ಪತಕ್ಕ ಮಾತು" ಎಂದು ಸೂಚಿಸುವನು. ಆಗ ಭೀಮಸೇನನು "ಯಾವನು, ಆ ಭೀಮನೆಂಬವನು? ವಿಶ್ವಕರ್ತನಾದ ಪರಮೇಶ್ವರ, ಕೃಷ್ಣ, ಇಂದ್ರ, ಶಕ್ತಿಧರನಾದ ಯಮ, ಈ ನಾಲ್ವರಲ್ಲಿ

ಯಾರನ್ನು ಅವನು ಹೋಲುವನು, ಹೇಳು." ಎನ್ನುವನು. ತಮ್ಮ ತಂದೆಯು ಅವರೆಲ್ಲರಿಗೂ ಸಮಾನನೆಂದು ಘಟೋತ್ಕಚನು ನುಡಿಯು ವನು. ಭೀಮನು ಅದು ಸುಳ್ಳುಮಾತೆಂದು ಜರಿಯುವನು. ತಾನು ಎಂದೂ ನೋಡಿಲ್ಲದ ತಂದೆಯ ಪಕ್ಷವನ್ನು ವಹಿಸಿಕೊಂಡು, ಘಟೋತ್ಕ ಚನು ರೇಗಿ, "ನಮ್ಮ ತಂದೆಯನ್ನು ಬಯ್ಯುತ್ತೀಯಾ?" ಎಂದು ಹೊಡೆದಾಟಕ್ಕೆ ನಿಲ್ಲುವನು.

ಅವನು ಮರದಿಂದ ಹೊಡೆದುದೂ ಭೀಮನಿಗೆ ಸೊಳ್ಳೆಯ ಕಡಿತ. ಕೊನೆಗೆ ನಿರ್ವಾಹ ತೋರದೆ ಘಟೋತ್ಕಚನು ಗಿರಿಕೂಟವನ್ನೆತ್ತಿ ನಿಂತು "ಈ ಶೈಲಕೂಟದಿಂದ ಅಪ್ಪಳಿಸುತ್ತೇನೆ. ನಿನ್ನ ಪ್ರಾಣವನ್ನು ತೆಗೆದು ಅದು ಮುಂದೆ ಸಾಗುತ್ತದೆ" ಎಂದು ಹೇಳುವನು. ಭೀಮಸೇನನು "ಕಾಡಾನೆಯು ಕೋಪಿಸಿಕೊಂಡರೂ ಕಾಡುಹುಲಿಯನ್ನು ಹಿಂಸಿಸಲಾ ರದು" ಎಂದು ಉತ್ತರ ಹೇಳುವನು. ಘಟೋತ್ಕಚನು ತನ್ನ ಪ್ರಯ ತ್ನವು ವಿಫಲವಾಗುದನ್ನು ಕಂಡು, ರೋಷೋನ್ಮತ್ತನಾಗಿ ಮಲ್ಲಯುದ್ಧ ವನ್ನಾರಂಭಿಸಿ ತನ್ನ ಬಾಹುಪಾಶಗಳಿಂದ ಅವನನ್ನು ಬಂಧಿಸುವನು. ಅವನ ಬಲಪರಾಕ್ರಮಗಳನ್ನು ಕಂಡು ಭೀಮಸೇನನು ಸಂತೋಷಿಸಿ ತನ್ನ ಮನಸ್ಸಿನಲ್ಲಿ, "ಸುಯೋಧನ! ಶತ್ರುಪಕ್ಷವು ವರ್ಧಿಸುತ್ತಿರುವುದು. ನಿನ್ನನ್ನು ರಕ್ಷಿಸಿಕೊ" ಎಂದು ಹೇಳಿಕೊಳ್ಳುವನು. ಭಾಸನು ಭೀಮನ ಹೃದಯಗತಿಯನ್ನೇ ಹಿಡಿದು ರೂಪಿಸಿ ಹೀಗೆ ಹೇಳಿಸಿದಂತಿದೆ; ಅವನ ಪ್ರತಿಭೆಯು ಇದರಿಂದ ವ್ಯಕ್ತವಾಗುತ್ತದೆ. ಭೀಮನು ಬಾಹುಯುದ್ಧಕ್ಕೂ ಸಗ್ಗನು.

ಬಳಿಕ, ಘಟೋತ್ಕಚನು ಮಾತೃಲಬ್ಧವಾದ ಮಾಯಾಪಾಶದಿಂದ ಅವನನ್ನು ಬಂಧಿಸುವನು. ಇದೇ ಘಟೋತ್ಕಚನ ಕಡೆಯ ಸಾಧನ. ಭೀಮಸೇನನು ಮಹೇಶ್ವರ ಲಬ್ಧವಾಗಿದ್ದ ಮಾಯಾಪಾಶ ಮೋಕ್ಷ ಮಂತ್ರದ ಪ್ರಭಾವದಿಂದ ಪಾಶದ ಹಿಡಿತಕ್ಕೆ ಸಿಕ್ಕದೆ ತಪ್ಪಿಸಿಕೊಳ್ಳುವನು. ಕೊನೆಗೆ ನಿರ್ವಾಹವಿಲ್ಲದೆ ಘಟೋತ್ಕಚನು ಭೀಮನನ್ನು ಕುರಿತು, ವಾಗ್ದ್ವಾ

ನದ ಮೇಲೆ ದೃಷ್ಟಿಯಿಟ್ಟು ತನ್ನೊಡನೆ ಬರಬೇಕೆಂದು ಕೇಳುವನು. ಭೀಮನು ಅದಕ್ಕೊಪ್ಪಿ ಅವನ ಹಿಂದೆ ಹೊರಡುವನು. ಭೀಮಸೇನನ ಶಕ್ತಿಸಾಹಸಗಳನ್ನು ನೋಡಿ ಬೆರಗಾದ ಕೇಶವದಾಸನು ತನ್ನ ಕುಟುಂಬ ದೊಡನೆ ಅವರೀರ್ವರನ್ನೂ ಹಿಂಬಾಲಿಸುವನು. ಘಟೋತ್ಕಚನು ಭೀಮ ಸೇನನನ್ನು ಆಶ್ರಮಕ್ಕೆ ಸ್ವಲ್ಪದೂರದಲ್ಲಿ ನಿಲ್ಲಿಸಿ, ತಾನು ಮನುಷ್ಯನನ್ನು ಕರೆದು ತಂದಿರುವುದನ್ನು ತಾಯಿಗೆ ತಿಳಿಸಲು ಆಶ್ರಮದ ಬಾಗಿಲಿನ ಬಳಿಗೆ ಹೋಗಿ, "ಅಮ್ಮಾ! ನಾನು, ಘಟೋತ್ಕಚ, ವಂದಿಸುತ್ತೇನೆ. ನೀನು ಬಹುಕಾಲದಿಂದ ಅಪೇಕ್ಷಿಸಿದಂತೆ ಆಹಾರಾರ್ಥವಾಗಿ ಮನುಷ್ಯನನ್ನು ಕರೆದು ತಂದಿದ್ದೇನೆ" ಎಂದು ಹೇಳುವನು. ಹಿಡಿಂಬಾದೇವಿಯು ಆಶ್ರಮ ದಿಂದ ಹೊರಗೆ ಬಂದು "ಮಗು! ಚಿರಕಾಲ ಬಾಳು. ಎಂತಹ ಮನುಷ್ಯ ನನ್ನು ಕರೆದುತಂದಿರುವೆ?" ಎನ್ನುವಳು. (ಘಟೋತ್ಕಚನು ಭೀಮ ಸೇನನನ್ನು ನಿಲ್ಲಿಸಿರುವ ಸ್ಥಳವು ಬಹುಶಃ ಅಲ್ಲಿಗೆ ಮರೆಯಾಗಿದ್ದಿತೆಂದು ತೋರುತ್ತದೆ). ಆ ಬಳಿಕ ಮಗನಿಗೂ, ತಾಯಿಗೂ ನಡೆಯುವ ಸಂಭಾ ಷಣೆಯನ್ನು ನೋಡಿದರೆ, ಭಾಸಕವಿಯು ಎಷ್ಟು ಸಣ್ಣಪುಟ್ಟ ವಿಷಯ ಗಳಲ್ಲಿ ಕೂಡ ಎಷ್ಟು ಸ್ವಾರಸ್ಯವನ್ನು ತುಂಬುವನೆಂಬುದು ವ್ಯಕ್ತವಾ ಗುತ್ತದೆ:—

"ಪೂಜ್ಯಳೆ! ಅವನು ಮಾತಿನ ಮನುಷ್ಯ; ಪರಾಕ್ರಮದಿಂದಲ್ಲ!"
"ಬ್ರಾಹ್ಮಣನೇನು?"
"ಬ್ರಾಹ್ಮಣನಲ್ಲ"
"ಅಥವಾ ವೃದ್ಧನೆ?"
"ವೃದ್ಧನಲ್ಲ"
"ಬಾಲಕನೇನು?"
"ಬಾಲಕನಲ್ಲ"
"ಹಾಗಾದರೆ ಅವನಾರೋ ನೋಡುವೆನು"

ಆ ಬಳಿಕ ಅವರೀರ್ವರೂ ಭೀಮಸೇನನು ಕಣ್ಣಿಗೆ ಕಾಣುವಷ್ಟು ದೂರಕ್ಕೆ ಬರುವರು. ಬಹುಕಾಲದಮೇಲೆ ಪತಿಯನ್ನು ಕಂಡು ಹರ್ಷಿಸಿದ

ಹಿಡಿಂಬಾದೇವಿಯು, "ಏನು, ನೀನು ಕರೆದುತಂದಿರುವ ಈತನು ಮನುಷ್ಯ ನೆಂದುಕೊಂಡೆಯಾ?" ಎಂದು ಕೇಳುವಳು. ಘಟೋತ್ಕಚನು ಆ ಪ್ರಶ್ನೆಯ ಅರ್ಥವನ್ನು ಗ್ರಹಿಸಲಾರದೆ, "ಪೂಜ್ಯಳೇ ಈತನಾರು?" ಎನ್ನುವನು. ಅವ ಳು "ಹುಚ್ಚ, ಇವನು ದೇವರು" ಎಂದು ಉತ್ತರ ಹೇಳಿದಾಗ ವೀರಬಾಲಕ ನಿಗೆ ತಕ್ಕ ಕೆಚ್ಚಿನಿಂದ ಘಟೋತ್ಕಚನು, "ಆಃ! ಯಾರಿಗೆ ದೇವರು" ಎಂದು ಕೇಳುವನು. ಹಿಡಿಂಬೆಯು, "ನಿನಗೂ, ನನಗೂ, ಇಬ್ಬರಿಗೂ" ಎಂದು ಉತ್ತರ ಹೇಳಿದುದನ್ನು ಕೇಳಿ, "ಇದಕ್ಕೇನು ಪ್ರಮಾಣ?" ಎಂದು ಅವನು ಪ್ರಶ್ನೆ ಮಾಡುವನು. ಹಿಡಿಂಬಾದೇವಿಯು, "ಇದೇ ಪ್ರಮಾಣ! ಆರ್ಯ ಪುತ್ರನಿಗೆ ಜಯವಾಗಲಿ!" ಎಂದು ಹೇಳಿ ಭೀಮಸೇನನಿಗೆ ನಮಸ್ಕಾರ ಮಾಡುವಳು. ಆಕೆಯು ಮಗನಿಗೂ ಉತ್ತರ ಹೇಳುತ್ತ ಸಂತೋಷಭರ ದಿಂದ ಭೀಮಸೇನನ ಬಳಿಗೂ ಜಿಂಕೆಯಂತೆ ಶೀಘ್ರವಾಗಿ ಹೋಗಿರಬೇಕು. ಭೀಮಸೇನನೂ ಅನ್ಯಮನಸ್ಕನಾಗಿ ಮತ್ತೇನನ್ನೋ ಯೋಚಿಸುತ್ತ ಮೈ ಮರೆತು ನಿಂತಿರಬೇಕು. ಘಟೋತ್ಕಚನು ಹಿಡಿಂಬಾದೇವಿಯಬಳಿಗೆ ಹೋಗಿದ್ದುದನ್ನು ಅರಿತಿದ್ದೂ, ಆಕೆಯು ಬಂದು, "ಆರ್ಯಪುತ್ರನಿಗೆ ಜಯ ವಾಗಲಿ" ಎಂದಾಗ ಭೀಮಸೇನನು "ಇವಳಾರು? ಆಹ, ಹಿಡಿಂಬಾದೇವಿ. ದೇವಿ! ರಾಜ್ಯಭ್ರಷ್ಟರಾಗಿ ನಾವು ಘೋರಾರಣ್ಯದಲ್ಲಿ ಅಲೆಯುತ್ತಿರುವಾಗ, ಕರುಣಾಮಯಿಯಾದ ನಿನ್ನಿಂದ ನನ್ನ ಸಂತಾಪವು ಪರಿಹಾರವಾಯಿತು" ಎನ್ನುವುದು ಆ ರೀತಿ ಅವನು ಮೈಮರೆತು ನಿಂತಿದ್ದ ಕಾರಣದಿಂದಲೇ. ತಾವು ರಾಜ್ಯಭ್ರಷ್ಟರಾದುದನ್ನೂ ಶೂರನಾದ ತನ್ನ ಪ್ರಿಯಪುತ್ರನ ಸಹಾಯ ದಿಂದ ತಾನು ಕೌರವರ ಮೇಲೆ ಸೇಡು ತೀರಿಸಿಕೊಳ್ಳುವ ಸುದಿನವನ್ನೂ ಕುರಿತು ಅವನು ಗಾಢವಾಗಿ ಆಲೋಚಿಸುತ್ತ ಮೈಮರೆತಿದ್ದನೆಂದು ತೋರು ವುದು. ಹಿಡಿಂಬೆಯು ನರಮಾಂಸ ಭಕ್ಷಣಕ್ಕೆ ಆಶೆಪಟ್ಟ ಬಗೆ ಹೇಗೆಂದು ಭೀಮಸೇನನಿಗೆ ಕೊಂಚ ಅಸಮಾಧಾನವೂ ಆಗಿರಬೇಕು. ಆದುದರಿಂದ ಲೇ ಆತನು "ಹಿಡಿಂಬೇ ಇದೇನಿದು?" ಎಂದು ಕೇಳುವನು. ಆಗ ಹಿಡಿಂ ಬಾದೇವಿಯು ಆತನ ಕಿವಿಯಲ್ಲಿ ಏನನ್ನೋ ಮೆಲ್ಲಗೆ ಹೇಳಿ "ಹೀಗೆ" ಎನ್ನು ವಳು. ಭೀಮಸೇನನು ಸಂತುಷ್ಟನಾಗಿ, "ಹುಟ್ಟಿನಲ್ಲಿ ರಾಕ್ಷಸಿ. ಆಚಾರ ದಲ್ಲಲ್ಲ" ಎನ್ನುವನು. ಕವಿಯು ಈ ಸಂದರ್ಭದಲ್ಲಿ ಕೂಡ ತನ್ನ ಕೌಶಲ

ವನ್ನು ಪ್ರದರ್ಶಿಸಿ, ಹಿಡಿಂಬಾದೇವಿಯು ಭೀಮಸೇನನೊಡನೆ ಕಿವಿ ಮಾತಿನಲ್ಲಿ ಹೇಳಿದುದೇನೆಂಬುವನ್ನು ನಮ್ಮ ಊಹೆಗೇ ಬಿಟ್ಟಿದ್ದಾನೆ. ಆಗಿನ ಸನ್ನಿವೇಶದಲ್ಲಿ ಅವಳು ಅದನ್ನು ಗಟ್ಟಿಯಾಗಿ ಹೇಳುವಂತೆ ಮಾಡಿದ್ದರೆ, ಸ್ತ್ರೀಜನ ಸೌಕುಮಾರ್ಯಕ್ಕೇ ಬಾಧಿತಂದಂತಾಗುತ್ತಿದ್ದಿತು. ಪತಿದರ್ಶನವನ್ನು ಪಡೆಯಬೇಕೆಂಬ ಆಸೆಯಿಂದ ತಾನು ಈ ಉಪಾಯವನ್ನು ಹೂಡಿದುದಾಗಿ ಆಕೆಯು ತಿಳಿಸಿರಬೇಕು. ಆಕೆಗೂ ನರಮಾಂಸಭಕ್ಷಣಕ್ಕೂ ಬಹು ದೂರವೆಂಬುದನ್ನರಿತೇ ಭೀಮಸೇನನು ನಡತೆಯಲ್ಲಿ ರಾಕ್ಷಸಿಯಲ್ಲವೆಂದು ಆಕೆಯನ್ನು ಶ್ಲಾಘಿಸುವುದು. ಘಟೋತ್ಕಚನು ಬೆಕ್ಕಸಬೆರಗಾಗಿ ನಿಂತಿರುವನು ಹಿಡಿಂಬಾದೇವಿಯು ಪ್ರೀತಿಯಿಂದ, "ಹುಚ್ಚ! ನಿಮ್ಮ ತಂದೆಗೆ ನಮಸ್ಕಾರ ಮಾಡು" ಎಂದು ಅವನಿಗೆ ಹೇಳುವಳು. ಭೀಮಸೇನನನ್ನು ನೋಡುವುದಕ್ಕಿಂತ ಮುಂಚಿನಿಂದಲೂ ಪಿತೃಭಕ್ತನಾಗಿರುವ ಘಟೋತ್ಕಚನು, "ತಂದೆಯೆ, ಧಾರ್ತರಾಷ್ಟ್ರ ವನ ದವಾಗ್ನಿಸ್ವರೂಪನಾದ ನಾನು, ಈ ಘಟೋತ್ಕಚನು, ನಮಸ್ಕರಿಸುವೆನು. ಪುತ್ರಚಾಪಲಕ್ಕಾಗಿ ಕ್ಷಮಿಸಬೇಕು" ಎಂದು ಹೇಳಿ ನಮಸ್ಕಾರ ಮಾಡುವನು. ತನಗೆ ಪ್ರಿಯವಾದ ಆ ಮಾತುಗಳನ್ನು ಕೇಳಿ ಭೀಮಸೇನನು "ಬಾ! ಬಾ! ಮಗು, ವ್ಯತಿಕ್ರಮದ ವರ್ತನೆಯೂ ಮನೋಹರವಾಗಿದ್ದಿತು." ಎಂದು ಹೇಳಿ ಮಗನನ್ನು ಆಲಿಂಗಿಸಿ "ಧಾರ್ತರಾಷ್ಟ್ರ ವನ ದವಾಗ್ನಿಯಾದ ಪುತ್ರನನ್ನೇ ನನ್ನ ಹೃದಯವು ಬಯಸುತ್ತಿರುವುದು. ಮಗು! ಅತ್ಯಂತ ಬಲ ಪರಾಕ್ರಮಯುತನಾಗು" ಎಂದು ಹೇಳುವನು. ಭೀಮಸೇನನಂತಹ ವೀರನಾದ ತಂದೆಯ ಈ ಬಗೆಯ ಆಶೀರ್ವಚನಗಳಿಗಿಂತ ಹೆಚ್ಚಿನದು ಮತ್ತೇನು ತಾನೆ ಕೆಚ್ಚೆದೆಯ ಆ ತರುಣನಿಗೆ ಬೇಕು? ಘಟೋತ್ಕಚನು "ಅನುಗೃಹೀತನಾದೆನು" ಎಂದು ಹೇಳುವನು. ವೃದ್ಧ ಕೇಶವದಾಸನು ವಿಸ್ಮಿತನಾಗಿ, "ಹೀಗೆ! ಇವನು ಭೀಮಸೇನನ ಮಗ ಘಟೋತ್ಕಚನೆ!" ಎಂದು ಹೇಳುವನು. ಭೀಮಸೇನನ ಅಪ್ಪಣೆಯಂತೆ ಘಟೋತ್ಕಚನು ಕೇಶವದಾಸನಿಗೆ ನಮಸ್ಕಾರಮಾಡಿ, "ತಂದೆಯಂತೆ ಗುಣವಂತನೂ, ಕೀರ್ತಿವಂತನೂ ಆಗು" ಎಂದು ಆಶೀರ್ವಾದ ಪಡೆಯುವನು. ಭೀಮಸೇನನು ತಮ್ಮ (ಪಾಂಡವರ) ಆಶ್ರಮಕ್ಕೆ ಬಂದು ಆತಿಥ್ಯವನ್ನು ಪಡೆದು ತೆರಳಬೇಕೆಂದು ಆತನನ್ನು ಪ್ರಾರ್ಥಿಸುವನು. ಕೇಶವ

ದಾಸನು, "ಜೀವದಾನದಿಂದಲೇ ಅತಿಥ್ಯವಾಯಿತು. ನಾವು ಹೊರಡುವೆವು" ಎಂದು ಹೇಳಿ ತನ್ನ 'ಪತ್ನೀಪುತ್ರರೊಡನೆ ತೆರಳುವನು. ಭೀಮಸೇನನು "ಹಿಡಿಂಬೇ! ಹೀಗೆ ಬಾ. ವತ್ಸ, ಘಟೋತ್ಕಚ! ಹೀಗೆ ಬಾ. ಪೂಜ್ಯ ಕೇಶವದಾಸನನ್ನು ಆಶ್ರಮದ ಹೊರಗಿನವರೆಗೂ ಕಳುಹಿಸಿ ಬರೋಣ, ಬನ್ನಿ" ಎಂದು ಹೇಳಿ, " ನದಿಗಳಿಗೆಲ್ಲ ಸಮುದ್ರರಾಜನು ಒಡೆಯನಾಗಿರುವಂತೆ, ಆಹುತಿಗಳಿಗೆಲ್ಲ ಅಗ್ನಿಯು ಒಡೆಯನಾಗಿರುವಂತೆ, ಇಂದ್ರಿಯಗಳಿಗೆಲ್ಲ ಮನಸ್ಸು ಅಧಿಷ್ಠಾತೃವಾಗಿರುವಂತೆ ಭಗವಾನ್ ಉಪೇಂದ್ರನು ನಮಗೆಲ್ಲ ಪ್ರಭು" ಎಂದು * ಭರತವಾಕ್ಯವನ್ನು ನುಡಿಯುವನು.

**ಪಾತ್ರರಚನೆ:**—ಮಧ್ಯಮ ವ್ಯಾಯೋಗವು ಏಕಾಂಕರೂಪಕವಾದರೂ ಭೀಮಘಟೋತ್ಕಚರ ಶೌರ್ಯ ಪರಾಕ್ರಮಗಳೂ, ಘಟೋತ್ಕಚನ ಮಾತಾಪಿತೃಭಕ್ತಿಯೂ, ಹಿಡಿಂಬಾದೇವಿಯ ಪತಿಪರಾಯಣತೆಯೂ, ಭೀಮನ ವಾತ್ಸಲ್ಯಪೂರಿತವಾದ ಸಹೃದಯ ಸ್ವಭಾವವೂ, ಈ ರೂಪಕದಲ್ಲಿ ಹೃದಯಂಗಮವಾಗಿ ಚಿತ್ರಿತವಾಗಿವೆ. ಕೇಶವದಾಸನ ಮಗನು ಹೇಳಿರುವಂತೆ ಭೀಮಸೇನನು ಯುವಕ; ರೂಪಗುಣೋಪೇತ. ಅವನು ತಾನೇ ಹೇಳಿರುವಂತೆ ಭಯವನ್ನೇ ಕಂಡರಿಯನು. ಅವನ ಶಕ್ತಿ ಪರಾಕ್ರಮಗಳೆಷ್ಟು ಹೆಚ್ಚೋ ಅವನ ಅನುಕಂಪ ಬುದ್ಧಿಯೂ, ಮಾತೃಭಕ್ತಿಯೂ ಅಷ್ಟೇ ಹೆಚ್ಚಿನವು. ಅವನು ಬಲಶಾಲಿಯಾಗಿದ್ದೂ ಪ್ರತಿದಿನವೂ ವ್ಯಾಯಾಮ ಮಾಡಿ ಶಕ್ತಿಯನ್ನು ಹೆಚ್ಚಿಸಿಕೊಳ್ಳುತ್ತಿದ್ದನೆಂದು ವರ್ಣಿಸಿರುವುದು ಬಹು ಚೆನ್ನಾಗಿದೆ. ಕೇಶವದಾಸನೂ ಅವನ ಪುತ್ರರೂ ಘಟೋತ್ಕಚನನ್ನು ಪ್ರಳಯರುದ್ರನಿಗೂ, ಮಳೆಯ ಮೋಡಕ್ಕೂ ಹೋಲಿಸಿ ಅವನ ಶಕ್ತಿ ಪರಾಕ್ರಮಗಳನ್ನು ವಿಧವಿಧವಾಗಿ ವರ್ಣಿಸುತ್ತಾರೆ. ಆವನು ಶ್ಯಾಮಲ ಕಾಯನಾದರೂ " ಸಜಲ ಜಲದ ಗಾತ್ರನಾಗಿ ಪದ್ಮಪತ್ರಾಯತಾಕ್ಷ"ನಾಗಿ ಮನೋ

---

* "ಯಥಾನದೀನಾಂ ಪ್ರಭವಃ ಸಮುದ್ರೋ
ಯಥಾಹುತೀನಾಂ ಪ್ರಭವೋ ಹುತಾಶಃ ।
ಯಥೇಂದ್ರಿಯಾಣಾಂ ಪ್ರಭವಂ ಮನೋಽಪಿ
ತಥಾ ಪ್ರಭುರ್ನೋ ಭಗವಾನುಪೇಂದ್ರಃ ॥

ಹೆರನಾಗಿದ್ದಾನೆ. ಅವನು ಬಲಶಾಲಿಯಾಗಿರುವುದರ ಜೊತೆಗೆ ಕರು ಣಾಳುವಾಗಿಯೂ ಇದ್ದಾನೆ. ಅದಕ್ಕೆ ನಿದರ್ಶನಗಳನ್ನು ಆಗಲೇ ಸೂಚಿ ಸಿದ್ದೇವೆ. ಅವನು ತನ್ನ ತಂದೆಯಾದ ಭೀಮಸೇನನನ್ನು ನೋಡಿಲ್ಲ ದಿದ್ದರೂ, ಇತರರಾರಾದರೂ ಭೀಮಸೇನನ ವಿಷಯದಲ್ಲಿ ಅಲಕ್ಷ್ಯವಾಗಿ ಮಾತನಾಡಿದರೆ ಅವನು ಸಿಡಿಲಿನಂತೆರಗುವನು. ಅವನಿಗೆ ತಂದೆಗಿಂತಲೂ ತಾಯಿಯಲ್ಲಿ ಭಕ್ತಿ ಹೆಚ್ಚು. ಆದುದರಿಂದಲೇ ಅವನು ಕೇಶವದಾಸನ ಎರಡನೆಯ ಮಗನನ್ನು ತಾಯಿಯ ಆಜ್ಞೆಯಿಂದ ಕರೆದುಕೊಂಡು ಹೋಗುತ್ತಿರುವುದಾಗಿ ತಿಳಿಸಿ, "ನಮ್ಮ ತಂದೆಯೇ ಇವನನ್ನು ಬಿಡೆಂದರೂ; ನಾನು ಬಿಡುವವನಲ್ಲ" ಎನ್ನುವುದು. ಅದನ್ನು ಕೇಳಿ ಮಾತೃಭಕ್ತನಾದ ಭೀಮಸೇನನು ಅವನ ಮಾತೃ ಭಕ್ತಿಯನ್ನು (ತನ್ನಲ್ಲಿ ತಾನು) ಕೊಂಡಾಡು ವನು. ಘಟೋತ್ಕಚನು ರಾಕ್ಷಸಕುಲದವನಾದರೂ ಗುರುಹಿರಿಯರಲ್ಲಿ ಭಕ್ತಿಯುಳ್ಳ, ಪಾಪಭೀರುವಾದ ವಿನೀತ ಸ್ವಭಾವದವನು. ಹೀಗಿರುವ ಮಗ ನನ್ನು ನೋಡಿದರೆ ಅವನಿಗೆ ಆರೀತಿ ಶಿಕ್ಷಣಕೊಟ್ಟಿರುವ ಹಿಡಿಂಬಾದೇವಿಯ ಸ್ವಭಾವವೆಷ್ಟು ಸಂಸ್ಕೃತವಾಗಿದೆಯೆಂಬುದು ವ್ಯಕ್ತವಾಗುತ್ತದೆ. ಪತಿಯು ತನ್ನನ್ನು ಅಗಲಿ ಹೊರಟುಹೋಗಿದ್ದರೂ, ಅವನೊಡನೆ ಬಾಳುವ ಸುಯೋಗವೇ ತನಗೆ ದುರ್ಲಭವೆಂದು ತೋರಿದ್ದರೂ, ಪತಿಪ್ರೇಮದ ನಂದಾದೀಪವು ಆಕೆಯ ಹೃದಯವನ್ನು ಬೆಳಗುತ್ತಿದೆ. ಅವಳು ಪತಿ ಪ್ರಾಣೆಯಾದ ಸಾಧ್ವಿಯಾಗಿರುವುದರ ಜೊತೆಗೆ ಆತ್ಮಗೌರವವುಳ್ಳ ಮಾನಿ ನಿಯೂ ಆಗಿದ್ದಾಳೆ. ಆದುದರಿಂದಲೇ ಪಾಂಡವರು ತನ್ನ ಆಶ್ರಮಕ್ಕೆ ಸ್ವಲ್ಪದೂರದಲ್ಲಿ ಆಶ್ರಮವನ್ನು ಕಟ್ಟಿಕೊಂಡಿದ್ದರೂ, ಅವಳು ಭೀಮಸೇನ ನನ್ನು ಕಾಣಲು ಅಲ್ಲಿಗೆ ಹೋಗುವುದಿಲ್ಲ. ಪಾಂಡವರು ಬಂದಿರುವುದು ಅವಳಿಗೆ ತಿಳಿದಿದ್ದರೂ ಅವಳು ಸಮೀಪದಲ್ಲಿರುವುದನ್ನು ಅವರು ಅರಿ ಯರು. ತಾನಾಗಿ ಹೋಗಲು ಮಾನಧನೆಯಾದ ಆಕೆಗೆ ಸಂಕೋಚ; ಅವರಾಗಿ ತನ್ನ ಬಳಿಗೆ ಬರುವಂತಿಲ್ಲ. ಈ ಸಂದರ್ಭದಲ್ಲಿ ಭೀಮಸೇನ ನನ್ನು ತನ್ನಲ್ಲಿಗೆ ಬರಮಾಡಿಕೊಳ್ಳುವುದಕ್ಕಾಗಿ ಆಕೆಯು ಹೂಡುವ ಉಪಾಯದಿಂದಲೇ ಆಕೆಯು ಎಷ್ಟು ಚತುರೆಯೆಂಬುದು ಗೊತ್ತಾಗು ವುದು. ಪಾಂಡವರ ಆಶ್ರಮವು (ಭೀಮಸೇನನೇ ಕೇಶವದಾಸನೊಡನೆ

ಹೇಳಿರುವಂತೆ) ಹೆಚ್ಚು ದೂರವಾಗಿಲ್ಲ. ತನ್ನ ಪಾರಣೆಗಾಗಿ ಮನುಷ್ಯನನ್ನು ತರಹೇಳಿ ಶೂರನಾದ ಮಗನನ್ನು ಕಳುಹಿಸಿದರೆ, ಅವನೊಂದು ವೇಳೆ ಭೀಮಸೇನನನ್ನೇ ಹಿಡಿದು ತಂದರೆ ಸಂತೋಷ; ಅದು ತಪ್ಪಿ ಅವನು ಮತ್ತಾವನನ್ನಾದರೂ ಕರೆದು ತರುವುದಾದರೆ, ಅವರ ಆರ್ತಸ್ವರವನ್ನು ಕೇಳಿ ಅವರ ರಕ್ಷಣೆಗಾಗಿ ಭೀಮಸೇನನು ಬಂದೇಬರುವನು ಆಗ್ಗೆ ಘಟೋತ್ಕಚನ ಪರಿಚಯವಾಗಿ ಆತನು ತನ್ನನ್ನು ಸ್ಮರಿಸಿಕೊಂಡು ಸಂತೋಷದಿಂದ ಬರುವನು. ಇದು ಹಿಡಿಂಬಾದೇವಿಯ ಆಲೋಚನೆ. ಹೆಂಗಸನ್ನು ತನ್ನ ಆಹಾರಕ್ಕಾಗಿ ತರಕೂಡದೆಂದು ಆಕೆಯು ಹೇಳಿದ್ದುದನ್ನು ನೋಡಿದರೆ, ಹೆಂಗಸು ಸಂಕೋಚಲಜ್ಜೆಗಳಿಂದಲೋ, ಭೀತಿಯಿಂದಲೋ ಕೂಗಿಕೊಳ್ಳದೆ ಮೌನದಿಂದಿದ್ದು ತನ್ನ ಸಂಕಲ್ಪವು ಈಡೇರದೆ ಹೋಗಬಹುದೆಂಬ ಶಂಕೆಯಿಂದ ಆಕೆಯು ಹಾಗೆ ಮಾಡಿರಬೇಕೆಂದು ತೋರುತ್ತದೆ. ಅಂತು, ಆಕೆಯ ಪ್ರಯತ್ನವು ಫಲಿಸುವುದು. ಆಕೆಯು ಭೀಮಸೇನನ ಕಿವಿಯಲ್ಲಿ ಹೇಳಿದುದೂ ತಾನು ಹೂಡಿದ ಉಪಾಯದ ವಿಚಾರವನ್ನೇ. ಹಿಡಿಂಬಾದೇವಿಯ ಪಾತ್ರವನ್ನು ಕವಿಯು ಚಿತ್ತಾಕರ್ಷಕವಾಗಿರುವಂತೆ ಚಿತ್ರಿಸಿದ್ದಾನೆ.

———o———

# ಪಂಚರಾತ್ರ

## ಅವತರಣಿಕೆ

ಭಾಸಮಹಾಕವಿಯು ಮಹಾಭಾರತದ ವಿರಾಟಪರ್ವದ ಕಥಾಭಾಗವನ್ನನುಸರಿಸಿ ಈ ರೂಪಕವನ್ನು ಬರೆದಿರುವಂತೆ ತೋರಿದರೂ, ಸಮೂಲವಾದ ಅನೇಕ ಮಾರ್ಪಾಡುಗಳನ್ನು ಮಾಡಿ ಕಥಾವಸ್ತುವನ್ನು ಅಳವಡಿಸಿದ್ದಾನೆ. ರೂಪಕದ ಪ್ರತಿಯೊಂದು ಭಾಗದಲ್ಲಿ ಕೂಡ ಅವನ ಪ್ರತಿಭೆಯೂ ಕಲ್ಪನಾ ಸಾಮರ್ಥ್ಯವೂ ವ್ಯಕ್ತವಾಗುತ್ತವೆ. ಒಂದು ದೃಷ್ಟಿಯಿಂದ ನೋಡಿದರೆ, ಮಹಾಭಾರತದ ಸನ್ನಿವೇಶಕ್ಕೆ ತೀರವಿರುದ್ಧವಾಗಿರುವಂತೆ ನಮ್ಮ ಕವಿ ರೂಪಕರಚನೆಮಾಡಿದ್ದಾನೆಂದು ಹೇಳಬೇಕಾಗುತ್ತದೆ. ಪಾಂಡವರಿಗೆ ಗೋವಿನ ಹೆಜ್ಜೆಯಷ್ಟು ಭೂಮಿಯನ್ನು ಕೂಡ ಕೊಡುವುದಿಲ್ಲವೆಂದು ಹೇಳುವ ಉದ್ಧತವೀರನಾದ ಮಹಾಭಾರತದ ದುರ್ಯೋಧನನಿಗೆ ಪ್ರತಿಯಾಗಿ ಪಾಂಡವರಿಗೆ ಅರ್ಧರಾಜ್ಯವನ್ನು ಕೊಡಲು ಸಮ್ಮತಿಸುವ ಧರ್ಮವೀರನಾದ ದುರ್ಯೋಧನನನ್ನು ಈ ರೂಪಕದಲ್ಲಿ ನಾವು ಕಾಣುತ್ತೇವೆ. ದೂತವಾಕ್ಯ ದೂತಘಟೋತ್ಕಚಗಳ ದುರ್ಯೋಧನ ಪಾತ್ರದಲ್ಲಿ ಮೂಲದ ಉದ್ಧತ ಸ್ವಭಾವವೇ ಉಳಿದಿದೆ; ಊರುಭಂಗದ ಧುರ್ಯೋಧನನು ಉದ್ಧತ ಸ್ವಭಾವದವನೇ ಆಗಿದ್ದರೂ ಮಹಾಭಾರತದ ದುರ್ಯೋಧನನಿಗಿಂತ ಗುಣವಂತನಾಗಿ ತನ್ನ ಅಕಾರ್ಯಗಳಿಗಾಗಿ ಪಶ್ಚಾತ್ತಾಪ ಪಡತಕ್ಕವನಾಗಿದ್ದಾನೆ. ಹೀಗೆ ಮೂರು ಬಗೆಗಳಲ್ಲಿ ದುರ್ಯೋಧನ ಪಾತ್ರವನ್ನು ಸೃಷ್ಟಿಸಿ ಕವಿಯು ತನ್ನ ಕಲ್ಪನಾ ಸಾಮರ್ಥ್ಯವನ್ನು ಮೆರೆದಿದ್ದಾನೆ.

## ೧. ಕಥಾಸಾರಾಂಶ

ನಾಂದಿಯು ಮುಗಿದ ಮೇಲೆ ಪ್ರವೇಶಿಸಿದ ಸೂತ್ರಧಾರನು ಈ ರೂಪಕದ ಮುಖ್ಯಪಾತ್ರಗಳ ಹೆಸರುಗಳು ಸೂಚಿತವಾಗುವಂತೆ ರಚಿತವಾಗಿ

ರುವ ಮುದ್ರಾಲಂಕಾರದ ಶ್ಲೋಕದಿಂದ * ಶ್ರೀಕೃಷ್ಣನನ್ನು ಸ್ತೋತ್ರ ಮಾಡಿ, ಆ ಬಳಿಕ ದುರ್ಯೋಧನನು ಆದೇ ತಾನೆ ಮುಗಿಸಿರುವ ಯಜ್ಞದ ವಿಚಾರವನ್ನು ಸೂಚಿಸಿ ಸ್ಥಾಪನೆಯನ್ನು ಮುಗಿಸುವನು. ಮೊದಲನೆಯ ಅಂಕದ ಆರಂಭದಲ್ಲಿ ಮೂವರು ಬ್ರಾಹ್ಮಣರು ಪ್ರವೇಶಿಸಿ ದುರ್ಯೋಧನನ ಯಜ್ಞಶಾಲೆಯು ಉರಿಯುತ್ತಿರುವುದನ್ನು ವಿಧವಿಧವಾಗಿ ವರ್ಣಿಸಿ, ಯಜ್ಞವನ್ನು ಮುಗಿಸಿದ ದುರ್ಯೋಧನನು ಗುರುಹಿರಿಯರೊಡನೆಯೂ, ರಾಜರೊಡನೆಯೂ ಪುರಪ್ರವೇಶ ಮಾಡಲು ಸಿದ್ಧವಾಗಿರುವುದನ್ನು ಸೂಚಿಸಿ ದುರ್ಯೋಧನನನ್ನು ಕಾಣಲು ತೆರಳುವರು. ಆ ಬಳಿಕ ಭೀಷ್ಮದ್ರೋಣರು ಪ್ರವೇಶಿಸಿ ಧರ್ಮರತನಾದ ದುರ್ಯೋಧನನನ್ನು ಶ್ಲಾಘಿಸುವರು. ಅನಂತರ ದುರ್ಯೋಧನನೂ ಕರ್ಣನೂ ಶಕುನಿಯೂ ಪ್ರವೇಶಿಸುವರು. ಆಚಾರ್ಯದ್ರೋಣರು ದಕ್ಷಿಣೆಯನ್ನು ಸ್ವೀಕರಿಸಬೇಕೆಂದು ದುರ್ಯೋಧ

---

* “ ದ್ರೋಣಃ ಪೃಥಿವ್ಯರ್ಜುನಭೀಮದೂತೋ ಯಃ ಕರ್ಣಧಾರಃ ಶಕುನೀಶ್ವರಸ್ಯ ।
ದುರ್ಯೋಧನೋ ಭೀಷ್ಮಯುಧಿಷ್ಠಿರಃ ಸ ಪಾಯಾದ್ ವಿರಾಡುತ್ತರ ಗೋಽಭಿಮನ್ಯುಃ ॥ ”

ಮುದ್ರಾಲಂಕಾರದ ಈ ಶ್ಲೋಕದಲ್ಲಿ, ಪಂಚರಾತ್ರದ ಮುಖ್ಯಪಾತ್ರಗಳಾದ ದ್ರೋಣ, ಅರ್ಜುನ, ಭೀಮ, ಕರ್ಣ, ಶಕುನಿ, ದುರ್ಯೋಧನ, ಭೀಷ್ಮ, ಯುಧಿಷ್ಠಿರ, ವಿರಾಟ, ಉತ್ತರ, ಅಭಿಮನ್ಯು-ಈ ಹೆಸರುಗಳೆಲ್ಲ ಸೂಚಿತವಾಗಿವೆ. “ ಅವನು ಶ್ಯಾಮವರ್ಣವುಳ್ಳವನೋ, ಅವನು ಅರ್ಜುನ ಭೀಮರಿಗಾಗಿ ಭೂಮಿಯನ್ನು ಬೇಡಲು ದೂತನಾಗಿ ಹೋದವನೋ, ಪಕ್ಷಿರಾಜನಾದ ಗರುಡನಿಗೆ ಅವನು ನಿಯಾಮಕನಾಗಿ ಸೂತ್ರವನ್ನು ಧರಿಸಿರುವನೋ, ಅವನು ಶತ್ರುಗಳಿಗೆ ದುಸ್ಸಹರನಾಗಿ ದುರ್ಜನಭಯಂಕರನಾಗಿ ಯುದ್ಧದಲ್ಲಿ ಸ್ಥಿರನೋ ಆ ಸನ್ಮಾರ್ಗಾವಲಂಬಿಯೂ, ವಿರಾಟ್ಪುರುಷನೂ, ಯಜ್ಞೇಶ್ವರನೂ, ಪೂಜ್ಯನೂ ಆದ ಶ್ರೀಕೃಷ್ಣನು ರಕ್ಷಿಸಾಲಿ ” ಎಂಬುದು ಈ ಶ್ಲೋಕದ ಅರ್ಥ. ರೂಪಕದ ಮುಖ್ಯಪಾತ್ರಗಳ ಹೆಸರುಗಳಂತಿರುವ ಪದಗಳೆಲ್ಲ ಶ್ರೀಕೃಷ್ಣನಿಗೆ ಅನ್ವಯಿಸುವಂತೆ ಶ್ಲೋಕರಚನೆಮಾಡಿ ಕವಿಯು ತನ್ನ ಪಾಂಡಿತ್ಯವನ್ನು ತೋರ್ಪಡಿಸಿದ್ದಾನೆ.

ನನು ಬಲವಂತಮಾಡಿದ ಮೇಲೆ, ಪಾಂಡವರಿಗೆ ಅರ್ಧರಾಜ್ಯವನ್ನು ಕೊಟ್ಟರೆ ಅದೇ ತಮ್ಮ ದಕ್ಷಿಣೆಯೆಂದು ದ್ರೋಣಾಚಾರ್ಯರು ಹೇಳುವರು. ದ್ರೋಣಾಚಾರ್ಯರು ದಕ್ಷಿಣೆಯ ವ್ಯಾಜದಿಂದ ವಾಗ್ದಾನವನ್ನು ಪಡೆದು ಆ ಬಳಿಕ ಪಾಂಡವರಿಗೆ ರಾಜ್ಯವನ್ನು ಕೊಡೆಂದುದು ಧರ್ಮವಂಚನೆಯೆಂದು ಮುಂತಾಗಿ ಶಕುನಿಯು ಹೇಳುವನು. ಕೊನೆಗೆ ಐದು ದಿವಸಗಳೊಳಗಾಗಿ ಪಾಂಡವರ ನೆಲೆಯನ್ನು ಗೊತ್ತುಮಾಡಿ ಅವರನ್ನು ಕರೆದುತಂದರೆ ರಾಜ್ಯವನ್ನು ಕೊಡುವುದಾಗಿ ಒಪ್ಪಬಹುದೆಂದು ಶಕುನಿಯು ಹೇಳುವನು. ಅಜ್ಞಾತವಾಸದಲ್ಲಿರುವ ಪಾಂಡವರನ್ನು ಕಾಣುವ ಬಗೆ ಹೇಗೆ? ಅಷ್ಟರಲ್ಲಿ ವಿರಾಟನ ಕಡೆಯದೂತನು ಬಂದು ಕೀಚಕವಧೆಯು ಶಸ್ತ್ರಘಾತವಿಲ್ಲದೆ ರಹಸ್ಯವಾಗಿ ಆರಿಂದಲೋ ನಡೆಯಿತೆಂದೂ, ಮೈದುನನ ಮರಣದಿಂದ ದುಃಖಿತನಾದಕಾರಣ ವಿರಾಟನು ಯಜ್ಞಕ್ಕೆ ಬರಲಿಲ್ಲವೆಂದೂ, ತಿಳಿಸುವನು. ಅದನ್ನು ಕೇಳಿದ ಭೀಷ್ಮರು ಪಾಂಡವರು ವಿರಾಟನಗರದಲ್ಲಿರಬೇಕೆಂದು ನಿರ್ಧರಿಸಿ, ಶಕುನಿಯ ಪಂಚರಾತ್ರ ಸಮಯವನ್ನು ಒಪ್ಪುವಂತೆ ದ್ರೋಣರನ್ನು ಪ್ರೇರಿಸಿ, ಯಜ್ಞಕ್ಕೆ ಬಾರದೆ ತಪ್ಪಿದ ವಿರಾಟನಿಗೆ ಶಾಸ್ತಿಮಾಡಲು ಗೋಗ್ರಹಣದ ವಿಜಯಯಾತ್ರೆಗೆ ಹೊರಡುವಂತೆ ದುರ್ಯೋಧನನಿಗೆ ಅಪ್ಪಣೆಮಾಡುವರು.

ಎರಡನೆಯ ಅಂಕದಲ್ಲಿ, ಗೋಪಾಲಕರ ಜೀವನಚಿತ್ರ, ಗೋಗ್ರಹಣ, ಕೌರವರ ಮೇಲೆ ಯುದ್ಧಕ್ಕೆ ಹೊರಡಲಿಸುವಾಗಿರುವ ವಿರಾಟನ ತಳಮಳ, ಆ ಮೊದಲೇ ಯುದ್ಧಕ್ಕೆ ಹೋಗಿದ್ದ ಉತ್ತರನು ದಿಗ್ವಿಜಯಪೊಂದಿ ಬೃಹನ್ನಳೆಯೊಡನೆ ಬರುವುದು, ಭೀಮನು ಅಭಿಮನ್ಯುವನ್ನು ಸೆರೆ ಹಿಡಿದು ತರುವುದು, ತನ್ನ ಆಶ್ರಿತರಾಗಿದ್ದವರು ಪಾಂಡವರೆಂದು ವಿರಾಟನಿಗೆ ತಿಳಿಯುವುದು, ಉತ್ತರೆಯನ್ನು ಅಭಿಮನ್ಯುವಿಗೆ ಕೊಡುವುದಾಗಿ ಆತನು ನಿಷ್ಕರ್ಷಿಸುವುದು, ಇವೆಲ್ಲ ಚಿತ್ರಿತವಾಗಿದೆ.

ಮೂರನೆಯ ಅಂಕದಲ್ಲಿ, ವಿವಾಹ ವಾರ್ತೆಯನ್ನು ತಿಳಿಸಲು ಉತ್ತರನು ಭೀಷ್ಮದ್ರೋಣಾದಿಗಳ ಬಳಿಗೆ ಯುಧಿಷ್ಠಿರನ ಸಂದೇಶದೊಡನೆ ಬರು

ವನು. ಕೊನೆಗೆ ದುರ್ಯೋಧನನು ಪಾಂಡವರಿಗೆ ಪೂರ್ವದಂತೆ ಅರ್ಧ ರಾಜ್ಯವನ್ನು ಕೊಡುವುದಾಗಿ ಸಮ್ಮತಿಸುವನು.

## ೨. ವಿಮರ್ಶೆ

**ಸಂವಿಧಾನ ಕೌಶಲ :**—ಭಾಸಮಹಾಕವಿಯು ಮನೋಹರವಾಗಿ ರೂಪಕರಚನೆಮಾಡಿದ್ದಾನೆ. ಐದು ರಾತ್ರಿಗಳು ಕಳೆಯುವುದರೊಳಗಾಗಿ ಪಾಂಡವರೆಲ್ಲಿರುವರೆಂಬುದನ್ನು ಕಂಡುಹಿಡಿದರೆ ಅವರಿಗೆ ದುರ್ಯೋಧನ ನಿಂದ ಅರ್ಧರಾಜ್ಯವು ಸಲ್ಲಬೇಕೆಂಬ ಸಮಯದದೆಸೆಯಿಂದ ಈ ರೂಪ ಕಕ್ಕೆ ಪಂಚರಾತ್ರವೆಂಬ ಹೆಸರು ಬಂದಿರುವುದು ಯುಕ್ತವಾಗಿದೆ.

ಸೂತ್ರಧಾರನು ಸ್ಥಾಪನಾನಂತರ ತೆರಳಿದ ಬಳಿಕ ಮೂವರು ಬ್ರಾಹ್ಮಣರು ಪ್ರವೇಶಿಸಿ ದುರ್ಯೋಧನನ ಯಜ್ಞಶಾಲೆಯು ಉರಿ ಯುತ್ತಿರುವುದೇ ಮುಂತಾದ ವಿವರಗಳನ್ನು ವರ್ಣಿಸುವ ವಿಷ್ಕಂಭ ವೊಂದಿದೆ. ಅದರಲ್ಲಿ ಇಪ್ಪತ್ತು ಶ್ಲೋಕಗಳಿವೆ. ಉರಿಯ ಸೊಬಗನ್ನು ವರ್ಣಿಸಿರುವ ಶ್ಲೋಕಗಳೆಲ್ಲ ಬಹಳ ಸ್ವಾರಸ್ಯವಾಗಿದ್ದು ಭಾಸನ, "ಜ್ವಲನ ಮಿತ್ರ" (ಬೆಂಕಿಯ ಸ್ನೇಹಿತ) ಎಂಬ ಬಿರುದನ್ನು ಸಾರ್ಥಕಪಡಿಸು ವಂತಿವೆ. ಆದರೂ ವಾಚಕರ ಅಥವಾ ಪ್ರೇಕ್ಷಕರ ದೃಷ್ಟಿಯಿಂದ ವಿಷ್ಕಂಭವು ಬಹು ದೀರ್ಘವಾಗಿದೆ. ಔಚಿತ್ಯದ ಎಲ್ಲೆಯನ್ನು ಮೀರಿ ರುವ ಈ ಅಂಶವೊಂದು ರೂಪಕರಚನೆಯಲ್ಲಿ ದೊಡ್ಡ ನ್ಯೂನತೆಯೇ ಸರಿ. ಯಜ್ಞಕ್ಕೆ ಬಂದಿದ್ದ ಬ್ರಾಹ್ಮಣರು ಹೇಗಿದ್ದರೆಂಬುದನ್ನು ಕವಿಯು, "ಅದೋ ಪೂಜ್ಯರಾದ ಬ್ರಾಹ್ಮಣರು! ನಮಸ್ಕರಿಸುವ ರಾಜರುಗಳ ಉಷ್ಣೀ ಷಗಳು ಅವರ ಹೆಜ್ಜೆಗಳಿಗೆ ಸೋಕುತ್ತಿರುವಲ್ಲಿ, ಶಾಸ್ತ್ರಕೋವಿದರೆಂದು ವಿಶೇಷ ಖ್ಯಾತಿಯನ್ನು ಪಡೆದವರೂ, ಮುಪ್ಪಿನಲ್ಲಿ ಕೂಡ ಹೆಚ್ಚುಹೆಚ್ಚಿನ ನಿಯಮಸ್ಪೃಹೆಯುಳ್ಳವರೂ, ವಯೋಧರ್ಮದಿಂದ ಶಿಥಿಲ ದೇಹವುಳ್ಳವ ರಾಗಿ ಒಂದು ಕೈಯಲ್ಲಿ ಮೂರನೆಯ ಕಾಲಿನಂತೆ ದೊಣ್ಣೆಯನ್ನೂರಿ ಕೊಂಡವರೂ, ಮತ್ತೊಂದು ಕೈಯನ್ನು ಶಿಷ್ಯರ ಹೆಗಲಿನ ಮೇಲಿಟ್ಟು

ಕೊಂಡಿರುವವರೂ ಆದ ಜೀರ್ಣವೃದ್ಧರಾದ ವಿಪ್ರರು ಸ್ವಾಧ್ಯಾಯ ಶೂರರೆನಿಸುವಂತೆ ವೇದಘೋಷಮಾಡುತ್ತ ಮುಪ್ಪಾದ ಆನೆಗಳಂತೆ ಹೋಗುತ್ತಿದ್ದಾರೆ"* ಎಂದು ವರ್ಣಿಸಿರುವುದು ಹಿಂದಿನಕಾಲದಲ್ಲಿ ಭರತ ಖಂಡದ ವೈಶಿಷ್ಟ್ಯಗಳಲ್ಲೊಂದಾಗಿದ್ದ ವಿದ್ಯಾಭಿಮಾನಕ್ಕೊಂದು ಉತ್ತಮ ನಿದರ್ಶನವಾಗಿದೆ. ಮುಪ್ಪಡಿಸಿ ತಮ್ಮ ದೇಹಗಳು ಶಿಥಿಲವಾಗಿದ್ದಾಗಲೂ ಕೂಡ ಆ ವಿಪ್ರರು, "ಸ್ವಾಧ್ಯಾಯ ಶೂರ" ಮುಖಗಳಿಂದೊಪ್ಪುತ್ತ ಸದಾ ಚಾರ ಪ್ರೇಮಿಗಳಾಗಿ ನಿಯಮಸ್ಪೃಹರಾಗಿದ್ದರೆಂಬುದು ಅವರ ಸರಳ ಜೀವನದ ಸೊಗಸಾದ ಚಿತ್ರ; ರಾಜರುಗಳೆಲ್ಲ ಅವರಿಗೆ ನಮಸ್ಕರಿ ಸುತ್ತಿದ್ದುದು ಸಹಜವಾಗಿಯೇ ಇದೆ. ಭಾಸಮಹಾಕವಿಯು ತಾನು ಕಂಡ ತನ್ನ ಕಾಲದ ಸಮಾಜದಿಂದ ಈ ಅಂಶವನ್ನು ತೆಗೆದುಕೊಂಡಿರ ಬೇಕು. ಏಕೆಂದರೆ ಆತನ ಕಾಲಕ್ಕಿಂತ ಬಹಳ ಈಚಿನದಾದ ಶ್ರೀಹರ್ಷನಕಾಲದಲ್ಲಿ ಕೂಡ ತೊಂಬತ್ತಾರು, ತೊಂಬತ್ತೇಳು ವರ್ಷಗಳ ವಯಸ್ಸಿನ ವೃದ್ಧರು ಅಧ್ಯಾಪಕರಾಗಿ ಕೆಲಸಮಾಡುತ್ತ ರಾಜನು ಕೊಡ ಬಯಸಿದ ಗ್ರಾಮಗಳ ಕೊಡಗೆಗಳನ್ನು ಕೂಡ, ಬೇಡವೆಂದು ವಿನಯ ದಿಂದ ನಿರಾಕರಿಸಿ ರಾಜಮಾನ್ಯರಾಗಿದ್ದ ಹಲವು ನಿದರ್ಶನಗಳಿವೆ. ಆದಕಾರಣ, ಭಾಸಮಹಾಕವಿಯು ಬ್ರಾಹ್ಮಣರ ಆ ಬಗೆಯ ಸರಳ ಜೀವನದ ವಿದ್ಯಾಭಿಮಾನದ ಚಿತ್ರವನ್ನು ಕೇವಲ ಕಲ್ಪನೆಯಿಂದಲೂ ಊಹೆಯಿಂದಲೂ ಬರೆಯಬೇಕಾದ ಆವಶ್ಯಕತೆಯೇ ಇರಲಿಲ್ಲ.

ಯಜ್ಞವನ್ನು ಪೂರೈಸಿರುವ ದುರ್ಯೋಧನನನ್ನು ಕುರಿತು ಪುರ ಜನರು, "ಯಜ್ಞದ ನಿಮಿತ್ತದಿಂದ (ಇದೇ ರೀತಿ) ಪ್ರಜೆಗಳನ್ನು ಭೋಜ

---

* "ಇಮೇಽತ್ರಭವನ್ತೋ ದ್ವಿಜಾತಯಃ

ರಾಜ್ಞಾಂ ವೇಷ್ಟನ ಪಟ್ಟಘೃಷ್ಟ ಚರಣಾಃ ಶ್ಲಾಘ್ಯಪ್ರಭೂತಶ್ರವಾಃ
ವಾರ್ಧಕ್ಯೇಽಪ್ಯಭಿವರ್ಧಮಾನ ನಿಯಮಾಃ ಸ್ವಾಧ್ಯಾಯಶೂರೈರ್ಮುಖೈಃ ।
ವಿಪ್ರಾ ಯಾನ್ತಿ ವಯಃಪ್ರಕರ್ಷಶಿಥಿಲಾ ಯಷ್ಟಿತ್ರಿಪಾದ ಕ್ರಮಾಃ
ಶಿಷ್ಯಸ್ಕನ್ಧ ನಿವೇಶಿತಾಞ್ಚಿತಕರಾ ಜೀರ್ಣಾ ಗಜೇನ್ದ್ರಾ ಇವ ॥ "

ನಾದಿಗಳಿಂದ ತಣಿಸು. ವಿಕ್ರಮಶಾಲಿಯಾಗಿ (ರಾಜರನ್ನು) ಜಯಿಸು. ರೋಷವನ್ನು ಬಿಟ್ಟುಬಿಡು. ಸ್ವಜನರಲ್ಲಿ ದಯಾವಂತನಾಗಿರು" ಎಂದು ಹೇಳಿ ಪಾಂಡವ ಪರಿಗ್ರಹವನ್ನು ಆ ಬಗೆಯ ಮಾತುಗಳಿಂದ ಸೂಚಿಸಿದ್ದುದಾಗಿ ಆ ಮೂವರು ಬ್ರಾಹ್ಮಣರಲ್ಲಿ ಮೊದಲನೆಯವನು ಹೇಳುವನು. ಧರ್ಮರತನಾದ ದುರ್ಯೋಧನನನ್ನು ಚಿತ್ರಿಸಿರುವಂತೆಯೇ ಕವಿಯು ಅಪ್ರಿಯವಾದ ಸತ್ಯವಚನವನ್ನಾಡುವುದಕ್ಕೆ ಸಿದ್ಧರಾಗಿರುವ ಸತ್ಪ್ರಜೆಗಳನ್ನೂ ಚಿತ್ರಿಸಿರುವನು. ಪಂಚರಾತ್ರದಲ್ಲಿಯ ಧರ್ಮಾಭಿಮಾನಿ ದುರ್ಯೋಧನನಲ್ಲಿರುವ ಎರಡು ದೋಷಗಳೂ, "ರೋಷವನ್ನು ಬಿಟ್ಟು ಬಿಡು. ಸ್ವಜನರಲ್ಲಿ ದಯಾವಂತನಾಗು" ಎಂಬ ಮಾತುಗಳಿಂದ ಸೂಚಿತವಾಗುವುವು. ವಿಪ್ರರು ಮೂವರೂ ತೆರಳಿದ ಬಳಿಕ ಭೀಷ್ಮ ದ್ರೋಣರು ಪ್ರವೇಶಿಸುವರು. ದ್ರೋಣಾಚಾರ್ಯರ ಶಿಷ್ಯಪ್ರಿಯತೆಯೂ ಕರ್ತವ್ಯಜ್ಞಾನವೂ ಅವರು ಪ್ರವೇಶಿಸಿದೊಡನೆಯೇ ಆಡುವ " ಧರ್ಮಾವಲಂಬಿಯಾದ ದುರ್ಯೋಧನನಿಂದ ಅನುಗೃಹೀತನಾದವನು ನಾನು! ಏಕೆಂದರೆ, ಶಿಷ್ಯನಲ್ಲಿ ದೋಷವು ಕಂಡು ಬಂದರೆ ಅದಕ್ಕೆ ಅವನ ಬಂಧುಗಳಾಗಲಿ, ಮಿತ್ರರಾಗಲಿ ಹೊಣೆಯಲ್ಲ. ಅದಕ್ಕೆ ಗುರುವೇ ಹೊಣೆ ಬಾಲಕನಾದ ತಮ್ಮ ಮಗನನ್ನು ಗುರುವಿಗೆ ಒಪ್ಪಿಸಿದ ತಾಯಿತಂದೆಗಳ ಅಪರಾಧವೇನೂ ಇಲ್ಲ" * ಎಂಬ ಮಾತುಗಳು ಬಹು ಚೆನ್ನಾಗಿ ಸೂಚಿತವಾಗುವುವು. ದ್ರೋಣರು ಎಷ್ಟು ಮಟ್ಟಿನ ಕರ್ತವ್ಯ ನಿಷ್ಠೆಯಿಂದಲೂ ಶಿಷ್ಯವಾತ್ಸಲ್ಯದಿಂದಲೂ ಶಿಕ್ಷಣಕೊಟ್ಟಿರಬೇಕೆಂಬುದೂ, ದುರ್ಯೋಧನನು ರಾಜರನ್ನು ಜಯಿಸಿ ಯಜ್ಞವನ್ನಾಚರಿಸಿ ಧರ್ಮದಲ್ಲಿ ಆಸಕ್ತನಾದುದರಿಂದ ಅವರ ಮನಸ್ಸಿಗೆ ಎಷ್ಟು ಸಂತೋಷವುಂಟಾಗಿರುವುದೆಂಬುದೂ ಇದರಿಂದ

---

* " ಧರ್ಮಮಾಲಂಬಮಾನೇನ ದುರ್ಯೋಧನೇನಾಹಮೇವಾನುಗೃಹೀತೋ ನಾಮ । ಕುತಃ,

ಅತೀತ್ಯ ಬನ್ಧೂನವಲಂಘ್ಯ ಮಿತ್ರಾಣ್ಯಾಚಾರ್ಯಮಾಗಚ್ಛತಿ ಶಿಷ್ಯದೋಷಃ।
ಬಾಲಂ ಹ್ಯಪತ್ಯಂ ಗುರವೇ ಪ್ರದಾತುರ್ನೈವಾಪರಾಧೋಽಸ್ತಿ ಪಿತುರ್ನ ಮಾತುಃ ॥ "

ಗೊತ್ತಾಗುತ್ತದೆ. ದುರ್ಯೋಧನನು ರಣಪ್ರಿಯನಾಗಿ ರಾಜರನ್ನೆಲ್ಲ ಗೆದ್ದು, ಹಣವನ್ನು ಶೇಖರಿಸಿ, ಯಜ್ಞವನ್ನಾಚರಿಸಿ ಸುಕೃತಭಾಜನನಾಗಿ ಶೋಭಿಸುತ್ತಿದ್ದ ಬಗೆಯನ್ನು ಕೊಂಡಾಡಿ ಭೀಷ್ಮರು ತಮ್ಮ ಸಂತೋಷವನ್ನು ದ್ರೋಣರೆದುರಿಗೆ ಸೂಚಿಸುವರು.

ಆ ಬಳಿಕ ದುರ್ಯೋಧನನು ತಾನು ಶ್ರದ್ಧಾವಂತನಾಗಿ ಧರ್ಮಾಚರಣೆಮಾಡಿ ಗುರುಹಿರಿಯರನ್ನು ಸಂತೋಷಪಡಿಸಿದ ಕಾರಣ ಇಹಲೋಕದಲ್ಲಿರುವಾಗಲೇ ತನಗೆ ಸ್ವರ್ಗವು ಲಭಿಸಿತೆಂದೂ, ಸತ್ತಮೇಲೆ ಸ್ವರ್ಗವನ್ನು ಪಡೆಯಬೇಕೆಂಬ ಮಾತೇ ಸುಳ್ಳೆಂದೂ ಕರ್ಣಶಕುನಿಗಳೊಡನೆ ಹೇಳುತ್ತ ಪ್ರವೇಶಿಸುವನು. ಕರ್ಣನು ಆದಕ್ಕೆ ಉತ್ತರವಾಗಿ "ಗಾಂಧಾರೀಮಾತ ! ನ್ಯಾಯಮಾರ್ಗದಿಂದ ಸಂಪಾದಿಸಿದ ಹಣವನ್ನೆಲ್ಲ ಧರ್ಮಕಾರ್ಯಕ್ಕಾಗಿ ನೀನು ವಿನಿಯೋಗಿಸಿದುದು ನ್ಯಾಯವೇ ಸರಿ. ಏಕೆಂದರೆ, ಕ್ಷತ್ರಿಯರ ಸಮೃದ್ಧಿಯು ಬಾಣಾಧೀನವಾದುದು. ತನ್ನ ಮಗನಿಗೆ ಸಂಪತ್ತನ್ನು ಶೇಖರಮಾಡಿಡಬೇಕೆಂದು ಬಯಸಿದ ರಾಜನು ವಂಚಿತನೇ ಹೊರತು ಕೃತಾರ್ಥನಲ್ಲ. ರಾಜನಾದವನು ನಿಶ್ಶೇಷವಾಗಿ ಧನವನ್ನೆಲ್ಲ ದಾನಮಾಡಿ ಮಕ್ಕಳಿಗೆ ಬಿಲ್ಲುಬಾಣಗಳನ್ನು ಮಾತ್ರ ಬಿಡಬೇಕು" ಎಂದು ಹೇಳುವನು. ದಾನವೀರನಿಗೆ ತಕ್ಕಮಾತುಗಳಿವು. ಆ ಬಗೆಯ ಒಳ್ಳೆಯ ಮಾತುಗಳು ಶಕುನಿಗೆ ಸರಿಬೀಳುವುದುಂಟೆ ? ಕುಟಿಲಬುದ್ಧಿಯವನಾದ ಶಕುನಿಯೂ ತನ್ನ ಸ್ವಭಾವಕ್ಕೆ ತಕ್ಕಂತೆ "ಗಂಗೋಪಸ್ಪರ್ಶನದಿಂದ ಧೌತಕಲ್ಮಷಾಂಗನಾದ ಅಂಗರಾಜನು ಸರಿಯಾಗಿ ಹೇಳಿದನು" ಎಂದು ಚುಚ್ಚಿ ನುಡಿಯುವನು. ಮೇಲೆ ನೋಡಿದರೇನೊ, ಯಜ್ಞವು ಮುಗಿದ ಮೇಲೆ ಶುದ್ಧಾಚಮನಮಾಡಿದುದರಿಂದ ಕಾಯಶುದ್ಧಿ ಹೊಂದಿರುವ ಕರ್ಣನು ಶುದ್ಧವಚನಗಳನ್ನಾಡಿದನೆಂದು ಅರ್ಥವಾದರೂ, ಗಂಗೆಯಲ್ಲಿ ತೇಲಿಬಂದ ಆತನ ಹುಟ್ಟನ್ನೂ ದುರ್ಯೋಧನನ ಅನುಗ್ರಹದಿಂದ ಆವನು ಅಂಗರಾಜನಾದನೆಂಬ ಅಂಶವನ್ನೂ ಎತ್ತಿ ಆಡುವ ಕಟಕಿವಾತುಗಳಿವು ! "ಗಂಗೆಯಲ್ಲಿ ವಿಸರ್ಜಿತನಾಗಿ ಪಾಪಗಳಿಂದ ಪಾರಾದ ಅಜ್ಞಾತ ಕುಲಗೋತ್ರನಾಗಿರುವ ನೀನು ದುರ್ಯೋಧನನ ಕೃಪೆಯಿಂದ ಅಂಗರಾಜ

ನೆನಿಸಿ ಅನಾಯಾಸವಾಗಿ ಸಂಪತ್ತನ್ನು ಪಡೆದಿರುವೆ. ಕಷ್ಟಾರ್ಜಿತವಲ್ಲದ ಹಣವನ್ನು ಪಡೆದಿರುವ ನೀನು ಹೀಗೆ ಹೇಳದೆ ಮತ್ತೇನನ್ನು ಮಾಡೀಯೆ ? " ಎಂಬ ಅಣಕದ ವಿಷವಾಹಿನಿಯೂ ಆ ಮಾತುಗಳಲ್ಲಿದೆ. ಶಕುನಿಯ ಮಾತುಗಳಿಂದ ಮನನೊಂದಿರಬಹುದಾದರೂ ಅವಕ್ಕೆ ಉತ್ತರವನ್ನೇ ಹೇಳದೆ ಕರ್ಣನು ದುರ್ಯೋಧನನೊಡನೆ ಮತ್ತೆ ಮಾತನಾಡಿ ತನ್ನ ಘನತೆಯನ್ನು ತೋರ್ಪಡಿಸುವನು. ಈ ಸಂದರ್ಭದಲ್ಲಿ ಶಕುನಿಯ ಮಾತುಗಳಿಗೆ ಕರ್ಣನು ಉತ್ತರ ಹೇಳದೆ ಮೌನದಿಂದಿರುವುದು ಮನೋಜ್ಞವಾಗಿದೆ. ಕರ್ಣನ ಘನತೆಗೆ ತಕ್ಕಂತೆ ಕವಿಯು ತಾದಾತ್ಮ್ಯ ಭಾವದಿಂದ ಬರೆಯುತ್ತಿದ್ದಾನೆಂಬುದೂ ಇದರಿಂದ ಗೊತ್ತಾಗುತ್ತದೆ. ಶಕುನಿಯು ಮಾತನಾಡದೆ ಹೋಗಿದ್ದ ಪಕ್ಷಕ್ಕೆ ಹೇಗೋ ಹಾಗೆ ಕರ್ಣನು ದುರ್ಯೋಧನನನ್ನು ಕುರಿತು "ಇಕ್ಷ್ವಾಕು, ಶರ್ಯಾತಿ, ಯಯಾತಿ, ರಾಮ, ಮಾಂಧಾತೃ, ನಾಭಾಗ, ನೃಗ, ಅಂಬರೀಷ-ಇವರುಗಳು ಮೃತಪಟ್ಟು ಅವರವರ ಕೋಶವೂ, ಅವರವರ ರಾಷ್ಟ್ರವೂ, ಅವರವರ ದೇಹಗಳೂ ನಾಶವಾಗಿದ್ದೂ ಯಜ್ಞಕಾಲದಲ್ಲಿ ಅವರುಗಳು ಮಾಡಿದ ದಾನಧರ್ಮಗಳಿಂದ ಪಡೆದ ಅವರ ಯಶಃಕಾಯಗಳು ರಾಜಿಸುತ್ತಿವೆ" ಎನ್ನುವನು.

ಸಮಸ್ತರೂ ತನ್ನನ್ನು ಅಭಿನಂದಿಸಲು ದುರ್ಯೋಧನನು "ಅನುಗೃಹೀತನಾದೆನು. ಆಚಾರ್ಯ ! ನಮಸ್ಕರಿಸುವೆನು" ಎನ್ನುವನು. ದ್ರೋಣಾಚಾರ್ಯರು ತಮಗಿಂತ ಶ್ರೇಷ್ಠರಾದ ಭೀಷ್ಮರಿಗೆ ನಮಸ್ಕಾರ ಮಾಡುವುದಕ್ಕೆ ಮುಂಚಿತವಾಗಿ ದುರ್ಯೋಧನನು ತಮಗೆ ನಮಸ್ಕಾರ ಮಾಡಿದುದನ್ನು ಒಪ್ಪರು. ಗುಣಕ್ಕೆ ತಕ್ಕ ಪುರಸ್ಕಾರವಿರಬೇಕೆಂಬ ಘನವಾದ ಅವರ ಮನೋವೃತ್ತಿಯನ್ನು ಎಷ್ಟು ಕೊಂಡಾಡಿದರೂ ಸಾಲದು. ಅವರು ದುರ್ಯೋಧನನನ್ನು ಕುರಿತು "ಬಾ, ಬಾ, ಪುತ್ರ ! ಇದು ಅಕ್ರಮ" ಎನ್ನುವರು. ಅವರು ಅವನನ್ನು ತಮ್ಮ ಮಗನಂತೆ ಪ್ರೀತಿಸುವರು. ಮತ್ತಾವ ಕ್ರಮದಲ್ಲಿ ತಾನು ನಮಸ್ಕಾರ ಮಾಡಬೇಕೆಂದು ಅವನು ಕೇಳಿದಾಗ ಭೀಷ್ಮರಿಗೇ ಮೊದಲು ನಮಸ್ಕಾರಮಾಡಬೇಕೆಂದು

ದ್ರೋಣರು ಉತ್ತರ ಹೇಳುವರು. ದ್ರೋಣರ ಉದಾತ್ತ ಪ್ರಕೃತಿಯೂ, ಅದನ್ನು ಚಿತ್ರಿಸಿರುವುದರಲ್ಲಿ ಕವಿಯ ಸಾಮರ್ಥ್ಯವೂ ಇದರಿಂದ ವ್ಯಕ್ತವಾಗುವುವು. ಭೀಷ್ಮರು ಅದಕ್ಕೆ ಸಮ್ಮತಿ ಪಡದೆ "ಕೂಡದು, ಕೂಡದು ; ನೀನು ಹೀಗೆ ಹೇಳಕೂಡದು. ಅನೇಕ ಕಾರಣಗಳಿಂದ ನಾನು ನಿನಗಿಂತ ಕೀಳಾದವನು. ಏಕೆಂದರೆ, ನಾನು ಮಾತೃಗರ್ಭದಲ್ಲಿ ಹುಟ್ಟಿದವನು. ನೀನು ಸ್ವಯಂಜನಿತನ. ನಾನು ಶತ್ರುಹಿಂಸೆಯಿಂದ ಕೂಡಿದ ಯುದ್ಧವೃತ್ತಿಯನ್ನನುಸರಿಸಿದವನು. ನೀನು ಸ್ನೇಹವೇ ವೃತ್ತಿಯಾಗಿರತಕ್ಕವನು. ನೀನು ಬ್ರಾಹ್ಮಣನು ನಾವು ಕ್ಷತ್ರಿಯರು. ನೀನು ಗುರು. ನಾವು ನಿನ್ನ ಶಿಷ್ಯರಲ್ಲಿ ಮುಂದಾಳುಗಳು" * ಎಂದು ಸೂಚಿಸುವರು. ದ್ರೋಣರು ಅದಕ್ಕೆ "ಆತ್ಮಶ್ಲಾಘನೆ ಮಾಡಿಕೊಳ್ಳದಿರುವುದೇ ಮಹಾತ್ಮರ ಲಕ್ಷಣ" ಎಂದು ಉತ್ತರ ಹೇಳುವರು.

ಹಿರಿಯರೀರ್ವರಿಗೂ ನಮಸ್ಕಾರ ಮಾಡಿದ ದುರ್ಯೋಧನನು ದ್ರೋಣರಿಂದ "ಬಾ ಬಾ ಮಗು ! ಇದೇ ರೀತಿ ಆಗಾಗ (ಯಜ್ಞಮಾಡಿ) ಅವಭೃತಸ್ನಾನದ ಕಷ್ಟವನ್ನು ಪಡೆ" ಎಂದೂ, ಭೀಷ್ಮರಿಂದ "ಬಾ, ಬಾ, ಪೌತ್ರ ! ಇದೇರೀತಿ ನಿನಗೆ ರಾಗದ್ವೇಷದೂರವಾದ ಮನಶ್ಶಾಂತಿಯುಂಟಾಗಲಿ" ಎಂದೂ ಆಶೀರ್ವಾದವನ್ನು ಪಡೆದು, ಅನಂತರ ಸೋದರಮಾವನಾದ ಶಕುನಿಗೆ ನಮಸ್ಕಾರಮಾಡುವನು. ಶಕುನಿಯು "ವತ್ಸ ! ಜರಾಸಂಧನಂತೆ ರಾಜರನ್ನೆಲ್ಲ ಜಯಿಸಿ ಹಿಡಿದುತಂದು ಇದೇ ರೀತಿ ದಕ್ಷಿಣಾದ್ರವ್ಯಗಳನ್ನು ಕೊಟ್ಟು ರಾಜಸೂಯಯಜ್ಞವನ್ನು ಮಾಡು" ಎಂದು

---

* "ಮಾ ಮಾ ಭವಾನೇವಮ್ । ಬಹುಭಿಃ ಕಾರಣೈರಪಕೃಷ್ಟೋಽಹಂ ಭವತಃ । ಕುತಃ,
ಅಹಂ ಹಿ ಮಾತ್ರಾಜನಿತೋ ಭವಾನ್ ಸ್ವಯಂ ಮಮಾಯುಧಂ ವೃತ್ತಿರಪಸ್ಯ ವಸ್ತವ ।
ದ್ವಿಜೋ ಭವಾನ್ ಕ್ಷತ್ರಿಯ ವಂಶಜಾ ವಯಂ ಗುರುರ್ಭವಾನ್ ಶಿಷ್ಯಮುಹತ್ತರಾ ವಯಮ್ ॥

ಆಶೀರ್ವದಿಸುವನು. ಸ್ನೇಹಪ್ರವೃತ್ತಿಯುಳ್ಳವರೂ ಶಾಂತಿಪ್ರಿಯರೂ ಆದ ದ್ರೋಣಾಚಾರ್ಯರು ಆ ಮಾತುಗಳನ್ನು ಕೇಳಿ ಆಶ್ಚರ್ಯಚಕಿತರಾಗಿ "ಎಲಾ! ಆಶೀರ್ವಾದ ಮಾಡುವುದರಲ್ಲಿ ಕೂಡ ಶಕುನಿಯು ಯುದ್ಧೋದ್ಯೋಗವನ್ನೇ ಉಂಟುಮಾಡುತ್ತಾನೆ. ಎಲಾ! ವಿರೋಧದಲ್ಲಿ ಪ್ರೀತಿಯುಳ್ಳವನು ಈ ಕ್ಷತ್ರಿಯ ಕುಮಾರನು" ಎಂದು ತಮ್ಮಲ್ಲಿ ತಾವು ಹೇಳಿಕೊಳ್ಳುವರು. "ಕ್ಷತ್ರಿಯ ಕುಮಾರ" ಎಂಬ ಪದವಿರುವುದನ್ನು ನೋಡಿದರೆ, ಶಕುನಿಯು ದುರ್ಯೋಧನನಿಗಿಂತ ಕೆಲವು ವರ್ಷಗಳಷ್ಟು ಹಿರಿಯನೇ ಹೊರತು ವೃದ್ಧನೇನೂ ಅಲ್ಲವೆಂದು ತೋರಬೇಕೆಂಬುದು ಕವಿಯ ಆಶಯವಿರಬೇಕೆಂದು ಹೇಳಬಹುದಾಗಿದೆ. ಮುಂದೆ ದ್ರೋಣಾಚಾರ್ಯರು ಅವನನ್ನು "ವತ್ಸ!" ಎಂದು ಸಂಬೋಧಿಸುವುದರಿಂದಲೂ ಇದೇ ಅಂಶವೇ ವ್ಯಕ್ತಪಡುತ್ತದೆ. ರಾಜಸೂಯಯಾಗ ಮಾಡಿದಾಗ್ಗೆ ಯುಧಿಷ್ಠಿರನು ರಾಜರುಗಳನ್ನು ಜಯಿಸಿ ಬಂದಿದ್ದನು. ದುರ್ಯೋಧನನೂ ಅದೇ ರೀತಿ ಮಾಡಿ ರಾಜಸೂಯಯಾಗ ಮಾಡಿದರೆ ವೈರಪ್ರಿಯನಾದ ಶಕುನಿಯ ಮನಸ್ಸಿಗೆ ತೃಪ್ತಿಯಿಲ್ಲ. ಆದುದರಿಂದಲೇ ಆಶೀರ್ವಾದ ಮಾಡುವುದರಲ್ಲಿ ಕೂಡ ಅವನು ದುರ್ಯೋಧನನೊಡನೆ ಜರಾಸಂಧನಂತೆ ರಾಜರನ್ನು ಸೋಲಿಸಿ ಹಿಡಿದು ತಂದು ರಾಜಸೂಯಯಜ್ಞ ಮಾಡಬೇಕೆಂದು ಹೇಳುವುದು. ಹಾಗೆ ಮಾಡಿದರೆ ಯುಧಿಷ್ಠಿರನಿಗಿಂತ ಹೆಚ್ಚಾದಂತಾಯಿತೆಂಬುದು ಕುಟಿಲ ಬುದ್ಧಿಯುಳ್ಳ ಶಕುನಿಯ ಆಶಯವೆಂದು ತೋರುವುದು.

ದುರ್ಯೋಧನನು ಹಿರಿಯರಿಗೆ ನಮಸ್ಕಾರಮಾಡಿದ ಬಳಿಕ ಕರ್ಣನನ್ನು ಕುರಿತು "ಮಿತ್ರ, ಕರ್ಣ! ಅನುಕ್ರಮವರಿತು ಹಿರಿಯರಿಗೆ ನಮಸ್ಕರಿಸಿದ ಬಳಿಕ (ಈಗ) ಮಿತ್ರನಾದ ನಿನ್ನನ್ನು ಆಲಿಂಗಿಸಲಿಚ್ಛಿಸುವೆನು" ಎಂದು ಹೇಳುವನು. ಕರ್ಣನು ಅದಕ್ಕೆ ಉತ್ತರವಾಗಿ ಹೇಳುವ "ಯುದ್ಧ ಸಂಬಂಧವಾದ ವ್ರತ, ನಿಯಮ, ಉಪವಾಸ, ಮುಂತಾದವುಗಳಿಂದ ನಿನ್ನ ಶರೀರವು ಕೃಶವಾಗಿದೆ. ನನ್ನ ಗಾಢಾಲಿಂಗನವನ್ನು ನಿನ್ನ ದೇಹವು ಸಹಿಸಲು ಸಾಧ್ಯವಿದ್ದಲ್ಲಿ ಆಲಿಂಗಿಸುವೆನು. (ಇಲ್ಲವಾದಲ್ಲಿ ಬೇಡ). ನಿನ್ನೊಡನೆ ಪ್ರಿಯಾಲಾಪಮಾಡದೆ ಮೌನದಿಂದಿದ್ದು ನಿನ್ನ ಮನಸ್ಸನ್ನು ಬೇರೆ

ನೋಯಿಸಲಾರೆ. ಆದರೆ ರಾಜರ್ಷಿಯೆಂಬ ಧೀರವಚನದ ದೆಸೆಯಿಂದ ನನಗೆ ಭಯ'' § ಎಂಬ ಮಾತುಗಳಿಂದ ಅವನ ಸ್ನೇಹವೆಷ್ಟು ಗಾಢ ವಾದುದೆಂಬುದೂ ಅವನೆಂತಹ ಧರ್ಮಭೀರುವಾದ ಶ್ರೇಯೋಭಿಲಾಷಿ ಯೆಂಬುದೂ ವ್ಯಕ್ತವಾಗುವುವು. ಅವನಿಗೆ ದುರ್ಯೋಧನನನ್ನು ಗಾಢಾ ಲಿಂಗನಮಾಡಬೇಕೆಂಬ ತೀವ್ರಾಭಿಲಾಷೆ. ಆದರೆ ಉಪವಾಸಾದಿಗಳಿಂದ ಕೃಶವಾಗಿರುವ ದೇಹವನ್ನು ಗಾಢಾಲಿಂಗನ ಮಾಡಿಕೊಂಡರೆ ದುರ್ಯೋ ಧನನಿಗೆಲ್ಲಿ ಹಿಂಸೆಯಾದೀತೋ ಎಂದು ಭಯ. ಗಾಢಾಲಿಂಗನವನ್ನು ದುರ್ಯೋಧನನು ಸಹಿಸಲು ಸಾಧ್ಯವಿಲ್ಲದಿದ್ದಲ್ಲಿ ತನ್ನ ಆಶೆಯನ್ನು ದಮನ ಮಾಡಿ ಸುಮ್ಮನಿರಲು ಅವನು ಸಿದ್ಧವಾಗಿದ್ದಾನೆ. ಆಗಿನ ಸ್ಥಿತಿಯಲ್ಲಿ ಆಲಿಂಗನದಿಂದ ಹಿಂಸಿಸುವುದನ್ನಾದರೂ ಬಿಟ್ಟು ಅವನು ಸುಮ್ಮನಿದ್ದಾನು; ಪ್ರಿಯಾಲಾಪಗಳಿಂದ ದುರ್ಯೋಧನನೊಡನೆ ಮಾತನಾಡದೆ ಮೌನ ದಿಂದಿದ್ದು ಮಾತ್ರ ಅವನ ಮನಸ್ಸನ್ನು ಹಿಂಸಿಸಲಾರನು. ಆದರೆ ಕರ್ಣ ನಿಗೆ ಒಂದೇ ಭಯ. ರಾಗದ್ವೇಷಾದಿಗಳನ್ನು ತ್ಯಜಿಸಿ, ಯಾಗವನ್ನು ಪೂರೈಸಿ, ರಾಜರ್ಷಿಯೆಂಬ ಘನವಾದ ಹೆಸರಿಗೆ ಪಾತ್ರನಾಗಿರುವ ದುರ್ಯೋ ಧನನೊಡನೆ ಮಾತನಾಡುವಲ್ಲಿ ತನ್ನ ಮಾತುಗಳಿಂದ ರಾಗದ್ವೇಷಾದಿಗಳಿಗೆ ಅವಕಾಶವಾಗಿ ಆ ರಾಜರ್ಷಿಯ ಮನಸ್ಸು ಕಲುಷಿತವಾಗುವುದಾದರೆ ಗತಿಯೇನೆಂದೇ ಅವನಿಗಿರುವ ದಿಗಿಲು. ಅಂತಹದಕ್ಕೆ ಅವಕಾಶವಿಲ್ಲದಂತೆ ತಾನು ಮಾತನಾಡಬೇಕೆಂಬುದು ಕರ್ಣನ ಆಶಯ. ಜರಾಸಂಧನ ಹೋಲಿಕೆ ಯೊಡನೆ ರಾಗದ್ವೇಷಾದಿಗಳ ಮಡುವಿನಂತಿರುವ ಯುದ್ಧೋದ್ಯೋಗವನ್ನು ತಂದಿಡಲಿಚ್ಛಿಸಿದ ಶಕುನಿಯ ಆಶಯಕ್ಕೂ ಇದಕ್ಕೂ ಬಲುದೂರ. ಶುದ್ಧ ನಾಗಿ ರಾಜರ್ಷಿಯೆಂಬ ಹೆಸರಿಗೆ ಪಾತ್ರನಾಗಿರುವ ದುರ್ಯೋಧನನ ಮನಸ್ಸು ಎಂದೆಂದಿಗೂ ರಾಗದ್ವೇಷಾದಿಗಳ ದಾಂಧಲೆಗೊಳಗಾಗದೆ ಆಗಿ

---

§ " ಕ್ರತುವ್ರತೈಸ್ತೇ ತನು ಗಾತ್ರಮೇತತ್ ಸೋಢುಂ ಬಲಂ ಶಕ್ಷ್ಯಸಿ ಪೀಡಯಾನಿ ।
ಅಂತಸ್ತ್ವನಾಮನ್ತ್ರ್ಯ ನ ಧರ್ಷಯಾಮಿ ರಾಜರ್ಷಿಧೀರಾದ್ವಚನಾದ್ಭಯಂ ಮೇ ॥ "

ನಂತೆಯೇ ಇರಬೇಕೆಂಬ ಶ್ರೇಯೋಭಿಲಾಷೆಯು ಕರ್ಣನದು. ದುರ್ಯೋಧನನೂ, "ನಿನ್ನ ಬುದ್ಧಿಯು ಹೀಗೆಯೇ ಇರಲಿ" ಎಂದು ಅದಕ್ಕೆ ತಕ್ಕ ಉತ್ತರವನ್ನು ಹೇಳುವನು.

ಅನಂತರ ದ್ರೋಣರು, ಯಜ್ಞಕ್ಕೆ ಬಂದಿದ್ದ ಭೀಷ್ಮಕ ಮುಂತಾದ ರಾಜರನ್ನು ದುರ್ಯೋಧನನೆದುರಿಗೆ ಸೂಚಿಸುವರು. ದುರ್ಯೋಧನನು ಅವರನ್ನು ಯಥಾಯೋಗ್ಯವಾಗಿ ಸ್ವಾಗತಿಸಿ, "ಸಮಸ್ತ ರಾಜಮಂಡಲದವರೂ ಬಂದಿದ್ದಾರೆ. ವಿರಾಟನೊಬ್ಬನು ಮಾತ್ರ ಏಕೋ ಬರಲಿಲ್ಲ." ಎನ್ನುವನು. ಆ ವಿಚಾರವನ್ನು ತಿಳಿದುಬರಲು ತಾನು ದೂತನನ್ನು ಕಳುಹಿಸಿದ್ದುದಾಗಿ ಶಕುನಿಯು ಹೇಳುವನು. ಆ ಬಳಿಕ ದುರ್ಯೋಧನನು ದ್ರೋಣರನ್ನು ಕುರಿತು ಧರ್ಮಬೋಧೆ ಧನುರ್ವಿದ್ಯೆಗಳೆರಡರಲ್ಲಿ ಕೂಡ ಆಚಾರ್ಯರಾದ ಅವರು ಯಜ್ಞದಕ್ಷಿಣೆಯನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸುವನು. ದ್ರೋಣಾಚಾರ್ಯರು ತಮಗಾಗಿ ಏನನ್ನೂ ಕೇಳಲಿಚ್ಛಿಸದೆ, "ದಕ್ಷಿಣೆಯೆ! ಆಗಲಿ; ಆಗಲಿ; ನಿನ್ನನ್ನು ಯಾಚಿಸುವೆನು" ಎನ್ನುವರು. ದುರ್ಯೋಧನನು ಆಶ್ಚರ್ಯಚಕಿತನಾಗಿ "ಆಚಾರ್ಯನು, ಕೂಡ ಯಾಚಿಸುವುದೆಂದರೇನು?" ಎಂದು ಹೇಳುವನು. ಭೀಷ್ಮರು ದುರ್ಯೋಧನನೊಡನೆ, "ಎಲೈ! ಏನುತಾನೆ ಪ್ರಯೋಜನವಾದ ಹಾಗಾಯಿತು? ಯೋಗ್ಯವಾದ ಚಿಕ್ಕವಯಸ್ಸಿನಲ್ಲಿ ವಿಧಿವತ್ತಾಗಿ ಯಜ್ಞ ಮಾಡಿದುದಾಯಿತು. ಸಾಮ್ರಾಜ್ಯಸ್ಥಾಪನೆಯೂ ನೇರವೇರಿತು. ಖ್ಯಾತಿಯೂ ಬಂದಿದೆ. ಆದರೇನು? ಕ್ಷತ್ರಾಚಾರ್ಯನಾದ ವಿಪ್ರನಿಗೆ ದಕ್ಷಿಣೆಯು ಸಲ್ಲದ ಆ ದ್ರವ್ಯದಿಂದೇನು, ಆ ಫಲವುತಾನೇ ಏನು, ಈ ಯಜ್ಞವು ನಡೆದು ಏನು ವಿಶೇಷ?" ಎನ್ನುವರು. ದುರ್ಯೋಧನನು ದ್ರೋಣರನ್ನು ಕುರಿತು, "ಆಜ್ಞಾಪಿಸಬೇಕು. ಏನು ಅಭಿಲಾಷೆ? ಏನನ್ನು ನಡೆಯಿಸಿಕೊಡಲಿ?" ಎಂದು ಕೇಳುವನು. ದ್ರೋಣರು ಆಗಲೂ ತಮ್ಮ ಮನಸ್ಸಿನಲ್ಲಿರುವುದನ್ನು ತಿಳಿಸದೆ, "ಪುತ್ರ! ದುರ್ಯೋಧನ! ಹೇಳುವೆನು" ಎಂದು ಅನುಮಾನಿಸುವರು. ದುರ್ಯೋಧನನು "ಏನೆಂದು ಈ ರೀತಿ ಅನುಮಾನಿಸುತ್ತಿರುವೆ? ನಿನ್ನಿಂದ ಶಿಕ್ಷಣಪಡೆದು ಪ್ರಾಣಾ

ಧಿಕನಾಗಿದ್ದೇನೆ; ಶೂರರಲ್ಲಿ ಗಣನೆ ಹೊಂದಿದ್ದೇನೆ. ಸಾಹಸದಿಂದ ಯುದ್ಧಮಾಡಿದ್ದೇನೆ. ಸಂಕೋಚವಿಲ್ಲದೆ ಸ್ವಚ್ಛಂದವಾಗಿ ಹೇಳು. ಏನು ಬೇಕು? ಏನನ್ನು ಕೊಡಲಿ? ಇದೋ, ನನ್ನ ಗದೆಯು ಕೈಯಲ್ಲಿದೆ. ಇದೊಂದನ್ನುಳಿದು ಸಮಸ್ತವೂ ನಿನ್ನದು" * ಎಂದು ಹೇಳುವನು. ಅವರೀರ್ವರ ಗುರುಶಿಷ್ಯ ಸಂಬಂಧವು ಹೇಗಿದ್ದಿತೆಂಬುದೂ, ಗುಣಪಕ್ಷಪಾತಿಗಳಾದ ದ್ರೋಣರಿಗೆ ದುರ್ಯೋಧನನು ಪ್ರಾಣಾಧಿಕನಾದ ಪ್ರಿಯ ಶಿಷ್ಯನಾಗಿದ್ದನೆಂಬುದೂ ಗೊತ್ತಾಗುವುದು. ದ್ರೋಣರಿಗೆ ಅವರಲ್ಲಿ ಎಷ್ಟು ಗಾಢವಾದ ಪ್ರೀತಿವಾತ್ಸಲ್ಯಗಳೋ, ಅವನಿಗೂ ಅವರಲ್ಲಿ ಅಷ್ಟೇ ಗಾಢವಾದ ಪ್ರೀತಿಭಕ್ತಿಗಳು. ಆದುದರಿಂದಲೇ ಅವನು ತನ್ನ ಗದೆಯೊಂದು ಹೊರತು ಉಳಿದ ಸಮಸ್ತವನ್ನೂ ಸಮರ್ಪಿಸಲು ಸಿದ್ಧವಾಗಿದ್ದಾನೆ. ಕ್ಷತ್ರಿಯನು ಆಯುಧವನ್ನೊಪ್ಪಿಸಕೂಡದೆಂಬ ಶಾಸ್ತ್ರವಚನ ಬದ್ಧನಾಗಿರುವುದರಿಂದಲೋ, ಅಥವಾ, "ತಾವು ಸಮಸ್ತವನ್ನೂ ನಿಸ್ಸಂಕೋಚವಾಗಿ ಸ್ವೀಕರಿಸಿದರೂ ಈ ಗದೆಯ ಸಹಾಯದಿಂದ ನಾನು ಮತ್ತೆ ವಿಪುಲೈಶ್ವರ್ಯವನ್ನೂ ಸಂಪಾದಿಸಬಲ್ಲೆ" ಎಂಬ ಉತ್ಸಾಹವನ್ನು ಸೂಚಿಸಲಿಚ್ಛಿಸುವುದರಿಂದಲೋ, ದುರ್ಯೋಧನನು ಗದೆಯೊಂದನ್ನು ಉಳಿಸಿಕೊಳ್ಳಲಿಚ್ಛಿಸುವನು. ಅವನು ಶೂರರಲ್ಲಿ ಗಣನೆಹೊಂದಿರುವುದನ್ನೂ, ಸಾಹಸಿಯಾಗಿ ಯುದ್ಧಮಾಡಿರುವುದನ್ನೂ ಸೂಚಿಸುವುದು ಕೂಡ, ಅದೆಲ್ಲ ದ್ರೋಣಾಚಾರ್ಯರ ಪ್ರಭಾವವೆಂದು ತನ್ನ ಕೃತಜ್ಞತೆಯನ್ನು ಸೂಚಿಸುವುದಕ್ಕಾಗಿ ಮಾತ್ರವೇ. ಕೆಲವು ಮಾತುಗಳಿಂದಲೇ ಗುರುಶಿಷ್ಯರ ಹೃದಯಗಳೇ ನಮ್ಮೆದುರಿಗೆ ನಿಲ್ಲುವಂತೆಮಾಡಿ ಕವಿಯು ಸಂವಿಧಾನ ಕೌಶಲವನ್ನು ತೋರಿಸಿದ್ದಾನೆ. ದ್ರೋಣಾಚಾರ್ಯರು, "ಪುತ್ರ! ಹಾಗಾದರೆ

---

* "ಕಿಮಿದಾನೀಂ ವಿಚಾರ್ಯತೇ ।
ಪ್ರಾಣಾಧಿಕೋಽಸ್ಮಿ ಭವತಾ ಚ ಕೃತೋಪದೇಶಃ
ಶೂರೇಷು ಯಾಮಿ ಗಣನಾಂ ಕೃತಸಾಹಸೋಽಸ್ಮಿ ।
ಸ್ವಚ್ಛಂದತೋ ವದ ಕಿಮಿಚ್ಛಸಿ ಕಿಂ ದದಾಮಿ
ಹಸ್ತೇ ಸ್ಥಿತಾ ಮಮ ಗದಾ ಭವತಶ್ಚ ಸರ್ವಮ್ ॥"

ಹೇಳುವೆನು. ಆದರೆ ಬಾಷ್ಪವೇಗವು ಅಡ್ಡಿಮಾಡುತ್ತಿದೆ" ಎಂದು ಗದ್ಗದ ಧ್ವನಿಯಿಂದ ಹೇಳಿ ಕಂಬನಿ ಬಿಡುವರು. ಪಾಂಡವರು ವನವಾಸದ ಕಷ್ಟವನ್ನನುಭವಿಸುತ್ತಿರುವುದನ್ನು ನೆನೆದು ಶಿಷ್ಯಪ್ರಿಯತೆಯಿಂದ ದ್ರೋಣರು ದುಃಖಿಸುವರು. ಅವರ ಮನಸ್ಸೆಷ್ಟು ಮೃದುವೆಂಬುದು ಇದರಿಂದ ಗೊತ್ತಾಗುವುದು. ಧೀರಾಗ್ರಣಿಗಳಾದ ದ್ರೋಣರು ಎಂದೂ ಕಂಬನಿ ಬಿಟ್ಟುದನ್ನು ಕಂಡಿಲ್ಲದ ಇತರರೆಲ್ಲರೂ ಆಶ್ಚರ್ಯದಿಂದ ಏಕಕಂಠದಲ್ಲಿ "ಆಚಾರ್ಯನು ಕೂಡ ರೋದಿಸುವುದೆಂದರೇನು!?" ಎಂದು ಹೇಳುವರು. ಸರಳಹೃದಯರಾದ ದ್ರೋಣರು ರೋದಿಸಿದುದನ್ನು ಕಂಡು ಭೀಷ್ಮರ ಹೃದಯವು ಕಲಕಿಹೋಗುವುದು. ಅವರು, "ಪೌತ್ರ, ದುರ್ಯೋಧನ, ನಿನ್ನ ಪ್ರಯತ್ನಕ್ಕೆ ಫಲವಾಗಲಿಲ್ಲ" ಎಂದು ಹೇಳಿಬಿಡುವರು.

ದುರ್ಯೋಧನನು ಅನಂತರ ನೀರನ್ನು ತರಿಸಿ, "ಆಚಾರ್ಯ! ಅಶ್ರುಪಾತದಿಂದ ಅಶುದ್ಧವಾಗಿರುವ ಮುಖವನ್ನು ತೊಳೆದುಕೊಳ್ಳಬೇಕು" ಎಂದು ನೀರಿನ ಪಾತ್ರೆಯನ್ನು ಹಿಡಿಯುವನು. ದ್ರೋಣರು, "ಆಗಲಿ; ಆಗಲಿ; ನನ್ನ ಕಾರ್ಯವು ಸಿದ್ಧಿಸಿ ಅದೇ ಮುಖೋದಕವಾಗಲಿ" ಎಂದು ಉತ್ತರ ಹೇಳುವರು. "ನೀನು ನನ್ನ ಇಷ್ಟವನ್ನು ನೆರವೇರಿಸಿಕೊಟ್ಟರೆ ಆಗ ಕಣ್ಣೀರು ನಿಂತು ನನಗೆ ಸಮಾಧಾನವಾದೀತು" ಎಂಬುದು ಆ ಮಾತುಗಳ ಧ್ವನಿ. ದುರ್ಯೋಧನನು, "ಅಯ್ಯೋ! ಇಷ್ಟವನ್ನು ತಿಳಿಸಿದರೆ ಹಿಂದಿನ ಕುಟಿಲವೃತ್ತಿಯುವನಾದ ನಾನೆಲ್ಲಿ ಕೊಡುವುದಿಲ್ಲವೋ ಎಂಬ ಶಂಕೆಯೆ? ನೂರಾರು ಬಾಣಗಳ ಆಘಾತದಿಂದ ಕಠಿನವಾಗಿರುವ ಅಂಗೈಯನ್ನು ನೀಡಿರಿ. ನೀವು ಕೋರಿದುದನ್ನು ಕೊಡುವೆನೆಂದು ಇದೋ, ದಾನಧಾರೆಯನ್ನೆರೆಯುವೆನು" ಎಂದು ಹೇಳುವನು. ದ್ರೋಣರು ಕೇಳುವುದೇನೆಂಬುದನ್ನು ನಿಶ್ಚಯಿಸಿಕೊಳ್ಳುವುದಕ್ಕೆ ಮುಂಚಿತವಾಗಿಯೇ ದಾನಧಾರೆಯನ್ನೆರೆಯಲು ಅವನು ಸಿದ್ಧವಾಗಿರುವನು. ಅಲ್ಲದೆ ಪಾಂಡವರನ್ನು ವನವಾಸಕ್ಕೆ ಕಳುಹಿಸಿದುದೇ ಮುಂತಾದ ಹಿಂದಿನ ತನ್ನ ಕುಟಿಲತೆಯೇ ಆಚಾರ್ಯ ದ್ರೋಣರ ಮೌನಕ್ಕೂ ಶಂಕೆಗೂ ಕಾರಣವೆಂದು ಸಂತಾಪಪಡುವನು. ದುರ್ಯೋಧನನು ತನ್ನ ಆಚಾರ್ಯಗಳಿಗಾಗಿ

ಪಶ್ಚಾತ್ತಾಪಪಟ್ಟು, ಯಜ್ಞದ ವ್ಯಾಜದಿಂದ ಧರ್ಮಕಾರ್ಯಗಳನ್ನು ನೆರವೇರಿಸಿ ಧರ್ಮಪ್ರವೃತ್ತಿಯುಳ್ಳವನಾಗಿರುವುದೂ ಇದರಿಂದ ವ್ಯಕ್ತ ವಾಗುವುದು. ದ್ರೋಣರು ಅವನ ಮಾತುಗಳಿಂದ ಸಂತುಷ್ಟರಾಗಿ, ಅವನು ಹನ್ನೆರಡು ವರ್ಷಗಳಿಂದಲೂ ಕಾಡಿನಲ್ಲಿ ಅಲೆಯುತ್ತಿರುವ ಪಾಂಡ ವರಿಗೆ ಅರ್ಧರಾಜ್ಯವನ್ನು ಕೊಡಬೇಕೆಂದೂ, ಅದೇ ತಮಗೆ ಭಿಕ್ಷೆಯೆಂದೂ, ದಕ್ಷಿಣೆಯೆಂದೂ ಹೇಳುವರು.

ದ್ರೋಣಾಚಾರ್ಯರು ಯಜ್ಞದಕ್ಷಿಣೆಯ ನೆವದಿಂದ ಮೊದಲೇ ವಾಗ್ದಾನ ವನ್ನು ಪಡೆದು ಆ ಬಳಿಕ ಆ ರೀತಿ ಕೇಳಿದುದು ಧರ್ಮವಂಚನೆ ಯೆಂದು ಶಕುನಿಯು ಗರ್ಜಿಸುವನು. ಧರ್ಮವಂಚನೆಯೆಂಬ ಬಿರು ನುಡಿಯನ್ನು ಕೇಳಿ ದ್ರೋಣಾಚಾರ್ಯರಿಗೆ ರೋಷವುಂಟಾಗುವುದು. ಅವರು, "ಧರ್ಮವಂಚನೆಯೆ? ಗಾಂಧಾರ ರಾಜ್ಯವಿರುವ ಗರ್ವದಿಂದ ವಿಸ್ಮಿತನಾಗಿರುವ ಶಕುನಿ! ನಿನ್ನ ಅನಾರ್ಯಭಾವದ ದೆಸೆಯಿಂದ ಸಮಸ್ತರೂ ಅನಾರ್ಯರೆಂದು ಭಾವಿಸುತ್ತಿರುವೆ. ಅಯ್ಯೋ, ಇಲ್ಲಿ ಕೇಳು. ಪೈತೃಕವಾದ ರಾಜ್ಯವನ್ನು ತಮ್ಮಂದಿರಿಗೆ ಕೊಡೆಂದು ಹೇಳಿದರೆ ಅದು ವಂಚನೆ! ಕೇಳಿಸಿಕೊಂಡು ಕೊಡುವುದು ಉತ್ತಮವೆ ಅಥವಾ ಅವರೇ ಬಲತ್ಕಾರ ದಿಂದ ಕಸಿದುಕೊಳ್ಳುವುದು ಉತ್ತಮವೆ?" ಎಂದು ಗರ್ಜಿಸುವರು. ಭೀಷ್ಮರು ದುರ್ಯೋಧನನನ್ನು ಕುರಿತು ಆತನು ಮಿತ್ರಮುಖದ ಶತ್ರು ವಾದ ಶಕುನಿಯ ಮಾತನ್ನು ಕೇಳಕೂಡದೆಂದೂ, ಶಕುನಿಯ ದುರಹಂಕಾರಮಯವಾದ ಕುತಂತ್ರವಿಲ್ಲದೆ ಹೋಗಿದ್ದರೆ ಪಾಂಡವರು ದ್ರೌಪದೀ ಸಮೇತರಾಗಿ ಕಾಡಿನಲ್ಲಿ ಅಲೆಯುತ್ತ ಅಲ್ಲಿಯ ಧೂಳು ಅವರ ಮೈಗೆ ಅಂಟಿಕೊಂಡು ಅಂದಗೆಡಿಸಬೇಕಾಗಿರುತ್ತಿರಲಿಲ್ಲವೆಂದೂ ಹೇಳುವರು. ಧೂಳು ಅವರ ಮೈಗೆ ಅಂಟಿಕೊಳ್ಳುವ ಅಂಶವನ್ನು ಕವಿಯು ಸೂಚಿಸಿ ನಮ್ಮ ಮನಸನ್ನೇ ಕರಗಿಸಿದ್ದಾನೆ.

ಭೀಷ್ಮರ ಮಾತುಗಳಿಂದಲೂ ದುರ್ಯೋಧನನ ಮನಸ್ಸಿಗೆ ಸಮಾ ಧಾನವಾಗದಷ್ಟು ಮಟ್ಟಿಗೆ ಅವನಿಗೆ ಉದ್ವೇಗವುಂಟಾಗಿದೆ. ಪಾಂಡವರು

ಹೇಳುವೆನು. ಆದರೆ ಬಾಷ್ಪವೇಗವು ಅಡ್ಡಿಮಾಡುತ್ತಿದೆ” ಎಂದು ಗದ್ಗದ ಧ್ವನಿಯಿಂದ ಹೇಳಿ ಕಂಬನಿ ಬಿಡುವರು. ಪಾಂಡವರು ವನವಾಸದ ಕಷ್ಟವನ್ನನುಭವಿಸುತ್ತಿರುವುದನ್ನು ನೆನೆದು ಶಿಷ್ಯಪ್ರಿಯತೆಯಿಂದ ದ್ರೋಣರು ದುಃಖಿಸುವರು. ಅವರ ಮನಸ್ಸೆಷ್ಟು ಮೃದುವೆಂಬುದು ಇದರಿಂದ ಗೊತ್ತಾಗುವುದು. ಧೀರಾಗ್ರಣಿಗಳಾದ ದ್ರೋಣರು ಎಂದೂ ಕಂಬನಿ ಬಿಟ್ಟುದನ್ನು ಕಂಡಿಲ್ಲದ ಇತರರೆಲ್ಲರೂ ಆಶ್ಚರ್ಯದಿಂದ ಏಕಕಂಠದಲ್ಲಿ “ಆಚಾರ್ಯನು ಕೂಡ ರೋದಿಸುವುದೆಂದರೇನು!?” ಎಂದು ಹೇಳುವರು. ಸರಳಹೃದಯರಾದ ದ್ರೋಣರು ರೋದಿಸಿದುದನ್ನು ಕಂಡು ಭೀಷ್ಮರ ಹೃದಯವು ಕಲಕಿಹೋಗುವುದು. ಅವರು, “ಪೌತ್ರ, ದುರ್ಯೋಧನ, ನಿನ್ನ ಪ್ರಯತ್ನಕ್ಕೆ ಫಲವಾಗಲಿಲ್ಲ” ಎಂದು ಹೇಳಿಬಿಡುವರು.

ದುರ್ಯೋಧನನು ಅನಂತರ ನೀರನ್ನು ತರಿಸಿ, “ಆಚಾರ್ಯ! ಅಶ್ರುಪಾತದಿಂದ ಅಶುದ್ಧವಾಗಿರುವ ಮುಖವನ್ನು ತೊಳೆದುಕೊಳ್ಳಬೇಕು” ಎಂದು ನೀರಿನ ಪಾತ್ರೆಯನ್ನು ಹಿಡಿಯುವನು. ದ್ರೋಣರು, “ಆಗಲಿ; ಆಗಲಿ; ನನ್ನ ಕಾರ್ಯವು ಸಿದ್ಧಿಸಿ ಅದೇ ಮುಖೋದಕವಾಗಲಿ” ಎಂದು ಉತ್ತರ ಹೇಳುವರು. “ನೀನು ನನ್ನ ಇಷ್ಟವನ್ನು ನೆರವೇರಿಸಿಕೊಟ್ಟರೆ ಆಗ ಕಣ್ಣೀರು ನಿಂತು ನನಗೆ ಸಮಾಧಾನವಾದೀತು” ಎಂಬುದು ಆ ಮಾತುಗಳ ಧ್ವನಿ. ದುರ್ಯೋಧನನು, “ಅಯ್ಯೋ! ಇಷ್ಟವನ್ನು ತಿಳಿಸಿದರೆ ಹಿಂದಿನ ಕುಟಿಲವೃತ್ತಿಯುವನಾದ ನಾನೆಲ್ಲಿ ಕೊಡುವುದಿಲ್ಲವೋ ಎಂಬ ಶಂಕೆಯೆ? ನೂರಾರು ಬಾಣಗಳ ಆಘಾತದಿಂದ ಕಠಿನವಾಗಿರುವ ಅಂಗೈಯನ್ನು ನೀಡಿರಿ. ನೀವು ಕೋರಿದುದನ್ನು ಕೊಡುವೆನೆಂದು ಇದೋ, ದಾನಧಾರೆಯನ್ನೆರೆಯುವೆನು” ಎಂದು ಹೇಳುವನು. ದ್ರೋಣರು ಕೇಳುವುದೇನೆಂಬುದನ್ನು ನಿಶ್ಚಯಿಸಿಕೊಳ್ಳುವುದಕ್ಕೆ ಮುಂಚಿತವಾಗಿಯೇ ದಾನಧಾರೆಯನ್ನೆರೆಯಲು ಅವನು ಸಿದ್ಧವಾಗಿರುವನು. ಅಲ್ಲದೆ ಪಾಂಡವರನ್ನು ವನವಾಸಕ್ಕೆ ಕಳುಹಿಸಿದುದೇ ಮುಂತಾದ ಹಿಂದಿನ ತನ್ನ ಕುಟಿಲತೆಯೇ ಆಚಾರ್ಯ ದ್ರೋಣರ ಮೌನಕ್ಕೂ ಶಂಕೆಗೂ ಕಾರಣವೆಂದು ಸಂತಾಪಪಡುವನು. ದುರ್ಯೋಧನನು ತನ್ನ ಆಚಾರ್ಯಗಳಿಗಾಗಿ

ಪಶ್ಚಾತ್ತಾಪಪಟ್ಟು, ಯಜ್ಞದ ವ್ಯಾಜದಿಂದ ಧರ್ಮಕಾರ್ಯಗಳನ್ನು ನೆರವೇರಿಸಿ ಧರ್ಮಪ್ರವೃತ್ತಿಯುಳ್ಳವನಾಗಿರುವುದೂ ಇದರಿಂದ ವ್ಯಕ್ತ ವಾಗುವುದು. ದ್ರೋಣರು ಅವನ ಮಾತುಗಳಿಂದ ಸಂತುಷ್ಟರಾಗಿ, ಅವನು ಹನ್ನೆರಡು ವರ್ಷಗಳಿಂದಲೂ ಕಾಡಿನಲ್ಲಿ ಅಲೆಯುತ್ತಿರುವ ಪಾಂಡ ವರಿಗೆ ಅರ್ಧರಾಜ್ಯವನ್ನು ಕೊಡಬೇಕೆಂದೂ, ಅದೇ ತಮಗೆ ಭಿಕ್ಷೆಯೆಂದೂ, ದಕ್ಷಿಣೆಯೆಂದೂ ಹೇಳುವರು.

ದ್ರೋಣಾಚಾರ್ಯರು ಯಜ್ಞದಕ್ಷಿಣೆಯ ನೆವದಿಂದ ಮೊದಲೇ ವಾಗ್ದಾನ ವನ್ನು ಪಡೆದು ಆ ಬಳಿಕ ಆ ರೀತಿ ಕೇಳಿದುದು ಧರ್ಮವಂಚನೆ ಯೆಂದು ಶಕುನಿಯು ಗರ್ಜಿಸುವನು. ಧರ್ಮವಂಚನೆಯೆಂಬ ಬಿರು ನುಡಿಯನ್ನು ಕೇಳಿ ದ್ರೋಣಾಚಾರ್ಯರಿಗೆ ರೋಷವುಂಟಾಗುವುದು. ಅವರು, "ಧರ್ಮವಂಚನೆಯೆ? ಗಾಂಧಾರ ರಾಜ್ಯವಿರುವ ಗರ್ವದಿಂದ ವಿಸ್ಮಿತನಾಗಿರುವ ಶಕುನಿ! ನಿನ್ನ ಅನಾರ್ಯಭಾವದ ದೆಸೆಯಿಂದ ಸಮಸ್ತರೂ ಅನಾರ್ಯರೆಂದು ಭಾವಿಸುತ್ತಿರುವೆ. ಅಯ್ಯೋ, ಇಲ್ಲಿ ಕೇಳು. ಪೈತೃಕವಾದ ರಾಜ್ಯವನ್ನು ತಮ್ಮಂದಿರಿಗೆ ಕೊಡೆಂದು ಹೇಳಿದರೆ ಅದು ವಂಚನೆ! ಕೇಳಿಸಿಕೊಂಡು ಕೊಡುವುದು ಉತ್ತಮವೆ ಅಥವಾ ಅವರೇ ಬಲತ್ಕಾರ ದಿಂದ ಕಸಿದುಕೊಳ್ಳುವುದು ಉತ್ತಮವೆ?" ಎಂದು ಗರ್ಜಿಸುವರು. ಭೀಷ್ಮರು ದುರ್ಯೋಧನನನ್ನು ಕುರಿತು ಆತನು ಮಿತ್ರಮುಖದ ಶತ್ರು ವಾದ ಶಕುನಿಯ ಮಾತನ್ನು ಕೇಳಕೂಡದೆಂದೂ, ಶಕುನಿಯ ದುರಹಂಕಾರಮಯವಾದ ಕುತಂತ್ರವಿಲ್ಲದೆ ಹೋಗಿದ್ದರೆ ಪಾಂಡವರು ದ್ರೌಪದೀ ಸಮೇತರಾಗಿ ಕಾಡಿನಲ್ಲಿ ಅಲೆಯುತ್ತ ಅಲ್ಲಿಯ ಧೂಳು ಅವರ ಮೈಗೆ ಅಂಟಿಕೊಂಡು ಅಂದಗೆಡಿಸಬೇಕಾಗಿರುತ್ತಿರಲಿಲ್ಲವೆಂದೂ ಹೇಳುವರು. ಧೂಳು ಅವರ ಮೈಗೆ ಅಂಟಿಕೊಳ್ಳುವ ಅಂಶವನ್ನು ಕವಿಯು ಸೂಚಿಸಿ ನಮ್ಮ ಮನಸನ್ನೇ ಕರಗಿಸಿದ್ದಾನೆ.

ಭೀಷ್ಮರ ಮಾತುಗಳಿಂದಲೂ ದುರ್ಯೋಧನನ ಮನಸ್ಸಿಗೆ ಸಮಾ ಧಾನವಾಗದಷ್ಟು ಮಟ್ಟಿಗೆ ಅವನಿಗೆ ಉದ್ವೇಗವುಂಟಾಗಿದೆ. ಪಾಂಡವರು

ಬಲಾತ್ಕಾರದಿಂದ ರಾಜ್ಯವನ್ನು ಕಸಿದುಕೊಳ್ಳುವ ಸುದ್ದಿಯನ್ನೆತ್ತಿ ತನ್ನೊಲಕ ದ್ರೋಣರು ಪಾಂಡವರ ಶೌರ್ಯವನ್ನು ಹೊಗಳಿ ಅವರು ತನಗಿಂತ ಶೂರರೆಂದು ಸೂಚಿಸಿದುದನ್ನು ವೀರ ದುರ್ಯೋಧನನು ಸ್ಥಿರಿಸಲಾರನು. ಆದಕಾರಣ ಅವನು ದ್ರೋಣರನ್ನು ಕುರಿತು, "ಅವರು ನಿಜವಾಗಿಯೂ ಬಲಾತ್ಕಾರ ಸಮರ್ಥರೇ ಆಗಿದ್ದ ಪಕ್ಷಕ್ಕೆ ಹಿಂದೆ ಸಭೆಯಲ್ಲಿ ರಾಜ್ಯವನ್ನೂ, ಮಾನವನ್ನೂ ಕಳೆದುಕೊಂಡಾಗ ಅವರು ರೋಷವನ್ನು ನುಂಗಿಕೊಂಡು ಸುಮ್ಮನಿದ್ದ ಬಗೆ ಹೇಗೆ?" ಎಂದು ಕೇಳುವನು. ಅದಕ್ಕೆ ದ್ರೋಣರು, "ಈ ವಿಚಾರದಲ್ಲಿ ಧರ್ಮವೆಂಬ ಹೆಸರಿನ ಆಭಾಸದಿಂದ ವಂಚಿತನಾದ ದ್ಯೂತವ್ಯಸನಿಯಾದ ಯುಧಿಷ್ಠಿರನನ್ನೇ ಕೇಳಬೇಕು. ಸಭಾಸ್ತಂಭವನ್ನು ನೋಡುತ್ತಿದ್ದ ಭೀಮನನ್ನು ಅವನು ಮಾತ್ರ ತಡೆಯದೆ ಸ್ವಲ್ಪ ಅವಕಾಶಕೊಟ್ಟಿದ್ದರೆ ಶಕುನಿಯು ಈ ದಿನ ನಮ್ಮನ್ನು ಆಕ್ಷೇಪಿಸುವಂತಿರಲಿಲ್ಲ" * ಎಂದು ಗದರಿಸುವರು. ಪಾಂಡವರಲ್ಲಿ ದ್ರೋಣರಿಗೆ ಪ್ರೀತಿಯಿದ್ದರೂ ಯುಧಿಷ್ಠಿರನು ದ್ಯೂತವ್ಯಸನಿಯಾದುದು ತಪ್ಪೆಂಬುದೂ ಅವರ ಆಶಯ. ಅಲ್ಲದೆ, ಕಪಟದ್ಯೂತದಲ್ಲಿ ರಾಜ್ಯವನ್ನು ಕಳೆದುಕೊಂಡು ಅವಮಾನಕ್ಕೀಡಾಗಿದ್ದೂ ಕೌರವರ ಮೇಲೆ ಕೈ

---

* « ಅತ್ರೇದಾನೀಂ ಧರ್ಮಚ್ಛಲೇನ ವಂಚಿತೋ ದ್ಯೂತಾಶ್ರಯ ವೃತ್ತಿರ್ಯುಧಿಷ್ಠಿರಃ ಪ್ರಷ್ಟವ್ಯಃ,

ಯೇನ ಭೀಮಃ ಸಭಾಸ್ತಮ್ಭಂ ತುಲಯನ್ನೇವ ವಾರಿತಃ ।
ಯದ್ಯೇಕಸ್ಮಿನ್ವಿಮುಕ್ತಃ ಸ್ಯಾನ್ನಾಸ್ಮಾಞ್ಛಕುನಿರಾಕ್ಷಿಪೇತ್ ॥ »

ಇಲ್ಲಿ, 'ಧರ್ಮಚ್ಛಲೇನ' ಎಂಬ ಪದಪ್ರಯೋಗವು ಗಮನಾರ್ಹವಾಗಿದೆ. ರಾಜ್ಯವನ್ನು ಕಳೆದುಕೊಂಡು ಅವಮಾನಕ್ಕೂ ಗುರಿಯಾದ ಕಪಟದ್ಯೂತದ ಸಂದರ್ಭದಲ್ಲಿ ಕೈಮಾಡುವುದು ಅಧರ್ಮವೆಂದು ಯುಧಿಷ್ಠಿರನು ಭಾವಿಸಿದುದು ತಪ್ಪೆಂದೂ ವಾಸ್ತವವಾಗಿ ಧರ್ಮದ ಪ್ರಶ್ನೆಯೇ ಇಲ್ಲದಿದ್ದೂ «ಧರ್ಮ ಧರ್ಮ" ಎಂಬ ಛಲದಿಂದ- ಅಭಾಸದಿಂದ- ಆತನು ವಂಚಿತನಾಗಿ ತಾನೂ ರೋಷವನ್ನು ನುಂಗಿ ಕೌರವರ ಮೇಲೆ ಕೈಮಾಡದಂತೆ ಭೀಮನನ್ನೂ ತಡೆದನೆಂದೂ ದ್ರೋಣರ ಆಶಯ.

ಮಾಡುವುದು ಧರ್ಮವಲ್ಲವೆಂದು ಭಾವಿಸಿ, ಧರ್ಮದ ಪ್ರಸಕ್ತಿಯೇ ಇಲ್ಲದೆಡೆಯಲ್ಲಿ, "ಧರ್ಮ ಧರ್ಮ" ಎಂಬ ಆಭಾಸಕ್ಕೆ ಕಟ್ಟುಬಿದ್ದು ಅದರಿಂದ ವಂಚಿತನಾದುದು ಯುಧಿಷ್ಠಿರನ ಅಪರಾಧವೆಂಬುದೂ ದ್ರೋಣರ ನಿಷ್ಪಕ್ಷಪಾತ ಹೃದಯದ ತೀರ್ಮಾನ. ಯುಧಿಷ್ಠಿರನು ಮಾತ್ರ ಭೀಮನನ್ನು ತಡೆಯದೆ ಹೋಗಿದ್ದರೆ ಶಕುನಿಯೇ ಮುಂತಾದ ವರೆಲ್ಲ ಅಂದೇ ಧ್ವಂಸವಾಗುತಿದ್ದರೆಂಬ ಅಪ್ರಿಯವಾದ ಸತ್ಯವಚನ ವನ್ನೂ ಅವರು ಆಡಿಬಿಡುವರು. ಅದರಿಂದಲೂ ದುರ್ಯೋಧನನ ಅಸಮಾಧಾನವು ಹೆಚ್ಚಿರಲೇಬೇಕು.

ಭೀಷ್ಮಾಚಾರ್ಯರು ದ್ರೋಣರಿಗೆ ಸಮಾಧಾನ ಹೇಳಲುಪಕ್ರಮಿಸಿ, "ಒಂದನ್ನು ಪ್ರಸ್ತಾವಿಸಿದರೆ ಮತ್ತೊಂದು ನಡೆಯಿತು. ಎಲೈ ಆಚಾರ್ಯನೆ! ಕಾರ್ಯವು ಮುಖ್ಯ; ಕಲಹವಲ್ಲ" ಎನ್ನುವರು. ದ್ರೋಣರ ರೋಷವು ಮತ್ತಷ್ಟು ಹೊರಹೊಮ್ಮುವುದು. ಅವರು, "ಕುತ್ಸಿತ ಯಾಚನೆಯಿಂದ ನಡೆಯುವ ಕಾರ್ಯವೇ ಬೇಡ. ಕಲಹವೇ ನಡೆಯಲಿ" ಎನ್ನುವರು. ಮೇಧಾವಿಗಳಾದ ಭೀಷ್ಮರು, "ಆಚಾರ್ಯ ಪ್ರಸನ್ನನಾಗು" ಎಂದು ಹೇಳಿ ಬಳಿಕ ದುರ್ಯೋಧನನನ್ನು ಕುರಿತು, "ನೋಡು ಮಗು! ಆ ಪಾಂಡವರು ದುರ್ಬಲರು. ಕಷ್ಟಕ್ಕೀಡಾದವರು. ನಿರಾಶ್ರಿತರು. ನಿನ್ನ ಸಹಾಯವನ್ನಪೇಕ್ಷಿಸುತ್ತಿದ್ದಾರೆಯೇ ಹೊರತು ಗರ್ವಪಡುತ್ತಿಲ್ಲ. ನೀನು ಜ್ಯೇಷ್ಠನು. ಅವರು ನಿನ್ನಲ್ಲಿ ಸ್ನೇಹದಿಂದಿರುತ್ತಾರೆ. ಅವರನ್ನು ಕುಟುಂಬದಲ್ಲಿ ಸೇರಿಸಿಕೊಂಡು ರಕ್ಷಿಸುವೆಯೋ, ಅಥವಾ ಅವರು ಕಾಡಿನಲ್ಲಿ ಮೃಗಗಳೊಡನೆ ಇರಬೇಕೋ?" ಎಂದು ಹೇಳುವರು. ಶಕುನಿಯು ಒಡನೆಯೇ, "ಇರಲಿ, ಇರಲಿ" ಎಂದು ಹೇಳಿ, "ಅವರು ಮೃಗಗಳೊಡನೆ ಇರಲಿ" ಎಂದೇ ಸೂಚಿಸಿ, ತನ್ನ ಕುಟಿಲ ಸ್ವಭಾವ ವನ್ನು ತೋರ್ಪಡಿಸುವನು. ಮಹಾಭಾರತದಲ್ಲಿ ಯುಧಿಷ್ಠಿರನೇ ದುರ್ಯೋಧನನಿಗಿಂತ ಹಿರಿಯನೆಂದು ಹೇಳಿದೆ. ಭಾಸನು ಈ ರೂಪಕ ದಲ್ಲಿ ದುರ್ಯೋಧನನಿಗೇ ಜ್ಯೇಷ್ಠ ಪಟ್ಟವನ್ನು ಕಟ್ಟಿ, ಕಿರಿಯರನ್ನು ಕಾಪಾಡುವ ಕರ್ತವ್ಯದ ಹೊರೆಯನ್ನು ಅವನ ತಲೆಯ ಮೇಲೆ ಹೇರಿ

ತನ್ನ ಸಂವಿಧಾನ ಕೌಶಲವನ್ನು ಮೆರೆದಿದ್ದಾನೆ. ಈ ಸಂದರ್ಭದಲ್ಲಿ ಶಕುನಿಯು, "ಇರಲಿ ಇರಲಿ" ಎಂದು ಹೇಳಿ ತನ್ನ ವಕ್ರಸ್ವಭಾವವನ್ನು ತೋರ್ಪಡಿಸಿಕೊಂಡಿರುವಂತೆಯೇ ಕರ್ಣನೂ ತನ್ನ ಋಜು ಸ್ವಭಾವ ವನ್ನೂ ಸೌಜನ್ಯವನ್ನೂ ತೋರ್ಪಡಿಸಿಕೊಂಡಿದ್ದಾನೆ. ಮಹಾಭಾರತದ ಕರ್ಣನಿಗೂ ಅವನಿಗೂ ಬಹುದೂರವೆಂಬುದು ಅವನು ಆಡುವ, "ಎಲೈ ಆಚಾರ್ಯ, ರೋಷವನ್ನು ಬಿಡಬೇಕು. ಹಿತವಚನಗಳನ್ನೇ ಆಡಿದರೂ ನಿಷ್ಠುರದ ನುಡಿಗಳಿಂದ ಆಡಿದರೆ ದುರ್ಯೋಧನನು ಕೇಳತಕ್ಕವನಲ್ಲ. ಆದರಿಂದ ಅವನು ರೋಷತಾಳುತ್ತಾನೆ. ಇತರ ಶೂರ ಶ್ರೇಷ್ಠರ ಹೊಗಳಿಕೆಯನ್ನು ಅವನು ಸ್ವೀಕರಿಸತಕ್ಕವನಲ್ಲ. ನಿಷ್ಠುರದ ನುಡಿಗಳು ಇನ್ನು ಸಾಕು. ಶಿಷ್ಯಕಾರ್ಯವನ್ನು (ಪಾಂಡವರ ಕಾರ್ಯವನ್ನು) ರಕ್ಷಿಸಿಕೊಳ್ಳಬೇಕು. ಬಹುದೋಷಗಳುಳ್ಳ ಆನೆಯಂತಿರುವ ದುರ್ಯೋಧನ ನನ್ನು ಮೃದುತ್ವದಿಂದಲೇ ಸ್ವಾಧೀನ ಪಡಿಸಿಕೊಂಡು ನಡೆಯಿಸಿಕೊಳ್ಳ ಬೇಕು" ಎಂಬ ಮಾತುಗಳಿಂದಲೇ ವ್ಯಕ್ತವಾಗುವುದು. ದುರ್ಯೋಧನನು ತೇಜಸ್ವಿಯಾದುದರಿಂದ ಬಿರುನುಡಿಗಳನ್ನು ಸಹಿಸಲಾರನೆಂಬುದೂ, ಆತನು ಅತಿಮಾನಿಯಾದುದರಿಂದ ಇತರ ಶೂರರ ಹೊಗಳಿಕೆಯನ್ನು ಸಹಿಸಲಾರನೆಂಬುದೂ ಕರ್ಣನ ಆಶಯ. ಈ ಗುಣಗಳು ಅತಿಯಾಗಿ ರುವುದರಿಂದ ದೋಷಯುಕ್ತವೆಂಬುದೂ ಅವನ ಅಭಿಪ್ರಾಯ. ದ್ರೋಣ ರದು ಮಗುವಿನ ಮನಸ್ಸು. ಸರಳ ಹೃದಯರಾದ ಅವರು ತಮ್ಮ ತಪ್ಪನ್ನು ತೋರಿಸಿಕೊಟ್ಟ ಕರ್ಣನಲ್ಲಿಕೂಡ ಪ್ರೀತಿಯನ್ನು ತೋರಿಸಿ, "ವತ್ಸ, ಕರ್ಣ! ಬ್ರಾಹ್ಮಣ್ಯವು ಆವೇಗವುಳ್ಳುದು. ಸಕಾಲದಲ್ಲಿ ನೀನು ಎಚ್ಚರಿಸಿದೆ. ನಿನ್ನ ಅಭಿಪ್ರಾಯಕ್ಕನುಸಾರವಾಗಿ ನಡೆಯುತ್ತೇನೆ." ಎಂದು ಅವನಿಗೆ ಹೇಳಿ ಆ ಬಳಿಕ ದುರ್ಯೋಧನನೊಡನೆ ಮೃದು ವಚನಗಳನ್ನಾಡಿ ಕೊನೆಗೆ, "ಮಗು, ನಾನು ಧರ್ಮವಂಚನೆಮಾಡಿದ್ದರೆ ಅದರ ದೋಷವೆಲ್ಲ ನನ್ನದೆ. ನಿನಗೇನೂ ಅದರಿಂದ ದೋಷತಟ್ಟದು. ನಾನು ಕೇಳಿರುವ ಯಜ್ಞದಕ್ಷಿಣೆಗಾಗಿ ನಿನ್ನನ್ನು ಪೀಡಿಸಿದರೆ ಅದರಿಂದಲೂ ನಿನಗೆ ಲಾಭವೇ. ದೊಡ್ಡ ಕುಲದವರಲ್ಲಿ ಪರಸ್ಪರವಾಗಿ ಹುಟ್ಟಿರುವ ಭೇದ ಭಾವನೆಗಳು ಧರ್ಮವಚನಗಳಿಂದ ಪರಿಹಾರವಾಗುತ್ತವೆ."

ಎನ್ನುವರು. ಧರ್ಮಾಭಿಮಾನಿಯಾದ ದುರ್ಯೋಧನನ ಮನಸ್ಸು ಕರಗಿ ಹೋಗಿರುವುದು. ಅವನು "ನಿಜ; ಆದುದರಿಂದಲೇ ನಾನು ಆಲೋಚನೆ ಕೇಳಬೇಕೆಂದಿದ್ದೇನೆ" ಎಂದು ಉತ್ತರ ಹೇಳುವನು.

ತಮ್ಮ ಕಾರ್ಯವು ಸಿದ್ಧಿಸುವುದೆಂಬ ಭಾವನೆಯಿಂದ ದ್ರೋಣರ ಮನಸ್ಸಿಗೆ ಅತ್ಯಂತ ಆನಂದವುಂಟಾಗಿ ಅವರು, "ಮಗು, ಯಾರೊಡನೆ ಆಲೋಚಿಸಬೇಕೆಂದು ಇಚ್ಛಿಸುವೆ ? ಭೀಷ್ಮನೊಡನೆಯೆ, ಕರ್ಣನೊಡನೆಯೆ, ಕೃಪನೊಡನೆಯೆ, ಸಿಂಧುರಾಜ ಜಯದ್ರಥನೊಡನೆಯೆ, ಅಶ್ವತ್ಥಾಮನೊಡನೆಯೆ, ವಿದುರನೊಡನೆಯೆ, ನಿನ್ನ ತಂದೆಯೊಡನೆಯೆ, ಅಥವಾ ನಿನ್ನ ತಾಯಿಯೊಡನೆಯೆ, ಯಾರೊಡನೆ, ಹೇಳು ಮಗು" ಎನ್ನುವರು. ದುರ್ಯೋಧನನು, "ಇಲ್ಲ, ಇವರೊಡನೆ ಆಲೋಚಿಸಬೇಕೆಂದಿಲ್ಲ. ಮಾವನೊಡನೆ" ಎಂದು ಹೇಳಿದುದನ್ನು ಕೇಳಿ ಅವರ ಉತ್ಸಾಹವೆಲ್ಲ ಕುಗ್ಗಿಹೋಗಿ "ಏನು ಶಕುನಿಯೊಡನೆಯೆ ? ಸರಿ, ಕಾರ್ಯವು ಹಾಳಾಯಿತು" ಎನ್ನುವರು. ಅಷ್ಟರಲ್ಲಿ ದುರ್ಯೋಧನನು, "ಮಾವ, ಇತ್ತ ಬಾ. ಮಿತ್ರ, ಕರ್ಣ, ಇತ್ತ ಬಾ" ಎಂದು ಅವರೊಡನೆ ಮಾತನಾಡಲು ಕರೆಯುವನು. ಆಗ ದ್ರೋಣರು, "ಆಗಲಿ, ಹೀಗಾದರೂ ಮಾಡುವೆನು" ಎಂದು ತಮ್ಮಲ್ಲಿ ತಾವು ಹೇಳಿಕೊಂಡು, "ವತ್ಸ, ಗಾಂಧಾರರಾಜ, ಇತ್ತ ಬಾ" ಎಂದು ಶಕುನಿಯನ್ನು ತಮ್ಮೆಡೆಗೆ ಕರೆಯುವರು. ಆ ಬಳಿಕ ತಮ್ಮ ಬಳಿಗೆ ಬಂದು ನಿಂತ ಶಕುನಿಯೊಡನೆ, "ವತ್ಸ ! ವಯೋಜೀರ್ಣನಾದ ಕಾರಣ ನಾನು ಕುಪಿತನಾಗಿ ಮಕ್ಕಳಂತೆ ಹುಚ್ಚಾಟ ಮಾಡಿದೆ. ಅದನ್ನು ಕ್ಷಮಿಸು. ನಾನು ಆಡಿದ ಅನಾರ್ಯಭಾಷೆಗೆ ಪ್ರೀತಿಮಯವಾದ ಈ ಆಲಿಂಗನವೇ ಶಾಂತಿ ಕ್ರಿಯೆ" * ಎಂದು ಹೇಳಿ ಅವನನ್ನು ಪ್ರೀತಿಯಿಂದ ಆಲಿಂಗಿಸುವರು. ಅವರು ಕಿರಿಯನಾದ ಶಕುನಿಯಲ್ಲಿ "ಕ್ಷಮೆಬೇಡಿ, ತಾವು ರೂಕ್ಷವಚನಗಳ

---

* " ವತ್ಸ !

ಕ್ರೋಧಪ್ರಾಯಂ ವಯೋಜೀರ್ಣಂ ಕ್ಷಂತವ್ಯಂ ವಟುಚಾಪಲಮ್ ।
ಅಸ್ಯ ರೂಕ್ಷಸ್ಯ ವಚಸಃ ಪರಿಷ್ವಂಗಃ ಶಮಕ್ರಿಯಾ ॥ "

ನ್ನಾಡಿದುದಾಗಿ ಅಪರಾಧವನ್ನೊಪ್ಪಿಕೊಳ್ಳುವ ಈ ಸನ್ನಿವೇಶದಲ್ಲಿ ನಮ್ಮ ಮನಸ್ಸೇ ಕಲಕಿ ಹೋಗುವುದು. ಕಲ್ಲುಮನಸ್ಸಾದರೂ ಕರಗೀತು. ಶಕುನಿಯ ಮನಸ್ಸು ಮಾತ್ರ ಕರಗದು. ಭೀಷ್ಮರು ಅದನ್ನು ಕಂಡು ತಮ್ಮಲ್ಲಿ ತಾವು, "ಗುರುವು ಶಿಷ್ಯವಾತ್ಸಲ್ಯದ ದೆಸೆಯಿಂದ ಶಕುನಿಯನ್ನು ಬೇಡುತ್ತಿದ್ದಾನೆ. ಆವನು ಹೀಗೆ ಸಮಾಧಾನ ಪಡಿಸಿದರೂ ಶಕುನಿ ಬೇರೆ ತನ್ನ ಕುಟಿಲತೆಯನ್ನು ಬಿಡನು" ಎಂದುಕೊಳ್ಳುತ್ತಾರೆ. ಶಕುನಿಯು ತನ್ನಲ್ಲಿ ತಾನು, "ಆಹ, ಆಚಾರ್ಯನು ಶಠನಲ್ಲವೆ! ಸ್ವಕಾರ್ಯ ಲೋಭದಿಂದ ನನ್ನನ್ನು ಸಂತೈಸುತ್ತಾನೆ" ಎಂದುಕೊಳ್ಳುತ್ತಾನೆ. ಶಿಷ್ಯರ ಮೇಲಿನ ಪ್ರೇಮದಿಂದ ನೀಚನನ್ನೂ ಯಾಚಿಸಿ ದೈನ್ಯವನ್ನು ತೋರಿದ ದ್ರೋಣರ ಸಾತ್ವಿಕ ಸ್ವಭಾವವು ಹುಟ್ಟುಕೇಡಿಗನಾದ ಶಕುನಿಗೆ ಹೇಗೆ ಅರ್ಥವಾದೀತು?

ದುರ್ಯೋಧನನು ಅನಂತರ ಶಕುನಿಕರ್ಣರೊಡನೆ ಮಾತನಾಡಲೆಂದು ಉಳಿದವರೆಲ್ಲರೂ ದೂರ ಸರಿದು ಕುಳಿತುಕೊಳ್ಳುವರು. ದುರ್ಯೋಧನನು, "ಮಾವ! ಪಾಂಡವರಿಗೆ ಅರ್ಧರಾಜ್ಯವನ್ನು ಕೊಡುವ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?" ಎಂದು ಕೇಳಿದುದಕ್ಕೆ ಶಕುನಿಯು ನಿರ್ದಾಕ್ಷಿಣ್ಯವಾಗಿ, "ಕೊಡಕೂಡದೆಂಬುದೇ ನನ್ನ ಅಭಿಪ್ರಾಯ" ಎಂದು ಉತ್ತರ ಹೇಳುವನು. ದುರ್ಯೋಧನನಿಗೆ- ಆ ಧರ್ಮವೀರನಿಗೆ- ಉಭಯಸಂಕಟ, ಪಾಂಡವರಿಗೆ ಅರ್ಧರಾಜ್ಯವನ್ನು ಕೊಡಬೇಕೆಂಬ ಅಪೇಕ್ಷೆ. ಆದರೆ ಮಾವನನ್ನು ಒಪ್ಪಿಸಬೇಕೆಂಬ ದಾಕ್ಷಿಣ್ಯ. ಅವನು ಮತ್ತೆ ಶಕುನಿಯನ್ನು ಕುರಿತು, "ಕೊಡಬೇಕೆಂದು ಹೇಳಿಬಿಡು, ಮಾವ" ಎಂದು ದೈನ್ಯದಿಂದ ಬೇಡುವನು. ಶಕುನಿಯು ಸಸೇಮಿರಾ. ಶಕುನಿಯು "ರಾಜ್ಯವನ್ನು ಕೊಡುವುದಾದರೆ ನಮ್ಮ ಆಲೋಚನೆಯನ್ನೇಕೆ ಕೇಳುವೆ? ಪೂರ್ತಿಯಾಗಿಯೇ ರಾಜ್ಯವನ್ನೆಲ್ಲ ಕೊಟ್ಟುಕೊ" ಎಂದು ಉತ್ತರ ಹೇಳುವನು.

ಆ ಬಳಿಕ ದುರ್ಯೋಧನನು ಕರ್ಣನನ್ನು ಕುರಿತು, "ಮಿತ್ರ, ಅಂಗರಾಜ! ನೀನು ಏನನ್ನೂ ಹೇಳಲಿಲ್ಲವಲ್ಲ" ಎನ್ನುವನು. ಕರ್ಣನು

ತನ್ನ ಘನತೆಗೆ ತಕ್ಕಂತೆ, "ಈಗ ನಾನೇನನ್ನು ತಾನೆ ಹೇಳಲಿ? ರಾಮ ಚಂದ್ರನು ಅನುಭವಿಸಿದ ಮತ್ತು ಪರಿಪಾಲಿಸಿದ ಸಹೋದರ ಪ್ರೇಮ ವನ್ನು (ನೀನು ತೋರಿಸುವುದಾದರೆ) ನಾನು ಅಡ್ಡಿಪಡಿಸುವುದಿಲ್ಲ. ಕ್ಷಮೆಯನ್ನು ತೋರುವುದಾಗಲಿ, ಬಿಡುವುದಾಗಲಿ ನಿನ್ನ ಇಷ್ಟ. ಯುದ್ಧ ಕಾಲದಲ್ಲಾದರೋ ನಾವು ಸಹಾಯಕರು" ಎಂದು* ಉತ್ತರ ಹೇಳು ವನು. ಶ್ರೀರಾಮಚಂದ್ರನು ಪರಿಪಾಲಿಸಿಕೊಟ್ಟ ಸಹೋದರಪ್ರೇಮ ವನ್ನು ("ಸುಭ್ರಾತೃತಾಂ") ನಾನು ಅಡ್ಡಿಪಡಿಸುವುದಿಲ್ಲವೆಂಬ ಮಾತಿ ನಿಂದಲೇ ಪಾಂಡವರಿಗೆ ಅರ್ಧರಾಜ್ಯವನ್ನು ಕೊಡೆಂದು ಕರ್ಣನು ಸೂಚಿಸುವನು. ದುರ್ಯೋಧನನು ಶಕುನಿಯನ್ನು ಕುರಿತು "ಮಾವ, ಬಲಿಷ್ಠರಾದ ಶತ್ರುಗಳಿಂದ ತುಂಬಿದ ಗಡಿನಾಡಿನ ಯಾವುದಾದರೂ ಕುದೇಶವನ್ನು ಆಲೋಚಿಸು. ಪಾಂಡವರು ಅಲ್ಲೇ ವಾಸಮಾಡುವರು" ಎಂದು ಹೇಳುವನು. ಶಕುನಿಯು ಆಶ್ಚರ್ಯವಿಷಾದಗಳಿಂದ ಕೂಡಿ, "ಅಯ್ಯೋ! ಅಂತಹ ದೇಶವೇ ಇಲ್ಲ. ಪಾರ್ಥನಿಗಿಂತ ಬಲಿಷ್ಠರಾರು? ಯುಧಿಷ್ಠಿರನು ರಾಜನಾದನೆಂದರೆ ಚೌಳು ನೆಲದಲ್ಲಿ ಕೂಡ ಬೆಳೆಯಾಗು ವುದು" ಎಂದು ಉತ್ತರ ಹೇಳುವನು. ಯುಧಿಷ್ಠಿರನ ಸತ್ಸ್ವಭಾವ ವನ್ನು ಇದಕ್ಕಿಂತ ಚೆನ್ನಾಗಿ ಹೊಗಳಲು ಸಾಧ್ಯವೇ ಇಲ್ಲ. ಶಕುನಿಯು ಆಡುವ ಈ ಮಾತುಗಳಿಂದ ಯುಧಿಷ್ಠಿರನ ಸ್ವಭಾವವು ನಮ್ಮ ಕಣ್ಣಿಗೆ ಕಟ್ಟಿದಂತಾಗುತ್ತದೆ. ದುರ್ಯೋಧನನು ಶಕುನಿಯ ಮಾತುಗಳನ್ನು ಕೇಳಿ, ತಾನು ದಾನಧಾರೆಯನ್ನೆರೆದು ಪ್ರಮಾಣಮಾಡಿ, ಕೊಟ್ಟಿದ್ದ ಮಾತನ್ನು ಉಳಿಸಿಕೊಳ್ಳಲೇಬೇಕೆಂದು ತಲ್ಲಣಿಸುವನು. ಶಕುನಿಯು ದ್ರೋಣ ರೊಡನೆ ಐದು ರಾತ್ರಿಗಳೊಳಗಾಗಿ ಪಾಂಡವರನ್ನು ಕರೆದು ತಂದರೆ ದುರ್ಯೋಧನನು ಅರ್ಧ ರಾಜ್ಯವನ್ನು ಕೊಡುವನೆಂದು ಹೇಳುವನು. ದ್ರೋಣರು ಹತಾಶರಾಗಿ, "ಬೇಡ; ಈ ಬಗೆಯ ಸಮಯ ಬೇಡ.

---

* "ಇದಾನೀಂ ಕಿಮಭಿಧಾಸ್ಯಾಮಿ ;
ರಾಮೇಣ ಭುಕ್ತಾಂ ಪರಿಪಾಲಿತಾಂ ಚ ಸುಭ್ರಾತೃತಾಂ ನ ಪ್ರತಿಷೇಧಯಾಮಿ ।
ಕ್ಷಮಾಕ್ಷಮತ್ವೇ ತು ಭವಾನ್ಪ್ರಮಾಣಂ ಸಙ್ಗ್ರಾಮಕಾಲೇಷು ವಯಂ ಸಹಾಯಾಃ॥"

ಹನ್ನೆರಡು ವರ್ಷಗಳಿಂದ ಯಾರೂ ನೋಡಿಲ್ಲದವರನ್ನು ನಾನು ಐದು ರಾತ್ರಿಗಳೊಳಗಾಗಿ ಕರೆದುಕೊಂಡು ಬರಬೇಕು. ನಾನು ಬೇಡಿದ ವರವನ್ನು ಕೊಡುವುದಿಲ್ಲವೆಂಬುದು ಸ್ಪಷ್ಟವಾಯಿತು" ಎಂದು ಹೇಳುವರು. ಭೀಷ್ಮರು ದುರ್ಯೋಧನನೊಡನೆ, "ವತ್ಸ! ದುರ್ಯೋಧನ! ಧರ್ಮವು ಈ ಬಗೆಯ ಸಮಯಗಳಿಂದ ಕೂಡಿರಕೂಡದು. ನನಗೂ ನೀನು ಮಾತನ್ನುಳಿಸಿಕೊಳ್ಳಬೇಕೆಂಬುದೇ ಇಷ್ಟ. ಒಂದು ವರ್ಷದ ಮೇಲಾದರೂ ಕೊಡು. ಅಥವಾ ನೂರು ವರ್ಷಗಳ ಮೇಲಾದರೂ ಕೊಡು. ಅಂತು ಪಾಂಡವರಿಗೆ ಅರ್ಧರಾಜ್ಯವನ್ನು ಕೊಡು. ವೀರ! ಅದಕ್ಕಾಗಿ ಪ್ರತಿಜ್ಞೆ ಮಾಡು. ಕುರುವಂಶದವರಾದವರಾಗಲೂ ಸತ್ಯಪ್ರತಿಜ್ಞರು" ಎಂದು ಹೇಳುವರು. ದುರ್ಯೋಧನನು, "ಇದೇ ನನ್ನ ನಿಶ್ಚಯ" ಎಂದು ಉತ್ತರ ಹೇಳಿ ಪಂಚರಾತ್ರ ಸಮಯವನ್ನೇ ಗೊತ್ತು ಮಾಡುವನು. ದ್ರೋಣರು ತಮ್ಮ ಮನಸ್ಸಿನಲ್ಲಿ, "ಕಾರ್ಯಲೋಭದಿಂದ ಈ ದಿನ ನನ್ನ ಆಶೆಯು ಹನೂಮತ್ತ್ವವನ್ನು ಹೊಂದಿದೆ. ಹನುಮಂತನು ಸಮುದ್ರವನ್ನೇ ಲಂಘಿಸಿ ಹೋಗಿ ಸೀತೆಯಿರುವ ಸ್ಥಳವನ್ನು ಗೊತ್ತುಮಾಡಿಕೊಂಡು ಬಂದು ತಿಳಿಸಿದನು. ನಾನು ಪಾಂಡವರ ವಾರ್ತೆಯನ್ನೆಲ್ಲಿಂದ ತರಲಿ?" ಎಂದುಕೊಳ್ಳುವರು.

ಆ ವೇಳೆಗೆ ವಿರಾಟನಗರದಿಂದ ಬಂದ ದೂತನು ಕೀಚಕ ಸಹೋದರರು ನೂರು ಮಂದಿಗಳನ್ನೂ ಶಸ್ತ್ರಘಾತವಿಲ್ಲದೆ ಬಾಹುಗಳಿಂದಲೇ ಹಿಂಡಿ ಹಿಂಸಿಸಿ ಯಾವನೋ ಕೊಂದನೆಂದೂ, ವಿಷಾದದಿಂದ ಆವೃತನಾದ ವಿರಾಟನು ಯಜ್ಞಕ್ಕೆ ಬರಲಿಲ್ಲವೆಂದೂ ತಿಳಿಸುವನು. ಭೀಷ್ಮರು ಇತರರೆಲ್ಲರಿಗಿಂತ ಮೇಧಾವಿಗಳು. ಅದು ಭೀಮನಿಂದಲೇ ಸಾಧ್ಯವೆಂದು ನಿರ್ಧರಿಸಿ, ಪಂಚರಾತ್ರಸಮಯಕ್ಕೆ ಸಮ್ಮತಿಸುವಂತೆ ದ್ರೋಣರನ್ನು ಪ್ರೇರಿಸುವರು. ಚಿಂತೆಯಲ್ಲಿ ಮುಳುಗಿಹೋದಂತೆ ಕುಳಿತಿರುವ ದ್ರೋಣರು ಅವರ ಆಶಯವನ್ನು ಗ್ರಹಿಸಲಾರದೆ ಅದೇಕೆಂದು ಕೇಳುವರು. ಭೀಷ್ಮರು ಅವರೊಡನೆ, "ಇದು ಬಾಹುಶಾಲಿಯಾದ ಭೀಮಸೇನನ ಲೀಲೆಯೆಂಬುದು ಸ್ಪಷ್ಟವಾಯಿತು. ಈ ನೂರುಮಂದಿ ಸೋದರರಲ್ಲಿದ್ದ ಅವನ ರೋಷದ

ಪರಿಣಾಮವು ಆ ನೂರುಮಂದಿ ಸೋದರರಲ್ಲಿ ಫಲಿಸಿತು'' ಎಂದು ಹೇಳುವರು. ಅಲ್ಲಿಗೂ ಸರಳಹೃದಯರಾದ ದ್ರೋಣರಿಗೆ ನಂಬಿಕೆ ಸಾಲದು. ಭೀಷ್ಮರು ಮತ್ತೆ ಭರವಸೆ ಹೇಳಿ ಹುರಿದುಂಬಿಸಿದ ಮೇಲೆ ಒಪ್ಪಿಕೊಳ್ಳುವರು; ಅಲ್ಲದೆ ದುರ್ಯೋಧನನಿಂದ ಮತ್ತೆ ವಾಗ್ದಾನವನ್ನು ದೃಢಪಡಿಸಿಕೊಳ್ಳುವರು. ಭೀಷ್ಮರು ದುರ್ಯೋಧನನೊಡನೆ, "ಮಗು, ದುರ್ಯೋಧನ, ನಿನ್ನ ಯಜ್ಞವೈಭವವನ್ನು ನೋಡಲು ವಿರಾಟನು ಬರಲಿಲ್ಲವಾದಕಾರಣ, ನನಗೆ ಅವನಲ್ಲಿ ಅಪ್ರಕಾಶವೈರವಿದೆ. ಅವನ ಗೋಗ್ರಹಣವು ನಡೆಯಬೇಕು" ಎಂದು ಹೇಳುವರು. ಸರಳಸ್ವಭಾವದವರಾದ ದ್ರೋಣರು ಅವರ ಬುದ್ಧಿಕುಶಲತೆಯನ್ನರಿಯದೆ, ವಿರಾಟನು ತಮ್ಮ ಪ್ರಿಯಶಿಷ್ಯನೆಂದು ಹೇಳಿ ಅವನ ಗೋಧನವನ್ನಪಹರಿಸಲೇಕೆಂದು ಕೇಳುವರು. ಆಗ ಭೀಷ್ಮರು ದ್ರೋಣರನ್ನು, "ಋಜುಬುದ್ಧಿಯುಳ್ಳ ಬ್ರಾಹ್ಮಣ! ರಥಗಳ ಶಬ್ದವನ್ನು ಕೇಳಿ ಪಾಂಡವರು ರೋಷಗೊಂಡು ಪ್ರವರ್ತಿಸುತ್ತಾರೆ. ವಿರಾಟನಲ್ಲಿ ಅವರಿಗೆ ಕೃತಜ್ಞತೆಯಿದೆ. ಗೋಗ್ರಹಣದಿಂದ (ಪಾಂಡವರ ನೆಲೆಯು ಗೊತ್ತಾಗಿ) ನಮ್ಮ ಇಷ್ಟವು ನೆರವೇರುತ್ತದೆ'' ಎಂದು ದ್ರೋಣರ ಕಿವಿಯಲ್ಲಿ ಹೇಳುವರು. ನಗರ ಪ್ರವೇಶಕ್ಕೆ ಸಿದ್ಧವಾಗಿದ್ದ ರಥಗಳು ವಿರಾಟನ ರಾಜ್ಯಕ್ಕೆ ಗೋಗ್ರಹಣಕ್ಕಾಗಿ ಓಡುವುವು. ಕೀಚಕವಧಾನಂತರ ಗೋಗ್ರಹಣದ ಸಲಹೆಯು ಮಹಾಭಾರತದಲ್ಲಿ ತ್ರಿಗರ್ತಭೂಪಾಲನಿಂದ ಬರುತ್ತದೆ; ಅಲ್ಲದೆ ಗೋಧನ ಲೋಭದಿಂದ ಕೌರವರು ವಿಜಯಯಾತ್ರೆ ಹೊರಡುತ್ತಾರೆ. ಕವಿಯು ಇಲ್ಲಿ ಅದನ್ನು ಮಾರ್ಪಡಿಸಿರುವ ರೀತಿಯು ಬಹು ಚೆನ್ನಾಗಿದೆಯೆಂದು ಧಾರಾಳವಾಗಿ ಹೇಳಬಹುದಾಗಿದೆ. ಭೀಷ್ಮದ್ರೋಣರು ಕೂಡ ಯುದ್ಧಮಾಡಿ ಸೋತಂತೆ ಮಹಾಭಾರತದಲ್ಲಿ ಹೇಳಿದೆ. ಆ ವೃದ್ಧರಿಗೆ ಪೆಟ್ಟು ಬೀಳುವ ಸೋಲಿನ ಸನ್ನಿವೇಶವನ್ನು ತಪ್ಪಿಸುವುದಕ್ಕಾಗಿ ಕರುಣಾರ್ದ್ರ ಹೃದಯನಾದ ಭಾಸಕವಿಯು ಕೌರವ ವೀರರ ಯುದ್ಧವನ್ನು ನೋಡಿ ಹರ್ಷಿಸಲು ಮಾತ್ರವೇ ಅವರು ತೆರಳಿದಂತೆ ಪಂಚರಾತ್ರದ ಸನ್ನಿವೇಶವನ್ನು ಕಲ್ಪಿಸಿದ್ದಾನೆ.

**ಎರಡನೆಯ ಅಂಕದ ಆರಂಭದಲ್ಲಿ ವಿರಾಟನಕಡೆಯ ಗೋಪಾಲಕರು ಪ್ರವೇಶಿಸುವರು. ವೃದ್ಧಗೋಪಾಲಕನು "ನಮ್ಮ ಹಸುಗಳು**

ಕರುಗಳಿಂದ ಕೂಡಿರಲಿ. ನಮ್ಮ ಗೋಪಯುವತಿಯರು ವಿಧವೆ ಯರಾಗದಿರಲಿ'' ಎಂದು ಮುಂತಾಗಿ ಹೇಳುವುದು ಚಿತ್ತಾಕರ್ಷಕವಾಗಿದೆ. ಒಣಮರದ ಒಣರೆಂಬೆಯ ಮೇಲೆ ಕುಳಿತ ಕಾಗೆಯು ಕೂಗುತ್ತಿದ್ದುದ ರಿಂದ ಅಮಂಗಳವನ್ನು ಶಂಕಿಸಿದ ವೃದ್ಧಗೋಪಾಲಕನು, "ನಮಗೂ ಗೋವುಗಳಿಗೂ ಶಾಂತಿಯಾಗಲಿ'' ಎಂದು ಹಾರೈಸಿ, ಗೋಮಿತ್ರಕನನ್ನು ಕೂಗಿ, ಅವನಿಂದ ಗೋರಕ್ಷಣಿಕೆ, ಘೃತಪಿಂಡ, ಸ್ವಾಮಿನಿ, ವೃಷಭದತ್ತ ಕುಂಭದತ್ತ, ಮಹಿಷದತ್ತ ಮುಂತಾದವರನ್ನು ಕರೆಯಿಸುವನು. ಅವ ರೆಲ್ಲರೂ ಹಾಡಿಕೊಂಡು ಕುಣಿಯಬೇಕೆಂದು ಅವನು ಅಪ್ಪಣೆಮಾಡುವನು; ಅವರ ಗೀತನೃತ್ಯಗಳನ್ನು ಕೊಂಡಾಡಿ ತಾನೂ ಕುಣಿಯಲಾರಂಭಿಸಿದನು. ಯುವಕಯುವತಿಯರ ಗೀತನೃತ್ಯಗಳಿಗೆ ಮರುಳಾದ ಮುದುಕನು ತಾನೂ ಕುಣಿಯತೊಡಗಿದುದನ್ನು ರಂಗಸ್ಥಳದಮೇಲೆ ನೋಡಿ ನಗದವರಾರು? ಭಾಸಮಹಾಕವಿಯು ಎಷ್ಟು ಮಟ್ಟಿಗೆ ತಿಳಿಯಾದ ಹಾಸ್ಯವನ್ನು ತಂದು ತುಂಬಬಲ್ಲನೆಂಬುದಕ್ಕೆ ಈ ದೃಶ್ಯವೇ ಒಂದು ನಿದರ್ಶನ. ವೃದ್ಧ ಗೋಪಾಲಕನ ಅಮಂಗಳದ ಶಂಕೆ ಫಲಿಸುವುದು. ಗೋಗ್ರಹಣಕ್ಕಾಗಿ ಬರುತ್ತಿರುವ ರಾಜರ ಶ್ವೇತಛತ್ರಗಳು ಮೊಸರಿನ ಗರಣೆಯಂತೆ ಬೆಳ್ಳಗಿದ್ದಂತೆ ವೃದ್ಧಗೋಪಾಲಕನು ವರ್ಣಿಸಿದಾಗ, ಮುಖದ ಮೇಲೆ ಬಿದ್ದ ಬೆಳದಿಂಗಳನ್ನು ಹಾಲೆಂದು ಭ್ರಮಿಸಿ ಬೆಕ್ಕು ತುಟಿಗಳನ್ನು ನೆಕ್ಕಿ ಕೊಂಡಿತೆಂದು ಬರೆದಿರುವ ಭಾಸಮಹಾಕವಿಯ ಶ್ಲೋಕವೂ ನೆನಪಾಗಿ ಮನಸ್ಸಿಗೆ ಸಂತೋಷವಾಗುತ್ತದೆ. ವೃದ್ಧಗೋಪಾಲಕನು ಕೊಡುವ ಉಪಮಾನವು ಕೂಡ ತನ್ನ ನಿತ್ಯಾನುಭವದಲ್ಲಿರುವ ವಸ್ತುವಿನ ಉಪಮಾನ. ಬಾಣಗಳು ಬೀಳುವುದಕ್ಕೆ ಪ್ರಾರಂಭವಾದೊಡನೆಯೆ, ಅವನು, "ಹೋ ಹೋ ಬಾಣಗಳು ಬೀಳುತ್ತಿವೆ. ಹುಡುಗರೆ, ಹುಡುಗಿ ಯರೆ, ಬನ್ನಿ ಮಕ್ಕಳಿರಾ, ಬೇಗ ಮನೆಗೆ ಓಡೋಣ.'' ಎಂದು ಹೇಳುವುದನ್ನೂ ಅವರುಗಳು "ಮಾವನ ಆಜ್ಞೆಯಾದಂತೆ" ಎಂದು ಓಡುವುದನ್ನೂ ವೃದ್ಧಗೋಪಾಲಕನು ಶತ್ರುಗಳನ್ನುದ್ದೇಶಿಸಿ "ಆಗಲಿ ಆಗಲಿ ನಿಲ್ಲಿ, ನಿಲ್ಲಿ; ಹೊಡೆಯಿರಿ, ಹೊಡೆಯಿರಿ; (ಗೋಧನವನ್ನು) ತೆಗೆದು ಕೊಳ್ಳಿ ತೆಗೆದುಕೊಳ್ಳಿ. ಈ ವೃತ್ತಾಂತವನ್ನು ಮಹಾರಾಜ ವಿರಾಟನಿಗೆ

ಹೇಳುತ್ತೇವೆ" ಎಂದುಕೊಂಡು ಹೊರಟು ಹೋಗುವುದನ್ನೂ ಕಂಡು ನಗುವನ್ನು ತಡೆಯಲಾರಿಗೆ ಸಾಧ್ಯ?

ಕೌರವರ ಗೋಗ್ರಹಣದ ವಾರ್ತೆಯನ್ನು ಕೇಳಿ ವಿರಾಟನು ಉದ್ವೇಗಗೊಂಡಿರುವನು. ಕೌರವರ ಮೇಲೆ ತನ್ನ ಪ್ರಯತ್ನವೇನೂ ಸಾಗದೆಂಬ ದುಃಖ, ಮೈದುನರ ಮರಣದಿಂದ ವಿಷಾದದಲ್ಲಿ ಮುಳುಗಿದ್ದ ತಾನು ಯಜ್ಞಕ್ಕೆ ಬರಲಿಲ್ಲವೆಂಬ ನೆವದ ಮೇಲೆ ಅವರು ಪಾಂಡವ ಪಕ್ಷಪಾತಿಯಾದ ತನ್ನಮೇಲೆ ನಿಷ್ಕಾರಣವಾಗಿ ಯುದ್ಧಕ್ಕೆ ಬಂದರೆಂಬ ಕೋಪ, ಇವುಗಳು ಅವನನ್ನು ಬಾಧಿಸುತ್ತಿರುವುವು. ಭಟನು ಬಂದು, "ಮಹಾರಾಜನಿಗೆ ಜಯವಾಗಲಿ" ಎಂದಾಗ ಅವನು ಮನನೊಂದು, "ಸಾಕು, ಮಹಾರಾಜ ಶಬ್ದದ ಸುದ್ದಿ. ನನ್ನ ಕ್ಷತ್ರಿಯತ್ವವೇ ನಿರಸ್ತವಾಗಿದೆ" ಎಂದು ಹೇಳುವನು. ಆದರೂ ಅವನೇನೂ ರಣಹೇಡಿಯಲ್ಲ. ಯುದ್ಧಕ್ಕೆ ಹೊರಡಲು ನಿರ್ಧರಿಸಿ, ರಥವನ್ನು ಸಜ್ಜುಗೊಳಿಸುವಂತೆ ಅಪ್ಪಣೆಮಾಡಿ, ಸಂನ್ಯಾಸಿ ವೇಷದಲ್ಲಿ ಅಜ್ಞಾತವಾಸಮಾಡುತ್ತಿರುವ ಯುಧಿಷ್ಠಿರನನ್ನು ಕರೆಯಿಸಿಕೊಂಡು ಆತನಿಗೆ ನಮಸ್ಕರಿಸಿ. ತಾನು ಗೋಗ್ರಹಣದಿಂದ ಅವಮಾನಿತನಾದುದಾಗಿ ಆ ಆಪ್ತನಲ್ಲಿ ಹೇಳಿಕೊಳ್ಳುವನು. ದುರ್ಯೋಧನಾದಿಗಳಿಂದ ಗೋಗ್ರಹಣವಾಯಿತೆಂದು ವಿರಾಟನಿಂದ ತಿಳಿದ ಮೇಲೆ ಯುಧಿಷ್ಠಿರನು ತನ್ನಲ್ಲಿ ತಾನು, "ಅಯ್ಯೋ ಕಷ್ಟ, ಜ್ಞಾತಿತ್ವವು ವಿವೇಕಿಗಳ ಮನಸ್ಸು ಕಂಪಿಸುವಂತೆ ಮಾಡುತ್ತದೆ. ವೈರಪ್ರಿಯರಾದ ಅವರು (ದುರ್ಯೋಧನಾದಿಗಳು) ಮಾಡಿರುವ ಅಪರಾಧವು ನಾವೇ ಮಾಡಿದ ಅಪರಾಧದಂತೆ ತೋರಿ ವ್ಯಥೆಯಾಗುತ್ತಿದೆ" ಎಂದು ಹೇಳಿಕೊಳ್ಳುವನು. ಯುಧಿಷ್ಠಿರನ ಸುಸ್ವಭಾವದ ಚಿತ್ರವು ನಮ್ಮ ಮನಸ್ಸಿನೆದುರಿಗೆ ನಿಲ್ಲಲು ಕವಿಯು ಸೊಗಸಾದ ಸನ್ನಿವೇಶವನ್ನು ಕಲ್ಪಿಸಿದ್ದಾನೆ. ಯುಧಿಷ್ಠಿರನು (ಸಂನ್ಯಾಸಿಯಾದ ಭಗವಾನ್) ತನ್ನೊಡನೆ ಮಾತನಾಡದೆ ಸುಮ್ಮನಿದ್ದುದನ್ನು ನೋಡಿ ವಿರಾಟನು, "ಭಗವನ್! ಯೋಚಿಸುತ್ತಿರುವುದೇನು?" ಎಂದು ಕೇಳುವನು. ಯುಧಿಷ್ಠಿರನು, "ಏನೂ ಇಲ್ಲ. ಅವರವಿಷಯದಲ್ಲಿ ಮನಮರುಗಿ ವಿಷಾದಿಸುತ್ತಿದ್ದೆ" ಎಂದು

ಉತ್ತರ ಹೇಳುವನು. ತನ್ನೆದುರಾಗಿದ್ದವನೇ ಯುಧಿಷ್ಠಿರನೆಂಬುದನ್ನರಿಯದ ವಿರಾಟನು ವೀರಾವೇಶದಿಂದ ಕೂಡಿ, "ಇಂದಿನಿಂದ ಅವರು ನಿಶ್ಚಿಂತ ರಾಗುತ್ತಾರೆ. ಯುಧಿಷ್ಠಿರನಾದರೆ ಅವರನ್ನು ಕ್ಷಮಿಸಲು ಶಕ್ತ. ನನ್ನಿಂದ ಅವರನ್ನು ಕ್ಷಮಿಸಲು ಸಾಧ್ಯವಿಲ್ಲ" ಎಂದು ಗರ್ಜಿಸುವನು. ಯುಧಿಷ್ಠಿರನು, "ಸರಿತಾನೆ" ಎಂದು ಲೋಕಾಭಿರಾಮವಾಗಿ ಅವನಿಗೆ ಉತ್ತರ ಹೇಳಿ ಆ ಬಳಿಕ ತನ್ನಲ್ಲಿ ತಾನು, "ನೆಲದ ಮೇಲಿನ ಈಗಿನ ಪರ್ಣ ಶಯ್ಯೆ, ರಾಜ್ಯಭ್ರಂಶ, ದ್ರೌಪದಿಯ ಅವಮಾನ, ಕುಟುಂಬದವರ ವೇಷಧಾರಣದ ಅಜ್ಞಾತವಾಸ ಇವೆಲ್ಲ ಶ್ಲಾಘ್ಯವಾಗಿಯೇ ಇದ್ದು ನನ್ನ ಕ್ಷಮೆಯನ್ನು ತಿಳಿಸುತ್ತಿವೆ" ಎಂದು ಹೇಳಿಕೊಂಡು ಸಂಕಟಪಡುವನು. ತನ್ನಿಂದ ಅವರೆಲ್ಲರಿಗೂ ಆ ಕಷ್ಟಗಳು ಒದಗಿದುವೆಂಬುದು ಆ ಸಾತ್ವಿಕನ ಆಶಯ.

ಅನಂತರ ಭಟನು ಪ್ರವೇಶಿಸಿ ದುರ್ಯೋಧನನು ಪೃಥ್ವಿಯ ರಾಜರುಗಳೆಲ್ಲರೊಡನೆ ಯುದ್ಧಕ್ಕೆ ಬಂದಿದ್ದುದಾಗಿ ತಿಳಿಸುವನು. ಆ ಬಳಿಕ ವಿರಾಟನು ಸೂತನನ್ನು ಕರೆಯಿಸಿ, "ನನ್ನ ರಥವನ್ನು ಶೀಘ್ರವಾಗಿ ತೆಗೆದುಕೊಂಡು ಬಾ. ಶ್ಲಾಘ್ಯನಾದ ರಣಾತಿಥಿಯು ಬಂದಿದ್ದಾನೆ, ಬಾಣಗಳಿಂದ ಭೀಷ್ಮನನ್ನು ಸಂತೋಷಪಡಿಸುತ್ತೇನೆ. ಗೆಲ್ಲುವ ಆಶೆಯಂತೂ ಇಲ್ಲವೇ ಇಲ್ಲ" ಎಂದು ಹೇಳಿ, ಕ್ಷತ್ರಿಯ ವೀರನಿಗೆ ತಕ್ಕಂತೆ ಯುದ್ಧಕ್ಕೆ ಸಿದ್ಧನಾಗುವನು. ವಿರಾಟನ ಪುತ್ರನಾದ ಉತ್ತರನು ತಂದೆಯ ರಥವನ್ನು ತೆಗೆದುಕೊಂಡು ಆಗಲೇ ಯುದ್ಧಕ್ಕೆ ತೆರಳಿದನೆಂದು ಸೂತನು ಹೇಳುವನು. ಆ ಮಾತನ್ನು ಕೇಳಿ ಯುಧಿಷ್ಠಿರನು ಕೂಡ ತಳಮಳ ಪಡುತ್ತ, ಯುದ್ಧಾಗ್ನಿಯು ಸಮೀಪಕ್ಕೆ ಹೋದವರನ್ನು ಸುಡದೆ ಬಿಡದೆಂದೂ ಉತ್ತರಕುಮಾರನನ್ನು ಮೊದಲು ಹಿಂದಕ್ಕೆ ಕರೆಯಿಸಬೇಕೆಂದೂ ಕೌರವರು ಬಹಳ ಜಾಗರೂಕತೆಯಿಂದ ಯುದ್ಧಮಾಡತಕ್ಕವರೆಂದೂ ವಿರಾಟನಿಗೆ ಹೇಳುವನು.

ಈ ಸಂದರ್ಭದಲ್ಲಿ ಭಾಸಮಹಾಕವಿಯು ಮಹಾಭಾರತದ ಕಥೆಯನ್ನು ಮಾರ್ಪಡಿಸಿ ತನ್ನ ಸಂವಿಧಾನಕೌಶಲವನ್ನು ಬಹುಚೆನ್ನಾಗಿ

ತೋರ್ಪಡಿಸಿದ್ದಾನೆ. ಅತ್ತ ವಿರಾಟನು ಪಾಂಡವರಲ್ಲಿ ಬೃಹನ್ನಳೆಯ (ಅರ್ಜುನನ) ಹೊರತು ಉಳಿದ ನಾಲ್ವರೊಡನೆ ತ್ರಿಗರ್ತ ಭೂಪಾಲನ ಮೇಲೆ ಯುದ್ಧಕ್ಕೆ ಹೋಗಿರುವಲ್ಲಿ ಇತ್ತ ಕೌರವರು ಉತ್ತರ ಗೋಗ್ರಹಣಕ್ಕೆ ಬಂದಂತೆಯೂ, ಹೇಡಿಯಾದ ಉತ್ತರಕುಮಾರನು ಬೃಹನ್ನಳೆಯನ್ನು ಸಾರಥಿಯಾಗಿ ಮಾಡಿಕೊಂಡು ರಣರಂಗಕ್ಕೆಹೋಗಿ ಬೆಚ್ಚಿದಂತೆಯೂ ಮಹಾಭಾರತದಲ್ಲಿ ಹೇಳಿದೆ. ಪಂಚರಾತ್ರದಲ್ಲಾದರೋ ಉತ್ತರಕುಮಾರನು ಶೂರ; ತಂದೆಗೆ ತಿಳಿಸಿ ರಣರಂಗಕ್ಕೆ ಹೋಗವಷ್ಟು ಆಲಸ್ಯವನ್ನೂ ಸಹಿಸದೆ ತಂದೆಯ ರಥವನ್ನೇರಿ ತನ್ನೊಡನೆ ಸಾರಥ್ಯಕ್ಕೆ ಬರುವುದಾಗಿ ಹೇಳಿದ ಸೂತನನ್ನು ಬೇಡವೆಂದೇ ಹೇಳಿ ಬೃಹನ್ನಳೆಯನ್ನು ಸಾರಥಿಯಾಗಿ ಮಾಡಿಕೊಂಡು ಯುದ್ಧಕ್ಕೆ ಹೋದ ಉತ್ಸಾಹಿಯಾದ ವೀರಕ್ಷತ್ರಿಯ; ರಥವು ಭಗ್ನವಾದರೂ ಭಯಪಡದ ಧೀರ ಹೃದಯ.

ಸಾರಥ್ಯಕ್ಕೆ ಬೃಹನ್ನಳೆಯನ್ನು ಕರೆದುಕೊಂಡು ಉತ್ತರ ಕುಮಾರನು ರಥದೊಡನೆ ಹೋದನೆಂದು ಸೂತನು ತಿಳಿಸಿದೊಡನೆಯೆ ಯುಧಿಷ್ಠಿರನು (ಭಗವಾನ್), ವಿರಾಟನನ್ನು ಕುರಿತು, ಬೃಹನ್ನಳೆಯು ಸಾರಥಿಯಾದ ಮೇಲೆ ಬಾಣಪ್ರಯೋಗವೇ ಆವಶ್ಯಕವಿಲ್ಲದೆ ಆ ರಥವೇ ಶತ್ರುಗಳನ್ನು ಜಯಿಸಿಕೊಂಡು ಬರುತ್ತದೆಂದು ಹೇಳುವನು. ವಿರಾಟನು ಸೂತನನ್ನು ಕುರಿತು ಮತ್ತೊಂದು ರಥವನ್ನು ಯುದ್ಧಕ್ಕೆ ಸಜ್ಜುಗೊಳಿಸುವಂತೆ ಅಪ್ಪಣೆ ಮಾಡುವನು. ಅವನು ಕೂಡಲೆ ಯುದ್ಧಕ್ಕೆ ಹೊರಡದೆ ರಣವಿಸ್ತರದ ವಾರ್ತೆಯನ್ನು ತರಿಸಿಕೊಳ್ಳುತ್ತ ಆಲಸ್ಯಮಾಡುವುದು ಮಾತ್ರ ಕೃತಕವಾಗಿ ಕಾಣುತ್ತದೆ. ಕೊನೆಗೆ ಉತ್ತರಕುಮಾರನಿಗೆ ಜಯವಾಯಿತೆಂದೂ, ಅವನು ಯುದ್ಧದಲ್ಲಿ ಸೇವೆಯನ್ನು ಸಮರ್ಪಿಸಿದ ತನ್ನ ಕಡೆಯ ವೀರರಿಗೆ ಬಹುಮಾನಗಳನ್ನು ಕೊಡುತ್ತಿದ್ದನೆಂದೂ ವಾರ್ತೆಬರುತ್ತದೆ. ವಿರಾಟನು ಹರ್ಷಿಸಿ ಬೃಹನ್ನಳೆಗೆ ಹೇಳಿಕಳುಹಿಸುತ್ತಾನೆ. ಬೃಹನ್ನಳೆಯೆಂದು ಹೆಸರಿಟ್ಟುಕೊಂಡು ವೇಷವನ್ನು ಧರಿಸಿದ್ದ ಅರ್ಜುನನು ಪ್ರವೇಶಿಸಿದಾಗ ವಿರಾಟನು ಅವನನ್ನು ಶ್ಲಾಘಿಸಿ ರಣವಿಸ್ತರವನ್ನು ಹೇಳೆಂದು ಕೇಳುವನು.

ಬೃಹನ್ನಳೆಯು ಪ್ರಾಕೃತ ಭಾಷೆಯಲ್ಲಿ "ಸುಣಾದು ಭಟ್ಟಾ" ("ಒಡೆಯನೆ ಕೇಳಬೇಕು") ಎಂದೊಡನೆಯೆ ವಿರಾಟನು "ವರ್ಣಿಸಬೇಕಾದ ಯುದ್ಧ ಕಾರ್ಯವು ಓಜಸ್ವಿಯಾದುದು. ಸಂಸ್ಕೃತಭಾಷೆಯಲ್ಲಿ ಹೇಳು" ಎಂದು ಅಪ್ಪಣೆಮಾಡುವುದು ಅನವಶ್ಯವೂ ಅಪ್ರಕೃತವೂ ಎನಿಸಿದೆ. ಓಜಸ್ವಿಯಾದ ಅಂಶವು ಪ್ರಾಕೃತಭಾಷೆಯಲ್ಲಿರಬಾರದೆಂಬ ತನ್ನ ಅಭಿಪ್ರಾಯವನ್ನು ವಿರಾಟನಿಂದ ಹೇಳಿಸಲು ಕವಿಯು ಪ್ರಯತ್ನಮಾಡಿರುವುದು ಕೃತಕವಾಗಿಯೂ ವಿಲಕ್ಷಣವಾಗಿಯೂ ಇದೆ.

ಬೃಹನ್ನಳೆಯು ಯುದ್ಧದ ವರ್ಣನೆಯನ್ನು ಆರಂಭಿಸುವಷ್ಟರಲ್ಲಿ ಅಭಿಮನ್ಯುವನ್ನು ಹಿಡಿದರೆಂಬ ವಾರ್ತೆಯು ಬರುತ್ತದೆ. ಉತ್ತರ ಗೋಗ್ರಹಣದಲ್ಲಿ ಕೌರವರ ಪಕ್ಷವನ್ನು ವಹಿಸಿ ಅಭಿಮನ್ಯುವು ಯುದ್ಧಮಾಡಿದುದಾಗಿ ಮಹಾಭಾರತದಲ್ಲಿ ಹೇಳಿಲ್ಲ. ನಮ್ಮ ಕವಿಯು ಮೂಲಕಥೆಯಿಂದ ಈ ಮಾರ್ಪಾಡನ್ನು ಮಾಡಿ ರೂಪಕದ ಸಂವಿಧಾನಕ್ಕೆ ಕಳೆಯೇರಿಸಿದ್ದಾನೆ. ಅಭಿಮನ್ಯುವನ್ನು ಹಿಡಿದರೆಂಬುದು ಬೃಹನ್ನಳೆಯ ಭಾಗಕ್ಕೆ ಬರಸಿಡಿಲಿನಂತಹ ವಾರ್ತೆ. ಅಜೇಯನಾದ ಅಭಿಮನ್ಯುವನ್ನು ಹಿಡಿದವರಾರೆಂಬುದು ಬೃಹನ್ನಳೆಯ ಮನಸ್ಸಿನ ಭೀಕರಸಮಸ್ಯೆ. ಹೀಗೆ ವಿಷಮ ಸಂಕಟಕ್ಕೊಳಗಾದ ಅರ್ಜುನನ (ಬೃಹನ್ನಳೆಯ) ಮುಖವಿಕಾರವನ್ನು ನೋಡಿ, ಯುಧಿಷ್ಠಿರನು (ಭಗವಾನ್), ಮರುಕದಿಂದ, "ಬೃಹನ್ನಳೆ! ಇದೇನಿದು?" ಎಂದು ಕೇಳುವನು. ಅಜ್ಞಾತವಾಸದ ರಗಳೆಯು ಬೇರೆ; ಅರ್ಜುನನು ತನ್ನ ಸಂಕಟವನ್ನು ಸ್ಪಷ್ಟವಾಗಿ ಹೇಳಿಕೊಳ್ಳುವುದಕ್ಕೂ ಇಲ್ಲ. ಆದಕಾರಣ ಅವನು, "ಭಗವನ್! ಅಭಿಮನ್ಯುವನ್ನು ಜಯಿಸಬಲ್ಲ ವೀರನನ್ನು ನಾನರಿಯೆ. ಪಾಂಡವರ ದುರ್ದೈವದಿಂದ ಅವನಿಗೆ ಈ ಅಪಮಾನವು ಪ್ರಾಪ್ತವಾಗಿರಬೇಕು" ಎಂದು ತಿಳಿಸುವನು. ಅಡಿಗೆಯ ಮನೆಯ ಅಧಿಕಾರದಲ್ಲಿ ನಿಯುಕ್ತನಾಗಿದ್ದವನು ನಿರಾಯುಧನಾಗಿ ಅಭಿಮನ್ಯುವಿನ ರಥದ ಬಳಿಗೆ ಹೋಗಿ ಅವನನ್ನು ಹಿಡಿದು ಕೆಳಕ್ಕಿಳಿಸಿದನೆಂದು ಭಟನು ಹೇಳುವನು. ಅದನ್ನು ಕೇಳಿ ಅರ್ಜುನನ ಮನಸ್ಸಿಗೆ ಸಮಾಧಾನ; ಅವನು, "ಹೀಗೆಯೆ! ಆರ್ಯಭೀಮನಿಂದ ಆಲಿಂಗಿತನಾದ; ಸೆರೆಯೇನೂ ಸಿಕ್ಕ

ಲಿಲ್ಲ" ಎಂದು ತನ್ನಲ್ಲಿ ತಾನು ಹೇಳಿಕೊಂಡು ಹರ್ಷಿಸುವನು. ಅಭಿಮನ್ಯುವನ್ನು ತನ್ನೆಡೆಗೆ ಕರೆದುಕೊಂಡು ಬರಬೇಕೆಂದು ವಿರಾಟನು ಸೂಚಿಸುವನು. ಆಗ ಯುಧಿಷ್ಠಿರನು, "ಎಲೈ ರಾಜನೆ! ಯಾದವ ಪಾಂಡವರ ಕಡೆಯವನಾದ ಅಭಿಮನ್ಯುವಿಗೆ ಭಯಪಟ್ಟು ಗೌರವ ತೋರಿದುದಾಗಿ ಜನರು ಭಾವಿಸಿಯಾರು. ಅವನಲ್ಲಿ ತಿರಸ್ಕಾರವನ್ನು ತೋರಿಸುವುದೇ ನ್ಯಾಯ?" ಎಂದು ಹೇಳುವನು. ಸುಸಂಸ್ಕೃತನೂ ಉದಾರ ಹೃದಯನೂ ಆದ ವಿರಾಟನು ಅದಕ್ಕೊಪ್ಪದೆ, ಸೌಜನ್ಯದಿಂದ ಅವನನ್ನು ಬರಮಾಡಿಕೊಳ್ಳಬೇಕೆಂದು ನಿರ್ಧರಿಸುವನು; ತನ್ನ ಮಗನಷ್ಟೇ ವಯಸ್ಸಾಗಿರುವ ಆತನನ್ನು, "ಪೂಜಾರ್ಹನಾದ ಅತಿಥಿ" ಯೆಂದು ಕರೆದು ವೀರನು ವೀರನಿಗೆ ಕೊಡಬೇಕಾದ ಗೌರವವನ್ನು ಸಲ್ಲಿಸುವನು. ಪಾಂಡವರಲ್ಲಿ ಇಬ್ಬರು ಆಗ ತನ್ನೆದುರಿಗೇ ಇರುವುದನ್ನರಿಯದೆ ಅವನು ಪಾಂಡವರನ್ನು ಕಂಡರೆ ತನಗೆ ಬಹಳ ಇಷ್ಟವೆಂದೂ ತಿಳಿಸಿ, ಅಭಿಮನ್ಯುವನ್ನು ತನ್ನೆಡೆಗೆ ಕರೆದುಕೊಂಡು ಬರತಕ್ಕವರಾರೆಂದು ಕೇಳುವನು. ಯುಧಿಷ್ಠಿರನು (ಭಗವಾನ್), ಬೃಹನ್ನಳಿಯೆಂದು ಹೇಳುವನು. ಅರ್ಜುನನ ಮನಸ್ಸಿನ ಗತಿಯನ್ನೇ ಹಿಡಿದು ಯುಧಿಷ್ಠಿರನು ಅವನ್ನು ಸೂಚಿಸುವನು. ಅರ್ಜುನನು ಹೊರಟುಹೋಗುವನು. ಪಾತ್ರಗಳ ಹೃದಯ ವೀಣೆಯನ್ನು ಕವಿಯು ಹೇಗೆ ಚತುರತೆಯಿಂದ ನುಡಿಬಸಲ್ಲನೆಂಬುದು ಈ ಬಗೆಯ ಸಣ್ಣಪುಟ್ಟ ವಿಚಾರಗಳಿಂದಲೂ ವ್ಯಕ್ತವಾಗುತ್ತದೆ. "ರೋಗಿ ಬಯಸಿದುದೂ ವೈದ್ಯ ಹೇಳಿದುದೂ ಹಾಲು ಅನ್ನ". ಆನಂದ ಬಾಷ್ಪವನ್ನು ಬಿಟ್ಟು ಮಗನನ್ನು ಆಲಿಂಗಿಸಿ ಮಾತನಾಡಿಸಲು ಅರ್ಜುನನಿಗೆ ತನ್ನೆದುರಿಗಿರುವಾಗ ಲಜ್ಜೆಯಾಗುವುದೆಂದು ಭಾವಿಸಿ ಯುಧಿಷ್ಠಿರನು ಆ ರೀತಿ ಸಲಹೆ ಹೇಳುತ್ತಾನೆ.

ಭೀಮಾರ್ಜುನರು ಅಭಿಮನ್ಯುವನ್ನು ವಿರಾಟನ ಬಳಿಗೆ ಕರೆದುಕೊಂಡು ಬರುವಂತೆ ಕವಿಯು ಮೂಲದಲ್ಲಿಲ್ಲದ ಕಥಾವಸ್ತುವನ್ನು ಕಲ್ಪಿಸಿಕೊಂಡು ರಸಿಕರನ್ನು ಮುಗ್ಧಗೊಳಿಸುವಂತೆ ಆ ಸನ್ನಿವೇಶವನ್ನು ನಿರ್ವಹಿಸಿದ್ದಾನೆ. ತನಗಿಂತ ಬಲಿಷ್ಠನಾಗಿದ್ದೂ ತನ್ನನ್ನು ಸ್ವಲ್ಪವೂ ನೋಯಿಸದೆ ಕರೆದುಕೊಂಡುಬಂದ ಬಾಹುಶಾಲಿಯಾರೆಂದೂ, ಉಮಾ

ವೇಷಧರನಾದ ಹರನಂತೆ ತನಗೆ ಹೊಂದದ ಹೆಣ್ಣಿನ ಅಲಂಕಾರದಿಂದ ಕೂಡಿ ತನ್ನೆದುರಿಗಿರುವ ವೀರನಾರೆಂದೂ ಅಭಿಮನ್ಯುವು ಆಶ್ಚರ್ಯಪಡುತ್ತಿರುವನು. ಅಭಿಮನ್ಯುವನ್ನು ಕಂಡು ಅರ್ಜುನನಿಗೆ ಹರ್ಷವುಂಟಾಗಿದ್ದರೂ, ಆತ್ಮಗೌರವವು ಪುತ್ರಸ್ನೇಹಕ್ಕಿಂತ ಮಿಗಿಲಾಗಿರುವ ಆ ವೀರನ ಮನಸ್ಸಿನಲ್ಲಿ ಸಂತಾಪವೂ ಇದೆ. ಆದುದರಿಂದ ಅವನು ಅಭಿಮನ್ಯುವಿಗೆ ಕೇಳಿಸದಂತೆ ಭೀಮನೊಡನೆ, "ಆರ್ಯನೆ, ಇವನನ್ನು ಇಲ್ಲಿಗೆ ಕರೆದು ತಂದುದು ಎಂತಹ ಅನುಚಿತವಾದ ಕೆಲಸವಾಯಿತು! ತಾನು ಮೊಟ್ಟ ಮೊದಲು ಮಾಡಿದ ಯುದ್ಧದಲ್ಲೇ ಪರಾಜಿತನಾದನೆಂಬ ಅಪಖ್ಯಾತಿಯುಂಟಾಯಿತು. ಪತಿವಿರಹಿತೆಯಾದ ಸುಭದ್ರೆಯು ಈಗ ಮಗನನ್ನೂ ಅಗಲಿ ದುಃಖಿಸುವಂತಾಯಿತು. ಇವನು ಸೋತನೆಂದು ಕೃಷ್ಣನು ಕೋಪಿಸಿಕೊಳ್ಳುತ್ತಾನೆ. ಆಗಲಿ, ಹೆಚ್ಚು ಹೇಳಿ ಪ್ರಯೋಜನವೇನು? ನೀನು ನಿನ್ನ ಬಾಹುಬಲವನ್ನು ದುರುಪಯೋಗ ಪಡಿಸಿದಂತೆಯೇ ಆಯಿತು"* ಎಂದು ಹೇಳುವನು. ಆಕ್ಷೇಪವನ್ನು ಸಹಿಸಿ ಸೈರಣೆಯಿಂದ ಸುಮ್ಮನಿರುವ ಚೇತನವೇ ಭೀಮಸೇನನದು? ಅವನು ತಾನು ಕುಮಾರನನ್ನು ಹಿಡಿದುತಂದುದೇಕೆಂಬುದನ್ನು ಸೂಚಿಸುವ ಆವೇಶ ಭರದಲ್ಲಿ, "ಅರ್ಜುನ" ಎಂದು ಗಟ್ಟಿಯಾಗಿ ಸಂಬೋಧಿಸುವನು. ಅರ್ಜುನನು ಆಗಿನ ಸನ್ನಿವೇಶದಲ್ಲಿ ಸಹ ಚಾತುರ್ಯದಿಂದ ವರ್ತಿಸಿ, ಭೀಮಸೇನನು ಮುಂದೆ ಮಾತನಾಡುವಷ್ಟರಲ್ಲಿ ತಾನೇ ಗಟ್ಟಿಯಾಗಿ ಮಾತನಾಡುತ್ತ "ಹೌದು ಹೌದು. ಇವನು ಅರ್ಜುನನ ಮಗನೇ" ಎನ್ನುವನು. ದುಡುಕಿ ಮಾತನಾಡುವವನಾದರೂ ಭೀಮನು ವಿವೇಕಿ. ಅರ್ಜುನನು ಆಡಿದ ಮಾತುಗಳನ್ನು ನ್ಯಾಯವೆಂಬುದನ್ನೂ ಭಾವಭರ

---

* "ಇಮಮಿಹಾನಯತಾ ಕಿಮಿದಾನೀಮಾರ್ಯೇಣ ಕೃತಮ್ |
ಅವಜಿತ ಇತಿ ತಾವದ್ದೂಷಿತಃ ಪೂರ್ವಯುದ್ಧೇ
ದಯಿತ ಸುತವಿಯುಕ್ತಾ ಶೋಚನೀಯಾ ಸುಭದ್ರಾ |
ಜಿತ ಇತಿ ಪುನರೇನಂ ರುಷ್ಯತೇ ವಾಸುಭದ್ರೋ
ಭವತು ಬಹು ಕಿಮುಕ್ತ್ವಾ ದೂಷಿತೋ ಹಸ್ತಸಾರಃ ||"

ದಲ್ಲಿ ತಾನು, "ಅರ್ಜುನ!" ಎಂದು ಅರ್ಭಟಿಸಿದುದನ್ನೇ ಪ್ರತ್ಯುತ್ಪನ್ನ ಮತಿಯಾದ ಅರ್ಜುನನು ಸಮಯಸ್ಫೂರ್ತಿಯಿಂದ ಸರಿಪಡಿಸಿದುದನ್ನೂ ಗ್ರಹಿಸಿ ಕ್ಷಣಮಾತ್ರದಲ್ಲಿ ಪ್ರಶಾಂತನಾಗಿ ತಾನು ದುಡುಕಿ, "ಅರ್ಜುನ" ಎಂದುದಕ್ಕಾಗಿ ಬಹುಶಃ ಲಜ್ಜಿತನೂ ಆಗಿ ಮಾತನಾಡುವನು. ತಾವಾರೆಂಬುದನ್ನು ಹೊರಪಡಿಸದೆ ಅಭಿಮನ್ಯುವಿನ ಮಾತುಗಳನ್ನು ಕೇಳ ಬೇಕೆಂಬುದು ಬಹುಶಃ ಅರ್ಜುನನ ಅಭಿಲಾಷೆ. ಅಭಿಮನ್ಯುವಿಗೆ ಕೇಳಿಸ ದಂತೆ ಭೀಮನು ತನ್ನ ತಮ್ಮನೊಡನೆ, "ಇವನನ್ನು ಹಿಡಿದು ತಂದುದ ರಲ್ಲಿ ಈ (ನೀನು ಹೇಳಿದ) ದೋಷಗಳಿಲ್ಲ ಇವೆ. ಆದರೆ ಮಗನು ಶತ್ರುಗಳ ಕೈಯಲ್ಲಿರುವುದನ್ನು ನೋಡಿ ಯಾವನು ತಾನೇ ಸಹಿಸಿಯಾನು? ದುಃಖಮಗ್ನಳಾಗಿರುವ ಪುತ್ರವತ್ಸಲೆಯಾದ ದ್ರೌಪದಿಯು ಇವನನ್ನು ನೋಡಲೆಂದು ಕರೆದುತಂದೆ" ಎಂದು ತಿಳಿಸುವನು. ಅಭಿಮನ್ಯು ವನ್ನು ಮಾತನಾಡಿಸೆಂದು ಅರ್ಜುನನು ಭೀಮನನ್ನು ಕೇಳುವನು.

ಭೀಮಸೇನನು, "ಅಭಿಮನ್ಯು!" ಎಂದು ಕೂಗುವನು. ತೇಜ ಸ್ವಿಯಾದ ಆ ಕ್ಷತ್ರಿಯ ಕುಮಾರನು ಅದನ್ನು ಸೈರಿಸಲಾರದೆ ರೋಷ ದಿಂದ, "ಅಭಿಮನ್ಯು, ಹೌದು" ಎಂದು ಮೊರೆಯುವನು. ಭೀಮಸೇ ನನು ಅರ್ಜುನನೊಡನೆ, "ನನ್ನಲ್ಲಿ ಇವನಿಗೆ ಕೋಪ. ನೀನೇ ಮಾತ ನಾಡಿಸು" ಎನ್ನುವನು. ಆಗ ಅರ್ಜುನನು, "ಅಭಿಮನ್ಯು!" ಎನ್ನು ವನು. ಅಭಿಮನ್ಯುವು ರೇಗಿ, "ಏನು ಏನು, ನಾನು ಅಭಿಮನ್ಯು, ಅಭಿ ಮನ್ಯುವಾದೆ, ಅಲ್ಲವೆ? ನೀಚಕುಲದವರು ಕ್ಷತ್ರಿಯ ವಂಶಜರನ್ನು ಹೆಸರು ಹಿಡಿದು ಸಂಬೋಧಿಸಿ ಮಾತನಾಡಿಸುವುದೆ? ಇದೇ ಇಲ್ಲಿಯ ರೂಢಿಯೊ, ಅಥವಾ ನನ್ನನ್ನು ಹಿಡಿದಿರುವುದರಿಂದ ಈ ತಿರಸ್ಕಾರವೊ?" ಎಂದು ಗರ್ಜಿಸುವನು. ಸಂಭಾಷಣೆಯಲ್ಲಿ ಕವಿಯು ಎಷ್ಟು ಸ್ವಾರಸ್ಯವನ್ನು ತುಂಬ ಬಲ್ಲನೆಂಬುದಕ್ಕೆ ಈ ದೃಶ್ಯವು ಉತ್ತಮವಾದ ನಿದರ್ಶನಗಳಲ್ಲೊಂದೆನಿಸಿದೆ. ಅರ್ಜುನನು, "ಅಭಿಮನ್ಯು! ನಿನ್ನ ತಾಯಿ ಸುಖವಾಗಿದ್ದಾಳೆಯೆ?" ಎಂದು ಕೇಳುವನು. ಅಭಿಮನ್ಯುವು ಕೆರಳಿ, "ಏನು, ಏನು, ಜನನಿ! ತಂದೆಯಂತೆ ನಮ್ಮ ಕುಟುಂಬದ ಹೆಂಗಸರ ಸುದ್ದಿಯನ್ನು ಕೇಳುವುದಕ್ಕೆ

ನೀನೇನು ಧರ್ಮರಾಜನೆ, ಭೀಮಸೇನನೆ ಅಥವಾ ಧನಂಜಯನೆ ?" ಎನ್ನುವನು. ಅರ್ಜುನನು, "ಅಭಿಮನ್ಯು, ದೇವಕೀ ಪುತ್ರನಾದ ಕೃಷ್ಣನು ಕುಶಲಿಯೆ ?" ಎಂದು ಕೇಳುವನು. ಇಲ್ಲಿ ದೇವಕೀ ಪುತ್ರನಾದ ಕೃಷ್ಣನೆಂದು ಕವಿಯು ಉದ್ದೇಶಪೂರ್ವಕವಾಗಿ ಪದಪ್ರಯೋಗ ಮಾಡಿದ್ದಾನೆ. ಸುಭದ್ರೆಯ ಸುದ್ದಿಯನ್ನೆತ್ತಿ ಅವನನ್ನು ಕೆರಳಿಸಿದುದಾಯಿತು. ಅರ್ಜುನನು ದೇವಕಿಯ ಸುದ್ದಿಯೂ ಬರುವಂತೆ ಕೃಷ್ಣನ ಪ್ರಸ್ತಾವಮಾಡಿ ಅವರೀರ್ವರ ವಿಷಯವನ್ನೂ ಮಿತಿಮೀರಿದ- ಅಪರಿಚಿತನಾದ ಕೀಳುಜಾತಿಯವನು ಅಪರಾಧಮಾಡುತ್ತಿರುವನೆಂದು ಅಭಿಮನ್ಯುವಿನ ಮನಸ್ಸಿಗೆ ತೋರುವವುಟ್ಟಿನ- ಸಲಿಗೆಯಿಂದ ಮಾತನಾಡುವಂತೆ ಕವಿಯು ಸಂವಿಧಾನವನ್ನು ಕಲ್ಪಿಸಿದ್ದಾನೆ. ಅರ್ಜುನನ (ಬೃಹನ್ನಳೆಯ) ಮಾತುಗಳನ್ನು ಕೇಳಿ ಕೆರಳಿದ ಅಭಿಮನ್ಯುವು, "ಆ ಪೂಜ್ಯನನ್ನೂ ಹೆಸರು ಹಿಡಿದು ಕೂಗುವುದೆ! ಹೌದು, ಹೌದು, ನಿಮ್ಮ ಬಂಧು ಕ್ಷೇಮವಾಗಿದ್ದಾನೆ" ಎಂದು ಹೇಳಿ ಅಣಕದ ಸಬಳವನ್ನೂರುವನು. ಅವನು ತನ್ನೆದುರಿಗಿದ್ದವರಾರೆಂಬುದನ್ನರಿತಿದ್ದರೆ, ರೋಷದಿಂದ ಆಡಿದ ಆ ಚುಚ್ಚುನುಡಿಗಳೂ ನಿಜವೆಂಬುದನ್ನರಿಯುತ್ತಿದ್ದನು. ರೋಷವಶನಾಗಿ ಅವನಾಡಿದ ಮಾತುಗಳಿಂದ ಆನಂದಿತರಾಗಿ ಭೀಮಾರ್ಜುನರು ಪರಸ್ಪರವಾಗಿ ತಮ್ಮ ತಮ್ಮ ಮುಖಗಳನ್ನು ನೋಡಿಕೊಳ್ಳುವರು. ಅಭಿಮನ್ಯುವು, "ತಿರಸ್ಕಾರದಿಂದ ಕೂಡಿ ನನ್ನನ್ನೇಕೆ ಹಾಸ್ಯ ಮಾಡುವಿರಿ ?" ಎಂದು ಕೇಳುವನು. ಅರ್ಜುನನು, "ಇನ್ನೇನೂ ಇಲ್ಲ. ತಂದೆ ಅರ್ಜುನ. ಜನಾರ್ದನನು ಸೋದರಮಾವ. ನೀನೋ ಅಸ್ತ್ರವಿದ್ಯೆಯನ್ನು ಕಲಿತಿರುವ ತರುಣ. ಹೀಗಿದ್ದೂ ಯುದ್ಧದಲ್ಲಿ ಪರಾಜಿತನಾದುದು ಯುಕ್ತವೆ?" ಎಂದು ಕೇಳುವನು. ಅಭಿಮನ್ಯುವು "ಮನಸ್ಸಿಗೆಬಂದಂತೆ ಮಾತನಾಡಬೇಡ. ಆತ್ಮಶ್ಲಾಘನೆಮಾಡಿಕೊಳ್ಳುವುದು ನಮ್ಮ ಕುಲದವರಿಗೆ ಉಚಿತವಲ್ಲ. ಯುದ್ಧದಲ್ಲಿ (ನಿಮ್ಮಕಡೆ) ಮೃತಪಟ್ಟವರ ದೇಹಗಳಲ್ಲಿ ನಾಟಿರುವ ಬಾಣಗಳನ್ನು ನೋಡು. ಅವುಗಳಲ್ಲೆಲ್ಲ ನನ್ನ ಹೆಸರು ಹೊರತು ಮತ್ತಾವ ಹೆಸರೂ ಇಲ್ಲ" ಎಂದು ಉತ್ತರ ಹೇಳುವನು. ಉಭಯ ವಂಶಗಳ "ತೇಜೋಗ್ನಿ" ಎಂದು ಯುಧಿಷ್ಠಿರನೇ- ಆ ಮೊದಲೇ- ವರ್ಣಿಸಿರುವ ವೀರಕಿಶೋರನ

ಪರಾಕ್ರಮಕ್ಕೆ ತಕ್ಕಸಾಕ್ಷ್ಯ. ಅರ್ಜುನನು ತನ್ನಲ್ಲಿ ತಾನು, "ಕುಮಾರನ ಮಾತು ನಿಜ. ಶರನಿಪುಣನಾದ ಇವನಿಂದ ಪೆಟ್ಟುತಿನ್ನದ ರಥಿಕನಾಗಲಿ ಅಶ್ವಾರೋಹಿ ಗಜಾರೋಹಿ ಯೋಧನಾಗಲಿ ಒಬ್ಬನೂ ಇಲ್ಲ. ನಾನು ರಥವನ್ನು ತಿರುಗಿಸದೆ ಹೋಗಿದ್ದರೆ ನನಗೂ ಪೆಟ್ಟು ಬೀಳುತ್ತಿದ್ದಿತು." ಎಂದುಕೊಂಡು ಅಭಿಮನ್ಯುವಿನೊಡನೆ, "ಹಾಗಾದರೆ ನೀನು ಪದಾತಿಗೆ ಸೆರೆಸಿಕ್ಕಿದುದೇಕೆ ?" ಎಂದು ಕೇಳುವನು. ಅಭಿಮನ್ಯುವು, "ಅವನು ಆಯುಧವನ್ನು ಬಿಸುಟು ನಿರಾಯುಧನಾಗಿ ಬಂದು ನನ್ನನ್ನು ಹಿಡಿದನು. ಅರ್ಜುನನ ಮಗನಾಗಿ ಅವನನ್ನು ನಾನು ಕೊಲ್ಲುವುದು ಹೇಗೆಂದು ಸುಮ್ಮನಾದೆನು" ಎಂದು ಉತ್ತರ ಹೇಳುವನು. ಭೀಮನು ತನ್ನಲ್ಲಿ ತಾನು ಅದನ್ನು ಶ್ಲಾಘಿಸುವನು. ಬಲಿಷ್ಠರೂ, ಸಾಧನಸಂಪತ್ತಿಯುಳ್ಳವರೂ ಯುದ್ಧಸಾಧನಗಳಿಲ್ಲದ ದುರ್ಬಲರನ್ನು ಧ್ವಂಸಮಾಡಕೂಡದೆಂಬುದು ಭಾಸಮಹಾಕವಿಯ ಸಂದೇಶಗಳಲ್ಲೊಂದೆಂಬುದು ಈ ಸನ್ನಿವೇಶದಿಂದ ಬಹು ಚೆನ್ನಾಗಿ ಗೊತ್ತಾಗುತ್ತದೆ.

ಅರ್ಜುನನು, "ಕುಮಾರನು ಹೀಗೆಬರಬೇಕು. ಇದೋ ಮಹಾರಾಜನು. ಕುಮಾರನು (ಆತನ) ಸಮೀಪಕ್ಕೆ ಹೋಗಬೇಕು" ಎಂದು ಹೇಳಿದಾಗ, ಅಭಿಮನ್ಯುವು, "ಆಃ! ಯಾರಿಗೆ ಮಹಾರಾಜ" ಎಂದು ಗರ್ಜಿಸುವನು. ಅಲ್ಲದೆ ಯುಧಿಷ್ಠಿರನಿಗೆ- ತಾನು ಬ್ರಾಹ್ಮಣನೆಂದು ಭಾವಿಸಿದ ಯುಧಿಷ್ಠಿರನಿಗೆ- ನಮಸ್ಕರಿಸಿ ಆ ಬಳಿಕ ವಿರಾಟನಿಗೆ ನಮಸ್ಕಾರಮಾಡದೆಯೇ ನಿಲ್ಲುವನು. ವಿರಾಟನು, "ಬಾ, ಬಾ, ಮಗು. ನನಗೇಕೆ ನಮಸ್ಕಾರ ಮಾಡುವುದಿಲ್ಲ? ಈ ಕ್ಷತ್ರಿಯ ಕುಮಾರನು ಗರ್ವಿತನಾಗಿದ್ದಾನೆ. ನಾನು ಇವನ ದರ್ಪವನ್ನು ಶಮನಮಾಡುತ್ತೇನೆ. ಇವನನ್ನು ಹಿಡಿದವರು ಯಾರು ?" ಎಂದುದಕ್ಕೆ ಭೀಮಸೇನನು, "ಮಹಾರಾಜ, ನಾನು" ಎನ್ನುವನು. ಅಭಿಮನ್ಯುವು ದರ್ಪದಿಂದ, "ನಿರಾಯುಧನಾಗಿ ಎಂದು ಹೇಳು" ಎನ್ನುವನು. ಅಭಿಮನ್ಯುವು ವಿರಾಟನನ್ನು ಕುರಿತು, "ನನ್ನಲ್ಲೊಂದು ಅನುಗ್ರಹವನ್ನು ತೋರಿಸುವುದಾದರೆ ನಿಗ್ರಹೋಚಿತವಾದ ಸಂಪ್ರದಾಯದಂತೆ ಕಾಲುಗಳಿಗೆ ಕಬ್ಬಿಣದ ಶೃಂಖಲಗಳನ್ನು ಹಾಕಿಸು.

ನನ್ನನ್ನು ಕರೆದು ತಂದುದು ಬಾಹುಗಳಿಂದ. ಭೀಮನು ಬಂದು ಬಾಹುಗಳಿಂದಲೇ ನನ್ನನ್ನು ಬಿಡಿಸಿಕೊಂಡು ಹೋಗುತ್ತಾನೆ" * ಎಂದು ಹೇಳುವನು. ಅಭಿಮನ್ಯುವೆಂದರೆ ಸಿಡಿಲಿನ ಮೂರ್ತಿ; ವಜ್ರದ ರಸ ಘಟ್ಟಿ. ಅವನಿಗೆ ತಕ್ಕ ಗಂಡುಮಾತುಗಳಿವು.

ವೀರಪುರುಷರಿಗೆಲ್ಲ ಯಥೋಚಿತವಾಗಿ ಬಹುಮಾನಗಳನ್ನು ಕೊಟ್ಟು ಉತ್ತರನು ಆ ವೇಳೆಗೆ ತಂದೆಯಬಳಿಗೆ ಬರುವನು. ಯುದ್ಧದಲ್ಲಿ ಜಯವಾದುದಕ್ಕೆ ತಾನೇ ಕಾರಣನೆಂದು ಎಲ್ಲರೂ ಹೊಗಳುತ್ತಿದ್ದ ಕಾರಣ ಆ ಮಿಥ್ಯಾಪ್ರಶಂಸೆಯಿಂದ ತಾನು ಲಜ್ಜಿತನಾಗಿರುವಂತೆ ಉತ್ತರನು ತನ್ನಲ್ಲಿ ತಾನು ಹೇಳಿಕೊಳ್ಳುವುದು ಅವನ ಋಜುತೆಯನ್ನು ತೋರಿಸುತ್ತದೆ. ಭೀಷ್ಮಾದಿಗಳನ್ನು ಗೆದ್ದುಬಂದ ತನ್ನ ಮಗನು ಒಟ್ಟು ಪೃಥ್ವಿಯನ್ನೇ ಗೆದ್ದುಬಂದಂತಾಯಿತೆಂದು ಭಾವಿಸಿ ಹಿಗ್ಗುತ್ತಿರುವ ವಿರಾಟನು ಮಗನನ್ನು ಆದರದಿಂದ ಬರಮಾಡಿಕೊಂಡು, "ವೀರರಾದ ಯೋಧರಿಗೆಲ್ಲ ಪಾರಿತೋಷಕಾದಿಗಳಿಂದ ಬಹುಮಾನ ಮಾಡಿದುದು ಮುಗಿಯಿತೆ?" ಎಂದು ಕೇಳುವನು. ಉತ್ತರನು, "ಬಹುಮಾನಿತರಾದರು. ಪೂಜ್ಯತಮನಿಗೆ ಮಾತ್ರ ಪೂಜೆಯು ಸಲ್ಲಬೇಕಾಗಿದೆ" ಎಂದು ಉತ್ತರ ಹೇಳುವನು. ವಿರಾಟನು ಕಕ್ಕುಬಿಕ್ಕಾಗಿ, "ಯಾರಿಗೆ?" ಎಂದು ಕೇಳಿದಾಗ, "ಪೂಜ್ಯನಾದ ಈ ಧನಂಜಯನಿಗೆ" ಎಂದು ಉತ್ತರನು ಬೃಹನ್ನಳೆಯನ್ನು ತೋರಿಸುವನು. ಅಲ್ಲದೆ ಅಕ್ಷಯಬಾಣಗಳ ತೂಣೀರದ ಸಹಾಯದಿಂದ ಯುದ್ಧಮಾಡಿ ಶತ್ರುಗಳನ್ನೂ ಜಯಿಸಿ ಧನಂಜಯನು ತನ್ನನ್ನು ರಕ್ಷಿಸಿದುದನ್ನೂ ಅವನು ತಂದೆಗೆ ತಿಳಿಸುವನು. ಉತ್ತರನೇ ಯುದ್ಧಮಾಡಿದ್ದೂ ಬಾಲ್ಯದ ದೆಸೆಯಿಂದ ಸಂಭ್ರಾಂತನಾಗಿ ಆ ರೀತಿ ಹೇಳುತ್ತಿದ್ದುದಾಗಿ ಅರ್ಜುನನು ವಾದಿಸುವನು. ಗಾಂಡೀವದ ಶಿಂಜಿನಿಯು ತಗುಲಿ ತಗುಲಿ ಮಣಿಕಟ್ಟು ಜಡ್ಡುಕಟ್ಟಿದ್ದುದು ಹನ್ನೆರಡು

---

* ಯುದ್ಧಹವಮನುಗ್ರಾಹ್ಯಃ

ಪಾದಯೋಽಸ್ಸಮುದಾಚಾರಃ ಕ್ರಿಯತಾಂ ನಿಗ್ರಹೋಚಿತಃ ।
ಬಾಹುಭ್ಯಾಮಾಹೃತಂ ಭೀಮೋ ಬಾಹುಭ್ಯಾಮೇವ ನೇಷ್ಯತಿ ॥

ವರ್ಷಗಳಾದ ಮೇಲೂ ಇನ್ನೂ ಹಾಗೆಯೇ ಇದ್ದುದನ್ನು ಉತ್ತರನು ತನ್ನ ಮಾತಿಗೆ ಪ್ರಮಾಣವಾಗಿ ಸೂಚಿಸುವನು. ಕೈಗಳಿಂದ ತೆಗೆಯುವಾಗ ಬಳೆಗಳು ಒತ್ತಿ ಒತ್ತಿ ಮಣಿಕಟ್ಟಿನ ಚರ್ಮವು ಕಪ್ಪಾಗಿದ್ದುದಾಗಿ ಅರ್ಜುನನು ತಿಳಿಸುವನು. ಉತ್ತರ ಕುಮಾರನಿಂದಲೇ ಜಯವು ಲಭಿಸಿತೆಂದು ಎಲ್ಲರೂ ನಂಬಿ ಆ ಕಿರಿಯನನ್ನು ಹೊಗಳಲೆಂಬುದು ಉದಾರ ಹೃದಯನಾದ ಆ ಹಿರಿಯನ ಆಶೆ. ಉತ್ತರನು ಅಭಿಮನ್ಯುವಿನ ಸಮವಯಸ್ಕನಾದ ಉತ್ಸಾಹಶಾಲಿಯಾಗಿರುವುದೂ ಅದಕ್ಕೊಂದು ಕಾರಣ. ಅರ್ಜುನನಿಗೆ ಆ ಆಶೆಯಿರುವುದರಿಂದಲೇ ಅವನು ಆ ರೀತಿ ಸುಳ್ಳು ಹೇಳುವನೇ ಹೊರತು, ಅಜ್ಞಾತವಾಸದ ರಹಸ್ಯವು ಹೊರಪಡುವುದೆಂಬ ಭಯದಿಂದಲ್ಲ. ಏಕೆಂದರೆ, ವಿರಾಟನು ತನ್ನ ಮಾತನ್ನು ನಂಬಲಾರದೆ ತನ್ನ ಕೈಯ್ಯನ್ನು ಪರೀಕ್ಷಿಸಲು ಬಂದಾಗ ಅರ್ಜುನನು, "ಪಾಶುಪತಾಸ್ತ್ರಧಾರಿಯಾದ ಅರ್ಜುನನು ನಾನಾದರೆ ಈತನು ಭೀಮಸೇನನು; ಈತನು ಯುಧಿಷ್ಠಿರ ಮಹಾರಾಜನು" ಎಂದು ಹೇಳಿ ತಾವಾರೆಂಬುದನ್ನು ತಿಳಿಸುವನು. ಮಹಾಭಾರತದಲ್ಲಿ ಹೀಗಿಲ್ಲ. ಉತ್ತರಗೋಗ್ರಹಣದ ಯುದ್ಧವಾದ ಮೂರನೆಯ ದಿನ ಪಾಂಡವರು ಮಂಗಳಸ್ನಾನಮಾಡಿ ಸಿಂಹಾಸನದಲ್ಲಿ ಕುಳಿತುಕೊಂಡಿದ್ದುದನ್ನು ಕಂಡು ವಿರಾಟನು- ತನ್ನ ಊಳಿಗದವರು ಸಿಂಹಾಸನವನ್ನೇರಿದರೆಂದು ಭಾವಿಸಿ- ಅಸಮಾಧಾನಪಟ್ಟು ಕುಪಿತನಾದಾಗ ಪಾಂಡವರು ತಮ್ಮ ಪರಿಚಯವನ್ನು ಹೇಳಿಕೊಂಡಂತೆ ಇದೆ.

ತನ್ನ ಆಶ್ರಿತರಾಗಿದ್ದವರು ಪಾಂಡವರೆಂದು ತಿಳಿದು ವಿರಾಟನ ಆನಂದಕ್ಕೆ ಪಾರವೇ ಇಲ್ಲ. ಅಜ್ಞಾನವಶದಿಂದ ನಡೆದ ಪುತ್ರಾಪರಾಧವನ್ನು ಮನ್ನಿಸಬೇಕೆಂದು ಪ್ರಾರ್ಥಿಸಿ ಅಭಿಮನ್ಯುವು ಭೀಮಾರ್ಜುನರಿಗೆರಗಿ, ಅನಂತರ ಭೀಮನ ಅಪ್ಪಣೆಯಂತೆ ವಿರಾಟನಿಗೆ ನಮಸ್ಕಾರ ಮಾಡುವನು. ವಿರಾಟನು, "ಬಾ, ಬಾ, ಮಗು. ಯುಧಿಷ್ಠಿರನಂತೆ ಧೈರ್ಯಶಾಲಿಯಾಗು. ಭೀಮನಂತೆ ಬಲಯುತನಾಗಿ ಅರ್ಜುನನ ನೈಪುಣ್ಯವನ್ನು ಪಡೆ. ನಕುಲ ಸಹದೇವರಂತೆ ರೂಪಸಂಪನ್ನನಾಗಿ, ಜಗತ್ಪ್ರ

ಯನಾದ ಕೃಷ್ಣನಂತೆ ಕೀರ್ತಿಯನ್ನು ಪಡೆ" ಎಂದು ಆಶೀರ್ವದಿಸುವನು. ನಕುಲ ಸಹದೇವರೂ ವಿರಾಟನ ಆಶ್ರಿತರಾಗಿ ಅಜ್ಞಾತವಾಸದಲ್ಲಿದ್ದರೂ, ಮಹಾಭಾರತದ ಗೋಗ್ರಹಣಯುದ್ಧದಲ್ಲಿ ಅವರು ರಣಭೂಮಿಗೆ ತೆರಳುವಂತೆ ಪಂಚರಾತ್ರದಲ್ಲಿ ಅವರಿಗೆ ಪ್ರಾಧಾನ್ಯವಿಲ್ಲ. ಅನವಶ್ಯವಾಗಿ ಪಾತ್ರಗಳ ಸಂಖ್ಯೆಯನ್ನು ಹೆಚ್ಚಿಸಲು ಭಾಸಮಹಾಕವಿಗೆ ಇಷ್ಟವಿಲ್ಲದಿರುವುದೇ ಅದಕ್ಕೆ ಕಾರಣವೆನ್ನಬಹುದಾಗಿದೆ.

ಬೃಹನ್ನಳೆಯು ಗಂಡಸಲ್ಲವೆಂದು ನಂಬಿ ವಿರಾಟನು ತನ್ನ ಮಗಳಾದ ಉತ್ತರೆಗೆ ಬೃಹನ್ನಳೆಯನ್ನು ನಾಟ್ಯಾಚಾರ್ಯನನ್ನಾಗಿ ನಿಯಮಿಸಿದ್ದನು. ಬೃಹನ್ನಳೆಯು ಅರ್ಜುನನೆಂದು ತಿಳಿದ ಮೇಲೆ ವಿರಾಟನು, ಅರ್ಜುನನು ಉತ್ತರೆಯೊಡನೆ ಅಂತಃಪುರದಲ್ಲಿದ್ದ ಶಂಕೆಯು ತನ್ನನ್ನು ಬಾಧಿಸುತ್ತಿದ್ದುದಾಗಿ ತನ್ನಲ್ಲಿ ತಾನು ಹೇಳಿಕೊಂಡು, ನೀರನ್ನು ತರಿಸಿ ಶುದ್ಧಾಚಮನವಾಡಿ, ಅರ್ಜುನನನ್ನು ಕುರಿತು, "ಅರ್ಜುನ! ಗೋಗ್ರಹಣ ವಿಜಯದ ಶುಲ್ಕದಂತೆ ಉತ್ತರೆಯನ್ನು ಪತ್ನಿಯಾಗಿ ಸ್ವೀಕರಿಸು" ಎನ್ನುವನು. ಆ ಮಾತುಗಳನ್ನು ಕೇಳಿ ಯುಧಿಷ್ಠಿರನು ತನ್ನಲ್ಲಿ ತಾನು "ಈ ನನ್ನ ತಲೆಯನ್ನು ತಗ್ಗಿಸುವ ಸ್ಥಿತಿಯೊದಗಿತು" ಎಂದುಕೊಳ್ಳುವನು. ಅರ್ಜುನನಾದರೋ ತನ್ನಲ್ಲಿ ತಾನು, "ಹೇಗೆ ನನ್ನ ಚಾರಿತ್ರ ಪರೀಕ್ಷೆಯನ್ನು ಮಾಡುತ್ತಿದ್ದಾನೆ!" ಎಂದುಕೊಂಡು, "ಎಲೈ ಮಹಾರಾಜನೆ! ಅಂತಃಪುರದ ನಾರಿಯರೆಲ್ಲ ನನಗೆ ಪ್ರಿಯರು. ಅವರನ್ನೆಲ್ಲ ತಾಯಿಯರಂತೆ ಆರಾಧಿಸಿದ್ದೇನೆ. ನೀನು ದಾನಮಾಡಿರುವ ಉತ್ತರೆಯನ್ನು ಅಭಿಮನ್ಯುವಿನ ಪತ್ನಿಯಾಗಲು ಸ್ವೀಕರಿಸುತ್ತೇನೆ" * ಎಂದು ತಿಳಿಸುವನು. ತಲೆತಗ್ಗಿಸಿ ಕುಳಿತಿದ್ದ ಯುಧಿಷ್ಠಿರನು, "ಇನ್ನು ಈ ತಲೆಯನ್ನು ಮೇಲಕ್ಕೆತ್ತಬಹುದು" ಎಂದು ಹೇಳಿಕೊಂಡು ಹರ್ಷಿಸುವನು. ಅರ್ಜುನನ ಚಾರಿತ್ರಶುದ್ಧಿಗಾಗಿ ವಿರಾಟನೂ ಸಂತಸಗೊಂಡು ಶ್ಲಾಘಿಸಿ, "ಇಂದೇ ಶುಭನಕ್ಷತ್ರ. ಅಭಿಮನ್ಯುವಿವಾಹವು ಇಂದೇ ನಡೆಯಲಿ"

---

* "ಇಷ್ಟಮಂತಃಪುರಂ ಸರ್ವಂ ಮಾತೃವತ್ಪೂಜಿತಂ ಮಯಾ ।
ಉತ್ತರೈಷಾ ತ್ವಯಾ ದತ್ತಾ ಪುತ್ರಾರ್ಥೇ ಪ್ರತಿಗೃಹ್ಯತೇ ॥"

ಎನ್ನುವನು. ಯುಧಿಷ್ಠಿರನು ಭೀಷ್ಮರ ಅಪ್ಪಣೆಗಾಗಿ ಅವರ ಬಳಿಗೆ ಉತ್ತರನನ್ನು ಕಳುಹಿಸಬೇಕೆಂದು ಸೂಚಿಸುವನು.

ಮೂರನೆಯ ಅಂಕದಲ್ಲಿ ಅಭಿಮನ್ಯುವಿನ ಸೂತನು ಕೌರವರ ಬಳಿಗೆ ಬಂದು ತನ್ನ ಸ್ವಾಮಿಯನ್ನು ಶತ್ರುಪಕ್ಷದವರು ಹಿಡಿದುಕೊಂಡು ಹೋದರೆಂದು ಹೇಳುವನು. ಯುದ್ಧವನ್ನು ನೋಡಲು ಬಂದಿರುವ ದ್ರೋಣರು ತಮ್ಮ ತೇಜಸ್ವಿನ ಸ್ಫುಲಿಂಗಗಳಂತಿರುವ ವೀರವಾಣಿಗಳಿಂದ, " ಸೂತ, ಹೇಳು, ಹೇಳು. ರಣಪಟುವಾದ ನನ್ನ ಶಿಷ್ಯಪುತ್ರನನ್ನಾವನು ಕರೆದೊಯ್ದನು ? ದೈವಿಕವಾದ ನನ್ನ ಬಾಣಗಳೊಡನೆ ಹೋರಾಡಲಿಚ್ಛಿಸುತ್ತಿರುವವನು, ಅವನಾವನು ? " § ಎಂದು ಮುಂತಾಗಿ ಗರ್ಜಿಸುವರು. ಶಿಷ್ಯರಲ್ಲೆಷ್ಟು ಪ್ರೀತಿಯೋ ದ್ರೋಣರಿಗೆ ! ಭೀಷ್ಮರೂ ಸಹ, " ತಮ್ಮ ಕಡೆಯವರು ಸೋತು ಓಡಿಹೋದರೆಂಬುದರ ಪರಿಜ್ಞಾನವೇ ಇಲ್ಲದಷ್ಟು ಮಟ್ಟಿನ ತಾರುಣ್ಯ ಭಾವದ ದರ್ಪದಿಂದ ಹೋರಾಡುತ್ತಲೇ ನಿಂತು, ಹಿಂಡಿನಿಂದ ಹಿಂದೆಯೇ ಉಳಿದ ಈ ಮರಿಯಾನೆಯು ಹಿಂಡಿನ ಸಲಗವನ್ನು ಹಿಡಿಯಲು ಬಂದವನಾವನಿಗೆ ಸೆರೆಸಿಕ್ಕಿತು? " ಎಂದು ಕೇಳುವರು. ಕರ್ಣದುರ್ಯೋಧನರೂ, ಕೊನೆಗೆ ಶಕುನಿಯೂ ವೀರವಚನಗಳಿಂದ ಗರ್ಜಿಸುವರು.

॥ ೬ ಅಭಿಮನ್ಯುವನ್ನು ಹಿಡಿದುಕೊಂಡುಹೋದ ಪದಾತಿಯು ರಥವನ್ನು ಬಾಹುಗಳಿಂದ ಹಿಡಿದಾಗ ಕುದುರೆಗಳು ಕೊರಳನ್ನು ನೀಡಿ ಎಷ್ಟು ಎಳೆದರೂ ರಥವು ಅಲುಗಲಿಲ್ಲವೆಂದು ಸೂತನು ಹೇಳುವನು. ಆ ಪದಾತಿಯು ಭೀಮಸೇನನೇ ಆಗಿರಬೇಕೆಂದು ಭೀಷ್ಮದ್ರೋಣರು ನಿರ್ಧರಿಸುವರು. ಅದು ನಿಜವಾದರೆ ಪಾಂಡವರಿಗೆ ಅರ್ಧರಾಜ್ಯವನ್ನು ಕೊಡಬೇಕಾದೀತೆಂಬ ಶಂಕೆಯಿಂದ ತಳಮಳಗೊಂಡು ಶಕುನಿಯು,

---

§ " ರಣಪಟುರಪನೀತಃ ಕೇನ ಮೇ ಶಿಷ್ಯಪುತ್ರಃ

ಕ ಇವ ಮಮ ಶರೈಸ್ತೈರ್ದೈವತೈರ್ಯೋದ್ಧುಕಾಮಃ ।

...................................................................... "

"ಲೋಕದಲ್ಲಿ ಮತ್ತಾರೂ ಬಲಿಷ್ಠರು ಇಲ್ಲವೆ? ಎಲ್ಲ ಸಾಹಸಗುಣವೂ ನಿಮ್ಮ ಪ್ರಿಯ ಪಾಂಡವರಿಗೇಯೆ? ಜಗತ್ತಿನಲ್ಲೆಲ್ಲ ಪಾಂಡವರೇ ಇದ್ದಾರೆಂದು ನಿಮಗೆ ತೋರುತ್ತಿದೆ" ಎಂದು ಹೇಳುವನು. ಭೀಷ್ಮರು ಗಂಭೀರ ವಾಣಿಯಿಂದ, "ಶಕುನಿ! ಊಹೆಯಿಂದ ಇದನ್ನೆಲ್ಲ ನಿರ್ಧರಿಸಬೇಕಾಗುತ್ತದೆ. ನಾವುಗಳೆಲ್ಲ ಬಿಲ್ಲುಬಾಣಗಳನ್ನು ಧರಿಸಿ ರಥಾರೂಢರಾಗಿ ಯುದ್ಧಕ್ಕೆ ಹೋಗುವವರು. ತೋಳುಗಳೇ ಆಯುಧಗಳಾಗಿ ಯುದ್ಧ ಮಾಡುವವರು ಭೀಮ ಬಲರಾಮರಿಬ್ಬರೇ" ಎಂದು ಹೇಳುವರು. ಶಕುನಿಯು, "ಸಾಹಸಿಗಳಾದ ನಮ್ಮೆಲ್ಲರನ್ನೂ ಉತ್ತರನೊಬ್ಬನೇ ಸೋಲಿಸಿ ಓಡಿಸಿದನು. ಆ ಉತ್ತರನೇ ಅರ್ಜುನನೆಂದು ಇವರು ಹೇಳುತ್ತಾರೋ ಏನೋ!" ಎಂದು ಅಪಹಾಸ್ಯಮಾಡುವನು. ದ್ರೋಣರು "ಗಾಂಧಾರ ರಾಜ! ಅರ್ಜುನನು ಯುದ್ಧಮಾಡಿದುದರಲ್ಲೂ ನಿನಗೆ ಸಂದೇಹವೆ? ಸಿಡಿಲಿನಂತೆ ಶಿಂಜಿನಿಯ ಧ್ವನಿಯಾಗುತ್ತಿದ್ದ ಆ ಧನುಸ್ಸಿನ ಬಾಣಗಳನ್ನು ಬಿಡುವುದೂ, ಸೂರ್ಯಕಿರಣಗಳೇ ಕಾಣದಂತೆ ಶರಗಳನ್ನು ಬಿಟ್ಟು ಮುಹೂರ್ತಕಾಲ ಸೂರ್ಯಾಸ್ತವಾದಂತೆ ತೋರುವ ಹಾಗೆ ಮಾಡುವುದೂ ಉತ್ತರನಿಂದ ಸಾಧ್ಯವೆ?" ಎಂದು ಕೇಳುವರು. ಶಕುನಿಯು ಆ ಬಗೆಯ ಅನುಮಾನ ಪ್ರಮಾಣವನ್ನು ನಂಬುವವನಲ್ಲ. ಅಷ್ಟರಲ್ಲಿ ಸೂತನೊಂದು ಬಾಣವನ್ನು ತಂದು ಅದರ ಹಿಂಭಾಗದಲ್ಲಿ ಏನನ್ನೋ ಬರೆದಿದೆ ಎನ್ನುವನು. ಭೀಷ್ಮರು ಅಕ್ಷರಗಳನ್ನು ನೋಡಿ, "ವತ್ಸ, ಗಾಂಧಾರರಾಜ. ಮುಪ್ಪಿನಿಂದ ನನ್ನ ದೃಷ್ಟಿಯು ಮಬ್ಬಾಗಿದೆ. ಈ ಬಾಣದ ಅಕ್ಷರಗಳನ್ನು ನೀನೇ ಓದು" ಎನ್ನುವರು. ಶಕುನಿಯು ಅದನ್ನು ತೆಗೆದುಕೊಂಡು, "ಅರ್ಜುನನ(ದು)" ("ಅರ್ಜುನಸ್ಯ") ಎಂದು ಓದಿ ಅದನ್ನು ಕೆಳಕ್ಕೆಸೆಯುವನು. ಬಾಣವು ದ್ರೋಣರ ಕಾಲುಗಳ ಬಳಿ ಬೀಳುವುದು. ಅದು ತಮಗೂ ಭೀಷ್ಮರಿಗೂ ವಂದನೆ ಮಾಡಲು ಅರ್ಜುನನು ಬಿಟ್ಟ ಬಾಣವೆಂದು ದ್ರೋಣರು ಹೇಳುವರು. ಶಕುನಿಯು ಅದಕ್ಕೂ ಸಗ್ಗದೆ, ಅರ್ಜುನನೆಂಬ ಹೆಸರಿನ ಮತ್ತಾವನೋ ಯೋಧನ ಬಾಣವು ಅದೇಕಾಗಿರಕೂಡದೆಂದೂ, ಉತ್ತರನ ಬರೆಹವನ್ನು ತೋರಿಸಬೇಕೆಂದೂ ಹೇಳುವನು. ಪಾಂಡವರಿಗೆ ರಾಜ್ಯವನ್ನು ಕೊಡಿ

ಸೆಲು ಸುಳ್ಳುಹೇಳಿದರೆ, ಯುಧಿಷ್ಠಿರನನ್ನು ನೋಡಿದ ಮೇಲೆ ಮಾತ್ರವೇ ತಾನು ಅರ್ಧರಾಜ್ಯವನ್ನು ಕೊಡುವುದಾಗಿ ದುರ್ಯೋಧನನು ಹೇಳುವನು. ಅಷ್ಟರಲ್ಲಿ ಉತ್ತರನು ಬಂದು ಧರ್ಮರಾಜನು, "ಉತ್ತರೆಯು ನನ್ನ ಸೊಸೆಯಾಗುವಳು. ರಾಜರುಗಳೆಲ್ಲ ವಿವಾಹಕ್ಕೆ ಬಿಜಯಮಾಡಬೇಕು. ವಿವಾಹವು ಅಲ್ಲಿ (ಕೌರವ ಗೃಹದಲ್ಲಿ) ನಡೆಯಬೇಕೆ ಅಥವಾ ಇಲ್ಲಿ ನಡೆಯಬೇಕೆ?" ಎಂದು ಹೇಳಿಕಳುಹಿಸಿರುವನೆಂದು ತಿಳಿಸುವನು. ಅಸೂಯಾಮೂರ್ತಿಯಾಗಿ ಔದಾರ್ಯ ವಿಹೀನನಾದ ಶಕುನಿಯು "ಅಲ್ಲೇ, ಅಲ್ಲೇ," ಎಂದು ಹೇಳುವನು. ವಿವಾಹವು ಕೌರವಗೃಹ ದಲ್ಲಿ ನಡೆಯಲೆಂಬ ಧಾರಾಳಬುದ್ಧಿಯು ಕೂಡ ಅವನಿಗಿಲ್ಲ.

ಐದು ದಿನಗಳು ಕಳೆದಿಲ್ಲದ ಕಾರಣ, ಪಂಚರಾತ್ರ ಸಮಯಕ್ಕನು ಸಾರವಾಗಿ ಪಾಂಡವರ ನೆಲೆಯು ಗೊತ್ತಾದುದರಿಂದ ಅರ್ಧರಾಜ್ಯವನ್ನು ಕೊಡಬೇಕೆಂದು ದ್ರೋಣರು ದುರ್ಯೋಧನನನ್ನು ಕೇಳುವರು. ಕ್ಷಾತ್ರಾ ಚಾರ್ಯರೂ, ಶಿಷ್ಯವತ್ಸಲರೂ, ಸ್ವಾರ್ಥರಹಿತರೂ, ಶರಶತಕಠಿನಹಸ್ತರೂ ಜೀರ್ಣವೃದ್ಧರೂ ಆದ ದ್ರೋಣರು ಆಡುವ, "ಧರ್ಮದಿಂದ ದಾನ ವಾಗಿ ಪಡೆದ ಭಿಕ್ಷೆಯನ್ನು ಧರ್ಮದಿಂದ ಕೊಡು" ಎಂಬ ಮಾತು ಗಳು ಹೃದಯವೇಧಕವಾಗಿವೆ. ಸಾತ್ತ್ವಿಕ ಶ್ರೇಷ್ಠರಾದ ಅವರು ಪರಾರ್ಥ ಸಾಧನೆಗಾಗಿ ಆಡುವ ಆ ದೈನ್ಯ ವಚನಗಳಿಂದ ಅಂತಃಕರಣವು ಕಲಕಿ ಹೋಗಿ ಕಂಬನಿಯ ಕಾಣಿಕೆಯನೊಪ್ಪಿಸದವನು ಪಶುವಾಗಿರಬೇಕು, ಇಲ್ಲವೇ ಯೋಗಿಯಾಗಿರಬೇಕು. ಸತ್ಯ ಶರಣನಾದ ಧರ್ಮವೀರ ದುರ್ಯೋಧನನು, "ಆಗಲಿ; ಒಳ್ಳೆಯದು. (ದ್ಯೂತಕ್ಕೆ) ಮುಂಚೆ ಇದ್ದಂತೆ ಪಾಂಡವರ ರಾಜ್ಯವನ್ನು ಕೊಟ್ಟೆ. ಸತ್ಯವನ್ನುಳಿಸಿಕೊಂಡಿದ್ದ ವರು ಸತ್ತಮೇಲೂ ಬದುಕಿರತಕ್ಕವರು"* ಎನ್ನುವನು. ದ್ರೋಣರು ಮಂಗಳ ಶ್ಲೋಕವನ್ನು ಹೇಳುವರು. ಪಂಚರಾತ್ರ ರೂಪಕವು ಅಲ್ಲಿಗೆ ಪೂರೈಸುವುದು.

---

* "ಬಾಢಂ ದತ್ತಂ ಮಯಾ ರಾಜ್ಯಂ ಪಾಂಡವೇಭ್ಯೋ ಯಥಾಪುರಮ್ ।
ಮೃತೇಽಪಿ ಹಿ ನರಾಸ್ಸರ್ವೇ ಸತ್ಯೇ ತಿಷ್ಠನ್ತಿ ತಿಷ್ಠತಿ ॥"

ಈ ರೂಪಕದಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ ಅಂಶಗಳು ಮೂರು. **ಮೊದಲನೆಯದು,** ಒಂದು ಸ್ತ್ರೀಪಾತ್ರವನ್ನೂ ಉಪಯೋಗಿಸದೆ ಕವಿಯು ಅತ್ಯಂತ ಸ್ವಾರಸ್ಯವಾಗಿ ರೂಪಕರಚನೆ ಮಾಡುವುದು. **ಎರಡನೆಯದು,** ಮಧ್ಯಮ ವ್ಯಾಯೋಗದಲ್ಲಿ ವೀರ ಘಟೋತ್ಕಚನ ಶೌರ್ಯವನ್ನು ಚಿತ್ರಿಸಿರುವಂತೆಯೇ ಇಲ್ಲಿ ವೀರ ಅಭಿಮನ್ಯುವಿನ ಶೌರ್ಯವನ್ನು ಚಿತ್ರಿಸಿ ಕವಿಯು ವೀರತರುಣರಲ್ಲಿ ತನಗಿರುವ ಅಭಿಮಾನವನ್ನು ವ್ಯಕ್ತಪಡಿಸಿರುವುದು. ಉತ್ತರ ಕುಮಾರನಲ್ಲಿ ಕೂಡ ಕವಿಯು ಪಕ್ಷಪಾತವನ್ನು ತೋರಿಸಿ ಅವನ ಹೇಡಿತನವನ್ನು ತಪ್ಪಿಸಿದ್ದಾನೆ. **ಮೂರನೆಯದು,** ಕಥಾವಸ್ತು ಪಾತ್ರರಚನೆ ಇವೆರಡರಲ್ಲೂ ಸ್ವಾತಂತ್ರ್ಯವನ್ನು ವಹಿಸಿ ನಡೆಯಿಸಿರುವ ಮಾರ್ಪಾಡುಗಳು. ಅವುಗಳಲ್ಲಿ ಮುಖ್ಯವಾದವುಗಳನ್ನೆಲ್ಲ ಆಗಲೇ ಸೂಚಿಸಿದ್ದೇವೆ. ಉಳಿದ ಮಾರ್ಪಾಡುಗಳಲ್ಲಿ ಮುಖ್ಯವಾದವುಗಳನ್ನು ಮುಂದೆ ಸೂಚಿಸಲಾಗುವುದು.

**ಪಾತ್ರರಚನೆ:**—ಪಾತ್ರಗಳನ್ನು ಕಡೆದು ನಿಲ್ಲಿಸುವುದರಲ್ಲಿ ಭಾಸಮಹಾಕವಿಯು ತೋರಿಸಿರುವ ಕೌಶಲವನ್ನು, ಪಾತ್ರಗಳ ಗುಣಾವಗುಣಗಳನ್ನೂ, ಸಂವಿಧಾನ ಕೌಶಲವನ್ನೂ, ಕುರಿತು ಪ್ರಸ್ತಾವಿಸುವಾಗಲೇ ಸೂಚಿಸಿರುವ ಕಾರಣ, ಇಲ್ಲಿ ಹೆಚ್ಚೇನನ್ನೂ ಹೇಳಬೇಕಾಗಿಲ್ಲ.

ವಿರಾಟನಂತಹ ಸಾಮಾನ್ಯ ಪಾತ್ರವನ್ನು ಕೂಡ ಕವಿಯು ಉತ್ತಮಪಡಿಸಿದ್ದಾನೆ. ಮಹಾಭಾರತದ ಒರಟನಾದ ವಿರಾಟನಿಗಿಂತ ಪಂಚರಾತ್ರದ

**ವಿರಾಟ**

ವಿರಾಟ ಪಾತ್ರವು ಹೆಚ್ಚು ಸಂಸ್ಕೃತವಾಗಿರುವಂತೆ ಕವಿಯು ಸನ್ನಿವೇಶಗಳನ್ನು ಕಲ್ಪಿಸಿದ್ದಾನೆ. ಗೋವುಗಳು ಶತ್ರುವಶವಾಗಿ ತಾನು ಅವುಗಳನ್ನು ಬಿಡಿಸಿಕೊಂಡು ಬರುವುದು ಕಷ್ಟವೆಂದು ಅವನ ಮನಸ್ಸಿಗೆ ತೋರಿರುವಲ್ಲಿ ಪರಿಜನರು "ಮಹಾರಾಜನಿಗೆ ಜಯವಾಗಲಿ" ಎಂದಾಗ ಮಹಾರಾಜ ಶಬ್ದವನ್ನೇ ಉಚ್ಚರಿಸಕೂಡದೆಂದ ಕರ್ತವ್ಯಬುದ್ಧಿಯುಳ್ಳವನವನು. ಎಲ್ಲ ರಾಜರುಗಳೂ ಸೇರಿ ತನ್ನ ಮೇಲೆ ದಂಡೆತ್ತಿ ಬಂದಿದ್ದರೆಂದೂ, ಅವರೊಡನೆ ಭೀಷ್ಮರೂ ಇದ್ದರೆಂದೂ, ಕೇಳಿದಾಗ ಕೂಡ ವಿರಾಟನು ಅಂಜಲಿಬದ್ಧನಾಗಿ ಎದ್ದು ನಿಂತು- ಶತ್ರುಪಕ್ಷದ ಭೀಷ್ಮರಲ್ಲಿ ಪೂಜ್ಯ

ಭಾವನೆಯಿಂದ- ಗೌರವವನ್ನು ತೋರಿಸಿ, "ಏನು, ಪೂಜ್ಯನಾದ ಗಾಂಗೇಯನೂ ಬಂದಿದ್ದಾನೆಯೆ?" ಎನ್ನುವನು. ವಿರಾಟನ ವಿನೀತಸ್ವಭಾವವನ್ನು ತೋರಿಸಲು ಇದೊಂದೇ ಅಂಶವು ಸಾಕು. ಯುಧಿಷ್ಠಿರನು ಕೂಡ ತನ್ನಲ್ಲಿ ತಾನು ಅದನ್ನು ಕೊಂಡಾಡುವನು. ತನ್ನಲ್ಲಿ ತಿರಸ್ಕಾರವನ್ನು ಸೂಚಿಸಿದ ಅಭಿಮನ್ಯುವಿನಲ್ಲಿ ಕೂಡ ಅವನು ಪ್ರೀತಿ ತಾಳ್ಮೆಗಳನ್ನೇ ತೋರಿಸುತ್ತಾನೆ. ಮಹಾಭಾರತದ ಕಥೆಯಲ್ಲಿರುವ ಮತ್ತೊಂದು ಅಂಶವನ್ನೂ ಭಾಸನು ಬಿಟ್ಟು ತನ್ಮೂಲಕ ವಿರಾಟನ ಪಾತ್ರಕ್ಕೆ ಕಳೆಯೇರಿಸಿದ್ದಾನೆ. ಯುಧಿಷ್ಠಿರನು (ಕಂಕಭಟ್ಟನು) ವಿರಾಟನೊಡನೆ ಪಗಡೆಯಾಡುತ್ತಿರುವಲ್ಲಿ ಉತ್ತರಗೋಗ್ರಹಣ ದಿಗ್ವಿಜಯದ ಯಶಸ್ಸು ಬೃಹನ್ನಳೆಯದೇ ಹೊರತು ಉತ್ತರನದಲ್ಲವೆಂದು ಸೂಚಿಸಿದಾಗ ಮಹಾಭಾರತದ ವಿರಾಟನು ಆಗ್ರಹಗೊಂಡು, ರಕ್ತವು ಹರಿಯುವಷ್ಟು ರಭಸದಿಂದ ಅವನ ಹಣೆಗೆ ದಾಳಗಳಿಂದ ಹೊಡೆಯುತ್ತಾನೆ. ಪಂಚರಾತ್ರದ ವಿರಾಟನಿಗೂ ಅಂತಹದಕ್ಕೂ ಬಲುದೂರ. ದಾಳಗಳಿಂದ ವಿರಾಟನು ಹೊಡೆಯುವ ಪ್ರಸಂಗವೇ ಇಲ್ಲಿಲ್ಲ. ಬೃಹನ್ನಳೆಯು ಸಾರಥಿಯಾದ ಮೇಲೆ ಬಾಣ ಪ್ರಯೋಗವೇ ಇಲ್ಲದೆ ಬರಿಯ ರಥವೇ ಕಾಳಗವನ್ನು ಗೆದ್ದು ಬರುವುದೆಂದು ಯುಧಿಷ್ಠಿರನು ಹೇಳಿದಾಗಲೂ, ಅಭಿಮನ್ಯುವನ್ನು ಗೆಲ್ಲುವುದಾರಿಗೂ ಸಾಧ್ಯವಿಲ್ಲವೆಂದು ಬೃಹನ್ನಳೆಯು ಹೇಳಿದಾಗಲೂ, ವಿರಾಟನು ಅಸಮಾಧಾನವನ್ನೇನೂ ತೋರಿಸುವುದಿಲ್ಲ. ಪಂಚರಾತ್ರದ ವಿರಾಟನಿಗೆ ಮಹಾಭಾರತದ ವಿರಾಟನಂತೆ ಸ್ವಪ್ರತಿಷ್ಠೆಯಿಲ್ಲ. ಉತ್ತರನ ರಥವು ಸ್ಮಶಾನಾಭಿಮುಖವಾಗಿ ತಿರುಗಿ ಭಗ್ನವಾಯಿತೆಂದು ವಾರ್ತೆ ಬಂದಾಗ ಯುಧಿಷ್ಠಿರನು (ಭಗವಾನ್), ಅದು ಶುಭಸೂಚಕವೆಂದೂ, ಉತ್ತರನಿಗೆ ಜಯವಾಗುವುದೆಂದೂ ಹೇಳುತ್ತಾನೆ. ಆಗಲೂ ಕೂಡ ವಿರಾಟನು ಅವನನ್ನು "ಭಗವನ್" ಎಂದೇ ಗೌರವದಿಂದ ಸಂಬೋಧಿಸಿ, "ಅಕಾಲದಲ್ಲಿ (ಉದ್ವೇಗ ಕಾಲದಲ್ಲಿ) ಆಡಿದ ಶುಭಸೂಚಕವಾದ ಮಾತುಗಳಿಂದ ಕೋಪಬರುತ್ತದೆ" ಎನ್ನುತ್ತಾನೆ. ಯುಧಿಷ್ಠಿರನು ಆ ಬಳಿಕ ಆಡುವ ಮಾತುಗಳಿಂದ ವಿರಾಟನ ಆ ಅಲ್ಪಸ್ವಲ್ಪ ಅಸಮಾಧಾನವೂ ಕ್ಷಣಮಾತ್ರದಲ್ಲಿ ಶಾಂತವಾಗುತ್ತದೆ.

ಯುಧಿಷ್ಠಿರ ಪಾತ್ರವು ಮಹಾಭಾರತದಲ್ಲೇ ಮನೋಹರವಾಗಿದೆ. ಅದು ಮತ್ತಷ್ಟು ಮನೋಹರವಾಗಿರುವ ಸನ್ನಿವೇಶಗಳನ್ನು ಕವಿಯು ಈ ನಾಟಕದಲ್ಲಿ ಕಲ್ಪಿಸಿದ್ದಾನೆ. ಯುಧಿಷ್ಠಿರನು ರಾಜನಾದ

**ಯುಧಿಷ್ಠಿರ**

ಪ್ರದೇಶವು ಚೌಳು ಭೂಮಿಯಾಗಿದ್ದರೂ ಬೆಳೆಯಾಗುವುದೆಂದು ಶತ್ರುಪಕ್ಷದ ಶಕುನಿಯು ಹೇಳುವುದಕ್ಕಿಂತ ಹೆಚ್ಚಿನ ಯಾವ ವಿವರಣೆಯೂ ಅವನ ಸದ್ಗುಣಗಳನ್ನು ಸೂಚಿಸಲು ಆವಶ್ಯಕವಿಲ್ಲ. ದುರ್ಯೋಧನನ ದೋಷವನ್ನು ಯುಧಿಷ್ಠಿರನು (ಸನ್ಯಾಸಿವೇಷದ ಭಗವಾನ್) ಹೇಳತಕ್ಕವನಲ್ಲವೆಂಬ ವಿರಾಟನ ಮಾತುಗಳಿಂದ ಅವನು (ಯುಧಿಷ್ಠಿರನು) ಶತ್ರುನಿಂದೆಯನ್ನು ಕೂಡ ಮಾಡತಕ್ಕವನಲ್ಲವೆಂಬುದು ಗೊತ್ತಾಗುವುದು. ಯುಧಿಷ್ಠಿರನ ಪಾತ್ರವನ್ನು ಬೆಳಗಲು ಕವಿಯು ಸೊಗಸಾದ ಎರಡು ಸನ್ನಿವೇಶಗಳನ್ನು ಕಲ್ಪಿಸಿದ್ದಾನೆ : ಮೊದಲನೆಯದು ; ಉತ್ತರನೊಡನೆ ಅಭಿಮನ್ಯುವು ಯುದ್ಧಮಾಡುತ್ತಿದ್ದಾನೆಂಬ ಸಮಾಚಾರವು ಬಂದಾಗ ಅವನು, " ಉಭಯವಂಶಗಳ ತೇಜೋಗ್ನಿಯಾದ ಅಭಿಮನ್ಯುವು ಯುದ್ಧಮಾಡುತ್ತಿರುವುದಾದರೆ (ಉತ್ತರನಿಗೆ) ಬೇರೆ ಸಾರಥಿಯನ್ನು ಕಳುಹಿಸಬೇಕು ; ಈ ಸಂದರ್ಭದಲ್ಲಿ ಬೃಹನ್ನಳೆಗೆ ಸಾಮರ್ಥ್ಯವಿಲ್ಲ " ಎಂದು ವಿರಾಟನಿಗೆ ಹೇಳಿ ತನ್ಮೂಲಕ ತೋರ್ಪಡಿಸುವ ಆತನ ಹಿತಚಿಂತನೆ. ಅರ್ಜುನನೆಲ್ಲಿ ಅಭಿಮನ್ಯುವಿನ ಮೇಲಣ ಮಮತೆಯಿಂದ ಉತ್ತರನಿಗೆ ಸರಿಯಾಗಿ ಸಾರಥ್ಯಮಾಡದೆ ತಮಗೆ ಅನ್ನವಿಟ್ಟು ಆಶ್ರಯಕೊಟ್ಟಿರುವ ಪ್ರಭುವಿನ ಪರಾಜಯಕ್ಕೆ ಅದರಿಂದ ಕಾರಣವಾದೀತೋ ಎಂಬುದು ಧರ್ಮರಾಜನಾದ ಯುಧಿಷ್ಠಿರನ ಕಳವಳ. ಮತ್ತೊಬ್ಬ ಸಾರಥಿಯು ಹೋಗುವುದರಿಂದ ಅಭಿಮನ್ಯುವಿಗೆ ಕೇಡಾಗುವ ಸಂಭವವು ಹೆಚ್ಚಿದರೂ ಬಾಧಕವಿಲ್ಲವೆಂಬುದೂ, ವಿರಾಟನ ಕಡೆಯವರಿಗೆ ಸೋಲಾಗದಿರಲೆಂಬುದೂ, ಆ ಮಹಾನುಭಾವನ ಆಶಯಗಳು. ಎರಡನೆಯದು, ವಿರಾಟನು ಅಭಿಮನ್ಯುವನ್ನು ಆದರದಿಂದ ಬರಮಾಡಿಕೊಂಡು ಸನ್ಮಾನಮಾಡಬೇಕೆಂದಾಗ ಅದರಿಂದ ಹಿಗ್ಗದೆ, ವಿರಾಟನು ಪಾಂಡವರ ಮತ್ತು ಕೃಷ್ಣನ ಭಯದಿಂದ ಆ ರೀತಿ ಮಾಡಿದನೆಂದು ಜನರು ಆಡಿಕೊಂಡಾರೆಂದು ಬಗೆದು ಸೆರೆಸಿಕ್ಕಿ ಬಂದಿರುವ ಕುಮಾರನನ್ನು ಉದಾಸೀನತೆಯಿಂದ ಕಡೆಗಾಣಬೇಕೆಂದು

ಯುಧಿಷ್ಠಿರನು ಕೊಟ್ಟ ಸಲಹೆ. ತನ್ನಿಂದ ತನ್ನ ತಮ್ಮಂದಿರಿಗೂ ದ್ರೌಪದಿಗೂ ಕಷ್ಟಬಂದೀತೆಂಬ ಆತನ ಪಶ್ಚಾತ್ತಾಪ, ಕೌರವರು ಮಾಡಿದ ಅಗಡು ತನವನ್ನು ತಾವೇ (ಪಾಂಡವರೇ) ಮಾಡಿದಂತೆ ಆತನು ಕಳೆಗುಂದುವುದು, ಮುಂತಾದ ಸದ್ಗುಣಗಳನ್ನೆಲ್ಲ ಸಂವಿಧಾನ ಕೌಶಲವನ್ನು ಸೂಚಿಸುವಾಗಲೇ ಸೂಚಿಸಿದ್ದೇವೆ.

ಮಹಾಭಾರತದ ದುರ್ಯೋಧನನ ಉದ್ಧತ ಸ್ವಭಾವಕ್ಕೆ ತೀರ ವಿರುದ್ಧಸ್ವಭಾವವುಳ್ಳ ಧರ್ಮವೀರ ದುರ್ಯೋಧನನನ್ನು ಭಾಸಮಹಾಕವಿಯು ಚಿತ್ರಿಸಿರುವ ವಿಚಾರವನ್ನು ವಿಶದವಾಗಿ ಹಿಂದೆಯೇ ತಿಳಿಸಿ ಅವನ ಗುಣದೋಷಗಳನ್ನು ಸೂಚಿಸಲಾಗಿದೆ. ಉಳಿದ ಒಂದು ಅಂಶವನ್ನು ಮಾತ್ರ ಇಲ್ಲಿ ಸೂಚಿಸಿದರೇ ಆತನ ಹೃದಯವೆಷ್ಟು ಸಂಸ್ಕೃತವಾದುದೆಂಬ ಅಂಶವು ವ್ಯಕ್ತವಾಗುತ್ತದೆ.

**ಕರ್ಣ ದುರ್ಯೋಧನರು**

ಅಭಿಮನ್ಯುವು ಸೆರೆಸಿಕ್ಕಿದುದನ್ನು ಕೇಳಿದಾಗ, " ಸೂತ, ಹೇಳು ಹೇಳು. ಅಭಿಮನ್ಯುವನ್ನು ಹಿಡಿದುಕೊಂಡು ಹೋದವರಾರು ? ನಾನೇ ಅವನನ್ನು ಬಿಡಿಸುತ್ತೇನೆ. ಪಾಂಡವರೊಡನೆ ದ್ವೇಷಭಾವವನ್ನು ಪ್ರಾರಂಭಿಸಿದವನೇ ನಾನು. ಆದಕಾರಣ (ಅಭಿಮನ್ಯುವನ್ನು ಉದ್ದೇಶಪೂರ್ವಕವಾಗಿ ಶತ್ರು ವಶಪಡಿಸಿ ಬಂದೆನೆಂದು) ಜನರು ನನ್ನಲ್ಲಿ ದೋಷಾರೋಪಣೆ ಮಾಡಿಯಾರು. ಇದಲ್ಲದೆ ಅಭಿಮನ್ಯುವು ನನ್ನ ಪುತ್ರ. ಅನಂತರ ಅವನು ಪಾಂಡವರ ಪುತ್ರ. ಜ್ಞಾತಿಗಳಲ್ಲಿ ಪರಸ್ಪರ ವಿರೋಧವಿದ್ದರೆ ಮಕ್ಕಳದೇನೂ ಅಪರಾಧವಿರುವುದಿಲ್ಲ " ಎಂದು ಆ ರಾಜಸಿಂಹವು ಗರ್ಜಿಸುವುದು. ದುರ್ಯೋಧನನು ಪಾಂಡವರನ್ನು ಕಾಡಿಗಟ್ಟುವುದೇ ಮುಂತಾದ ಕ್ರೂರಕೃತ್ಯಗಳನ್ನಾಚರಿಸಿದ್ದರೂ ಅವಕ್ಕಾಗಿ ಪಶ್ಚಾತ್ತಾಪಪಟ್ಟು, ಯಜ್ಞವನ್ನಾಚರಿಸಿ, ಧರ್ಮಾಭಿಮಾನಿಯೂ ಸತ್ಯಪ್ರತಿಜ್ಞನೂ ಆಗಿದ್ದನೆಂಬುದಕ್ಕೆ ಅವನು ತನ್ನ ತಪ್ಪನ್ನು ಎಲ್ಲರೆದುರಿಗೂ ಒಪ್ಪಿಕೊಂಡು ಅಭಿಮನ್ಯುವನ್ನು ಪುತ್ರನಂತೆ ಪ್ರೀತಿಸುವುದೇ ಸಾಕ್ಷಿ.

ಪಂಚರಾತ್ರದ ಕರ್ಣನಂತು ಧರ್ಮವೀರ ದುರ್ಯೋಧನನಿಗೆ ತಕ್ಕ ಸನ್ಮಿತ್ರನಾದ ಮಹಾನುಭಾವ. ಮಹಾಭಾರತದ ಕರ್ಣನಲ್ಲಿ

ಸದ್ಗುಣಗಳ ಜೊತೆಗೆ ಕೆಲವು ದುರ್ಗುಣಗಳೂ ಇವೆ. ಭಾಸಮಹಾಕವಿಯು ಮಹಾಭಾರತದಲ್ಲಿ ತನಗೆ ದೊರೆತ ಚಿನ್ನವನ್ನು ಪುಟವಿಟ್ಟು ಅಪರಂಜಿ ಮಾಡಿಕೊಂಡು ಪಂಚರಾತ್ರದ ಕರ್ಣನ ಅಮರ ಮೂರ್ತಿಯನ್ನು ಎರಕ ಹೊಯ್ದಿದ್ದಾನೆ. ಪಂಚರಾತ್ರದ ಕರ್ಣನು ಶಾಂತಿ ಸೌಹಾರ್ದಪ್ರಿಯನಾದ ವೀರಮೂರ್ತಿ. ಆತನು ಆಡುವ ಮಾತುಗಳು ಬಹುಕಡಮೆ ; ಆದರೆ ಆಡಿದ ಮಾತುಗಳೆಲ್ಲ ಅಮೂಲ್ಯವಾದ ಜೀವರತ್ನಗಳೇ. ಅವುಗಳ ಸೊಬಗನ್ನೂ, ಆತನ ಸ್ವಭಾವವನ್ನೂ ಹಿಂದೆ ಸೂಚಿಸಿದ್ದೇವೆ. ಅಭಿಮನ್ಯುವನ್ನು ತಾನೇ ಬಿಡಿಸಿಕೊಂಡುಬರುವಂತೆ ದುರ್ಯೋಧನನು ವೀರ ಭಾಷಣವನ್ನು ಮಾಡಿದ ಬಳಿಕ ಕರ್ಣನು ಹೇಳುವ, “ ಬಹಳ ಸ್ನೇಹಮಯವಾಗಿ ನಿನಗೆ ಅನುರೂಪವಾಗಿರುವ ಮಾತುಗಳನ್ನಾಡಿದೆ. ದುರ್ಯೋಧನ ! ಸ್ವಜನಭಯದಿಂದ ಬಿಡಿಸುವುದು ಬೇಡ, (ಅಭಿಮನ್ಯುವು) ಬಾಲಕನೆಂಬ ಕಾರಣದಿಂದ ಬಿಡಿಸುವುದು ಬೇಡ; ನಿನ್ನ ಹಿತಾರ್ಥವಾಗಿ ಎಲ್ಲರಿಗಿಂತ ಮುಂದೆ ಸಮರ ಮುಖದಲ್ಲಿ ಯುದ್ಧಮಾಡಿ ಸೆರೆಸಿಕ್ಕಿದ ಅಭಿಮನ್ಯುವನ್ನು ನಾವು ರಕ್ಷಿಸಿ ಬಿಡಿಸಿಕೊಳ್ಳಲಿಲ್ಲ. ನಾವೆಲ್ಲ ಧನುಸ್ಸುಗಳನ್ನು ಬಿಟ್ಟು ನಾರುಡೆಗಳನ್ನು ಧರಿಸಿ ಆಶ್ರಮವಾಸಿಗಳಾಗಬೇಕು ” * ಎಂಬ ಮಾತುಗಳು ಶೂರನೂ ಸದ್ಗುಣಿಯೂ ಆದವನ ವೀರವಾಣಿಗಳು.

ಭೀಷ್ಮದ್ರೋಣರ ಸದ್ಗುಣಗಳನ್ನೂ ಈ ಮೊದಲೇ ಸೂಚಿಸಿರುವುದರಿಂದ ಇಲ್ಲಿ ಹೇಳಬೇಕಾದುದು ಹೆಚ್ಚೇನೂ ಉಳಿದಿಲ್ಲ. ಮಹಾಭಾರತದ ಭೀಷ್ಮರೇ ಮಹಾನುಭಾವರು. ಅಲ್ಲಿಯ ಭೀಷ್ಮಪಾತ್ರಕ್ಕೆ ಮತ್ತಷ್ಟು

---

* “ ಅತಿಸ್ನಿಗ್ಧಮನುರೂಪಂ ಚಾಭಿಹಿತಂ ಭವತಾ | ಗಾನ್ಧಾರೀಮಾತಃ !

ಮಾ ತಾವತ್ಸ್ವಜನಭಯಾತ್ತು ಬಾಲಭಾವಾ
ದ್ವ್ಯಾಪನ್ನಃ ಸಮರಮುಖೇ ತವ ಪ್ರಿಯಾರ್ಥಮ್ |
ಅಸ್ಮಾಭಿರ್ನ ಚ ಪರಿರಕ್ಷಿತೋಽಭಿಮನ್ಯು
ರ್ಗೃಹ್ಯನ್ತಾಂ ಧನುರಪನೀಯ ವಲ್ಕಲಾನಿ ‖ ”

ಒಪ್ಪವಿಟ್ಟು ಭಾಸಮಹಾಕವಿಯು ಪಂಚರಾತ್ರದ ಭೀಷ್ಮರ ಪವಿತ್ರಮೂರ್ತಿ ಯನ್ನು ಸಿದ್ಧಗೊಳಿಸಿದ್ದಾನೆ. ಕ್ಷತ್ರಿಯರಾಗಿ ಹುಟ್ಟಿದ್ದೂ ಬ್ರಾಹ್ಮಣರಿಗಿಂತ ಮುಂಚೆ ನಮಸ್ಕಾರವು ಸಲ್ಲುವಂತಹ ಮಹ

**ಭೀಷ್ಮ ದ್ರೋಣರು**

ನೀಯರು ಭೀಷ್ಮರು. ಗೋಗ್ರಹಣ ಮಾಡಿದ ತನ್ನ ಶತ್ರುಗಳ ಪಕ್ಷಕ್ಕೆ ಅವರು ಸೇರಿದವರಾಗಿದ್ದೂ ವಿರಾಟನು ಅವರ ಹೆಸರನ್ನು ಸೂತನಿಂದ ಕೇಳಿದೊಡನೆಯೇ ಅಂಜಲಿಬದ್ಧನಾಗಿ ಎದ್ದು ನಿಲ್ಲುವುದನ್ನು ನೋಡಿದರೆ ರಾಜಮಂಡಲದಲ್ಲಿ ಅವರಿಗಿದ್ದ ಸ್ಥಾನಮಾನಗಳು ವ್ಯಕ್ತವಾಗುತ್ತವೆ. ಅವರ ಶೌರ್ಯವೂ, ಕಾರ್ಯನಿರ್ವಹಣ ಸಾಮರ್ಥ್ಯವೂ, ಸಾತ್ವಿಕತೆಯೂ ಅವರಿಗೆ ಲಭಿಸಿದ್ದ ಮಹತ್ತರವಾದ ಗೌರವಕ್ಕೆ ಕಾರಣಗಳು. ಅವರೆಷ್ಟು ಊಹಾಪರರೆಂಬುದನ್ನೂ ಅವರ ಬುದ್ಧಿ ಶಕ್ತಿಯನ್ನೂ ಅವರು ಹೂಡಿದ ಗೋಗ್ರಹಣ ತಂತ್ರವೇ ಸೂಚಿಸುವುದು. ಶಕುನಿಯು ಮಿತ್ರಮುಖದ ಶತ್ರುವೆಂದು ಅವನೆದುರಿಗೇ ಭೀಷ್ಮರು ದುರ್ಯೋಧನನಿಗೆ ಹೇಳುವುದರಿಂದ ಅಪ್ರಿಯವಾದ ಸತ್ಯವನ್ನು ನುಡಿಯಲು ಅವರು ಹಿಂತೆಗೆಯುತ್ತಿರಲಿಲ್ಲವೆಂಬುದು ಗೊತ್ತಾಗುತ್ತದೆ. ತಮ್ಮ ಪಕ್ಷದ ಅಭಿಮನ್ಯುವನ್ನು ಸೆರೆಹಿಡಿದ ಪದಾತಿಯ ಪರಾಕ್ರಮವನ್ನು ವರ್ಣಿಸೆಂದು ಆಶೆಯಿಂದ ಸೂತನನ್ನು ಕೇಳಿದ ಆ ಭೀಷ್ಮರ ಸಮದರ್ಶಿತ್ವವನ್ನೂ ಪರಾಕ್ರಮ ಪಕ್ಷಪಾತವನ್ನೂ ಕೊಂಡಾಡದವರಾರು ?

ಪಂಚರಾತ್ರದ ದ್ರೋಣರು ಮಹಾಭಾರತದ ದ್ರೋಣರಿಗಿಂತ ಬಹಳ ಶ್ರೇಷ್ಠರಾಗಿರುವಂತೆ ಭಾಸಕವಿಯು ಪಾತ್ರರಚನೆ ಮಾಡಿದ್ದಾನೆ. ಮಹಾಭಾರತದ ದ್ರೋಣರಿಗಿಂತ ಪಂಚರಾತ್ರದ ದ್ರೋಣರ ಶಿಷ್ಯಪ್ರಿಯತೆಯು ಹೆಚ್ಚು ಶುದ್ಧವಾದುದು. ಏಕೆಂದರೆ, ಮಹಾಭಾರತದ ದ್ರೋಣರಿಗೆ ಪಾರ್ಥನಲ್ಲಿ ಇತರ ಶಿಷ್ಯರಿಗಿಂತ ಹೆಚ್ಚು ಪ್ರೇಮ. ಅವನಿಗೆ ಸೋಲು ಸಂಘಟಿಸುವ ಅವಕಾಶವನ್ನು ತಪ್ಪಿಸುವ ಉದ್ದೇಶದಿಂದ ಅವರು ಏಕಲವ್ಯನ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಸ್ವೀಕರಿಸುತ್ತಾರೆ. ತಾವು ಧನುರ್ವಿದ್ಯೆಯನ್ನೇನೂ ಹೇಳಿಕೊಟ್ಟಿಲ್ಲದಿದ್ದರೂ ತಮ್ಮಲ್ಲಿ ಗುರು

ಭಾವನೆಯನ್ನಿಟ್ಟುಕೊಂಡಿರುವವನು ಹೆಬ್ಬೆರಳನ್ನು ಕತ್ತರಿಸಿ ಕೊಡು ವಂತೆ ಮಾಡುತ್ತಾರೆ. ಮಹಾಭಾರತದ ದ್ರೋಣರಲ್ಲಿ ಇದೊಂದು ದೊಡ್ಡ ಕಳಂಕವೆನ್ನಬಹುದು. ಆ ವಿಚಾರವು ಹಾಗಿರಲಿ. ಶಿಷ್ಯರಾದ ಪಾಂಡವರಲ್ಲೂ, ಕೌರವರಲ್ಲೂ, ವಿರಾಟನಲ್ಲೂ, ಸಮಾನವಾಗಿ ಪ್ರೀತಿಯುಳ್ಳವರಾಗಿ ಶಕುನಿ ಯಲ್ಲಿ ಕೂಡ ವಾತ್ಸಲ್ಯವನ್ನು ತೋರಿಸುವ ಪಂಚರಾತ್ರದ ದ್ರೋಣರೇ ಮಹಾಭಾರತದ ದ್ರೋಣರಿಗಿಂತ ಹೆಚ್ಚಿನ ಅಂತಸ್ತಿನವರೆನ್ನಬಹುದು. ಸ್ವಾರ್ಥರಹಿತವಾದ ಅವರ ಸರಳ ಜೀವನ, ವೃದ್ಧಾಪ್ಯದ ದೆಸೆಯಿಂದ ಯುದ್ಧ ಮಾಡಲಾರದವರಾಗಿದ್ದರೂ ಶಿಷ್ಯರ ಯುದ್ಧವನ್ನು ನೋಡಲು ಬಂದಿ ರುವ ಅವರ ಶಿಷ್ಯಪ್ರೇಮ, "ಶಿಷ್ಯಪುತ್ರ" ಅಭಿಮನ್ಯುವನ್ನು ಬಿಡಿಸಿ ಕೊಂಡು ಬರಲು ತಾವೇ ಯುದ್ಧಕ್ಕೆ ಹೋಗುವುದಾಗಿ ಹೇಳುವ ಅಭಿ ಮಾನ ಮತ್ತು ಉತ್ಸಾಹ, ಕಪಟವನ್ನರಿಯುವುದಕ್ಕೂ ಸಾಮರ್ಥ್ಯವಿಲ್ಲ ದಷ್ಟುಮಟ್ಟಿನ ಋಜುತೆ, ಪರರ ಕಷ್ಟವನ್ನು ನೋಡಿ ಕಂಬನಿ ಬಿಡು ವಷ್ಟು ಕರುಣಾರ್ದ್ರತೆ, ತಾವು ಮಾಡಿದುದು ತಪ್ಪೆಂದು ತೋರಿದರೆ ನಿಸ್ಸಂಕೋಚವಾಗಿ ತಪ್ಪನ್ನೊಪ್ಪಿಕೊಂಡು ಕಿರಿಯರಲ್ಲಿ ಕೂಡ ಕ್ಷಮೆ ಬೇಡುವ ಧಾರಾಳಮನಸ್ಸು, ಇವು ದ್ರೋಣರ ಮುಖ್ಯಗುಣಗಳು. ಇವಕ್ಕೆ ನಿದರ್ಶನವನ್ನು ನಾವಾಗಲೇ ಕಂಡಿದ್ದೇವೆ. ಪಂಚರಾತ್ರದ ದ್ರೋಣಾ ಚಾರ್ಯರ ಸಾತ್ವಿಕ ಸ್ವಭಾವವನ್ನೂ ಕರುಣಹೃದಯವನ್ನೂ ನೋಡಿದರೆ ಏಕಲವ್ಯನ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಕೊಡೆಂದು ಕೇಳುವುದು ಅವರಿಂದ ಸರ್ವಥಾ ಸಾಧ್ಯವಾಗುತ್ತಿರಲಿಲ್ಲವೆಂದು ಹೇಳಬೇಕಾಗುತ್ತದೆ.

**ಶಕುನಿ**

ಶಕುನಿಯೊಬ್ಬನು ಮಾತ್ರ ಮಹಾಭಾರತದಲ್ಲಿರುವ ಕಗ್ಗಲ್ಲಿನ ಮೂರ್ತಿಯಾಗಿಯೇ (ಪಂಚರಾತ್ರದಲ್ಲಿ) ಉಳಿದಿದ್ದಾನೆ. ಅವನ ಕುಟಿಲ ಸ್ವಭಾವವೂ ನೃಶಂಸವೃತ್ತಿಯೂ ವ್ಯಕ್ತಪಡುವ ಸನ್ನಿ ವೇಶಗಳನ್ನು ಕವಿಯು ಸ್ವತಂತ್ರವಾಗಿ ಕಲ್ಪಿಸಿದ್ದರೂ ಪಾತ್ರದ ಮೂಲ ಲಕ್ಷಣಗಳೇನೊ ಬಹುತರವಾಗಿ ಮಹಾಭಾರತದಲ್ಲಿದ್ದಂತೆಯೇ ಇವೆ. ದ್ರೋಣರು ಕ್ಷಮೆಯನ್ನು ಬೇಡಿ ದಾಗಲೂ ಕರಗದ ಕಲ್ಲುಮನಸ್ಸು ಶಕುನಿಯದು. ಪಾಂಡವರಿಗೆ ರಾಜ್ಯ ವನ್ನು ಕೊಡಬೇಡವೆಂದು ಹೇಳುವುದಿರಲಿ, ಅಭಿಮನ್ಯುವಿನ ವಿವಾಹವು

ಕೌರವ ಗೃಹದಲ್ಲಿ ನಡೆಯುವುದನ್ನು ಕೂಡ ಅವನು ಸೈರಿಸನು. ಕವಿಯು ಶಕುನಿಯನ್ನೂ ಒಳ್ಳೆಯವನನ್ನಾಗಿ ಮಾಡಿದ್ದರೆ ಕಥೆಯು ಮುಂದೆ ಸಾಗುವುದಕ್ಕೇ ಅವಕಾಶವಿರುತ್ತಿರಲಿಲ್ಲ. ಅಭಿಮನ್ಯುವು ಸೆರೆಸಿಕ್ಕಿದ ಸಂದರ್ಭದಲ್ಲಿ ಮಾತ್ರ ಶಕುನಿಯು ಸಂತೋಷವನ್ನು ಸೂಚಿಸದೆ, ಕೊಂಚಮಟ್ಟಿಗೆ ಮನುಷ್ಯನಂತೆ ವರ್ತಿಸುತ್ತಾನೆ. ಪಾಂಡವರ ಕಡೆಯವನಾದ ಅಭಿಮನ್ಯುವಿಗೆ ತಕ್ಕ ಶಾಸ್ತಿಯಾಯಿತೆಂದು ಅವನು ಹಿಗ್ಗದಿರುವುದಕ್ಕೆ ಆ ವೀರಬಾಲಕನು ತಮ್ಮ ಪಕ್ಷವನ್ನು ವಹಿಸಿ ಯುದ್ಧ ಮಾಡಿದನೆಂಬುದೇ ಕಾರಣವಾಗಿರಬೇಕು.

**ಇತರ ಪಾತ್ರಗಳು**

ಇತರ ಪಾತ್ರಗಳೂ ಮನೋಹರವಾಗಿವೆ. ಅಭಿಮನ್ಯುವಿನ ಅದ್ಭುತವಾದ ಕ್ಷಾತ್ರತೇಜಸ್ಸು, ಅವನ ದರ್ಪ, ಅವನ ಪಿತೃಭಕ್ತಿ, ಪಾಂಡವರನ್ನು ದ್ಯೂತದ ವ್ಯಾಜದಿಂದ ಕಾಡಿಗೆ ಓಡಿಸಿದ್ದ ಕೌರವರ ಪಕ್ಷವನ್ನು ವಹಿಸಿ ಯುದ್ಧಮಾಡಿದ ಅವನ ಸಾತ್ವಿಕ ಬಂಧುಪ್ರೇಮ, ಮತ್ತು ಕೌರವ ಸೈನ್ಯವೇ ದೆಸೆಗೆಟ್ಟು ಓಡಿಹೋದಮೇಲೂ ಒಬ್ಬನೇ ಕಾದಿದ ಅವನ ಧೈರ್ಯ ಪರಾಕ್ರಮಗಳು-ಇವು ಚಿತ್ತಾಕರ್ಷಕವಾಗಿವೆ. ಉತ್ತರಕುಮಾರನ ಶೌರ್ಯ ಸೌಜನ್ಯತೆಗಳೂ, ಅಸೀಮ ಪರಾಕ್ರಮಿಗಳಾದ ಭೀಮಾರ್ಜುನರ ಪುತ್ರವಾತ್ಸಲ್ಯ ಸರಸ ಪ್ರಿಯತೆಗಳೂ ಮನೋಜ್ಞವಾಗಿವೆ.

**ರೂಪಕವು ಸಮವಕಾರವೇ ಎಂಬ ಅಂಶ**

ಪಂಚರಾತ್ರದ ಕಥಾವಸ್ತುವು ದೇವಕಲ್ಪರೆನಿಸುವ ವ್ಯಕ್ತಿಗಳಿಗೆ ಸಂಬಂಧಪಟ್ಟುದು. ವೀರರಸ ಪ್ರಧಾನವಾದುದು. ಮೂರು ಅಂಕಗಳುಳ್ಳುದು. ದುರ್ಯೋಧನನೂ, ದ್ರೋಣರೂ, ಪಾಂಡವರೂ ನಾಯಕರು. ಆದುದರಿಂದ ರೂಪಕವು ಬಹು ನಾಯಕತ್ವವುಳ್ಳುದು. ದುರ್ಯೋಧನನಿಗೆ ಸತ್ಯಪರಿಪಾಲನ ರೂಪದ ಧರ್ಮನಿಷ್ಪತ್ತಿಯೇ ಫಲ ; ಪಾಂಡವರಿಗೆ ಅರ್ಧರಾಜ್ಯಲಾಭವೇ ಫಲ ; ದ್ರೋಣರಿಗೆ ಶಿಷ್ಯಾನುಗ್ರಹರೂಪದ ಮನೋರಥ ಸಿದ್ಧಿಯೇ

ಫಲ. ಹೀಗೆ ನಾಯಕರಿಗೆ, "ಪೃಥಕ್ಫಲ" ಸಂಬಂಧವೂ ಇದೆ. ಶಕುನಿಯು ಹೂಡುವ ಕಪಟ ಸಮಯದ ದೆಸೆಯಿಂದ ಕಪಟಾಶ್ರಯವೂ ಇದೆ. ಇವೆಲ್ಲ, "ಸಮವಕಾರ" ವೆಂಬ ರೂಪಕದ ಮುಖ್ಯಲಕ್ಷಣಗಳು. ಆದ ಕಾರಣ, ಪಂಚರಾತ್ರವು ಸಮವಕಾರವೆಂದು ಹೇಳಬಹುದು.

———o———

# ದೂತವಾಕ್ಯ

## ೧. ಕಥಾಸಾರಾಂಶ

ಪಾಂಡವರು ಅಜ್ಞಾತವಾಸವನ್ನು ಮುಗಿಸಿದ ಮೇಲೆ ಅರ್ಧರಾಜ್ಯ ವನ್ನು ತಮಗೆ ಕೊಡುವಂತೆ ಬೇಡಲು ದುರ್ಯೋಧನನ ಬಳಿಗೆ ಶ್ರೀಕೃಷ್ಣ ನನ್ನು ಸಂಧಾನಕ್ಕಾಗಿ ಕಳುಹಿಸುವರು. ದುರ್ಯೋಧನನು ರಾಜ್ಯವನ್ನು ಕೊಡಲೊಲ್ಲೆನೆಂದು ತಿರಸ್ಕರಿಸಿ, ಶ್ರೀಕೃಷ್ಣನನ್ನು ಕಟ್ಟಿಹಾಕುವ ಪ್ರಯತ್ನ ಮಾಡುವನು. ಆತನ ಮಾಯಾರೂಪ ಪ್ರದರ್ಶನದಿಂದ ಅದು ಅಸಾಧ್ಯ ವಾಗಲು, ಆತನನ್ನು ಘಾತಿಸುವ ಉದ್ದೇಶದಿಂದ ಧನುರ್ಬಾಣಗಳನ್ನು ತರುವುದಕ್ಕಾಗಿ ದುರ್ಯೋಧನನು ಶಸ್ತ್ರಶಾಲೆಗೆ ಹೋಗುವನು. ಶ್ರೀಕೃಷ್ಣನು ಪಾಂಡವರಲ್ಲಿಗೆ ಹೊರಡುವಷ್ಟರಲ್ಲಿ ಧೃತರಾಷ್ಟ್ರನು ಬಂದು ನಮಸ್ಕರಿಸಿ ಕ್ಷಮೆಯನ್ನು ಬೇಡುವನು. ದುರ್ಯೋಧನನು ಶ್ರೀಕೃಷ್ಣನನ್ನು ಪಾಂಡ ವರ ದೂತನೆಂದು ವರ್ಣಿಸಿರುವುದರಿಂದ ರೂಪಕಕ್ಕೆ ಕವಿಯು ದೂತ ವಾಕ್ಯವೆಂದು ಹೆಸರಿಟ್ಟಿದ್ದಾನೆ.

## ೨. ವಿಮರ್ಶೆ

**ಸಂವಿಧಾನ ಕೌಶಲ :**—ಪಂಚರಾತ್ರದಲ್ಲಿ ಸೂಚಿತವಾಗಿರುವಂತೆ ಅಭಿಮನ್ಯು ವಿವಾಹವು ನೆರವೇರಿದ ಬಳಿಕ, ದುರ್ಯೋಧನನು ರಾಜ್ಯದ ಅರ್ಧಭಾಗವನ್ನು ಕೊಡುವುದಿಲ್ಲವೆಂದ ಕಾರಣ ಪಾಂಡವರು ತಮ್ಮ ಪಕ್ಷವನ್ನು ವಹಿಸಿ ವಾದಿಸಿ ಸಂಧಿಮಾಡಿಕೊಂಡು ಬರಲು ಶ್ರೀಕೃಷ್ಣನನ್ನು ಆತನ ಬಳಿಗೆ ಕಳುಹಿಸಿದರೆಂದು ಡಾಕ್ಟರ್ ಎಂ. ಸಿ. ವುಲ್ನರ್ ಅವರೂ ಡಾಕ್ಟರ್ ಲಕ್ಷ್ಮಣ ಸರೂಪ್ ಅವರೂ ಬರೆದಿದ್ದಾರೆ. ಭಾಸಕವಿಯ ಕೃತಿ ಗಳೆಂಬ ರೂಪಕಗಳ ವಿಮರ್ಶೆಗೆ ಹೊರಟು ವ್ಯಾಸಭಾರತದ ಸನ್ನಿವೇಶ

ವನ್ನೇ ಮನಸ್ಸಿನಲ್ಲಿಟ್ಟುಕೊಂಡು ಪ್ರವರ್ತಿಸಿದುದರಿಂದ ಅವರು ಹೀಗೆ ಬರೆದಿದ್ದಾರೆಂದು ತೋರುವುದು. ಅವರ ಈ ಅಭಿಪ್ರಾಯವು ಸಾಧುವಲ್ಲ ವೆಂದು ತೋರುತ್ತದೆ. ಏಕೆಂದರೆ, ಧರ್ಮವೀರನೂ ಸತ್ಯಪ್ರತಿಜ್ಞನೂ ಆದ ಪಂಚರಾತ್ರದ ದುರ್ಯೋಧನನು ಕುರುವೃದ್ಧರ ಮತ್ತು ರಾಜರ ಸಮಕ್ಷಮದಲ್ಲಿ ಪಾಂಡವರಿಗೆ ಅರ್ಧರಾಜ್ಯವನ್ನು ಕೊಡುವುದಾಗಿ ಹೇಳಿ ಆ ಬಳಿಕ ಮಾತಿಗೆ ತಪ್ಪಿ ಪದೇ ಪದೇ ಕೇಳಿಸಿಕೊಂಡಿರಲಾರ. ಅವನು ಒಂದು ವೇಳೆ ಹಾಗೆ ಮಾಡಿರಬೇಕೆಂಬ ವಾದವನ್ನೇ ನಂಬುವುದಾದರೂ ಕೂಡ, ಪಂಚರಾತ್ರದ ಧರ್ಮವೀರನು ತನ್ನ ಸ್ವಭಾವವನ್ನೇ ಸಂಪೂ ರ್ಣವಾಗಿ ತಟಕ್ಕನೆ ಮಾರ್ಪಡಿಸಿಕೊಂಡು ಉದ್ಧತನಾದ ಬಗೆ ಹೇಗೋ ತಿಳಿಯದು. "ರಾಜ್ಯವನ್ನು ಕೊಡೆಂದು ಹೇಳಿಬಿಡು, ಮಾವ" ಎಂದು ಶಕುನಿಯನ್ನೇ ಬೇಡಿದ ದುರ್ಯೋಧನನು- ಶಕುನಿಯ ಮೇಲಿನ ದಾಕ್ಷಿಣ್ಯದಿಂದ ಪಂಚರಾತ್ರ ಸಮಯಕ್ಕೆ ಸಮ್ಮತಿಸಿ ಅದು ತೀರಿದ ಮೇಲೆ ರಾಜ್ಯವನ್ನು ಪೂರ್ವದಂತೆ ಕೊಟ್ಟೆನೆಂದವನು- ಅನಂತರ ರಾಜ್ಯದ ಹುಲ್ಲನ್ನೂ ಕೊಡೆನೆನ್ನುವ ಮಟ್ಟಿಗೆ ಮಾರ್ಪಟ್ಟು ಹೋದ ನೆಂಬುದನ್ನು ನಂಬುವುದಕ್ಕಾಗುವುದಿಲ್ಲ. ಆದಕಾರಣ, ನಾವು ಮೊದಲೇ ಸೂಚಿಸಿರುವಂತೆ ದೂತವಾಕ್ಯ ದೂತಘಟೋತ್ಕಚಗಳ ದುರ್ಯೋಧನನ ಸ್ವಭಾವವೇ ಬೇರೆಯೆಂದೂ ಪಂಚರಾತ್ರದ ದುರ್ಯೋಧನನ ಸ್ವಭಾವವೇ ಬೇರೆಯೆಂದೂ, ಊರು ಭಂಗದ ದುರ್ಯೋಧನನ ಸ್ವಭಾವವೇ ಬೇರೆ ಯೆಂದೂ ಭಾವಿಸಿ, ನಮ್ಮ ಕವಿಯು ಸಾರಸ್ವತ ಸಾಮ್ರಾಜ್ಯದಲ್ಲಿ ಪೂರ್ಣ ಸ್ವಾತಂತ್ರ್ಯವನ್ನು ವಹಿಸಿ ಮೂರು ರೂಪಗಳಲ್ಲಿ ದುರ್ಯೋಧನರನ್ನು ಚಿತ್ರಿ ಸಿರುವ ಚಾತುರ್ಯವನ್ನು ಮೆಚ್ಚುವುದೇ ಲೇಸು.

ಸೂತ್ರಧಾರನು ಕೃಷ್ಣಸ್ತುತಿಯ ಶ್ಲೋಕವನ್ನು ಹೇಳಿ, ಪಾಂಡವ ಕೌರವರಿಗೆ ವಿರೋಧವು ಹುಟ್ಟಿರುವುದರಿಂದ ಮಂತ್ರಶಾಲೆಯಲ್ಲಿ ಭೀಷ್ಮಾ ದಿಗಳ ಮತ್ತು ರಾಜಮಂಡಲದ ಆಲೋಚನಾ ಸಭೆಯು ನಡೆಯ ಬೇಕೆಂದು ದುರ್ಯೋಧನನು ಆಜ್ಞಾಪಿಸಿರುವನೆಂದೂ ಭೃತ್ಯನು ಮಂತ್ರ ಶಾಲೆಯನ್ನು (ಆಸನಾದಿಗಳನ್ನು ಸಿದ್ಧಪಡಿಸಿ) ಅಣಿಮಾಡುತ್ತಿರುವನೆಂದೂ

ಸೂಚಿಸುವಲ್ಲಿಗೆ ಸ್ಥಾಪನೆಯು ಮುಗಿಯುವುದು. ಅನಂತರ ಕಾಂಚುಕೀ ಯನು ಪ್ರವೇಶಿಸಿ, ಸಮಸ್ತ ಸಾಮಂತ ರಾಜರುಗಳೊಡನೆ ದುರ್ಯೋಧನನು ತಾನು ಮಂತ್ರಾಲೋಚನೆ ನಡೆಯಿಸುವುದಾಗಿ ಅಪ್ಪಣೆ ಕೊಡಿಸಿ ಅವರನ್ನು ಕರೆಯಿಸಿರುವ ಅಂಶವನ್ನು ಸೂಚಿಸಿ, ಸಭೆಗೆ ಪ್ರವೇಶಿಸುವುದರಲ್ಲಿರುವ ದುರ್ಯೋಧನನನ್ನು ವರ್ಣಿಸುವನು. ದುರ್ಯೋಧನನನ್ನು ವರ್ಣಿಸಿ, "ಶ್ಯಾಮಕಾಯನೂ, ಯುವಕನೂ, ಬಿಳಿಯಬಣ್ಣದ ರೇಷ್ಮೆಯ ವಸ್ತ್ರವನ್ನು (ದುಕೂಲವನ್ನು) ಉತ್ತರೀಯವಾಗಿ ಧರಿಸಿ ಅಂಗರಾಗವನ್ನು ಲೇಪಿಸಿಕೊಂಡು, ಆಭರಣಗಳ ಮಣಿದ್ಯುತಿರಂಜಿತಾಂಗನಾಗಿ ಛತ್ರ ಚಾಮರಗಳ ರಾಜಮರ್ಯಾದೆಯನ್ನು ಸ್ವೀಕರಿಸುವ ಈ ತೇಜಸ್ವಿಯು ನಕ್ಷತ್ರಗಳ ಮಧ್ಯದಲ್ಲಿರುವ ಪೂರ್ಣಚಂದ್ರನಂತೆ (ಇದ್ದಾನೆ)" * ಎಂದು ದೂತನು ಹೇಳುವ ಮಾತುಗಳಿಂದ ಅವನ (ದುರ್ಯೋಧನನ) ರೂಪವೂ ಸ್ವಭಾವವೂ ನಮ್ಮ ಹೃದಯದಲ್ಲಿ ನೆಲೆಗೊಳ್ಳುವಂತಾಗುವುದು. ಮನೋಹರವಾದ ಈ ವರ್ಣನೆಯಲ್ಲಿರುವ ಧ್ವನಿಯೂ ಪದಪ್ರಯೋಜನವೂ ಗಮನಾರ್ಹವಾಗಿವೆ ದುರ್ಯೋಧನನನ್ನು ಶ್ಯಾಮಲಾಂಗನೆಂದೂ, ತೇಜಸ್ವಿಯೆಂದೂ, ("ಶ್ರೀವರ್ಮಾ" ಎಂದೂ) ವರ್ಣಿಸಿರುವುದಲ್ಲದೆ ಆಭರಣಗಳ ರತ್ನಗಳ ಕಾಂತಿಯಿಂದ ರಂಜಿತಾಂಗನಾಗಿದ್ದನೆಂದೂ ಹೇಳಿದ್ದಾನೆ. ಇದರಿಂದ ಶ್ಯಾಮಲಕಾಯನಾಗಿದ್ದೂ ದುರ್ಯೋಧನನು ಸುಂದರನಾಗಿದ್ದನೆಂಬ ಅಂಶವೂ, ಆಭರಣಗಳ ಮಣಿದ್ಯುತಿಯು ತನ್ನ ದೇಹಕ್ಕೆ ಒಪ್ಪುವಂತೆ ಶಿಂಗರಿಸಿಕೊಳ್ಳಬಲ್ಲವನಾಗಿದ್ದನೆಂಬ ಅಂಶವೂ ವ್ಯಕ್ತವಾಗುತ್ತವೆ. ನಕ್ಷತ್ರಗಳ ಮಧ್ಯದಲ್ಲಿರುವ ಪೂರ್ಣಚಂದ್ರನಂತಿದ್ದನೆಂಬುದರಿಂದ ಅವನ ದೇಹದ ಸೊಂಪೂ, ಸೌಕುಮಾರ್ಯವೂ ಸೂಚಿತವಾಗಿರುವುದರ ಜೊತೆಗೆ, ಅವನು ಸಭೆಯಲ್ಲಿದ್ದ ರಾಜರುಗಳೇ ಮುಂತಾದವರೆಲ್ಲರೂ ಪೂರ್ಣ

---

* "ಶ್ಯಾಮೋ ಯುವಾ ಸಿತದುಕೂಲ ಕೃತೋತ್ತರೀಯಃ
ಸಚ್ಛತ್ರ ಚಾಮರ ವರೋ ರಚಿತಾಙ್ಗರಾಗಃ ।
ಶ್ರೀವರ್ಮಾ ವಿಭೂಷಣ ಮಣಿದ್ಯುತಿರಂಜಿತಾಙ್ಗೋ
ನಕ್ಷತ್ರಮಧ್ಯ ಇವ ಪರ್ವಗತಃ ಶಶಾಙ್ಕಃ ॥"

ಚಂದ್ರನೆದುರಿನ ನಕ್ಷತ್ರಗಳಂತಿದ್ದ ಹಾಗೆ ತೋರುವ ಮಟ್ಟಿನ ಪ್ರಭಾವ ಶಾಲಿಯಾಗಿದ್ದನೆಂಬ ಅಂಶವೂ ಗೊತ್ತಾಗುತ್ತದೆ. ಕವಿಯು ತಾನು ಚಿತ್ರಿಸಿರುವ ದುರ್ಯೋಧನನ ಪ್ರಭಾವವನ್ನು ಹೀಗೆ ಸೂಚಿಸಿರುವುದು ಸರಿಯಾಗಿಯೇ ಇದೆ. ಏಕೆಂದರೆ, ಮಹಾಭಾರತದಲ್ಲಿ ವರ್ಣಿತವಾಗಿರುವ ಕೌರವ ಸಭೆಯಲ್ಲಿ ದುರ್ಯೋಧನನಿಗೆ ಬುದ್ಧಿವಾದ ಹೇಳುವ ಮಟ್ಟಿನ ವೈಶಿಷ್ಟ್ಯವಾದರೂ ಭೀಷ್ಮದ್ರೋಣಾದಿಗಳಿಗೆ ಉಳಿದಿದೆ. ದೂತವಾಕ್ಯದ ದುರ್ಯೋಧನನು ಅವರ ಆ ಬಗೆಯ ವೈಶಿಷ್ಟ್ಯವನ್ನೂ ಹೀರಿ ಅವರನ್ನು ಕೂಡ ಕೀಲಿನ ಬೊಂಬೆಗಳನ್ನಾಗಿ ರೂಪಾಂತರಗೊಳಿಸಿದ್ದಾನೆ. ಸಭೆಯಲ್ಲಿ (ಶ್ರೀ ಕೃಷ್ಣನು ಬರುವವರೆಗೆ) ದುರ್ಯೋಧನನು ಸಿಡಿಲಿನ ಗುಂಡಾದರೆ, ಉಳಿದವರೆಲ್ಲರೂ (ಕಾವು ಸೋಕಿದರೆ ಕರಗಿಹೋಗುವ) ಹಿಮದ ಚೆಂಡುಗಳು.

ದುರ್ಯೋಧನನು ಪ್ರವೇಶಿಸಿ, ರಾಜರುಗಳೂ ಭೀಷ್ಮದ್ರೋಣ ಕರ್ಣ ಶಕುನಿ ಮುಂತಾದವರೂ ಯಥಾಯೋಗ್ಯವಾದ ಆಸನಗಳಲ್ಲಿ ಕುಳಿತುಕೊಳ್ಳುವಂತೆ ಸೂಚಿಸಿ ಭೀಷ್ಮರಿಗೆ ಸೇನಾಧಿಪತ್ಯವನ್ನು ವಹಿಸಲು ನಿರ್ಧರಿಸುವನು. (ಆ ಪಾತ್ರಗಳು ರಂಗದ ಮೇಲೆ ಬರುವುದಿಲ್ಲ. ಸಭೆಯು ನೇಪಥ್ಯದಲ್ಲಿದ್ದಂತೆ ದುರ್ಯೋಧನನು ಕೊಂಚಮಟ್ಟಿಗೆ ನೇಪಥ್ಯಾಭಿಮುಖವಾಗಿ ಕುಳಿತುಕೊಂಡಿರುವನೆಂದು ತೋರುವುದು). ಆ ನಿರ್ಧಾರದ ವೇಳೆಗೆ ಸರಿಯಾಗಿ ಕೃಷ್ಣನು ಬರುವುದರಿಂದ ಅವನ ರಾಯಭಾರವು ಸಾರ್ಥಕವಾಗಲಾರದೆಂಬ ಸೂಚನೆಯು ಪ್ರಾರಂಭದಲ್ಲೇ ತೋರಿಬರುವುದು. ಕಲಾದೃಷ್ಟಿಯಿಂದ ಇದು ರಮಣೀಯವಾಗಿದೆ ಇದು ಮೂಲ ಕಥಾಭಾಗವನ್ನು ಕವಿಯು ಮಾರ್ಪಡಿಸಿಕೊಂಡಿರುವುದರ ಫಲ.

ಮಹಾಭಾರತದ ಕಥಾಭಾಗದಲ್ಲಿ ಭಾಸಮಹಾಕವಿಯು ನೆರವೇರಿಸಿರುವ ಮತ್ತೊಂದು ದೊಡ್ಡ ಮಾರ್ಪಾಡನ್ನೂ ಇಲ್ಲಿ ಸೂಚಿಸಬೇಕಾಗಿದೆ. ಮಹಾಭಾರತದ ಉದ್ಯೋಗಪರ್ವದಲ್ಲಿ ಶ್ರೀಕೃಷ್ಣನು ಸಭೆಗೆ ಬಿಜಯ ಮಾಡಿದಾಗ ಮಹಾರಾಜ ಧೃತರಾಷ್ಟ್ರನು ಅಲ್ಲಿರುವನು. ಪಾಂಡವರು ಸೇವೆಗಾಗಲಿ ಸಮರಕ್ಕಾಗಲಿ ಸಿದ್ಧವಾಗಿರುವರೆಂದೂ, ಧೃತರಾಷ್ಟ್ರ

ದುರ್ಯೋಧನರೇ ಮಹರಾಜ ಯುವರಾಜರಾಗಿದ್ದು ಅವರಿಗೆ ಅರ್ಧ ರಾಜ್ಯವನ್ನು ಕೊಟ್ಟು ಸೇವೆಯನ್ನು ಕೈಕೊಳ್ಳಬೇಕೆಂದೂ, ಶ್ರೀಕೃಷ್ಣನು ಸಂದೇಶವನ್ನು ತಂದಿರುವನು. ಧೃತರಾಷ್ಟ್ರನು ಶ್ರೀ ಕೃಷ್ಣನನ್ನು ಕುರಿತು, “ಕೃಷ್ಣ! ಪುರುಷೋತ್ತಮ! ವೀರಶ್ರೇಷ್ಠನೆ! ಶಾಸ್ತ್ರನಿಯಮ ಗಳನ್ನು ಮೀರಿ ವರ್ತಿಸುವವನೂ ಮೂರ್ಖನೂ ಆದ ನಮ್ಮ ದುರ್ಯೋಧನನು ನಿನ್ನ ಮಾತುಗಳಿಗೆ ಒಡಂಬಡುವಂತೆ ಮಾಡಲು ಪ್ರಯತ್ನಿಸು. ತಾನೇ ರಾಜನಾಗಿರುವ ದುರಾತ್ಮನಾದ ದುರ್ಯೋಧನನನ್ನು ನಿನ್ನ ಮಾತುಗಳನ್ನು ಕೇಳುವಂತೆ ಒಡಂಬಡಿಸು. (ಹಾಗೆ ಮಾಡಿದಲ್ಲಿ) ಜನಾರ್ದನ! ಮಿತ್ರರಿಗೆ ಬಹು ದೊಡ್ಡ ಉಪಕಾರವನ್ನೇ ನೀನು ಮಾಡಿದಂತಾಗುವುದು”* ಎಂದು ಹೇಳುವನು. ಧೃತರಾಷ್ಟ್ರನು ವಿದುರನನ್ನು ಕಳುಹಿಸಿ ಗಾಂಧಾರಿಯನ್ನೂ ಸಭೆಗೆ ಕರೆಯಿಸಿ ಅವಳಿಂದಲೂ ಬುದ್ಧಿ ಹೇಳಿಸುವನು. ಭೀಷ್ಮರು ದುರ್ಯೋಧನನನ್ನು ಕುರಿತು, “ಮಿತ್ರರಿಗೆ (ಯುದ್ಧವು ಕೈಗಟ್ಟದೆ) ಶಾಂತಿಯಿರಬೇಕೆಂದು ಬಯಸಿ ಶ್ರೀಕೃಷ್ಣನು ಬುದ್ಧಿಯ ಮಾತುಗಳನ್ನು ಹೇಳಿದ್ದಾನೆ. ಆತನ ಮಾತುಗಳನ್ನು ಕೇಳದೆ ಹೋದರೆ ಕಲ್ಯಾಣವಾಗುವುದಿಲ್ಲ. ಅಪ್ಪ! ತಾಯಿತಂದೆಯರನ್ನು ದುಃಖದಲ್ಲಿ ಮುಳುಗಿಸಬೇಡ”† ಎಂದು ಹೇಳುವರು. ದ್ರೋಣರು, “ನಿನ್ನ ಮಿತ್ರರಾದ ಕೃಷ್ಣ ಭೀಷ್ಮರು ಹೇಳಿದ ಈ ಮಾತುಗಳು ಸತ್ಯ. (ಅರ್ಧ ರಾಜ್ಯವನ್ನು) ಕೊಡದೆಹೋದರೆ, ಆ ಮೇಲೆ ಪರಿತಾಪಪಡುವಂತಾಗು

---

* “ಅಂಗ ದುರ್ಯೋಧನಂ ಕೃಷ್ಣ ಮನ್ದಂ ಶಾಸ್ತ್ರಾತಿಗಂ ಮಮ ।
ಅನುನೇತುಂ ಮಹಾಬಾಹೋ ಯತಸ್ವ ಪುರುಷೋತ್ತಮ ॥”
“ಅನುಶಾಧಿ ದುರಾತ್ಮಾನಂ ಸ್ವಯಂ ದುರ್ಯೋಧನಂ ನೃಪಮ್ ।
ಸುಹೃತ್ಕಾರ್ಯಂ ತು ಸುಮಹತ್ ಕೃತಂ ತೇ ಸ್ಯಾಜ್ಜನಾರ್ದನ ॥”

† “..........................................................
ಕೃಷ್ಣೇನ ವಾಕ್ಯಮುಕ್ತೋಽಸಿ ಸುಹೃದಾಂ ಶಮಮಿಚ್ಛತಾ ॥”
“ಅಕೃತ್ವಾ ವಚನಂ ತಾತ ನ ಕಲ್ಯಾಣಮವಾಪ್ಸ್ಯಸಿ ।
ಮಾತರಂ ಪಿತರಂ ಚೈವ ಮಾ ಮಜ್ಜೀಃಶೋಕಸಾಗರೇ ॥”

ವುದಪ್ಪ!" ‡ ಎಂದು ತಿಳಿಸುವರು. ವಿದುರನಂತು, "ದುರ್ಯೋಧನ, ಭರತರ್ಷಭ! ನಾನು ನಿನಗಾಗಿ ದುಃಖಿಸುವುದಿಲ್ಲ. ನಿನ್ನ ತಾಯಿ ಗಾಂಧಾರಿ ಮತ್ತು ನಿನ್ನ ತಂದೆ, ಈ ವೃದ್ಧರಿಬ್ಬರಿಗಾಗಿ ನಾನು ದುಃಖಿಸುತ್ತೇನೆ. ಪಾಪಿಯೂ, ಕುಲಘ್ನನೂ, ಕಾಪುರುಷನೂ ಆದ ಇಂತಹ ಮಗನನ್ನು ಪಡೆದು, ಅವರು ಶೋಕಪಡುತ್ತ ಭಿಕ್ಷುಕರಾಗಿ ಈ ಭೂಮಂಡಲದಲ್ಲಿ ಅಲೆದಾಡಬೇಕಾಗುತ್ತದೆ" § ಎಂದು ಕಂಠೋಕ್ತವಾಗಿ ಹೇಳುವನು.

ದೂತವಾಕ್ಯದ ಸನ್ನಿವೇಶವೇ ಬೇರೆ. ದೂತವಾಕ್ಯ ರೂಪಕದಲ್ಲಿ ಇದೊಂದೂ ಇಲ್ಲ. ಧೃತರಾಷ್ಟ್ರ ವಿದುರರು ಸಭೆಯಲ್ಲಿರುವುದಿಲ್ಲ. ಗಾಂಧಾರಿಯನ್ನು ಕರೆಯಿಸುವ ಪ್ರಸಕ್ತಿಗೇ ಅವಕಾಶವಿಲ್ಲ. ದುರ್ಯೋಧನನೊಬ್ಬನೇ ಸಭೆಯ ಅಧಿಷ್ಠಾತೃ; ಅವನ ಮಾತಿಗೆ ಎದುರೇ ಇಲ್ಲ. ಕಾಂಚುಕೀಯನಾದ (ಕಂಚುಕಿಯಾದ) ಬಾದರಾಯಣನು "ಮಹಾರಾಜನಿಗೆ ಜಯವಾಗಲಿ! ಪಾಂಡವರ ಶಿಬಿರದಿಂದ **ಪುರುಷೋತ್ತಮನಾದ** ನಾರಾಯಣನು ದೌತ್ಯವನ್ನು ವಹಿಸಿ ಬಂದಿದ್ದಾನೆ" ಎಂದು ಹೇಳುವನು. ಉದ್ಧತನಾದ ದುರ್ಯೋಧನನ ಭಾವನೆಯಲ್ಲಿ ಪುರುಷೋತ್ತಮನೆಂಬ ಹೆಸರು ತನಗೊಬ್ಬನಿಗೇ ಸಲ್ಲಬೇಕೆಂದಿರಬಹುದು. ಹಾಗಿರುವಲ್ಲಿ ಶತ್ರುಪಕ್ಷದವನಾದ ಕೃಷ್ಣನನ್ನು ತನ್ನ ಕಡೆಯ ದೊಡ್ಡ ಅಧಿಕಾರಿಯಾದ ಬಾದರಾಯಣನೇ **ಪುರುಷೋತ್ತಮನೆಂದು** ಕರೆದುದನ್ನು ಸಹಿಸಲಾರದೆ ಕೆರಳಿದ ದುರ್ಯೋಧನನು "ಎಲೈ ಬಾದರಾಯಣ! ಹಾಗೆನ್ನಬೇಡ. ಏನು ಏನು, ಕಂಸಭೃತ

---

‡ "ಏತಚ್ಚೈವ ಮತಂ ಸತ್ಯಂ ಸುಹೃದೋಃ ಕೃಷ್ಣಭೀಷ್ಮಯೋಃ |
ಯದಿ ನ ದಾಸ್ಯಸೇ ತಾತ ಪಶ್ಚಾತ್ತಪ್ಸ್ಯಸಿ ಭಾರತ ||"

§ "ದುರ್ಯೋಧನ ನ ಶೋಚಾಮಿ ತ್ವಾಮಹಂ ಭರತರ್ಷಭ |
ಇಮೌ ತು ವೃದ್ಧೌ ಶೋಚಾಮಿ ಗಾಂಧಾರೀಂ ಪಿತರಂ ಚ ತೇ ||
ಭಿಕ್ಷುಕೌ ವಿಚರಿಷ್ಯೇತೇ ಶೋಚನ್ತೌ ಪೃಥಿವೀಮಿಮಾಮ್ |
ಕುಲಘ್ನಮೀದೃಶಂ ಪಾಪಂ ಜನಯಿತ್ವಾ ಕಪೂರುಷಮ್ ||"

ಸಾದ [ಆ ದಾಮೋದರನು ನಿನಗೆ ಪುರುಷೋತ್ತಮನೊ ? ಆ ಗೋಪಾ ಲಕನು ನಿನಗೆ ಪುರುಷೋತ್ತಮನೊ ? ಜರಾಸಂಧನು (ಯುದ್ಧದಲ್ಲಿ ಸೋಲಿಸಿ) ರಾಜ್ಯವನ್ನೂ ಕೀರ್ತಿಯನ್ನೂ ಭೋಗವನ್ನೂ ಕಸಿದುಕೊಂಡ ವನು ನಿನಗೆ ಪುರುಷೋತ್ತಮನೊ ? ಆಶ್ಚರ್ಯ ! ರಾಜಸನ್ನಿಧಿಯಲ್ಲಿ ದ್ದೂ ಭೃತ್ಯಜನದ ಆಚರಣೆಯು ಹೀಗಿದೆ ! ಇವನದು ಗರ್ವದ ನುಡಿ. ಆಃ, ನೀನು ಹಾಳಾಗು '' ಎಂದು ಗರ್ಜಿಸುವನು. ಇಲ್ಲಿ ದಾಮೋದರ ನೆಂಬುದು ಕೃಷ್ಣನ ಹೆಸರು ; ಅಲ್ಲದೆ, ಅದಕ್ಕೆ ಅವಯವಾರ್ಥವಾಡಿ ಕೊಂಡರೆ ಸೊಂಟಕ್ಕೆ ಹಗ್ಗವನ್ನು ಬಿಗಿದುಕೊಂಡಿರುವವನೆಂದು ಅರ್ಥ ವಾಗುತ್ತದೆ. " ಕಂಸಭೃತ್ಯನಾದ ದಾಮೋದರನು '' ಎಂದು ಹೇಳುವಲ್ಲಿ ದಾಮೋದರನೆಂಬುದರ ಪದಪ್ರಯೋಜನವು ಗಮನಾರ್ಹವಾಗಿದೆ. ಅಖಿಲ ರಾಜಮಂಡಲವೇ ನೆರೆದಿರುವಲ್ಲಿ ಬಾದರಾಯಣನು ಶ್ರೀಕೃಷ್ಣನನ್ನು ಪುರುಷೋತ್ತಮನೆಂದು ಕರೆದುದು ತನಗೆ ಅವಮಾನವೆಂದು ಭಾವಿಸಿ, ಅವನು ಕೋಪಿಸಿಕೊಂಡಿರಬಹುದು. ಅವನ ರೋಷದ ನುಡಿಗಳಿಗೆ ಬೆಚ್ಚಿ, ವೃದ್ಧನಾದ ಬಾದರಾಯಣನು ಯುವಕನಾದ ಅವನಲ್ಲಿ ಕ್ಷಮೆ ಯನ್ನು ಬೇಡಿ ಕಾಲುಗಳಿಗೆರಗುವನು. ಆದರೂ ದುರ್ಯೋಧನನಿಗೆ ತೃಪ್ತಿಯಿಲ್ಲ. ಮೆಲಕ್ಕೇಳೆಂದು ಅವನು ಅಪ್ಪಣೆಮಾಡಿದ ಮೇಲೆ ಬಾದ ರಾಯಣನು, ಅನುಗೃಹೀತನಾದೆನೆಂದು ಹೇಳಿ ಎದ್ದು ನಿಲ್ಲುವನು. ಆಗ ದುರ್ಯೋಧನನು ಭಕ್ತನಲ್ಲಿ ಮೆಚ್ಚಿಕೆಯನ್ನು ತೋರಿಸಿ ವರ ವನ್ನು ಕೊಡುವ ಭಗವಂತನೋ ಎಂಬಂತೆ, " ಈಗ ಪ್ರಸನ್ನನಾಗಿದ್ದೇನೆ. ಬಂದಿರುವ ಈ ದೂತನಾರು ? '' ಎಂದು ಕೇಳುವನು. ದುರ್ಯೋಧ ನನ ಉದ್ಧತತನವನ್ನು ಹೃದಯಂಗಮವಾಗಿ ವ್ಯಕ್ತಪಡಿಸಲು ಕವಿಯು ಎಷ್ಟು ಸೊಗಸಾದ ಸನ್ನಿವೇಶವನ್ನು ಕಲ್ಪಿಸಿದ್ದಾನೆ ! ಬಾದರಾಯಣನು —ಮೊದಲು ಪುರುಷೋತ್ತಮನಾದ ನಾರಾಯಣನೆಂದು ಹೇಳಿದ್ದವನು— ದೂತ ಕೇಶವನು ಬಂದಿದ್ದಾನೆ '' ಎನ್ನುವನು. ಆ ಮಾತುಗಳು ದುರ್ಯೋಧನನ ಕಿವಿಗೆ ಅಮೃತ ಸದೃಶವಾಗಿರಬೇಕು. ಆದುದರಿಂದಲೇ ಅವನು " ಕೇಶವನೆಂದೆಯೋ ? ಹೀಗೆ ತಾನೆ ಹೇಳಬೇಕು. ಇದೇ ಸರಿಯಾದ ವರ್ತನೆ '' ಎಂದು ಹೇಳಿ ತನ್ನ ಮೆಚ್ಚಿಕೆಯನ್ನೂ ತೃಪ್ತಿ

ಯನ್ನೂ ಸೂಚಿಸುವನು! ದುರ್ಯೋಧನನು ಅನಂತರ ಸಭಾಸದರನ್ನು ಕುರಿತು ಕೃಷ್ಣನು ಬಂದಾಗ ಮೇಲಕ್ಕೆದ್ದವರು "ದ್ವಾದಶ ಸುವರ್ಣ ಭಾರ"ದ ದಂಡದ್ರವ್ಯವನ್ನು ತೆರಬೇಕಾಗುವುದೆಂದೂ, ಆದಕಾರಣ ಅವ ರಾರೂ ಅಪ್ರಮತ್ತರಾಗಿ ಮೇಲಕ್ಕೇಳಕೂಡದೆಂದೂ ಕಟ್ಟುಮಾಡುವನು. ಭೀಷ್ಮದ್ರೋಣರು ಕೂಡ ಅವನಿಗೆ ಬುದ್ಧಿಹೇಳುವುದಿಲ್ಲ. ಅವರಿಗೆ ಮಹಾಭಾರತದಲ್ಲಿ ಉಳಿದಿರುವಷ್ಟು ಸ್ವಾತಂತ್ರ್ಯವೂ ಅವನ ನಿರಂಕುಶ ಪ್ರವರ್ತನೆಯ ಆಗಡುತನದಲ್ಲಿ ಇಲ್ಲಿ ಉಳಿದಿಲ್ಲ. ಸಭಿಕರೊಬ್ಬರೂ ಏಳಕೂಡದೆಂದು ಕಟ್ಟುಮಾಡಿದ ಬಳಿಕ, ಶ್ರೀ ಕೃಷ್ಣನು ಸಭಾಪ್ರವೇಶ ಮಾಡಿದಾಗ ತಾನು ಏಳದಿರುವುದಕ್ಕೇನು ಉಪಾಯವೆಂದು ಚಿಂತಿಸಿ, ದ್ರೌಪದಿಯ ಕೇಶಾಂಬರಾಪಕರ್ಷಣದ ಚಿತ್ರಪಟವನ್ನು ತರುವಂತೆ ಬಾದರಾಯಣನಿಗೆ ಅಪ್ಪಣೆಮಾಡುವನು; ಅಲ್ಲದೆ ತನ್ನಲ್ಲಿ ತಾನು, "ಅದ ರಲ್ಲಿ ದೃಷ್ಟಿಯನ್ನಿಟ್ಟುಕೊಂಡಿದ್ದು ಕೇಶವನಿಗೆ ಪ್ರತ್ಯುತ್ಥಾನ ಮಾಡದೆ ಸುಮ್ಮನಿರುವೆನು" ಎಂದು ಹೇಳಿಕೊಳ್ಳುವನು. ಚಿತ್ರವನ್ನು ನೋಡು ತ್ತಿದ್ದಕಾರಣ ಮೇಲಕ್ಕೇಳಲಿಲ್ಲವೆಂದು ಶ್ರೀಕೃಷ್ಣನಿಗೆ ತೋರಿಬರಲೆಂಬ ಸಂಕಲ್ಪದಿಂದ ಅವನು ಈ ಕುತಂತ್ರವನ್ನು ಹೂಡುವನು. ಬಾದರಾ ಯಣನು ಚಿತ್ರಪಟವನ್ನು ತಂದ ಮೇಲೆ ದುರ್ಯೋಧನನು ಅದನ್ನು ತನ್ನ ಮುಂದೆ ಹರಡಬೇಕೆಂದು ಕೋರುವನು. ಚಿತ್ರಪಟವು ಬಹಳ ದೊಡ್ಡದಾಗಿರಬೇಕೆಂಬುದನ್ನು ಇದು ಸೂಚಿಸುವುದು. ಅತ್ತ ಶ್ರೀಕೃಷ್ಣನು ದ್ವಾರಪ್ರಾಂತದಲ್ಲಿ ಕಾದಿರುವಲ್ಲಿ, ಇತ್ತ ದುರ್ಯೋಧನನು ಚಿತ್ರಪಟದ ವರ್ಣನೆಗಾರಂಭಿಸಿ ಹರ್ಷಿಸುವನು. ಶ್ರೀ ಕೃಷ್ಣನು ದ್ವಾರಪ್ರಾಂತದಲ್ಲಿ ಸ್ವಲ್ಪಕಾಲ ನಿಂತಿರುವಂತೆ ಮಾಡಿ ತನ್ನ ದರ್ಪವನ್ನು ಮೆರೆಯುವ ಉದ್ದೇಶವೂ ಅವನಿಗಿರಬಹುದು. ದುಶ್ಶಾಸನನು ದ್ರೌಪದಿಯ ಮುಡಿಗೆ ಕೈಹಾಕಿ ಕೇಶವನ್ನು ಹಿಡಿದೆಳೆಯುತ್ತಿದ್ದುದು, ಭೀಮನು ಸಮಸ್ತ ರಾಜ ರುಗಳ ಸಮಕ್ಷಮದಲ್ಲಿ ದ್ರೌಪದಿಗೆ ಅಪಮಾನವಾದುದಕ್ಕಾಗಿ ಕುಪಿತ ನಾಗಿ ಸಭಾಸ್ತಂಭವನ್ನು ನೋಡುತ್ತಿದ್ದುದು, ಅವನ ಇಂಗಿತವನ್ನರಿತು ಯುಧಿಷ್ಠಿರನು ಕಡೆಗಣ್ಣಿನ ನೋಟದಿಂದಲೇ ನಿಷೇಧಿಸುತ್ತಿದ್ದುದು, "ರೋಷಾಕುಲಾಕ್ಷ"ನಾದ ಅರ್ಜುನನು ತನ್ನ ಅಧರೋಷ್ಠಗಳು ನಡು

ಗುತ್ತಿರುವಲ್ಲಿ ರಿಪುಮಂಡಲವನ್ನೇ ತೃಣದಂತೆ ಭಾವಿಸಿ ಗಾಂಡೀವದ ಶಿಂಜಿನಿಯನ್ನೆಳೆಯುತ್ತಿದ್ದುದು, ಯುಧಿಷ್ಠಿರನು (ಬಹುಶಃ ಅವನ ಕೈಯನ್ನು ಹಿಡಿದುಕೊಂಡು) ಅವನನ್ನು ಅಡ್ಡಿಪಡಿಸುತ್ತಿದ್ದುದು, ನಕುಲ ಸಹದೇವರು ರೋಷದಿಂದ ಔಡನ್ನು ಕಚ್ಚಿ ದುಶ್ಶಾಸನನನ್ನು ನೋಡುತ್ತಿದ್ದುದು, ಯುಧಿಷ್ಠಿರನು ತನ್ನ ಬಳಿಯಲ್ಲಿ ನಿಂತಿದ್ದ ಅವರೀರ್ವರನ್ನೂ ನಿವಾರಿಸುತ್ತಿದ್ದುದು, ದ್ರೌಪದಿಯು ಮುಖವನ್ನು ಮುಚ್ಚಿಕೊಂಡು ಅಳುತ್ತಿರುವಲ್ಲಿ ಶಕುನಿಯು ಗರ್ವದಿಂದಲೂ, ಸಂತೋಷದಿಂದಲೂ ದಾಳಗಳನ್ನು ಎಸೆಯುತ್ತಿದ್ದುದು, ಭೀಷ್ಮದ್ರೋಣರು ಲಜ್ಜಿತರಾಗಿ (ಸೇವಾಧರ್ಮಕ್ಕೆ ಕಟ್ಟುಬಿದ್ದವರಾಗಿ) ಉತ್ತರೀಯದಿಂದ ಮುಖವನ್ನು ಮುಚ್ಚಿಕೊಂಡಿದ್ದುದು—ಇವುಗಳನ್ನು ವರ್ಣಿಸಿ ಕೊನೆಗೆ ದುರ್ಯೋಧನನು "ಆಹ, ಇದರ ವರ್ಣಾಢ್ಯತೆ! ಆಹ, ಇದರ ಭಾವೋಪಪನ್ನತೆ! ಆಹ ಇದರ ಯುಕ್ತಲೇಖತೆ! ಈ ಚಿತ್ರಪಟವು ಸುವ್ಯಕ್ತವಾಗಿರುವಂತೆ ಬರೆಯಲ್ಪಟ್ಟಿದೆ. ಇದನ್ನು ಕಂಡು ಸಂತಸಗೊಂಡಿದ್ದೇನೆ" ಎಂದು ಹೇಳುತ್ತಾನೆ. ಆ ಬಳಿಕ ಶ್ರೀ ಕೃಷ್ಣನ ನೆನಪು ಬರುವುದೋ ಏನೋ! ದುರ್ಯೋಧನನು ಕೊನೆಗೆ ಬಾದರಾಯಣ! ತನಗೆ "ವಿಹಗ ವಾಹನ ವಿದೆಯೆಂಬ ಕಾರಣದಿಂದಲೇ (ಹೆಮ್ಮೆಯಿಂದ) ವಿಸ್ಮಿತನಾಗಿರುವ ಆ ದೂತನನ್ನು ಕರೆದುಕೊಂಡು, ಬಾ" ಎಂದು ಕಟುವಾದ ಕೊಂಕು ನುಡಿಗಳಿಂದ ಅಪ್ಪಣೆ ಮಾಡುವನು. ಇದಿಷ್ಟೂ ಕವಿಯ ಕಲ್ಪನೆ; ಮೂಲ ಗ್ರಂಥವಾದ ಮಹಾಭಾರತದಲ್ಲಿ ಇದೊಂದೂ ಹೇಳಿಲ್ಲ.

ಶ್ರೀಕೃಷ್ಣನು ದುರ್ಯೋಧನನ ವೈಭವವನ್ನು ನೋಡುತ್ತ, ಗದಾಧರನಾದ ಭೀಮನ ಕೋಪಶಿಖಿಯಿಂದಲೂ, ಪಾರ್ಥನ ಬಾಣಾಗ್ನಿಯಿಂದಲೂ ಕುರುವಂಶವೆಂಬ ವನವೇ ನಾಶವಾಗುವುದೆಂದುಕೊಳ್ಳುತ್ತ ಪ್ರವೇಶಿಸುವನು. ಆತನು ಸಭಾಪ್ರವೇಶ ಮಾಡಿದೊಡನೆಯೆ, ಆತನ ಪ್ರಭಾವದಿಂದಲೂ, ವರ್ಚಸ್ಸಿನಿಂದಲೂ ಮುಗ್ಧರಾಗಿ- ದುರ್ಯೋಧನನೊಬ್ಬನ ಹೊರತು- ಉಳಿದವರೆಲ್ಲರೂ ಎದ್ದು ನಿಲ್ಲುವರು. ದುರ್ಯೋಧನನು ಮಾತ್ರ ಚಿತ್ರಪಟವನ್ನು ನೋಡುತ್ತ ಕುಳಿತಿದ್ದು ಶ್ರೀಕೃಷ್ಣನ ಪ್ರಭಾವದ ಫಲ

ವಾಗಿ ಸಿಂಹಾಸನದಿಂದ ಕೆಳಕ್ಕುರುಳುವನು. ಆಗ ತನ್ನಲ್ಲಿ ತಾನು, "ಆಹೆ, ಈ ದೂತನು ಬಹಳ ಮಾಯಾವಿ" ಎಂದುಕೊಂಡು, ಶ್ರೀಕೃಷ್ಣನೊಡನೆ, "ಎಲೈ ದೂತ! ಈ ಆಸನದಲ್ಲಿ ಕುಳಿತುಕೊ" ಎಂದು ಹೇಳುವನು. ಶ್ರೀಕೃಷ್ಣನು ದ್ರೋಣಭೀಷ್ಮರನ್ನೂ, ಇತರ ರಾಜರನ್ನೂ ಕುಳಿತುಕೊಳ್ಳು ವಂತೆ ಹೇಳಿ ತಾನೂ ಕುಳಿತುಕೊಳ್ಳುವನು. ದುರ್ಯೋಧನನು ಸಭಿಕ ರಾರಾದರೂ ಎದ್ದು ನಿಂತಲ್ಲಿ, "ದ್ವಾದಶ ಸುವರ್ಣಭಾರ"ದ ದಂಡದ್ರವ್ಯ ವನ್ನು ವಿಧಿಸುವುದಾಗಿ ಅಪ್ಪಣೆಮಾಡಿದ್ದೂ ಶ್ರೀಕೃಷ್ಣನು ಸಭಾಪ್ರವೇಶ ಮಾಡಿದಾಗ ಅವರೆಲ್ಲರೂ ಎದ್ದುನಿಂತುದೇ, ಶ್ರೀಕೃಷ್ಣನ ಮಾಹಾತ್ಮ್ಯ ವನ್ನೂ ಪ್ರಭಾವವನ್ನೂ ವ್ಯಕ್ತಪಡಿಸುವುದು. ದುರ್ಯೋಧನನು ದುರ್ಭಾ ಷೆಯನ್ನಾಡುವವನೆಂದೂ, ಗುಣದ್ವೇಷಿಯೆಂದೂ, ಶಠನೆಂದೂ, ಸ್ವಜನ ನಿರ್ದಯನೆಂದೂ ಶ್ರೀಕೃಷ್ಣನು ತಾನು ಸಭೆಗೆ ಬಂದಾಗ ವರ್ಣಿಸಿರುವುದಕ್ಕ ನುಸಾರವಾಗಿಯೇ ದುರ್ಯೋಧನನು, "ಎಲೈ ದೂತ! ಧರ್ಮಾತ್ಮಜನೂ, ವಾಯುಪುತ್ರನಾದ ಭೀಮನೂ, ಇಂದ್ರಸೂನುವಾದ ಅರ್ಜುನನೂ, ಅಶ್ವಿ ನೀದೇವತೆಗಳ ಮಕ್ಕಳಾದ ನಕುಲ ಸಹದೇವರೂ ಪರಿಜನರೊಡನೆ ಕ್ಷೇಮವೆ? ಎಂದು ಕೇಳುವನು. ಈ ಪ್ರಶ್ನೆಯು ದುರ್ಯೋಧನನ ದುಷ್ಟಸ್ವಭಾವಕ್ಕನುಗುಣವಾದ ವಿಷವಾಹಿನಿಯಾಗಿ, ಪಾಂಡವರು ಪರಾ ತ್ಮಜರೆಂಬ ಅಣಕದ ಮಡುವಿನಂತಿದ್ದರೂ, ಶ್ರೀಕೃಷ್ಣನು ಅದಕ್ಕೆ ತಕ್ಕ ಮರ್ಮಭೇದಕವಾದ ಕೀಳುನುಡಿಗಳಿಂದ ಉತ್ತರ ಹೇಳದೆ ಸಹನವನ್ನು ತೋರಿಸುವನು. ಅದೂ ಅವನ ಉದಾತ್ತ ಸ್ವಭಾವವನ್ನು ತೋರಿಸು ವುದು.

ಅನಂತರ ಶ್ರೀಕೃಷ್ಣನು ಪಾಂಡವರಿಗಾಗಿ ರಾಜ್ಯವನ್ನು ಬೇಡುವನು. ಆಗ ಧುರ್ಯೋಧನನು "ಪರಾತ್ಮಜ" ರಾದವರೊಡನೆ ದಾಯವಿಭಾಗ ವೆಲ್ಲಿಯದೆಂದು ಕೇಳಿ, ಪಾಂಡುರಾಜನು ಶಾಪಗ್ರಸ್ತನಾಗಿ ಕಾಡಿನಲ್ಲಿದ್ದ ಸುದ್ದಿಯನ್ನೆತ್ತಿ ವಿಷಮಯವಾದ ಕಟಕಿವಾತನ್ನಾಡುವನು. ವಾಸುದೇ ವನು, ವಿಚಿತ್ರವೀರ್ಯನ ಮರಣಾನಂತರ ಅವನ ಪತ್ನಿ ಅಂಬಿಕೆಯಲ್ಲಿ ವ್ಯಾಸನಿಂದ ಜನಿಸಿದ ಧೃತರಾಷ್ಟ್ರನಿಗೆ ರಾಜ್ಯಕ್ಕೆ ಹಕ್ಕೆಲ್ಲಿಯದೆಂದು ಕೇಳಿ

ರಾಜ್ಯಾರ್ಧವನ್ನು ಕೊಡೆಂದು ಹೇಳುವನು. ರಾಜ್ಯವನ್ನು ಗೆದ್ದು ಪಡೆಯ ಬೇಕಲ್ಲದೆ, ದೀನತೆಯಿಂದ ಯಾಚಿಸಿ ಪಡೆಯಲು ಸಾಧ್ಯವಿಲ್ಲವೆಂದೂ, ಪಾಂಡವರು ಯುದ್ಧಮಾಡಿ ಸಾಹಸದಿಂದ ರಾಜ್ಯವನ್ನು ಪಡೆಯಬೇ ಕೆಂದೂ, ಇಲ್ಲವಾದಲ್ಲಿ ಮುನಿವೃತ್ತಿಯನ್ನಾಶ್ರಯಿಸಿ ವನಕ್ಕೆ ತೆರಳಬಹು ದೆಂದೂ ದುರ್ಯೋಧನನು ಉತ್ತರ ಹೇಳುವನು. ಶ್ರೀಕೃಷ್ಣನು ಬಂಧು ವಂಚನೆ ಮಾಡಬೇಡವೆಂದರೆ ದುರ್ಯೋಧನನು, "ಮಾವನಾದ ಕಂಸ ನಲ್ಲಿ ನೀನೇಕೆ ದಯೆತೋರಲಿಲ್ಲ ?" ಎಂದು ಕೇಳುವನು. ವೃದ್ಧನಾದ ತನ್ನ ತಂದೆಯನ್ನೇ ಕಂಸನು ಸೆರೆಯಲ್ಲಿಟ್ಟು, ತನ್ನ ತಂಗಿ ದೇವಕಿಗೇ ಪುತ್ರಶೋಕವನ್ನುಂಟುಮಾಡಿದ್ದ ಕಾರಣ, ಅವನು ಮೃತ್ಯುವಿನಿಂದ ಹತ ನಾದನೆಂದು ಶ್ರೀಕೃಷ್ಣನು ಉತ್ತರ ಹೇಳಿ, ಕೊನೆಗೆ, "ಭ್ರಾತೃಸ್ನೇಹವು ಅವಶ್ಯವಾಗಿರಬೇಕಾದುದು. ಅವಗುಣಗಳನ್ನೆಲ್ಲ ಮರೆಯಬೇಕು. ಬಂಧು ಪ್ರೇಮವು ಇಹಪರಗಳೆರಡರಲ್ಲೂ ಶ್ರೇಯಸ್ಕರ" ಎಂದು ತಿಳಿಸುವನು. ಮೂರ್ಖನಾದ ದುರ್ಯೋಧನನು, "ದೇವಾತ್ಮಜರಿಗೂ, ಮನುಷ್ಯರಿಗೂ ಬಂಧುತ್ವವು ಹೇಗೆ ಸಾಧ್ಯ ? ಇನ್ನು ಈ ಪಿಷ್ಟಪೇಷಣವು ಸಾಕು. ಈ ಮಾತುಗಳನ್ನು ಇನ್ನು ನಿಲ್ಲಿಸು" ಎಂದು ಹೇಳುವನು. ಅನಂತರ ಶ್ರೀ ಕೃಷ್ಣನು ಅರ್ಜುನನ ಪ್ರತಾಪವನ್ನು ಬಣ್ಣಿಸಿ, ಚಿತ್ರಸೇನನ ಕೈಯಿಂದ ಅವನು ದುರ್ಯೋಧನನನ್ನು ಬಿಡಿಸಿಕೊಂಡು ಬಂದುದನ್ನು ಜ್ಞಾಪಿಸಿ, ಅರ್ಧರಾಜ್ಯವನ್ನು ಕೊಡದೆ ಹೋದಲ್ಲಿ ಪಾಂಡವರೇ ರಾಜ್ಯವನ್ನೆಲ್ಲ ಕಿತ್ತು ಕೊಳ್ಳುವರೆಂದು ತಿಳಿಸುವನು. ದುರ್ಯೋಧನನು ರೋಷಪೂರಿತನಾಗಿ, ವಾಯುವೇ ಭೀಮರೂಪದಿಂದ ಯುದ್ಧಕ್ಕೆ ಬಂದರೂ, ಇಂದ್ರನೇ ಪಾರ್ಥ ರೂಪವನ್ನು ಧರಿಸಿ ಯುದ್ಧಕ್ಕೆ ಬಂದರೂ ತನ್ನ ರಾಜ್ಯದ ಹುಲ್ಲನ್ನು ಕೂಡ ಕೊಡುವುದಿಲ್ಲವೆಂದು ತಿಳಿಸುವನು ; ಅಲ್ಲದೆ ಶ್ರೀ ಕೃಷ್ಣನನ್ನೂ ಹಳಿಯುವನು ; ಕೊನೆಗೆ ಮೂರ್ಧಾಭಿಷಿಕ್ತನಾದ ತಾನು ಶ್ರೀ ಕೃಷ್ಣ ನಂತಹವರೊಡನೆ ಮಾತನಾಡುವುದೇ ಯೋಗ್ಯವಾದ ಕೆಲಸವಲ್ಲವೆಂದು ಹೇಳುವನು. ಶ್ರೀ ಕೃಷ್ಣನು ರೋಷದಿಂದ ಕೆರಳಿ ಸಭೆಯನ್ನು ಬಿಟ್ಟು ಹೊರಡಲನುವಾಗುವನು. ದುರ್ಯೋಧನನು ಅವನನ್ನು ಕಟ್ಟಿಹಾಕು ವಂತೆ ತಮ್ಮಂದಿರಿಗೂ, ಶಕುನಿಗೂ ಹೇಳಿ, ಕೊನೆಗೆ ತಾನೇ ಆ ಕೆಲಸ

ಮಾಡಲು ಮುಂದೆ ಬರುವನು. ಶ್ರೀ ಕೃಷ್ಣನು ವಿಶ್ವರೂಪವನ್ನು ಧರಿಸಿ ನಿಲ್ಲುವನು. ಆತನು ಒಮ್ಮೆ ದುರ್ಯೋಧನನ ಕಣ್ಣಿಗೆ ಕಾಣಿಸುವುದೇ ಇಲ್ಲ. ಒಮ್ಮೆ ಕುಳ್ಳಾಗಿ, ಒಮ್ಮೆ ಎತ್ತರವಾಗಿ ಕಾಣಿಸುವನು. ಕೊನೆಗೆ ಮಂತ್ರಶಾಲೆಯಲ್ಲೆಲ್ಲ ಬಹುಮಂದಿ ಕೃಷ್ಣರೇ ಕಾಣಿಸುವರು. ದುರ್ಯೋಧನನು ರಾಜರಲ್ಲಿ ಒಬ್ಬೊಬ್ಬರೂ ಕೃಷ್ಣನನ್ನು ಕಟ್ಟಿಹಾಕಬೇಕೆಂದು ಅಪ್ಪಣೆಮಾಡುವನು. ರಾಜರೆಲ್ಲರೂ ಅವರವರ ಬಂಧನದಿಂದ ಅವರವರೇ ಕೆಳಕ್ಕುರುಳುವರು. ಕೊನೆಗೆ ದುರ್ಯೋಧನನು ತನ್ನ ಬಾಣಗಳಿಂದ ಕೃಷ್ಣನನ್ನು ಘಾತಿಸಿ ಪಾಂಡವರು ಕಣ್ಣೀರು ಬಿಡುವಂತೆ ಮಾಡುವುದಾಗಿ ನಿರ್ಧರಿಸಿ ಬಿಲ್ಲು ಬಾಣಗಳನ್ನು ತರಲು ಹೋಗುವನು. ಮಹಾಭಾರತದಲ್ಲಿ ವಿಶ್ವರೂಪ ಪ್ರದರ್ಶನವು ನಡೆದರೂ ಈ ರೀತಿಯಲ್ಲಿ ನಡೆಯುವುದಿಲ್ಲ. * ರೂಪಕವು ರಂಗಸ್ಥಳದ ಮೇಲೆ ಶೋಭಿಸುವಂತೆ ಮಾಡಲು ಭಾಸಕವಿಯು ಈ ಮಾರ್ಪಾಡುಗಳನ್ನು ಮಾಡಿದ್ದಾನೆ. ಶ್ರೀ ಕೃಷ್ಣನು ಕುಪಿತನಾಗಿ, "ಆಗಲಿ, ಪಾಂಡವರು ಮಾಡಬೇಕಾದ ಕೆಲಸವನ್ನು ನಾನೇ ಮಾಡುತ್ತೇನೆ. ಎಲೈ! ಸುದರ್ಶನವೆ, ಇಲ್ಲಿ ಬಾ" ಎಂದು ಹೇಳುವಂತೆಯೂ, ಅನಂತರ ಸುದರ್ಶನವೇ ಮುಂತಾದ ಆಯುಧಗಳೂ, ಪಾಂಚಜನ್ಯವೂ ಬರುವಂತೆಯೂ, ಕೊನೆಗೆ ಸುದರ್ಶನವು ಸ್ವಾಮಿಯೊಡನೆ, "ದೇವ ಪ್ರಸನ್ನನಾಗು. ನೀನೇ ಇವನನ್ನು ಕೊಂದರೆ ಭೂಭಾರವನ್ನಿಳಿಸಲು ಅವತರಿಸಿದ ಉದ್ದೇಶವೇ ಸಾರ್ಥಕವಾಗದು" ಎಂದು ಹೇಳಿದುದನ್ನು ಕೇಳಿ, "ಸುದರ್ಶನ, ರೋಷದಿಂದ ಸರಿಯಾದ ವರ್ತನೆಯನ್ನೇ ಮರೆತೆನು. ನಿನ್ನ ಸ್ಥಾನಕ್ಕೆ ಹೊರಡು" ಎಂದು ಉತ್ತರ ಕೊಟ್ಟಂತೆಯೂ, ಮಹಾಭಾರತದಲ್ಲಿಲ್ಲದ ಅಂಶಗಳೂ, ಈ

---

* ವಿಶ್ವರೂಪವನ್ನು ಧರಿಸಿ ನಿಂತ ಶ್ರೀ ಕೃಷ್ಣನ ದೇಹದಲ್ಲಿ ಪಾಂಡವರೂ ಅನ್ಧಕರೂ, ವೃಷ್ಣಿಗಳೂ, ಆದಿತ್ಯರೂ, ರುದ್ರರೂ, ವಸುಗಳೂ, ಮಹರ್ಷಿಗಳೂ, ನೆಲಸಿದ್ದರೆಂದು ಮಹಾಭಾರತದಲ್ಲಿ ಹೇಳಿದೆ.

"ಇಹೈವ ಪಾಂಡವಾಸ್ಸರ್ವೇ ತಥೈವಾನ್ಧಕ ವೃಷ್ಣಯಃ ||
ಇಹಾದಿತ್ಯಾಶ್ಚ ರುದ್ರಾಶ್ಚ ವಸವಶ್ಚ ಮಹರ್ಷಿಭಿಃ ||"

ರೂಪಕದಲ್ಲಿ ಸೇರಿವೆ. ಸ್ವಾಮಿಯು ಶಾಂತನಾದುದನ್ನು ಕಂಡು ಸುದರ್ಶನವು ಉಳಿದ ಆಯುಧಗಳನ್ನೂ ಪಾಂಚಜನ್ಯವನ್ನೂ ಕಳುಹಿಸಿ ತಾನೂ ತೆರಳಿದ ಬಳಿಕ, ಶ್ರೀ ಕೃಷ್ಣನೂ ಪಾಂಡವರ ಶಿಬಿರಕ್ಕೆ ಹೊರಡುವನು. ಆಗ "ಹೊರಡಕೂಡದು ಹೊರಡಕೂಡದು" ಎಂದು ಹೇಳುತ್ತ ಧೃತರಾಷ್ಟ್ರನು ಪ್ರವೇಶಿಸುವನು. ಅಲ್ಲದೆ ತನ್ನ ಪುತ್ರನ ಅಪರಾಧಕ್ಕಾಗಿ ಅವನು ಶ್ರೀ ಕೃಷ್ಣನ ಪಾದಗಳಿಗೆರಗುವನು. ತಾನು ರಾಜನೆಂಬ ಅಭಿಮಾನವಿರುವ ಮಹಾಭಾರತದ ಧೃತರಾಷ್ಟ್ರನಿಂದ ಅದು ಸಾಧ್ಯವಾಗುತ್ತಿದ್ದಿತೋ ಇಲ್ಲವೋ ಹೇಳಲಾಗದು. ವಾಸುದೇವನು ಅವನನ್ನು ಬೀಳ್ಕೊಂಡು ತೆರಳಲನುವಾಗುವನು. ಭರತ ವಾಕ್ಯದೊಡನೆ ರೂಪಕವು ಪೂರೈಸುವುದು.

**ಪಾತ್ರರಚನೆ :**—ಈ ರೂಪಕದಲ್ಲಿ ನಾವು ಗಮನಿಸಬೇಕಾದುದೇ ಎರಡು ಪಾತ್ರಗಳ ವಿಚಾರ. ರೂಪಕವು ಚಿಕ್ಕದಾಗಿರುವುದರಿಂದಲೂ, ಆ ಎರಡು ಪಾತ್ರಗಳಾದ ಕೃಷ್ಣ ದುರ್ಯೋಧನರ ವಿಷಯವನ್ನು ಈ ಮೊದಲೇ ವಿಶದವಾಗಿ ಪ್ರಸ್ತಾವಿಸಿರುವುದರಿಂದಲೂ, ಇಲ್ಲಿ ಹೆಚ್ಚೇನನ್ನೂ ಹೇಳಬೇಕಾದುದಿಲ್ಲ. ಕೆಲವು ಅಂಶಗಳನ್ನು ಮಾತ್ರ ಸೂಚಿಸಿದರೆ ಸಾಕು.

**ದುರ್ಯೋಧನ**

ದುರ್ಯೋಧನನು ದುಷ್ಟನೂ, ಧೂರ್ತನೂ, ನಿರ್ಘೃಣನಾದ ಮೂರ್ಖನೂ ಆಗಿದ್ದರೂ ನಮ್ಮ ಚಿತ್ತವನ್ನೇ ಆಕರ್ಷಿಸುವಷ್ಟು ಸತ್ತ್ವವೂ ಪೌರುಷವೂ ಅವನಲ್ಲಿವೆ. ವೀರಶ್ರೇಷ್ಠರಾದ ಭೀಷ್ಮ ದ್ರೋಣರು ಕೂಡ, ಅವನ ಸೂತ್ರದ ಬೊಂಬೆಗಳು. ಪಾಂಡವರ ಕಡೆಯಿಂದ ಸಂಧಿಗಾಗಿ ಬಂದಿರುವ ಕೃಷ್ಣನ ಬಳಿಗೇ ಹೋಗಿ ಆತನಿಗಾಗಿ ರಾಜಾ ಧೃತರಾಷ್ಟ್ರನೂ, ಭೀಷ್ಮಾದಿಗಳೂ ಸಭೆಯಲ್ಲಿ ಕಾದಿರುವರೆಂದು ಹೇಳಿ ಆತನ ರಥವನ್ನೇ ತನ್ನ ರಥದ ಮುಂದೆ ಬಿಡಿಸಿ ಕರೆದುಕೊಂಡು ಬಂದು ಮನ್ನಣೆ ತೋರುವಷ್ಟು ಸೌಜನ್ಯವಾದರೂ ಮಹಾಭಾರತದ ದುರ್ಯೋಧನನಲ್ಲಿದೆ. ದೂತವಾಕ್ಯದ ದುರ್ಯೋಧನನಿಂದ ಅಂತಹ ವರ್ತನೆಯು

ಕನಸಿನಲ್ಲಿ ಕೂಡ ಸಾಧ್ಯವಿಲ್ಲ. ಅವನು ನೆಪಮಾತ್ರದ ರಾಜತ್ವವನ್ನೂ ತನ್ನ ತಂದೆಯ ಕೈ ತಪ್ಪಿಸಿ ತಾನೇ ಸರ್ವಾಧಿಕಾರವನ್ನೂ ವಹಿಸಿರುವವನು; ಶ್ರೀ ಕೃಷ್ಣನು ಸಭೆಗೆ ಬಂದಾಗ ಯಾರಾದರೂ ಮೇಲಕ್ಕೆದ್ದು ಮನ್ನಣೆ ತೋರಿದರೆ ದಂಡದ್ರವ್ಯವನ್ನು ವಿಧಿಸುವುದಾಗಿ ಹೇಳುವನು. ಮಹಾಭಾರತದ ದುರ್ಯೋಧನನು ಸೂಜಿಯ ಮೊನೆಯಷ್ಟು ಭೂಮಿಯನ್ನೂ ಪಾಂಡವರಿಗೆ ಕೊಡುವುದಿಲ್ಲವೆಂದರೆ, ದೂತವಾಕ್ಯದ ದುರ್ಯೋಧನನು ಇನ್ನೂ ಒಂದು ಹೆಜ್ಜೆ ಮುಂದಕ್ಕೆ ಹೋಗಿ ತನ್ನ ರಾಜ್ಯದ ಹುಲ್ಲನ್ನೂ ಪಾಂಡವರಿಗೆ ಕೊಡುವುದಿಲ್ಲವೆನ್ನುತ್ತಾನೆ. ತನ್ನೊಡನೆ ಹುಲ್ಲಿನ ಸುದ್ದಿಯನ್ನೆತ್ತಿ ಮರ್ಯಾದೆ ಮೀರಿ ನಡೆದುದಕ್ಕಾಗಿ ಶ್ರೀ ಕೃಷ್ಣನು ಅಸಮಾಧಾನ ಹೊಂದಿ ಅದಕ್ಕಾಗಿ ಆಕ್ಷೇಪಿಸಿದಾಗ ಗೋಪಾಲಕನೊಡನೆ ಹುಲ್ಲಿನ ಸುದ್ದಿಯನ್ನೆತ್ತಿದುದು ಸಹಜವೇ ಸರಿಯೆಂದು ದುರ್ಯೋಧನನು ಬಿರುನುಡಿಯನ್ನಾಡುವನು. ನಿರ್ದಾಕ್ಷಿಣ್ಯಭಾವದ ಪರಮಾವಧಿಯನ್ನು ಮುಟ್ಟಿರುವ ಅವನ ಉದ್ಧತತನವೆಷ್ಟು ಮಟ್ಟಿನದೆಂಬುದು ಇದರಿಂದ ಗೊತ್ತಾಗುವುದು.

ಅವಮಾನಹೊಂದಿ ಅಳುತ್ತಿರುವ ದ್ರೌಪದಿಯ ಚಿತ್ರವನ್ನು ನೋಡಿ ಹರ್ಷಿಸುವಷ್ಟು ಹೀನಗುಣವು ಅವನಲ್ಲಿದೆ. ಚಿತ್ರವನ್ನು ನೋಡುವಾಗ ಅವನು ಭೀಮನನ್ನು, "ದುರಾತ್ಮ" ನೆಂದು ಪರೋಕ್ಷದಲ್ಲಿ ದೂಷಿಸುವುದನ್ನು ಖಂಡಿಸಲೇಬೇಕು. ಅಲ್ಲದೆ, ಅವನು ಕರ್ಣನೊಡನೆ, "ಪಾಂಡವರ ಮಾತಿನಿಂದ ದೌತ್ಯವನ್ನು ವಹಿಸಿ ಕೃಷ್ಣಮತಿಯಾದ ಆ ಕೃಷ್ಣನು ಭೃತ್ಯನಂತೆ ಈ ದಿನ ಬಂದಿದ್ದಾನೆ. ಮಿತ್ರ! ಕರ್ಣ! ನಾರೀಮೃದುವಾದ ಯುಧಿಷ್ಠಿರ ವಚನಗಳನ್ನು ಕೇಳಲು ನಿನ್ನೆರಡು ಕಿವಿಗಳನ್ನೂ ಸಜ್ಜುಗೊಳಿಸಿಕೊ"* ಎಂದು ಹೇಳುವ ಮಾತುಗಳನ್ನು ನೋಡಿದ

---

* "ಪ್ರಾಪ್ತಃ ಕಿಲಾದ್ಯ ವಚನಾದಿಹ ಪಾಂಡವಾನಾಂ
ದೌತ್ಯೇನ ಭೃತ್ಯ ಇವ ಕೃಷ್ಣಮತಿಸ್ಸಕೃಷ್ಣಃ ।
ಶ್ರೋತುಂ ಸಖೇ ತ್ವಮಪಿ ಸಜ್ಜಯ ಕರ್ಣ ಕರ್ಣೌ
ನಾರೀಮೃದೂನಿ ವಚನಾನಿ ಯುಧಿಷ್ಠಿರಸ್ಯ ॥

ರಂತು ವಿನಯದ ಲವಲೇಶವೂ ಅವನಲ್ಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. "ಕೃಷ್ಣಮತಿಯಾದ ಕೃಷ್ಣ" ಎಂಬುದರಲ್ಲಿ ತಿರಸ್ಕಾರಭಾವದ ಒಂದು ಮಡುವೇ ತುಂಬಿದೆ. ಧ್ವನಿಯೇ ಕಾವ್ಯದ ಜೀವವಲ್ಲವೆ? ಕೃಷ್ಣಮತಿಯಾದ ಕೃಷ್ಣನೆಂಬುದರಲ್ಲಿ, ಹೊರಗೆ ದೇಹವು ಕಪ್ಪಾಗಿರುವಂತೆ ಒಳಗೆ ಅವನ ಮನಸ್ಸೂ ಕೌಟಿಲ್ಯದಿಂದ ಕೂಡಿ ಕಪ್ಪಾಗಿದೆಯೆಂಬ ಧ್ವನಿಯಿದೆ. ನಾರೀವ್ಮೃದುವಾದ ಯುಧಿಷ್ಠಿರ ವಚನಗಳೆಂಬುದರಲ್ಲಿ ಅಬಲೆಯರಾದ ಹೆಂಗಸರಂತೆ ಗೋಳಾಡುವವನೆಂಬ ತಿರಸ್ಕಾರವಿದೆ. ದುರ್ಯೋಧನನು ಭಯವನ್ನರಿಯದ ಕೆಚ್ಚೆದೆಯ ಕಡುಗಲಿ. ಶ್ರೀ ಕೃಷ್ಣನ ವಿಶ್ವರೂಪ ದರ್ಶನವು ಕೂಡ ಕೇವಲ ಮಾಯಾವಿತನವೆಂದೂ ಇಂದ್ರಜಾಲ ಪ್ರದರ್ಶನವೆಂದೂ ಬಗೆದು ಅವನು ನಿರ್ಭೀತನಾಗಿರುತ್ತಾನೆ. ತಾನು ಅಪ್ಪಣೆ ಮಾಡಿದರೂ ತನ್ನ ತಮ್ಮಂದಿರಾದ ದುಶ್ಶಾಸನನೇ ಮುಂತಾದವರೆಲ್ಲರೂ ಕೃಷ್ಣನ ಮೇಲೆ ಕೈ ಮಾಡಲಾರದೆ ಭಯಗ್ರಸ್ತರಾಗಿರುವ ಸನ್ನಿವೇಶದಲ್ಲಿ ರಾಜರೆಲ್ಲರೂ ಕೇಶವನನ್ನು ಕಟ್ಟಿಹಾಕುವ ಪ್ರಯತ್ನದಲ್ಲಿ ಕೃತಕಾರ್ಯರಾಗದೆ ಕೆಳಕ್ಕುರುಳಿರುವುದನ್ನು ನೋಡಿರುವ ಸನ್ನಿವೇಶದಲ್ಲಿ, ಆ ವೀರನು ಅವನೊಡನೆ ಹೋರಾಡಿ ಘಾತಿಸಲು ಬಿಲ್ಲುಬಾಣಗಳನ್ನು ತರುವುದಕ್ಕಾಗಿ ಶಸ್ತ್ರಶಾಲೆಗೆ ಹೋಗುತ್ತಾನೆ; ದುರ್ಯೋಧನನೆಂಬುದು ಅವನಲ್ಲಿ ಅನ್ವರ್ಥನಾಮವಾಗಿದೆ. ಅವನ ದುರ್ಗಣಗಳನ್ನೇನೊ ಹಳಿಯಬೇಕಾಗಿದೆ. ಆದರೆ ಅವನ ದರ್ಪವೂ, ಅವನ ಧೈರ್ಯಶೌರ್ಯಗಳೂ ನಮ್ಮ ಮನಸ್ಸನ್ನಾಕರ್ಷಿಸಿ ಮುಗ್ಧಗೊಳಿಸುತ್ತವೆ.

**ಶ್ರೀ ಕೃಷ್ಣ**

ದುರ್ಯೋಧನನ ರೋಷದರ್ಪಗಳೆಷ್ಟು ಅಧಿಕವೋ ಶ್ರೀ ಕೃಷ್ಣನ ಸೌಜನ್ಯ ಗಾಂಭೀರ್ಯಗಳೂ ಅಷ್ಟೇ ಅಧಿಕವಾಗಿವೆ. ದುರ್ಯೋಧನನ ವಾದಗಳನ್ನೆಲ್ಲ ಯುಕ್ತಿಯುಕ್ತವಾದ ಪ್ರತ್ಯುತ್ತರಗಳಿಂದ ಧ್ವಂಸಮಾಡುವ ಚಾತುರ್ಯವೂ ಶ್ರೀ ಕೃಷ್ಣನಲ್ಲಿದೆ. ತನ್ನ ಮೇಲಣ ಆಕ್ಷೇಪಣೆಗಳ ಮೊನೆಮಾತುಗಳಿಗೂ ಅವನು ಶಾಂತರೀತಿಯಲ್ಲಿ ಉತ್ತರಹೇಳಿ ತನ್ನ ದೊಡ್ಡತನವನ್ನು ತೋರಿಸಿಕೊಳ್ಳುತ್ತಾನೆ. ಆದರೆ ದುರ್ಯೋಧನನು ರಾಜ್ಯವನ್ನು ಕೊಡುವುದಿಲ್ಲ

ವೆಂದು ನಿರ್ಧರವಾಗಿ ಹೇಳಿದಾಗ ನಿರ್ವಾಹವಿಲ್ಲದೆ ಶ್ರೀ ಕೃಷ್ಣನು ಚಿತ್ರ ಸೇನನೆಂಬ ಗಂಧರ್ವನ ಕೈಯಿಂದ ಅರ್ಜುನನು ಅವನನ್ನು ಬಿಡಿಸಿ ಕೊಂಡು ಬಂದುದೇ ಮುಂತಾದ ವೃತ್ತಾಂತವನ್ನು ಬಳಿಯಿಸಿ ಚುಚ್ಚು ನುಡಿಗಳನ್ನಾಡಬೇಕಾಗುತ್ತದೆ. ವಿಶ್ವರೂಪವನ್ನು ಧರಿಸಿ ನಿಂತ ಸ್ವಾಮಿ ಯು ದುರ್ಯೋಧನನನ್ನು ತಾನೇ ಕೊಲ್ಲುವುದಾಗಿ ನಿರ್ಧರಿಸಿದಾಗ, ಸುದರ್ಶನವಾಣಿಗಳಿಂದ ಭೂಭಾರನಾಶದ ವಿಚಾರವನ್ನು ನೆನಪಿಗೆ ತಂದು ಕೊಂಡು ರೋಷಭರದಲ್ಲಿ ತಾನು ವ್ಯೈಮುರೆತುದಾಗಿ ಹೇಳಿಕೊಳ್ಳುವುದು ಸಮಂಜಸವಾಗಿಲ್ಲ. ಶ್ರೀ ಕೃಷ್ಣನಂತಹ ಶ್ರೇಷ್ಠ ಪಾತ್ರದಲ್ಲಿ ಇದೊಂದು ದೊಡ್ಡ ಕುಂದು. ಅಲ್ಲದೆ ಡಾಕ್ಟರ್ ವುಲ್ನರ್ ಅವರೂ ಡಾಕ್ಟರ್ ಲಕ್ಷ್ಮಣ ಸರೂಪ್ ಅವರೂ ಹೇಳಿರುವಂತೆ ಶ್ರೀ ಕೃಷ್ಣನ ಆಯುಧಗಳು ಬಂದು ಹೋಗಿ ಆಲಸ್ಯವಾಗುವುದರಲ್ಲಿ ಆಗಿನ ಸನ್ನಿವೇಶಕ್ಕೆ ಹೊಂದಿಕೆ ಯೂ ಕಂಡುಬರುವುದಿಲ್ಲ. ಆದಕಾರಣ, 'ಈ ಭಾಗವು ಭಾಸಮಹಾ ಕವಿಯು ಬರೆದುದಲ್ಲವೆಂದೂ ಅದು ಪ್ರಕ್ಷಿಪ್ತವೆಂದೂ ತೋರುತ್ತದೆ.

---

# ದೂತಘಟೋತ್ಕಚ

## ಅವತರಣಿಕೆ

ಈ ರೂಪಕದ ಕಥಾವಸ್ತುವು ಸಂಪೂರ್ಣವಾಗಿ ಕವಿಕಲ್ಪಿತವಾದುದೇ ಹೊರತು ಮೂಲಗ್ರಂಥವಾದ ಮಹಾಭಾರತದಲ್ಲಿ ಅದಕ್ಕೆ ಆಧಾರವೇನೂ ಇಲ್ಲ. ವೀರಯುವಕನಾದ ಘಟೋತ್ಕಚನನ್ನು ಮತ್ತೆ ರಂಗಕ್ಕೆ ತಂದು, ಅವನು ರಾಕ್ಷಸಕುಲದವನಾದರೂ ವಿನಯ ಶೀಲನಾದ ಶೂರನೆಂಬುದನ್ನು ಹೃದಯಂಗಮವಾಗಿ ಚಿತ್ರಿಸುವ ಉದ್ದೇಶದಿಂದ ಈ ರೂಪಕವು ರಚಿತನಾಗಿದೆ. ಗಾಂಧಾರೀ ಧೃತರಾಷ್ಟ್ರರ ಅನುಕಂಪಬುದ್ಧಿಯನ್ನೂ, ನ್ಯಾಯಪಕ್ಷಪಾತವನ್ನೂ ತೋರಿಸುವುದೂ ಕವಿಯ ಆಶಯವಾಗಿದೆ. ಭಾಸಮಹಾಕವಿಯ ಹೃದಯವೈಶಾಲ್ಯಕ್ಕೆ ಈ ರೂಪಕವೂ ಒಂದು ಉತ್ತಮ ನಿದರ್ಶನವನ್ನೊದಗಿಸುತ್ತದೆ.

## ೧. ಕಥಾಸಾರಾಂಶ

ಅಭಿಮನ್ಯುವಧೆಯು ನಡೆದ ಬಳಿಕ ದುರ್ಯೋಧನಾದಿಗಳು ಹೃಷ್ಟಮನಸ್ಕರಾಗಿ ಅಟ್ಟಹಾಸದಿಂದಿರುವರು. ಗಾಂಧಾರಿಯೂ, ಧೃತರಾಷ್ಟ್ರನೂ ಅಭಿಮನ್ಯುವಿನ ಮರಣಕ್ಕಾಗಿ ಅನುತಾಪಪಡುತ್ತಿರುವಾಗ್ಗೆ, ಅವರು ಪ್ರವೇಶಿಸುವರು. ಕುರುಕುಲಕ್ಕೆ ಇನ್ನು ಉಳಿಗಾಲವಿಲ್ಲವೆಂದು ನಿಶ್ಚಯಿಸಿ ಧೃತರಾಷ್ಟ್ರನು ತನ್ನ ಮಕ್ಕಳಿಗೆ ಬುದ್ಧಿ ಹೇಳುವನು. ಘಟೋತ್ಕಚನು ಸಂದೇಶದೊಡನೆ ಪಾಂಡವರ ಶಿಬಿರದಿಂದ ಬಂದು, ಕೌರವರಿಗೆ ತಕ್ಕ ಶಾಸ್ತಿಮಾಡುವುದಾಗಿ ಅರ್ಜುನನು ಪ್ರತಿಜ್ಞೆ ಮಾಡಿರುವನೆಂದು ತಿಳಿಸುವನು. ದುರ್ಯೋಧನ ಘಟೋತ್ಕಚರಿಗೆ ಸ್ವಾರಸ್ಯವಾಗಿ ಸಂವಾದವು ನಡೆಯುವುದು. ಇಬ್ಬರೂ ವೀರರು. ಇನ್ನು ಅವರ ಸಂವಾದದ

ಸೊಬಗನ್ನು ಹೇಳಬೇಕಾದುದೇ ಇಲ್ಲ. ದುರ್ಯೋಧನನೂ ತಕ್ಕ ಉತ್ತರವನ್ನು ಹೇಳುವನು.

## ೨. ವಿಮರ್ಶೆ

ಕಥಾವಸ್ತುವೇನೋ ಅತ್ಯಲ್ಪವಾಗಿದ್ದರೂ ರೂಪಕವು ಮಾತ್ರ ಅತ್ಯಂತ ಸ್ವಾರಸ್ಯವಾಗಿದೆ. ಸಂಭಾಷಣೆಯು ಸೊಗಸಾಗಿ ನಡೆಯುವಂತೆ ಮಾಡುವ ವಿಷಯದಲ್ಲಿ ಭಾಸನೆಷ್ಟು ಚತುರನೆಂಬುದನ್ನು ಚೆನ್ನಾಗಿ ಮನದಟ್ಟುಮಾಡಿಕೊಳ್ಳಬೇಕಾದರೆ ಈ ರೂಪಕವನ್ನೇ ಓದಿ ನೋಡಬೇಕು. ರೂಪಕವು ನಿಂತಿರುವುದೇ ಸಂಭಾಷಣೆಯ ಸ್ವಾರಸ್ಯದ ಆಧಾರದ ಮೇಲೆ.

ಸೂತ್ರಧಾರನು ಶ್ರೀಮನ್ನಾರಾಯಣನನ್ನು ಸ್ತುತಿಸಿ, ನೇಪಥ್ಯದಿಂದ ಬರುತ್ತಿರುವ ಕೂಗನ್ನು ಲಾಲಿಸಿ, ಅರ್ಜುನನು ಅತ್ತ ಸಂಶಪ್ತಕ ಸೈನ್ಯದೊಡನೆ ಯುದ್ಧ ಮಾಡುತ್ತಿರುವಲ್ಲಿ, ಇತ್ತ ಅಭಿಮನ್ಯುವಧೆಯು ನಡೆದು ಶತ್ರುರಾಜರೆಲ್ಲರೂ ಶಿಬಿರಗಳಿಗೆ ತೆರಳುತ್ತಿರುವುದನ್ನು ಸೂಚಿಸುವನು. ಸ್ಥಾಪನೆಯು ಅಲ್ಲಿಗೆ ಮುಗಿದ ಬಳಿಕ ಭಟನು ಬಂದು ಅಭಿಮನ್ಯುವಧೆಯನ್ನು ಮಹಾರಾಜ ಧೃತರಾಷ್ಟ್ರನಿಗೆ ಅರಿಕೆ ಮಾಡಬೇಕೆಂದು ಕೋರುವನು. ಆ ಬಳಿಕ ಧೃತರಾಷ್ಟ್ರ, ಗಾಂಧಾರಿ, ದುಶ್ಶಳೆ, ಪ್ರತೀಹಾರಿ ಈ ನಾಲ್ವರೂ ಪ್ರವೇಶಿಸುವರು. ಧೃತರಾಷ್ಟ್ರನು ಅಭಿಮನ್ಯುವಿನ ವಧೆಯಿಂದ ತಮಗೆ ಶಿಶುವಧಪಾತಕವು ಬಂದಿತೆಂದೂ, ಅದರಿಂದ ವಂಶಕ್ಷಯಕ್ಕೆ ಕಾರಣವಾಗುವುದೆಂದೂ, ಕುಮಾರನ ವಧೆಯಿಂದ ಕೆರಳಿದ ಅರ್ಜುನನು ಶತ್ರುಗಳನ್ನು ನಿರ್ಮೂಲವಮಾಡುವನೆಂದೂ ಹೇಳುವನು. ಅಭಿಮನ್ಯುವನ್ನು ಶಿಶುವೆಂದು ಕರೆಯುವುದರಿಂದಲೇ ಅವನ ಹೃದಯವೆಷ್ಟು ಕೋಮಲವೆಂಬುದೂ, ಅಭಿಮನ್ಯುವಿನಲ್ಲಿ ಅವನಿಗೆಷ್ಟು ವಾತ್ಸಲ್ಯವೆಂಬುದೂ ಗೊತ್ತಾಗುವುವು. ಗಾಂಧಾರಿಯು ಅಭಿಮನ್ಯುವಿದ್ದುದೇ ತಮ್ಮ ಕುಲದ ಭಾಗ್ಯವಾಗಿದ್ದಿತೆಂದು ಹೇಳಿಕೊಂಡು ಹಲುಬುವಳು; "ಪೌತ್ರಕ! ಎಲ್ಲಿ ಹೋದೆ?" ಎಂದು ಪ್ರಲಾಪಿಸುವಳು. ತನ್ನ

ಮಗಳಾದ ದುಶ್ಶಳೆಯ ಗಂಡ ಜಯದ್ರಥನೇ ಅಭಿಮನ್ಯುವನ್ನು ಕೊಂದ ವನೆಂಬುದು ಅವಳಿಗೆ ತಿಳಿದಿಲ್ಲ. ಆ ಅಂಶವು ಧೃತರಾಷ್ಟ್ರ ದುಶ್ಶಳೆ ಯರಿಗೂ ಇನ್ನೂ ತಿಳಿದಿಲ್ಲ. ಆದಕಾರಣ, ದುಶ್ಶಳೆಯು, "ಯಾವನು ವಧುವಾದ ಉತ್ತರೆಗೆ ವೈಧವ್ಯವನ್ನುಂಟುಮಾಡಿದನೋ ಅವನು ತನ್ನ ಹೆಂಡತಿಗೆ ವೈಧವ್ಯವನ್ನು ತಂದುಕೊಟ್ಟಂತೆಯೇ" ಎಂದುದನ್ನು ಕೇಳಿ ನಮ್ಮ ಮನಸ್ಸು ಕನಿಕರಪಡುವುದು. ಕಲಾದೃಷ್ಟಿಯಿಂದ ಕವಿಯು ಅವಳು ಹೀಗೆ ಹೇಳಿದಂತೆ ಬರೆದಿರುವುದು ರಮಣೀಯವಾಗಿದೆ. ಬಹುಶಃ ಅವಳು ಧೃತರಾಷ್ಟ್ರನಿಗೆ ಸ್ವಲ್ಪ ದೂರದಲ್ಲಿ ನಿಂತಿದ್ದಳೆಂದು ತೋರು ತ್ತದೆ; ಅಲ್ಲದೆ ಅಭಿಮನ್ಯುವನ್ನು ಕೊಂದವರಾರೆಂಬುದನ್ನು ತಿಳಿದುಕೊ ಳ್ಳಲು ಅವನಿಗೆ ಆತುರವೂ ಉಂಟು. ಅಂತು ಅವಳ ಮಾತುಗಳು ಧೃತರಾಷ್ಟ್ರನ ಕಿವಿಗೆ ಬೀಳುವುದಿಲ್ಲ. ಹಲವರು ಅಭಿಮನ್ಯುವಿನೊಡನೆ ಯುದ್ಧ ಮಾಡಿದರೆಂದೂ, ಕುಮಾರನ ವಧೆಯು ಮಾತ್ರ ಜಯದ್ರಥ ನಿಂದ ನಡೆಯಿತೆಂದೂ ಭಟನಿಂದ ಕೇಳಿ ಧೃತರಾಷ್ಟ್ರನು ಅವಳು ಅಲ್ಲಿ ರುವುದನ್ನು ಅರಿಯದೆ, "ಅಯ್ಯೋ, ಜಯದ್ರಥನು ಹತನಾದ" ಎಂದು ಹೇಳುವನು. ದುಶ್ಶಳೆಯು ಅಳುವಳು. ಆಗ ಧೃತರಾಷ್ಟ್ರನು, "ಇವ ಳಾರು ರೋದಿಸುವವಳು?" ಎಂದು ಕೇಳುವುದನ್ನು ನೋಡಿದರೆ ಅವಳು ಅಲ್ಲಿರುವುದನ್ನೇ ಅವನು ಅರಿಯನೆಂದು ಹೇಳಬಹುದಾಗಿದೆ. ಪ್ರತೀಹಾರಿಯು, "ಮಹಾರಾಜ! ರಾಜಕುಮಾರಿ ದುಶ್ಶಳೆ" ಎಂದು ಹೇಳುವನು. ಧೃತರಾಷ್ಟ್ರನು ಸಂಕಟಪಡುತ್ತ, "ವತ್ಸೆ, ಅಳಬೇಡ. ನೀನು ಹೆಚ್ಚು ಕಾಲ ಸುಮಂಗಲಿಯಾಗಿರುವುದು ನಿನ್ನ ಗಂಡನಿಗೆ ಇಷ್ಟ ವಿಲ್ಲ. ಆದುದರಿಂದ ಅರ್ಜುನನ ಬಾಣಗಳಿಗೆ ತನಗೆ ತಾನೇ ಗುರಿಯಾಗಿ ನಿಂತಿದ್ದಾನೆ" ಎಂದು ಹೇಳುವನು. ದುಶ್ಶಳೆಯು ಉತ್ತರೆಯ ಬಳಿಗೆ ತಾನೂ ಹೋಗಿ ಅವಳಂತೆಯೇ ಸಹಗಮನದ ಉಡುಪನ್ನು ಧರಿಸುವುದಾಗಿ ಹೇಳುವಳು. ಆ ಮಾತುಗಳೆಷ್ಟು ದುಃಖಕರವಾಗಿವೆ! ಅಭಿಮನ್ಯುವು ಮೃತನಾದಾಗ ಅರ್ಜುನನು ದೂರದಲ್ಲಿ ಮತ್ತೊಂದು ಕಡೆ ಯುದ್ಧಮಾಡುತ್ತಿದ್ದನೆಂಬುದೂ ಭಟನಿಂದ ತಿಳಿಯಬರುವುದು. ಅರ್ಜುನನು ಬಂದು ಮಗನ ಮುಖವನ್ನು ನೋಡಿಲ್ಲವಾದ ಕಾರಣ

ಅಗ್ನಿಸಂಸ್ಕಾರಮಾಡದೆ ಉಳಿದ ಪಾಂಡವರು ಗಂಗಾತೀರದಲ್ಲಿ ಅರ್ಜುನನ ಆಗಮನವನ್ನು ಎದುರು ನೋಡುತ್ತಿರುವರೆಂದೂ, ಕುಮಾರನನ್ನು ಪ್ರಹರಿಸಿದವರ ಹೆಸರುಗಳನ್ನು ಹೇಳಿ ಅವರನ್ನು ಹಳಿಯುತ್ತಿರುವರೆಂದೂ, ಭಟನು ಧೃತರಾಷ್ಟ್ರನಿಗೆ ತಿಳಿಸುವನು. ಧೃತರಾಷ್ಟ್ರನೂ ಅಲ್ಲಿಗೆ ಹೋಗಲಿಚ್ಛಿಸುವನು.

ಆ ಸಮಯಕ್ಕೆ ದುರ್ಯೋಧನ, ದುಶ್ಶಾಸನ, ಶಕುನಿ ಇವರು ಮೂವರೂ ಅಲ್ಲಿಗೆ ಬರುವರು. ಮಾತಾಪಿತೃಗಳಿಗೆ ನಮಸ್ಕರಿಸಿ ಹೋಗೋಣವೆಂದು ದುರ್ಯೋಧನನು ಸೂಚಿಸುವನು. ಧೃತರಾಷ್ಟ್ರನು ಪಾಂಡವಪಕ್ಷಪಾತಿಯಾದುದರಿಂದ ಅವನು ಯುದ್ಧೋದ್ಯೋಗಿಗಳಾದ ತಮ್ಮನ್ನು ಹಳಿಯುವನೆಂದೂ, ಆದಕಾರಣ ತಾವು ಕಂಡೂಕಾಣದಹಾಗೆ ಸುಮ್ಮನೆ ಹೊರಟುಹೋಗಬೇಕೆಂದೂ, ಶಕುನಿಯು ಹೇಳುವನು. ದುರ್ಯೋಧನನು ಅದಕ್ಕೆ ಸಮ್ಮತಿಸುವುದಿಲ್ಲ. ಅವರು ಮೂವರೂ ಒಬ್ಬೊಬ್ಬರಾಗಿ ತಮ್ಮ ಹೆಸರನ್ನು ಹೇಳಿಕೊಂಡು ಧೃತರಾಷ್ಟ್ರನಿಗೆ ನಮಸ್ಕರಿಸುವರು. ವೃದ್ಧರಾಜನು ಒಬ್ಬರಿಗೂ ಆಶೀರ್ವಾದಮಾಡದೆ ಸುಮ್ಮನಿರುವನು. ಅವರು ಅದಕ್ಕೆ ಕಾರಣವೇನೆಂದು ಕೇಳುವರು. ಭಾಸನು ಕುಶಲಬುದ್ಧಿಯುಳ್ಳವನೆಂಬುದನ್ನು ಮೌನದ ಈ ಸದುಪಯೋಗವು ಬಹು ಚೆನ್ನಾಗಿ ತೋರಿಸುವುದು. ಮೌನದ ಸದುಪಯೋಗದ ಇತರ ನಿದರ್ಶನಗಳನ್ನು ಹಿಂದೆ ತಿಳಿಸಲಾಗಿದೆ. * ಆಶೀರ್ವಾದ ಮಾಡದೆ ಮೌನದಿಂದಿದ್ದುದಕ್ಕೇನು ಕಾರಣವೆಂದು ಅವರೆಲ್ಲರೂ ತನ್ನನ್ನು ಕೇಳಿದಾಗ ಧೃತರಾಷ್ಟ್ರನು, "ಕೃಷ್ಣಪಾರ್ಥರ ಹೃದಯದಂತಿದ್ದ ಬಾಲಕನಾದ ಅಭಿಮನ್ಯುವನ್ನು ಕೊಂದು ಜೀವನವೂ ನಿಮಗೆ ಬೇಡವೆಂಬುದನ್ನು ತೋರ್ಪಡಿಸಿಕೊಂಡಿರುವ ನಿಮಗೆ ಆಶೀರ್ವಾದ ಮಾಡುವ ಬಗೆ ಹೇಗೆ?" ಎಂದು ಉತ್ತರ ಹೇಳುವನು. ದುರ್ಯೋಧನನು, "ತಂದೆಯೆ, ಇದೇನಿದು ಈ ಸಂಭ್ರಮ ?' ಎಂದು ಕೇಳುವನು. ಆಗಿನ ಸಂಭಾಷಣೆಯ ಸೊಬಗನ್ನು ನೋಡಿ:—

---

* ೧೧೩, ೧೧೪ ಮತ್ತು ೧೧೫ ನೆಯ ಪುಟಗಳನ್ನು ನೋಡಿ.

ಧೃತರಾಷ್ಟ್ರ—" ಇದೇನಿದು ಈ ಸಂಭ್ರಮವೆಂದೆಯಾ ? ಗಂಡು ಸಂತತಿಯೇ ಹೆಚ್ಚಾಗಿರುವ ಈ ಕುಲದಲ್ಲಿ ನೂರುಮಂದಿ ಪುತ್ರರಾದ ಬಳಿಕ, ಒಬ್ಬಳು ಮಗಳು ಹುಟ್ಟಿದಳು. ಸಹೋದರರಾದ ನಿಮ್ಮ ಪ್ರಸಾದದಿಂದ ಅವಳು ಅನಿಷ್ಟಕರವಾದ ವೈಧವ್ಯವನ್ನು ಹೊಂದುತ್ತಾಳೆ. ಇದೇ ಈಗಿನ ಸಂಭ್ರಮ " *

ದುರ್ಯೋಧನ—" ಈಗ ಜಯದ್ರಥನಿಗೇನಾಗಿದೆ ?"

ಧೃತರಾಷ್ಟ್ರ—" ಅತಿ ಬುದ್ಧಿವಂತನಾದ ಅವನಿಂದಲೇ ಅಲ್ಲವೇ ಪಾಂಡವರಿಗೆ ರೋಷ ಬಂದಿರುವುದು ! "

ದುರ್ಯೋಧನ—" ಆಃ ಅವನಿಂದಲೇ ರೋಷಬಂದಿತೇನು ? ಇನ್ನೂ ಇತರರು ಅನೇಕರಿಂದ "

ಧೃತರಾಷ್ಟ್ರ—" ಅಯ್ಯೋ ! ಕಷ್ಟ. † ನಿರ್ಘೃಣರಾದ ಬಹುಮಂದಿಗಳು ಸೇರಿ ಬಾಲಕನಾದ- ಪುತ್ರನಾದ- ಒಬ್ಬನನ್ನು ಪ್ರಹರಿಸುವಾಗ ನಿಮ್ಮ ಭುಜಗಳೇಕೆ ಬಿದ್ದುಹೋಗಲಿಲ್ಲ ? "

ಬಳಿಕ ದುರ್ಯೋಧನನು, "ಭೀಷ್ಮರನ್ನು ಹೊಡೆದವರ ಭುಜಗಳೇಕೆ ಬಿದ್ದು ಹೋಗಲಿಲ್ಲ ? ಹುಡುಗನಾದರೂ, ಪರಾಕ್ರಮದಲ್ಲಿ ಹುಡುಗನಲ್ಲದವನನ್ನು ಕೊಂದ ನಮ್ಮ ಭುಜಗಳು ಬಿದ್ದುಹೋಗಬೇಕು, ಅಲ್ಲವೆ ? " ಎಂದು ಕೇಳುವನು. ಅದಕ್ಕೆ ಧೃತರಾಷ್ಟ್ರನು, " ಭೀಷ್ಮನ ಪರಾಜಯವೂ,

---

* " ಕಿಂಕೃತೋಽಯಂ ಸಂಭ್ರಮ ಇತಿ ।
ಏಕಾ ಕುಲೇಽಸ್ಮಿನ್ ಬಹುಪುತ್ರನಾಥೇ
ಲಬ್ಧಾ ಸುತಾ ಪುತ್ರ ಶತಾದ್ ವಿಶಿಷ್ಟಾ ।
ಸಾ ಬಾಂಧವಾನಾಂ ಭವತಾಂ ಪ್ರಸಾದಾದ್
ವೈಧವ್ಯಮಶ್ಲಾಘ್ಯಮವಾಪ್ಸ್ಯತೀತಿ ॥ "

† " ಭೋಃ ಕಷ್ಟಂ ।
ಬಹೂನಾಂ ಸಮುಪೇತಾನಾಮೇಕಸ್ಮಿನ್ನಿರ್ಘೃಣಾತ್ಮನಾಂ ।
ಬಾಲೇ ಪುತ್ರೇ ಪ್ರಹರತಾಂ ಕಥಂ ನ ಪತಿತಾ ಭುಜಾಃ । "

ಅಭಿಮನ್ಯುವಧೆಯೂ ಸಮವೆ ? ” ಎಂದು ಕೇಳುವನು. ಭೀಷ್ಮನು ಸ್ವೇಚ್ಛಾಮರಣವುಳ್ಳವನಾಗಿ ಉಪದೇಶದಿಂದ ತುಷ್ಟಮನಸ್ಕನಾಗಿರುವವನೆಂದೂ, ಅರ್ಜುನನ, “ಪ್ರಥಮ ಪ್ರವಾಳ” ವಾಗಿ, “ಕುರುವಂಶನಾಥ” ನಾಗಿದ್ದ ಬಾಲಕನು ಕೊಲ್ಲಲ್ಪಟ್ಟನೆಂದೂ, ಮುಂದೆ ಧೃತರಾಷ್ಟ್ರನೇ ತಿಳಿಸುವನು. ಬಳಿಕ, ದುಶ್ಶಾಸನನು ಅಭಿಮನ್ಯುವಿನ ಪರಾಕ್ರಮವನ್ನು ವರ್ಣಿಸುವನು. ಅಷ್ಟು ಪರಾಕ್ರಮವುಳ್ಳವನು ಅವನೆಂತಹ ಹುಡುಗನೆಂಬುದು ದುಶ್ಶಾಸನನ ಸೂಚನೆ. ಧೃತರಾಷ್ಟ್ರನು, ಹುಡುಗನ ಪರಾಕ್ರಮವೇ ಅಷ್ಟಾದ ಮೇಲೆ ಪುತ್ರವ್ಯಸನ ಸಂತಪ್ತನಾದ ಪಾರ್ಥನ ಪರಾಕ್ರಮವು ಮುಂದೆ ತಮ್ಮೆಲ್ಲರನ್ನೂ ಇನ್ನೆಷ್ಟು ಘಾಸಿಪಡಿಸೀತೆಂದು ಕೇಳುವನು ಈ ಸಂದರ್ಭದಲ್ಲಿ ದುರ್ಯೋಧನನು ಪ್ರಶ್ನೆಮಾಡುವ ಬಗೆಯೂ, ಧೃತರಾಷ್ಟ್ರನು ಉತ್ತರ ಹೇಳುವ ವಿಧಾನವೂ ಬಹು ಚೆನ್ನಾಗಿವೆ. ಸಾಮಾನ್ಯ ರೂಪಕ ಲೇಖಕರು ಹೀಗೆ ಮಾತುಗಳನ್ನು ಹೊರಡಿಸಲಾರರು :—

**ದುರ್ಯೋಧನ**—“ತಂದೆಯೆ, ಅರ್ಜುನನೆಂಬ ಹೆಸರಿನವನು ಆತನಾರು ?

**ಧೃತರಾಷ್ಟ್ರ**—“ಪುತ್ರ ! ಅರ್ಜುನನನ್ನೂ ತಿಳಿಯೆಯಾ ? ”

**ದುರ್ಯೋಧನ**—“ತಿಳಿಯೆ ”

**ಧೃತರಾಷ್ಟ್ರ**—“ಹಾಗೆಯೆ ? ಹಾಗಾದರೆ ನಾನೂ ತಿಳಿಯೆ. ಆದರೆ, ಅರ್ಜುನನ ಬಲವೀರ್ಯಜ್ಞರು ಬಹುಮಂದಿಗಳಿದ್ದಾರೆ. ಅವರನ್ನು ಕೇಳು. ”

**ದುರ್ಯೋಧನ**—“ಅರ್ಜುನನ ಬಲವೀರ್ಯಜ್ಞರಾದ ಯಾರನ್ನು ನಾನು ಕೇಳಬೇಕು ? ”

ಧೃತರಾಷ್ಟ್ರನು, “ಇಂದ್ರನನ್ನೂ, ಕಿರಾತರೂಪಿಯಾಗಿದ್ದ ಹರನನ್ನೂ, ಖಾಂಡವವನ ದಹನಮಾಡಿದ ಅಗ್ನಿಯನ್ನೂ, ನಿನ್ನನ್ನು ಹೊತ್ತುಕೊಂಡು ಹೋಗಿದ್ದ ವಿದ್ಯಾಧರನಾದ ಚಿತ್ರಾಂಗದನನ್ನೂ, ಕೇಳು ”

ಎಂದು ಉತ್ತರ ಹೇಳುವನು. ದುರ್ಯೋಧನನು, ಅರ್ಜುನನನ್ನು ಸೋಲಿಸಲು ತಕ್ಕವೀರನಾದ ಕರ್ಣನು ತನ್ನ ಕಡೆಗಿರುವನೆನ್ನುವನು. ಪರಶುರಾಮನ ಶಾಪಕ್ಕೂ ಗುರಿಯಾಗಿ, ಇಂದ್ರನಿಗೆ ಕವಚಕುಂಡಲಗಳನ್ನೂ ಕೊಟ್ಟ ಕರ್ಣನಿಂದ ಆ ಕೆಲಸವಾಗದೆಂದು ಧೃತರಾಷ್ಟ್ರನು ತಿಳಿಸುವನು; ಮಧ್ಯದಲ್ಲಿ ಬಾಯಿಹಾಕಿದ ಶಕುನಿಯನ್ನು ಕುರಿತು ಧೃತರಾಷ್ಟ್ರನು, "ದ್ಯೂತಶಾಲಿಯಾದ ನೀನು ಮಾಡಿದ ಕೆಲಸದಿಂದ ಹುಟ್ಟಿದ ವೈರಾಗ್ನಿಯು ನಮ್ಮ ಕುಲದ ಬಾಲಕನನ್ನೂ ಬಿಡದೆ ಸುಟ್ಟು ಹಾಕಿತು" ಎನ್ನುವನು. ಆ ವೇಳೆಗೆ ಸಿಡಿಲಿನ ನಾದದಿಂದ ಕೂಡಿ ಭೂಕಂಪವಾಗುವುದು. ಉಲ್ಕೆಗಳು ಬಿದ್ದು ಆಕಾಶವೆಲ್ಲ ಪ್ರಜ್ವಲಿತವಾಗುವುವು. ಮೊಮ್ಮಗನ ಮರಣಕ್ಕಾಗಿ ಮಹೇಂದ್ರನು ಉಲ್ಕಾರೂಪಗಳ ಕಣ್ಣೀರನ್ನು ಸುರಿಸುತ್ತಿರುವನೆಂದು ಧೃತರಾಷ್ಟ್ರನು ಹೇಳುವುದು ಬಹು ಚೆನ್ನಾಗಿದೆ. ಅರ್ಜುನನು ತನ್ನ ಮಗನನ್ನು ಯಾರು ಕೊಂದರೋ, ಯಾರು ಅದರಿಂದ ಸಂತೋಷಪಟ್ಟರೋ ಅವರೆಲ್ಲರನ್ನೂ ಮರುದಿನ ಸೂರ್ಯಾಸ್ತಮಯ ಕಾಲದೊಳಗಾಗಿ ತಾನು ಸಂಹರಿಸುವುದಾಗಿ ಪ್ರತಿಜ್ಞೆಮಾಡಿರುವುದನ್ನು ಭಟನು ಬಂದು ತಿಳಿಸುವನು. ದ್ರೋಣನು ಹೇಳಿರುವಂತೆ ಅಭೇದ್ಯವಾದ ವ್ಯೂಹಮಧ್ಯದಲ್ಲಿ ಜಯದ್ರಥನಿರುವಂತೆಮಾಡಿ ಅರ್ಜುನನ ಪ್ರತಿಜ್ಞೆಗೆ ವ್ಯಾಘಾತವನ್ನುಂಟುಮಾಡುವುದಾಗಿ ದುರ್ಯೋಧನನು ನಿರ್ಧರಿಸುವನು. ಜಯದ್ರಥನನ್ನು ಭೂಮಿಯೊಳಗೆ ಬಚ್ಚಿಟ್ಟರೂ ಸರಿ, ಗಗನ ಸ್ಥಳದಲ್ಲಿಟ್ಟರೂ ಸರಿ, ಅರ್ಜುನನ ಶರಗಳು, ಸರ್ವತ್ರಗಮನವುಳ್ಳವುಗಳಾಗಿ ಜಯದ್ರಥನ ಕಥೆಯನ್ನು ಮುಗಿಸುವುವೆಂದು ಧೃತರಾಷ್ಟ್ರನು ಹೇಳುವನು. ಕ್ರೂರನಾದ ದುರ್ಯೋಧನನ ಮುಂದೆ ಇದೇ ಮಾತುಗಳನ್ನು ಮತ್ತಾರಾದರೂ ಹೇಳಿದ್ದರೆ, ಅವರು ಒಂದು ಕ್ಷಣಮಾತ್ರವೂ ಜೀವಿಸಿರುತ್ತಿರಲಿಲ್ಲವೆಂದು ಭಟನು ಹೇಳಿಕೊಳ್ಳುವನು. ದುರ್ಯೋಧನನ ದುರ್ಗುಣಗಳು ಅನೇಕವಾಗಿದ್ದರೂ ಪಿತೃಭಕ್ತಿಯ ಸುಗುಣವೊಂದು ಮಾತ್ರ ಅವನಲ್ಲಿದೆಯೆಂಬುದಕ್ಕೆ ಇದೂ ಒಂದು ನಿದರ್ಶನ. ಅಷ್ಟು ಹೊತ್ತಿಗೆ, ಅರ್ಜುನನ ಪ್ರತಿಜ್ಞೆಯನ್ನು ದುರ್ಯೋಧನನಿಗೆ ತಿಳಿಸಲು ವಾಸುದೇವನ ಅಪ್ಪಣೆಯಿಂದ ದೂತನಾಗಿ ಘಟೋತ್ಕಚನು ಅಲ್ಲಿಗೆ ಬರುವನು; ತಾನು ಬಂದಿರುವು

ದನ್ನು ತಾನೇ ದುರ್ಯೋಧನನಿಗೆ ತಿಳಿಸುವನು. ಅವನು, "ನಾನು ಗುರುಸ್ವರೂಪನಾದ ದುರ್ಯೋಧನನ್ನು ಕಾಣಬೇಕಾಗಿದೆ" ಎಂದುದನ್ನು ಕೇಳಿಯೂ, ದುರ್ಯೋಧನನು ಅವನಲ್ಲಿ ಆದರವನ್ನು ತೋರಿಸದೆ, "ಬಾ, ಬಾ, ನಿನ್ನ ಶತ್ರುಭವನವನ್ನು ಪ್ರವೇಶಿಸು. ನನಗೆ ಕುತೂಹಲ; ಜನಾರ್ದನನ ವಚನವನ್ನು ಶೀಘ್ರವಾಗಿ ಶ್ರುತಪಡಿಸು" ಎನ್ನುವನು. ಕವಿಯು ಆಗ ತೋರಿಸುವ ಚಮತ್ಕಾರವನ್ನು ಎಷ್ಟು ಹೊಗಳಿದರೂ ಸಾಲದು. ಘಟೋತ್ಕಚನು ಅವನೊಡನೆ ಮಾತನಾಡುವುದೇ ಇಲ್ಲ. ಮಾತುಗಳಿಗೆ ನಿಲುಕದಷ್ಟು ತಿರಸ್ಕಾರವು ಆ ಮೌನದಿಂದ ಸೂಚಿತವಾಗುವುದು. ಅವನು ಧೃತರಾಷ್ಟ್ರನ ಕಡೆಗೆ ತಿರುಗಿ ಅವನ ಲಲಿತ ಗಂಭೀರಾಕೃತಿಯನ್ನು ಕೊಂಡಾಡುವನು. ಘಟೋತ್ಕಚನು, "ತಾತ! ವಂದಿಸುವೆನು, ನಾನು ಘಟೋತ್ಕ" ಎಂದು ಅರ್ಧೋಕ್ತಿಯಲ್ಲಿ ನಿಲ್ಲಿಸಿ, ಅಲ್ಲ, ಅಲ್ಲ; "ನನಗೆ ಗುರುಸ್ವರೂಪರಾದ ಯುಧಿಷ್ಠಿರಾದಿಗಳು ತಮ್ಮನ್ನು ಅಭಿವಂದಿಸುತ್ತಾರೆ. ಬಳಿಕ ನಾನು, ಘಟೋತ್ಕಚನು ತಮ್ಮನ್ನು ಅಭಿವಂದಿಸುವೆನು" ("ನ, ನ, ಯುಧಿಷ್ಠಿರಾದಯಶ್ಚ ಮೇ ಗುರುವೋ ಭವಂತಮಭಿವಾದಯಂತಿ । ಪಶ್ಚಾತ್ ಘಟೋತ್ಕಚೋಽಹಮಭಿವಾದಯೇ!" ಎಂದು ಹೇಳುವನು. ಅವನ ವಿನಯ ಶೀಲತೆಯನ್ನು ನೋಡಿ, ಮಧ್ಯಮ ವ್ಯಾಯೋಗದಲ್ಲಿ ಭೀಮನು ಹಿಡಿಂಬೆಯ ವಿಷಯದಲ್ಲಿ, "ಜಾತಿಯಲ್ಲಿ ರಾಕ್ಷಸಿ. ಆದರೆ ಆಚಾರದಲ್ಲಲ್ಲ" ("ಜಾತ್ಯಾ ರಾಕ್ಷಸೀ ನ ಸಮುದಾಚಾರೇಣ.") ಎಂದು ಹೇಳಿದುದು ಜ್ಞಾಪಕಕ್ಕೆ ಬರುವುದು. ಘಟೋತ್ಕಚನು ರಾಕ್ಷಸಿಯ ಮಗನಾಗಿರಬಹುದು. ಆದರೂ, ಸತ್ಸಂಪ್ರದಾಯವನ್ನರಿತ ಸಾಧ್ವಿಯ ಮಗ; ವಿನಯ ಶೀಲ. ದುರ್ಯೋಧನನು ಜಾತಿಯಲ್ಲಿ ರಾಕ್ಷಸನಲ್ಲದಿದ್ದರೂ ಕರ್ಮದಲ್ಲಿ ರಾಕ್ಷಸನಂತೆ ಈ ರೂಪಕದಲ್ಲಿ ಚಿತ್ರಿತನಾಗಿದ್ದಾನೆ. ಕುಲವು ಗೌಣ; ಗುಣವೇ ಮುಖ್ಯ.

ಧೃತರಾಷ್ಟ್ರನು, "ಮಗು, ಬಾ, ಬಾ" ಎಂದು ಆದರದಿಂದ ಅವನನ್ನು ಬರಮಾಡಿಕೊಂಡು, ಅಭಿಮನ್ಯುವಿನ ಮರಣದ ಸುದ್ದಿಯ

ನ್ನೈತ್ರಿ, ತನ್ನ ಪುತ್ರನ ದೋಷವನ್ನು ಕುರಿತು ದುರ್ಯೋಧನನೂ ಅಲ್ಲಿ ದ್ದಾಗ್ಯೂ ಕೂಡ, "ಭ್ರಾತೃನಾಶದಿಂದ ದುಃಖಿತನಾಗಿರುವ ನಿನ್ನಂತೆಯೇ ನಾನೂ ದುಃಖಿತನಾಗಿದ್ದೇನೆ. ಇದೇನೂ ನನಗೆ ಪ್ರಿಯವಾಗಿಲ್ಲ. ನನ್ನ ಮಗನ ದೋಷದ ದೆಸೆಯಿಂದ ಸಂತಾಪ ಪಡುವಂತಾಗಿದೆ" ಎಂದು ಹೇಳು ವನು. ಭಾಸನು ಚಿತ್ರಿಸಿರುವ ಧೃತರಾಷ್ಟ್ರನು ನಿಷ್ಪಕ್ಷಪಾತಿಯಾದ ಪುರುಷ ಶ್ರೇಷ್ಠ. ಯಾವ ಮುಚ್ಚುಮರೆಯೂ ಇಲ್ಲದೆ ಅಪ್ರಿಯವಾಗಿದ್ದರೂ ಸತ್ಯ ವನ್ನಾಡುವ ಸರಳ ಹೃದಯನು. ಘಟೋತ್ಕಚನು ಕೂಡ, "ಈ ಪೂಜ್ಯ ನು ಮಂಗಳ ಸ್ವರೂಪನೇ ಸರಿ!" (ಅಹೋ ಕಲ್ಯಾಣಃ ಖಲ್ವತ್ರಭ ವಾನ್) ಎಂದುಕೊಳ್ಳುವನು. ಬಳಿಕ, ಘಟೋತ್ಕಚನು, "ಭಗವಾನ್ ಚಕ್ರಾಯುಧನು ಮಂಗಳಾಶಾಸನಮಾಡಿ ಪಿತಾಮಹನಿಗೆ ತಿಳಿಸುವಂತೆ ಹೇಳಿರುವುದು" ಎನ್ನುವಷ್ಟರಲ್ಲಿಯೇ ಧೃತರಾಷ್ಟ್ರನು ಭಕ್ತಿಯಿಂದ ಎದ್ದು ನಿಂತು, "ಭಗವಾನ್ ಚಕ್ರಾಯುಧನು ಏನೆಂದು ಆಜ್ಞಾಪಿಸಿರು ವನು?" ಎಂದು ಕೇಳುವನು. ಕುಳಿತುಕೊಂಡೇ ಅದನ್ನು ಕೇಳ ಬಹುದೆಂದು ಘಟೋತ್ಕಚನು ಸೂಚಿಸಿದಮೇಲೆ, ಧೃತರಾಷ್ಟ್ರನು ಕುಳಿ ತುಕೊಳ್ಳುವನು. ಅನಂತರ ಶ್ರೀ ಕೃಷ್ಣನು, "ಒಬ್ಬ ಮಗನನ್ನು ಕಳೆ ದುಕೊಂಡ ಅರ್ಜುನನ ಅವಸ್ಥೆಯೇ ಹೀಗಿರುವಲ್ಲಿ ಅನೇಕ ಪುತ್ರರು ಮೃತರಾಗಿರುವ ನಿನ್ನ (ಎಂದರೆ ಧೃತರಾಷ್ಟ್ರನ) ಅವಸ್ಥೆಯನ್ನು ಕೇಳ ತಕ್ಕುದೇ ಇಲ್ಲ. ಪುತ್ರಶೋಕದಿಂದ ಹುಟ್ಟಿದ ಅಗ್ನಿಯು ನಿನ್ನ ಪ್ರಾಣ ವೆಂಬ ಹವಿಸ್ಸನ್ನು ಸುಟ್ಟು ಹಾಕದಂತೆ ಕ್ಷಿಪ್ರವಾಗಿ ಆತ್ಮ ಸಂಯಮ ಮಾಡಿ ಶೋಕವನ್ನು ತಡೆದುಕೊ" ಎಂದು ತಿಳಿಸ ಹೇಳಿದನೆಂದು ಘಟೋತ್ಕಚನು ಬಿನ್ನವಿಸುವನು. ಯುದ್ಧವು ನಿಲ್ಲುವಹಾಗೆ ಮಾಡೆಂಬುದೂ ಇದರಿಂದ ವ್ಯಂಗ್ಯವಾಗಿ ಸೂಚಿತವಾಗುತ್ತದೆ. ಆದರೆ, ಬೇಡುವ ಅವಸ್ಥೆಯನ್ನು ಪಾಂಡವರು ಮೀರಿ ನಿಂತಿರುವುದರಿಂದ, ಅದು ಸ್ಪಷ್ಟ ವಾಗಿ ಸೂಚಿತವಾಗಿಲ್ಲ.

ಸಂದೇಶವನ್ನು ಕೇಳಿದ ಮೇಲೆ ಧೃತರಾಷ್ಟ್ರನು, ಸರ್ವಕ್ಷತ್ರಿಯ ವಧೆಗೆ ಗಾಂಡೀವಿಯು ಉದ್ಯುಕ್ತನಾಗಿರುವುದು ಕಣ್ಣಿಗೆ ಕಟ್ಟಿದಂತಾ

ಗಿದೆಯೆಂದು ವ್ಯಸನಪಡುವನು. ದುರ್ಯೋಧನನು ಹಾಸ್ಯಪ್ರಸಂಗವು ಒದಗಿತೆನ್ನುವನು. ಹಾಸ್ಯಕರವಾದುದೇನೆಂದು ಘಟೋತ್ಕಚನು ಕೇಳುವನು. "ಮಾತ್ಸರ್ಯ ಯುಕ್ತನಾದ ಆ ಕೃಷ್ಣನು ಪಾರ್ಥನೊಬ್ಬನಿಂದ ರಾಜಮಂಡಲವೇ ಸಂಪೂರ್ಣವಾಗಿ ನಾಶವಾಗುವುದೆಂದು ತಿಳಿದುಕೊಂಡಿರುವುದಾದರೆ, ದೇವತೆಗಳೇ ಅವನನ್ನು ತಮ್ಮ ಅಂತರಂಗಕ್ಕೆ ಸೇರಿಸಿಕೊಂಡು ಅವನ ಆಲೋಚನೆಯನ್ನು ಕೇಳಿರಬೇಕು; ಇದೀಗ ಹಾಸ್ಯರಸಭರಿತವಾದುದು!" * ಎಂದು ದುರ್ಯೋಧನನು ಉತ್ತರ ಹೇಳುವನು. ಈ ವಾಕ್ಯವು ಎಷ್ಟು ರಮಣೀಯವಾಗಿದೆ! ಘಟೋತ್ಕಚನು ಸಮಯೋಚಿತವಾಗಿ ನುಡಿದು, ಚಕ್ರಾಯುಧನಿಂದ ದುರ್ಯೋಧನನಿಗೂ ಸಂದೇಶವುಂಟೆಂಬುದಾಗಿ ತಿಳಿಸುವನು. ಅಖಿಲ ರಾಜವರ್ಗದವರೂ ಯಾವನ ಆಜ್ಞೆಯನ್ನು ಪರಿಪಾಲಿಸುವರೋ, ಆ ದುರ್ಯೋಧನನಿಗೆ ರಾಜನಲ್ಲದ ಸಾಮಾನ್ಯ ಮನುಷ್ಯಮಾತ್ರನು ಸಂದೇಶವನ್ನು ಕಳುಹಿಸುವುದೆಂದರೇನೆಂಬುದಾಗಿ ದುಶ್ಶಾಸನನು ಕುಪಿತನಾಗುವನು. ಘಟೋತ್ಕಚನೂ ಮಾತಿನಲ್ಲಿ ಹಿಂದೆ ಬೀಳದೆ, "ಜರಾಸಂಧ ನಗರದಲ್ಲಾವನು ರಾಜರನ್ನೆಲ್ಲ ಸೆರೆಯಿಂದ ಬಿಡಿಸಿದನೋ, ರಾಜರನ್ನೆಲ್ಲ ಸೋಲಿಸಿ ರುಕ್ಮಿಣಿಯನ್ನಾವನು ಕರೆದುಕೊಂಡು ಹೋದನೋ, ಆವನ ಆಜ್ಞೆಯನ್ನೆದುರು ನೋಡುತ್ತ ಲಕ್ಷ್ಮಿಯು ಪ್ರಸನ್ನೆಯಾಗಿರುವಳೋ, ಆ ರಾಜರಾಜನಾದ ಚಕ್ರಾಯುಧನು ನಿಮಗೆ ರಾಜನಲ್ಲವೇನು ಹಾಗಾದರೆ?" ಎಂದು ಉತ್ತರ ಹೇಳಿ ಹುರಿಯಾಗುವನು. ದುರ್ಯೋಧನನು ಅವರೀರ್ವರನ್ನೂ ಸಮಾಧಾನಗೊಳಿಸಿ, "ನಿಮ್ಮ ಪ್ರಭುವು ಹೇಳಿದುದೇನು?" ಎಂದು ಘಟೋತ್ಕಚನನ್ನು ಕೇಳುವನು. ಕ್ಷತ್ರಿಯರ ವಿನಾಶವು ಸನ್ನಿಹಿತವಾಗಿರುವುದೆಂದೂ, ನೂರುಮಂದಿ ಅರಸರು ಅಳಿದು ಭೂಭಾರವು ಇಳಿಯುವುದೆಂದೂ, ತನಯನ ಮರಣದ ದೆಸೆಯಿಂದ ಉಗ್ರರೂಪವನ್ನು ತಾಳಿ ಅಸ್ತ್ರವನ್ನು ಧರಿಸುವ ಅರ್ಜುನನಿಗೆ ಅಸಾಧ್ಯವಾದುದಾವುದೂ ಇಲ್ಲವೆಂದೂ, ಕೃಷ್ಣನು ಸಂದೇಶವನ್ನು ಕಳುಹಿಸಿರುವುದಾಗಿ ದುರ್ಯೋಧ

---

* "ದೇವೈರ್ಮನ್ತ್ರಯತೇ ಸಾರ್ಧಂ ಸ ಕೃಷ್ಣೋ ಜಾತಮತ್ಸರಃ ।
ಪಾರ್ಥೇನೈಕೇನ ಯೋ ವೇತ್ತಿ ನಿಹತಂ ರಾಜಮಣ್ಡಲಮ್ ॥"

ನನಿಗೆ ಅವನು ತಿಳಿಸುವನು. ಆಗ ಶಕುನಿಯು ಸುಮ್ಮನಿರದೆ, "ಒಂದು ವಾಕ್ಯಮಾತ್ರದಿಂದ ವಸುಂಧರೆಯನ್ನು ಜಯಿಸುವುದು ಸಾಧ್ಯವಾದರೆ, ವಾಕ್ಯವಾಕ್ಯಕ್ಕೂ ಸರ್ವಕ್ಷತ್ರವಧೆಯು ನಡೆದು ಹೋಗುವುದಾದರೆ, ಇದು ನೆರವೇರುವುದು" ಎನ್ನುವನು. ಇದನ್ನು ಕೇಳಿ, ಘಟೋತ್ಕಚನಿಗೆ ರೇಗಿ ಹೋಗುವುದು. ಅವನು, "ಎಲ ಎಲಾ, ಶಕುನಿಯು ವ್ಯವಹರಿಸು ವನು. ಎಲೈ ಶಕುನಿ! ದಾಳಗಳನ್ನು ಕೈಬಿಟ್ಟು ಬಾಣದಾಟಕ್ಕೆ ಹವಣಾಗು. ದಾರಹರಣವೂ, ರಾಜ್ಯತಂತ್ರವೂ, ಇಲ್ಲಿ ನಡೆಯುವಹಾಗಿಲ್ಲ. ಈ ಪ್ರಬ ಲವಾದ ಬಾಣದ ಆಟದಲ್ಲಿ ಪ್ರಾಣಗಳೇ ಪಣ" ಎಂದು ಭಂಗಿಸಿ ನುಡಿಯುವನು. ದುಶ್ಯಾಸನನು ಇದನ್ನು ಕೇಳಿ ಮುನಿದು, "ಯುಕ್ತಾ ಯುಕ್ತದ ಮೇರೆಯನ್ನು ಮೀರಿ, ಯಾವುದನ್ನೂ ಪರಿಗಣಿಸದೆ, ಪ್ರಮಾಣವನ್ನು ಲಂಘಿಸಿ ಹರಟುವೆ! ತಾಯಿಯ ರಾಕ್ಷಸ ಸ್ವಭಾ ವಕ್ಕೆ ತಕ್ಕ ಉಗ್ರರೂಪವು ನಿನಗಿರುವುದೆಂದುಕೊಂಡಿರುವೆಯೇನೊ; ನಾವೂ ರೌದ್ರರು; ರಾಕ್ಷಸೋಗ್ರ ಸ್ವಭಾವರು" ಎಂದು ಘರ್ಜಿ ಸುವನು. ಕುಲನಿಂದೆಯನ್ನು ಕೇಳಿ ಘಟೋತ್ಕಚನು ಖಿನ್ನನಾಗಿ, "ಶಾಂತಂ ಶಾಂತಂ, ಪಾಪಂ" ಎಂದುಕೊಳ್ಳುವನು. ಬಳಿಕ ಅವನು, "ರಾಕ್ಷಸರಿ ಗಿಂತಲೂ ನೀವೇ ಕ್ರೂರತಮರು. ಏಕೆಂದರೆ, ಲಾಕ್ಷಾಗೃಹದಲ್ಲಿ ಮಲ ಗಿರುವ ಅಣ್ಣತಮ್ಮಂದಿರನ್ನು ರಾಕ್ಷಸರು ಸುಡುವುದಿಲ್ಲ. ಭ್ರಾತೃವಿನ ಪತ್ನಿಯ ತಲೆಗೆ ಕೈಹಾಕಿ ರಾಕ್ಷಸರು ಎಳೆಯುವುದಿಲ್ಲ. ಸುತವಧೆಯು ಮಹತ್ಕಾರ್ಯವೆಂದು ಬಗೆದು ರಾಕ್ಷಸರು ಶ್ಲಾಘನೆ ಮಾಡುವುದಿಲ್ಲ. ರಾಕ್ಷಸರು ವಿಕಾರರೂಪುಳ್ಳವರೇನೋ ನಿಜ. ಆದರೂ, ಅವರು ನಿರ್ಘೃ ಣರಲ್ಲ" ಎನ್ನುವನು. ಮರ್ಮಭೇದಕವಾದ ನಾರಾಚಗಳಂತಿರುವ ಈ ಮಾತುಗಳನ್ನು ಕೇಳಿ ದುರ್ಯೋಧನನೂ ಕೋಪಿಸಿಕೊಳ್ಳುವನು. ಅಲ್ಲದೆ, "ನೀನು ದೂತನಾಗಿ ಬಂದಿದ್ದೀಯೆ. ನೀನು ಯುದ್ಧಕ್ಕಾಗಿ ಬಂದಿಲ್ಲ. ಸಂದೇಶವನ್ನು ತೆಗೆದುಕೊಂಡು ಹೊರಡು. ನಾವು ದೂತ ಘಾತಕರಲ್ಲ" ಎಂದು ತಿಳಿಸುವನು. ಕೃಷ್ಣನು ಸರಿಯಾದವನನ್ನೇ ಆರಿಸಿ ಕಳುಹಿಸಿದ್ದಾನೆ. ಘಟೋತ್ಕಚನು ಯಾವುದಕ್ಕೂ ಸೋಲುವವ ನಲ್ಲ. ದುರ್ಯೋಧನನು ತನ್ನನ್ನು ಪುತ್ರನೆಂದು ಕರೆದು ಪ್ರೀತಿಯನ್ನು

ತೋರಿಸದೆ ದೂತನೆಂದು ಹೀಯಾಳಿಸಿದುದಕ್ಕಾಗಿ ತರುಣ ವೀರನಾದ ಅವನಿಗೆ ಕೋಪಬರುವುದೂ ನ್ಯಾಯವೇ! ಅವನು ದಿಟ್ಟತನದಿಂದ, "ಹಾಗೆನ್ನಬೇಡ! ನಾನು ದೂತನಲ್ಲ. ನೀವು ಹಿಂತೆಗೆಯಲೇಬೇಡಿ. ಎಲ್ಲರೂ ಒಟ್ಟುಗೂಡಿ ನನ್ನನ್ನು ಹೊಡೆಯಿರಿ. ಬಿಲ್ಲಿನ ನಾರಿಯನ್ನು ಶತ್ರುಗಳು ಭೇದಿಸಿದ ಕಾರಣ ದುರ್ಬಲನಾದ ಅಭಿಮನ್ಯುವಲ್ಲ, ಇಲ್ಲಿ ನಿಂತಿರುವವನು" ಎಂದು ಹೇಳುವನು. ಅವನು ಅಲ್ಲಿಗೂ ಸುಮ್ಮ ನಿರದೆ, "ಕಿಶೋರವಯಸ್ಸಿಗನುಗುಣವಾಗಿ ಯುದ್ಧಮಾಡುವ ಮನೋ ರಥವೂ ನನಗೆ ಪ್ರಬಲವಾಗಿದೆ. ಆಗಲಿ, ಈ ಘಟೋತ್ಕಚನು ಔಡೊತ್ತಿ ಮುಷ್ಟಿಯುದ್ಧಕ್ಕೆ ಅನುವಾಗಿ ಇಲ್ಲಿ ನಿಂತಿದ್ದಾನೆ. ಗಂಡಸರು ಯಾರಾ ದರೂ ಇದ್ದರೆ ಎದ್ದು ನಿಲ್ಲಿರಿ. ಯಮಾಲಯವನ್ನು ಸೇರಲು ಇಷ್ಟವುಳ್ಳ ವರು ಎದ್ದು ನಿಲ್ಲಿರಿ" ಎಂದು ಆರ್ಭಟಿಸುವನು. ಭಾಸನ ಸಂವಿ ಧಾನ ಕೌಶಲವು ಶ್ರೇಷ್ಠವಾದುದು. ಅವನು ಆ ಸಮಯಕ್ಕೆ ಸರಿ ಯಾಗಿ ಧೃತರಾಷ್ಟ್ರನಿಂದ, "ಮಗು, ನನ್ನ ಮೊಮ್ಮಗನಾದ ಘಟೋ ತ್ಕಚ! ಕ್ಷಮಿಸು, ಕ್ಷಮಿಸು. ನನ್ನ ಮಾತನ್ನು ಕೇಳು." ಎಂದು ಹೇಳಿ ಸಿರುವುದರ ಔಚಿತ್ಯವನ್ನೂ, "ರೋಷವನ್ನು ತಡೆದು ಸುಮ್ಮನಿರಲಾರೆ" ಎಂದುಕೊಂಡು ಕಷ್ಟದಿಂದ ಸುಮ್ಮನಾಗುವ ಘಟೋತ್ಕಚನ ಸುಶಿಕ್ಷಿತ ಸ್ವಭಾವವನ್ನೂ ಎಷ್ಟು ಕೊಂಡಾಡಿದರೂ ಸಾಲದು. ಅವನು ಹೇಳುವ, "ಆಗಲಿ; ತಾತನ ಮಾತಿಗಾಗಿ ನಾನು ದೂತನೇ ಆಗುತ್ತೇನೆ. ಪೂಜ್ಯ ನಾದ ನಾರಾಯಣನಿಗೆ ಏನೆಂದು ಬಿನ್ನಹವನ್ನರುಹಲಿ?" ಎಂಬ ಉತ್ತ ರವು ಬಹಳ ಸ್ವಾರಸ್ಯವಾಗಿವೆ. ಬಿನ್ನಹವೆಂಬ ನುಡಿಯನ್ನು ಕೇಳಿ ದುರ್ಯೋಧನನು ಉರಿದು ಬೀಳುವನು. "ಆಃ! ಯಾರಿಗೆ ಬಿನ್ನಹ? ನಾನು ಹೀಗೆ ತಿಳಿಸಿದೆನೆಂದು ಅವನಿಗೆ ಹೇಳು; 'ಏನು ಅತಿಯಾಗಿ ಮಾತನಾಡುವೆ. ನಾವು ನಿನ್ನ ಪೌರುಷಕ್ಕೆ ಸಗ್ಗುವವರಲ್ಲ. ಹೆಚ್ಚು ಪ್ರಸಂಗವೇ ಬೇಡ. ಕೆಲವು ಮಾತುಗಳೇ ಸಾಕು. ಯುದ್ಧಕ್ಕೆ ಬಂದಾ ಗಲೇ ತಿಳಿಯುವುದು. ನೂರು ಮಂದಿ ಅರಸರ ಭತ್ರಾವಳೀ ಸಹಿತನಾಗಿ ನಾನಿರುವೆನು. ಪಾಂಡವರೊಡನೆ ನೀನಿರು. ನಿನಗೆ ಬಾಣಗಳಿಂದ ಮಾರುತ್ತರ ಕೊಡುವೆನು,' ಎಂದು ತಿಳಿಸಿದೆನೆಂದು ಕೃಷ್ಣನಿಗೆ ಹೇಳು."

ಎನ್ನುವನು. ಉತ್ತರದಲ್ಲಿ ಅದೆಷ್ಟು ಸರಳತೆ! ಅದೆಷ್ಟು ಪೌರುಷ! ಅದೆಷ್ಟು ದರ್ಪ! ಘಟೋತ್ಕಚನು ಮುಂದೆ ದುರ್ಯೋಧನನೊಡನೆ ಮಾತನಾಡದೆ, ಧೃತರಾಷ್ಟ್ರನನ್ನು ಕುರಿತು, "ತಾತ! ಇನ್ನು ಹೊರಡುವೆನು" ಎಂದು ಹೇಳುವನು. ಘಟೋತ್ಕಚನು ದುರ್ಯೋಧನನೊಡನೆ ಮಾತನಾಡದೆ ಮೌನವನ್ನವಲಂಬಿಸುವುದೂ, ಆಗಿನ ಸನ್ನಿವೇಶದಲ್ಲಿ ಮನೋರಂಜಕವಾಗಿಯೇ ಇರುವುದು. ಧೃತರಾಷ್ಟ್ರನೂ ಅವನಿಗೆ ಅನುಜ್ಞೆಯನ್ನು ಕೊಡುವನು. ಘಟೋತ್ಕಚನು ಇತರ ರಾಜರೆಲ್ಲರಿಗೂ ಅವರು ಧರ್ಮಾಚರಣೆಯಿಂದಿರಬೇಕೆಂಬುದೇ ಮುಂತಾದ ಉಪದೇಶಗಳಿಂದ ಕೂಡಿದ ಜನಾರ್ದನನ ಪಶ್ಚಿಮ ಸಂದೇಶವನ್ನು ಸಾರಿ ಹೊರಟುಹೋಗುವನು.

**ಪಾತ್ರರಚನೆ :—** ಈ ರೂಪಕದಲ್ಲಿ ಮುಖ್ಯವಾಗಿ ಗಮನಿಸಬೇಕಾದುದು ಧೃತರಾಷ್ಟ್ರ ಮತ್ತು ಘಟೋತ್ಕಚ ಪಾತ್ರಗಳೆರಡರ ವಿಚಾರವನ್ನೇ. ಧೃತರಾಷ್ಟ್ರನು ಅಂಧನಾದರೂ ದೂರ ದೃಷ್ಟಿಯುಳ್ಳ ಧರ್ಮಪಕ್ಷಪಾತಿಯಾದ ಪ್ರತಿಭಾಶಾಲಿ. ದುರ್ಯೋಧನನು ಕಣ್ಣಿದ್ದೂ, ವಸ್ತುಪರಿಜ್ಞಾನವಿಲ್ಲದ ಕುರುಡ. ಧೃತರಾಷ್ಟ್ರನನ್ನು ವರ್ಣಿಸಿ ಭಟನು ಹೇಳುವ, "ವಿಜ್ಞಾನ ವಿಸ್ತಾರಿತ ವಿನಯಾಚಾರ ದೀರ್ಘಚಕ್ಷುಸ್ಸುಳ್ಳವ"ನೆಂಬ ಮಾತು ಅಕ್ಷರಶಃ ನಿಜ. ಧೃತರಾಷ್ಟ್ರನು ಅಂಧನಾಗಿರಬಹುದು ಆದರೆ ವಿಜ್ಞಾನ ವಿಸ್ತಾರಿತವಾದ ವಿನಯಶೀಲತೆಯೆಂಬ ದೊಡ್ಡ ಕಣ್ಣು ಅವನಿಗಿದೆ. ಘಟೋತ್ಕಚನು ಆವನ ಲಲಿತ ಗಂಭೀರಾಕೃತಿಯನ್ನು ಕಂಡು ವಿಸ್ಮಿತನಾಗಿ ಭುಜಬಲವುಳ್ಳ ಆತನು ವೃದ್ಧನಾಗಿದ್ದೂ ಚರ್ಮವು ಸುಕ್ಕು ಹಿಡಿದಿರಲಿಲ್ಲವೆಂದೂ, ನೂರು ಮಕ್ಕಳ ಧೃತಿಯೂ ಆತನಲ್ಲಿ ನೆಲಸಿದ್ದಷ್ಟು ಆತ್ಮಭರವಸೆಯುಳ್ಳವನಾಗಿದ್ದನೆಂದೂ, ಮೂರು ಲೋಕಗಳನ್ನೂ ಅವನು ಸ್ವಾಧೀನಪಡಿಸಿಕೊಂಡಾನೆಂಬ ಭೀತಿಯಿಂದ ದೇವತೆಗಳು ದೃಷ್ಟಿಯನ್ನು ಕಿತ್ತುಕೊಂಡರೋ ಎನ್ನುವಂತೆ ತೋರುತ್ತಿದ್ದಿತೆಂದೂ ಹೇಳುವುದನ್ನು ನೋಡಿದರಂತು, ಧೃತರಾಷ್ಟ್ರನು ಆಕಾರ ಸದೃಶ ಪ್ರಜ್ಞನೆಂದು ಹರ್ಷಿಸುವಂತಾಗುತ್ತದೆ. ಅವನ ನಿಷ್ಪಕ್ಷ

ಪಾತದೃಷ್ಟಿ, ಬಂಧುಪ್ರೇಮ, ತನ್ನ ಮಕ್ಕಳು ದುರ್ಮಾರ್ಗಿಗಳೆಂಬ ಮನೋವ್ಯಥೆ, ನಾರಾಯಣ ಸ್ವರೂಪನಾದ ಜನಾರ್ದನನಲ್ಲಿ ಭಕ್ತಿ, ವಿನಯಶೀಲತೆ ಇವುಗಳಿಗೆ ನಿದರ್ಶನಗಳನ್ನು ಹಿಂದೆಯೇ ಕಂಡಿದ್ದೇವೆ. ಗಾಂಧಾರಿಯು ಅವನಿಗೆ ತಕ್ಕ ಹೆಂಡತಿ. ಘಟೋತ್ಕಚನು ಶೂರಶ್ರೇಷ್ಠ; ಗುರುಹಿರಿಯರಲ್ಲಿ ಭಕ್ತಿಯುಳ್ಳವನು ; ವಿನಯಶೀಲನಾದ ಸುಸಂಸ್ಕೃತ, ಸರಳಹೃದಯ ; ಶತ್ರುಶಿಬಿರಕ್ಕೆ ಬಂದಿದ್ದೂ ದುರ್ಯೋಧನಾದಿಗಳೆಲ್ಲರೂ ತನ್ನೊಡನೆ ಯುದ್ಧಕ್ಕೆ ಬರಬಹುದೆಂದು ನಿರ್ಭೀತನಾಗಿ ನುಡಿಯುವ ಧೈರ್ಯಶಾಲಿ. ಅವನ ಸದ್ಗುಣಗಳ ನಿದರ್ಶನಗಳನ್ನು ಹಿಂದೆಯೇ ಆ ಆ ಸನ್ನಿವೇಶಗಳಲ್ಲಿ ಸೂಚಿಸಲಾಗಿದೆ. ದುರ್ಯೋಧನನು (ದೂತವಾಕ್ಯದ ದುರ್ಯೋಧನನಂತೆಯೇ) ಉದ್ಧತನಾಗಿದ್ದರೂ ಅವನ ಮಾತಾಪಿತೃ ಭಕ್ತಿಯೂ, ಕ್ಷಾತ್ರತೇಜಸ್ಸೂ ಶ್ಲಾಘನೀಯವಾಗಿವೆ. ಶಕುನಿಯು ಅವನ ದುರ್ಗುಣಗಳಿಗೆ ಆರೈಕೆಮಾಡುವ ಹುಟ್ಟುಕೇಡಿಗ. ಆದುದರಿಂದಲೇ ಅವನನ್ನು ಧೃತರಾಷ್ಟ್ರನೂ ಘಟೋತ್ಕಚನೂ ಮುಚ್ಚುಮರೆಯೇನೂ ಇಲ್ಲದೆ ಎದುರಿಗೇ ಮೂದಲಿಸುವರು.

———o———

# ಕರ್ಣಭಾರ

## ೧. ಕಥಾಸಾರಾಂಶ

ಕಥಾವಸ್ತುವನ್ನು ಪರಿಗಣಿಸಿದರೆ ಈ ರೂಪಕವು ದೂತಘಟೋತ್ಕಚದಷ್ಟು ಕೂಡ ದೊಡ್ಡದಾಗಿಲ್ಲ. ಆದಕಾರಣ, ಕಥಾಸಾರಾಂಶವಾಗಿ ಹೆಚ್ಚೇನನ್ನೂ ಹೇಳಬೇಕಾದುದಿಲ್ಲ. ರಣರಂಗಕ್ಕೆ ಹೊರಟ ಕರ್ಣನು ತನಗೆ ಸಾರಥ್ಯಮಾಡುತ್ತಿರುವ ಶಲ್ಯನೊಡನೆ ತಾನು ಕುಂತಿಯ ಪುತ್ರನೆಂಬುದನ್ನೂ ತನ್ನ ಅಸ್ತ್ರವಿದ್ಯಾಭ್ಯಾಸದ ಕಥೆಯನ್ನೂ ಹೇಳಿ, ಬ್ರಾಹ್ಮಣವೇಷದಲ್ಲಿ ಅರ್ಥಿಯಾಗಿ ಬಂದ ಇಂದ್ರನಿಗೆ ಕವಚಕುಂಡಲಗಳನ್ನು ದಾನಮಾಡಿದುದೇ, ಈ ರೂಪಕದ ಕಥಾವಸ್ತು. ಈ ರೂಪಕದಲ್ಲಿ ನಾವು ಗಮನಿಸಬೇಕಾಗಿರುವುದು ಕರ್ಣನ ಪಾತ್ರವೊಂದೇ.

## ೨. ವಿಮರ್ಶೆ

**ಸಂವಿಧಾನ ಕೌಶಲ**—ಕರ್ಣಭಾರದ ಕರ್ಣನು ಮಹಾಭಾರತದ ಕರ್ಣನಲ್ಲವೆಂಬುದು ನಾವು ಗಮನಿಸಬೇಕಾದ ಬಹು ಮುಖ್ಯವಾದ ಅಂಶ. ಅವನಂತೆಯೇ ಮಹಾಭಾರತದ ಕರ್ಣನೂ ದಾನವೀರನು; ಪ್ರತಿಕೂಲ ದೈವನು. ಆದರೆ ಮಹಾಭಾರತದ ಕರ್ಣನು ಅವನಂತೆ ಸಾತ್ವಿಕನಲ್ಲ. ಭಾಸನು ರಚಿಸಿರುವ ಈ ಚಿಕ್ಕ ರೂಪಕವು ಕರುಣರಸದ ಖಂಡದಂತಿದೆ. ಅದನ್ನು ಕುರಿತು ಎಷ್ಟೆಷ್ಟು ಯೋಚಿಸಿದರೆ ಅಷ್ಟಷ್ಟು ಮಟ್ಟಿಗೆ ನಮ್ಮ ಹೃದಯವು ಮರುಕದಿಂದ ಕರಗಿಹೋಗಿ ಕರ್ಣನ ವಿಷಯದಲ್ಲಿ ಅನುತಾಪ ಪಡುತ್ತದೆ. ಶುದ್ಧಸಾತ್ವಿಕನಾಗಿ ರಾಜರ್ಷಿಯಂತಿರುವ ಆ ವೀರಾಗ್ರಣಿಯು ಯುದ್ಧಮಾಡುವುದು ಅಂದೇ ಕೊನೆಯೆಂಬ ಸೂಚನೆಯು ತೋರಿಬಂದಾಗ ಉಂಟಾಗುವ ಕಳವಳವನ್ನಂತು ವಿವರಿಸಲಳವಲ್ಲ.

ಸೂತ್ರಧಾರನು ಸ್ಥಾಪನೆಯನ್ನು ಮುಗಿಸಿ ತೆರಳಿದ ಮೇಲೆ ಭಟನು ಪ್ರವೇಶಿಸಿ, ಅಂಗರಾಜನಾದ ಕರ್ಣನಿಗೆ ಯುದ್ಧಕಾಲವು ಸನ್ನಿಹಿತವಾಗಿದೆಯೆಂದು ತಿಳಿಸುವಂತೆ ಹೇಳುವನು. ಅಷ್ಟರಲ್ಲಿ ಕರ್ಣನು ಮನೆಯಿಂದ ರಣರಂಗಕ್ಕೆ ಹೊರಡುತ್ತಿರುವುದನ್ನು ಅವನು ನೋಡುವನು. ಅಂದಿನವರೆಗೂ ಯುದ್ಧೋತ್ಸವದಲ್ಲಿ ಪ್ರಮುಖನಾಗಿದ್ದು ಪರಾಕ್ರಮದಿಂದ ಯುದ್ಧಮಾಡಿದ್ದ ಕರ್ಣನಿಗೆ ಅಂದು ಅಭೂತಪೂರ್ವವಾದ ಹೃದಯ ಪರಿತಾಪ. ಕರ್ಣನ ಮುಖವನ್ನು ನೋಡಿದೊಡನೆ ಭಟನಿಗೆ ಕೂಡ ಅದು ಗೊತ್ತಾಗಬೇಕಾದರೆ ಕರ್ಣನ ಮುಖಭಾವವು ಹೇಗಿರಬೇಕು ! ಭಟನು, "ಸಮರದಲ್ಲೂ ಶೌರ್ಯದಲ್ಲೂ ಅಗ್ರಗಣ್ಯನಾಗಿ ಪರಾಕ್ರಮಶಾಲಿಯಾಗಿದ್ದ ಈ ವಿವೇಕಿಯು ಈಗ ಶೋಕಾಕುಲನಾಗಿದ್ದಾನೆ. ಬೇಸಗೆಯ ಮೋಡಗಳು ಕವಿದಿದ್ದರೂ ಸಹಜ ಪ್ರಕಾಶದಿಂದ ತೇಜೋವಂತನಾಗಿರುವ ಸೂರ್ಯನಂತೆ ಕರ್ಣನು ಶೋಭಿಸುತ್ತಿದ್ದಾನೆ" ಎಂದು ತನ್ನಲ್ಲಿ ತಾನು ಹೇಳಿಕೊಂಡು ಹೊರಟುಹೋಗುವನು. ಆ ಮಾತುಗಳನ್ನು ಕೇಳಿ ನಮ್ಮ ಮನಸ್ಸು ಅನಿರ್ವಚನೀಯವಾದೊಂದು ಕಳವಳದ ಸುಳಿಗೆ ಸಿಕ್ಕುತ್ತದೆ. ಕರ್ಣನಂತಹ ವೀರಾಗ್ರಣಿಯು ಹೃದಯಪರಿತಾಪಕ್ಕೂ ಶೋಕಕ್ಕೂ ಗುರಿಯಾಗಬೇಕಾದರೆ ಪ್ರಬಲಕಾರಣವೇನೋ ಇರಬೇಕೆಂದು ತಲ್ಲಣವಾಗುತ್ತದೆ. ಅನಂತರ ಸಾರಥ್ಯವನ್ನು ವಹಿಸಿರುವ ಶಲ್ಯನೊಡನೆ ಕರ್ಣನು ಪ್ರವೇಶಿಸುವನು. ರಥವು ಸಿದ್ಧವಾಗಿದೆ. ಆದರೆ, ಪರಾಕ್ರಮಿಯಾದ ಅವನಿಗೆ ಆ ಸಮಯದಲ್ಲಿ ಅಭೂತಪೂರ್ವವಾದ ಹೃದಯ ಪರಿತಾಪ. ಕುರುರಾಜನ ಉಪ್ಪುತಿಂದಿರುವ ಕಾರಣ, ಕುರುರಾಜನಿಗೆ ದ್ರೋಹವೆಣಿಸುವ ಹಾಗಿಲ್ಲ. ಸಹೋದರರಾದ ಪಾಂಡವರ ಮೇಲೆ ಅಸ್ತ್ರವನ್ನು ತೊಡುವುದಕ್ಕೆ ಮನಸ್ಸುಬಾರದು. ಇದೇ ಅವನ ಹೃದಯ ಪರಿತಾಪಕ್ಕೆ ಮುಖ್ಯ ಕಾರಣವಿರಬಹುದು. ಜನರೆಲ್ಲರೂ ತನ್ನನ್ನು ರಾಧೇಯನೆಂದು ಭಾವಿಸಿದ್ದುದೇ ಮುಂತಾದ ಅಂಶಗಳೂ ಅವನನ್ನು ಬಾಧಿಸುವುವು. ಇವೆಲ್ಲದರ ಪರಿಣಾಮವಾಗಿ ಅವನಿಗುಂಟಾಗಿರುವ ಒಳತೋಟಿಯನ್ನೂ ಪರಿತಾಪವನ್ನೂ ಅಷ್ಟಿಷ್ಟೆಂದು ಹೇಳುವಂತಿಲ್ಲ. ಈ ಅವಸ್ಥೆಯಲ್ಲಿ ಕೂಡ, "ನನ್ನ ಬಾಣಗಳಿಗೆ ಗುರಿಯಾದ ರಾಜರಾರೂ ಪ್ರಾಣದೊಡನೆ ಉಳಿದಿರ

ಲಾರರಷ್ಟೆ. ಧನಂಜಯನು ಎದುರಿಗೆ ಬಂದರೆ ರಣಮುಖದಲ್ಲಿ ಕಾದಾಡಿ ಕೌರವರಿಗೆ ಪ್ರಿಯವನ್ನೆಸಗುವೆನು" ಎಂದು ಹೇಳಿ ಕರ್ಣನು, "ಶಲ್ಯ ರಾಜ! ಅರ್ಜುನನಿರುವ ಕಡೆಗೆ ನನ್ನ ರಥವನ್ನು ಬಿಡು" ಎಂದು ಅಪ್ಪಣೆಮಾಡುತ್ತಾನೆ. ತಾನೆಲ್ಲಿಯೋ ಸ್ವಪ್ನಪ್ರಪಂಚದಲ್ಲಿ ತೇಲಿಹೋಗು ವಂತಿದ್ದು ಅವನು ಹೀಗೆ ಆಜ್ಞೆಮಾಡಿದಂತೆ ಆಗಿನ ಸ್ಥಿತಿಯಲ್ಲಿ ಅವ ನಿಗೂ ಭಾಸವಾಗಿರಬೇಕು. ಏಕೆಂದರೆ, ರಾಧೇಯನೆಂದು ಕರೆಯಲ್ಪಡು ತ್ತಿದ್ದ ತಾನು ಕುಂತಿಯ ಪುತ್ರನೆಂದೂ, ಯುಧಿಷ್ಠಿರನೇ ಮುಂತಾದ ಪಾಂಡ ವರೈವರೂ ತನ್ನ ಕಿರಿಯ ಸೋದರರೆಂದೂ ಅವನೇ ಶಲ್ಯನೊಡನೆ ಹೇಳಿ ಕೊಳ್ಳುವ ಕಾರಣ, ಅವನ ಮನಸ್ಸು, "ಕಿರಿಯ ಸೋದರರೊಡನೆ ಯುದ್ಧವೆ?" ಎಂದು ಮಿಡಿದಿರಬೇಕು. ಸಮಯಕ್ಕೆ ಅಸ್ತ್ರಗಳು ಪ್ರಯೋ ಜನಕ್ಕೆ ಬಾರದೆ ಹೋಗಲೆಂಬು ಪರಶುರಾಮನು ಶಪಿಸಿದ್ದ ಹಾಗೆ ಅಂತಹ ಕಾಲವು ಒದಗುತ್ತಿದೆಯೆಂದೂ, ತಾನು ನಿರರ್ಥಕವಾಗಿ ಶಸ್ತ್ರಶಿಕ್ಷಣವನ್ನು ಪಡೆದ ಹಾಗಾಯಿತೆಂದೂ, ಇದ್ದುದರಲ್ಲೇ ತನ್ನ ಶಕ್ತಿ ಪರಾಕ್ರಮಗಳನ್ನು ತೋರಿಸಿ ಯುದ್ಧಮಾಡಲು ತಾಯಿಗೆ ಕೊಟ್ಟ ವಾಗ್ದಾನವು ನಿವಾರಿಸು ತ್ತಿರುವುದೆಂದೂ, ಯೋಚಿಸಿ ಅವನು ಕ್ಷತವಿಕ್ಷತನಾಗುವನು. ಕೊನೆಗೆ ತನ್ನ ಮನಸ್ಸಿನ ಉದ್ವೇಗಭರದಲ್ಲಿ, ಅವನು ಹಿಂದೆ ತಾನು ಪರಶುರಾಮ ನಲ್ಲಿಗೆ ಹೋದುದನ್ನೂ, ಅವನು ಬ್ರಾಹ್ಮಣರಿಗೆ ಶಿಕ್ಷಣಕೊಡುವವನೇ ಹೊರತು, ಕ್ಷತ್ರಿಯರಿಗೆ ಶಿಕ್ಷಣ ಕೊಡಲು ತನ್ನಿಂದ ಸಾಧ್ಯವಿಲ್ಲವೆಂದು ಹೇಳಿದುದನ್ನೂ, ತಾನು ಕ್ಷತ್ರಿಯನಲ್ಲವೆಂದು ಹೇಳಿಕೊಂಡುದನ್ನೂ, ಪರ ಶುರಾಮನು ಅಸ್ತ್ರವಿದ್ಯೆಯನ್ನು ಹೇಳಿಕೊಡುತ್ತಿದ್ದಾಗ ಒಂದು ದಿನ, "ವನ ಭ್ರಮಣ ಪರಿಶ್ರಾಂತ" ನಾಗಿ ತನ್ನ ತೊಡೆಯ ಮೇಲೆ ತಲೆಯನ್ನಿಟ್ಟು ನಿದ್ರಿಸಿದುದನ್ನೂ, ಆಗ ದುರದೃಷ್ಟವಶದಿಂದ ವಜ್ರಮುಖವೆಂಬ ಹೆಸರಿನ ಕೀಟವು ತನ್ನ ತೊಡೆಯನ್ನು ಕೊರೆಯುತ್ತಿದ್ದುದನ್ನೂ ತಾನು ಹಿಂಸೆ ಯನ್ನು ಸಹಿಸಿಕೊಂಡು ಗುರುವಿಗೆ ನಿದ್ರಾಭಂಗವಾದೀತೆಂಬ ಶಂಕೆಯಿಂದ ತೊಡೆಯನ್ನಲುಗಿಸದೆ ಇದ್ದುದನ್ನೂ, ರಕ್ತವು ತಲೆಗೆ ಸೋಕಿದಾಗ ಪರಶು ರಾಮನು ಎಚ್ಚತ್ತು ಶಿಷ್ಯನು ಕ್ಷತ್ರಿಯನೆಂಬುದನ್ನು ಗೊತ್ತುಮಾಡಿಕೊಂಡು, ಸುಳ್ಳುಹೇಳಿದ ತಪ್ಪಿಗಾಗಿ ಅಸ್ತ್ರಗಳು ಸಮಯಕ್ಕೊದಗದೆ ಹೋಗಲೆಂಬು

ದಾಗಿ ತನ್ನನ್ನು ಶಪಿಸಿದುದನ್ನೂ, ಶಲ್ಯನೊಡನೆ ಹೇಳಿಕೊಳ್ಳುವನು. ಶಲ್ಯನೂ ಅದನ್ನು ಕೇಳಿ ಮರುಕ ಪಡುವನು. ಇಲ್ಲಿ ಒಂದು ವಿಶೇಷ ವುಂಟು. ಮಹಾಭಾರತದಲ್ಲಿ ಹೇಳಿರುವಂತೆ ಇಂದ್ರನು ದುಂಬಿಯ ರೂಪ ದಲ್ಲಿ ಬಂದು ತೊಡೆಯನ್ನು ಕೊರೆಯಲುಪಕ್ರಮಿಸಿದನೆಂದು ನಿರೂಪಣೆ ಮಾಡದೆ, ವನಮಧ್ಯದಲ್ಲಿ ವಜ್ರಮುಖವೆಂಬ ಕೀಟವು ತೊಡೆಯನ್ನು ಕೊರೆಯಿತೆಂಬುದಾಗಿ ತಿಳಿಸಿರುವುದು ರೂಪಕ ದೃಷ್ಟಿಯಿಂದ ಬಹಳ ಮನೋಹರವಾಗಿದೆ. ಕರ್ಣನು ಹೊರಗಿನ ಸಮರಭೂಮಿಯು ಸಮೀಪಿ ಸುವ ವೇಳೆಗೆ, ತನ್ನ ಹೃದಯ ಸಮರವನ್ನು ಕೊನೆಗಾಣಿಸುವನು. ಅವನು ತಾನು ಕ್ಷತವಿಕ್ಷತನಾದುದನ್ನು ಶಲ್ಯನಿಗೆ ಕೂಡ ತಿಳಿಸದೆ ಮೌನ ದಿಂದಿದ್ದುದು ಮತ್ತೂ ವಿಶೇಷ. ಶಾಪದ ವೃತ್ತಾಂತವನ್ನು ಕೇಳಿ ಮರುಕ ಗೊಂಡು ಶಲ್ಯರಾಜನು ಆಚ್ಚರಿಪಡುತ್ತಿರುವನು. ಕರ್ಣನು ಅಸ್ತ್ರಗಳು ನಿಸ್ತೇಜವಾಗಿರುವುದನ್ನು ಕಂಡು, ಕುದುರೆಗಳು ದೈನ್ಯದಿಂದ ಕಣ್ಣು ಮುಚ್ಚಿ ಎಡವುತ್ತಿರುವುದನ್ನು ಬಣ್ಣಿಸಿ ಅದು ಸೋಲಿನ ಸೂಚನೆಯೆಂದಾಗ, ಅಮಂಗಳದ ಶಂಕೆಯ ಗಭೀರವಾದೊಂದು ಹಿನ್ನೆಲೆಯು ನಮ್ಮ ಮನ ಸ್ಸನ್ನು ಹಿಂಡಲಾರಂಭಿಸುವುದು. ತಾನು ಅಂದಿನ ಯುದ್ಧದಲ್ಲಿ ಮಡಿ ಯುವ ಶಂಕೆಯೂ ಕರ್ಣನ ಮಾತುಗಳಲ್ಲಿ ಅಡಗಿದೆ. ಶಲ್ಯನು ಕೂಡ, "ಅಯ್ಯೋ, ಇದನ್ನು ಸಹಿಸುವುದು ಕಷ್ಟ" ಎಂದು ಹೇಳುವನು. ವೀರಾ ಗ್ರಣಿಯಾದ ಕರ್ಣನಿಗೆ ಶಾಪ ಬಂದು ಅವನ ಕಷ್ಟವೆಲ್ಲ ವಿಫಲವಾಗಿ ಅಸ್ತ್ರಗಳು ಸಮಯಕ್ಕೆ ಒದಗದೆ ವಿಫಲವಾಗುವ ಸನ್ನಿವೇಶದಿಂದ ಶಲ್ಯನ ಹೃದಯವೇ ಕಲಕಿಹೋಗಿ ಆ ಮಾತುಗಳು ಹೊರಡುವುವು. ಇಲ್ಲಿಯ ಶಲ್ಯನೂ ವಿನೀತ. ಮಹಾಭಾರತದ ಶಲ್ಯನಂತೆ ದುರಹಂಕಾರಿಯಲ್ಲ. ಕರ್ಣನು "ಶಲ್ಯರಾಜ! ವಿಷಾದ ಪಡುವೆಯೇಕೆ? ವಿಷಾದವು ಇನ್ನು ಸಾಕು. ಯುದ್ಧದಲ್ಲಿ ನಾನು ಹತನಾದರೆ ಸ್ವರ್ಗವು ದೊರೆಯುವುದು. ನಾನು ಜಯಶಾಲಿಯಾದರೆ ಯಶಸ್ಸು ಬರುವುದು. ಎರಡೂ ಗೌರವದಾಯ ಕವೇ. ಆದಕಾರಣ, ಯುದ್ಧದಲ್ಲಿ ನಿಷ್ಫಲತೆಯೆಂಬುದಿಲ್ಲ." ಎಂಬ ಧೃಢನಿಶ್ಚಯದ ಸಮಾಧಾನ ವಚನಗಳನ್ನಾಡುವನು. ಹೃದಯ ಸಮರವು ಬಹುಕಾಲ ನಡೆದು ಕೊನೆಗೆ ಪ್ರಶಾಂತವಾದ ಬಗೆಯನ್ನು ಶಲ್ಯರಾಜನಿಂ

ಯನು. ಕರ್ಣನು ಕೇವಲ ಪ್ರಾಸಂಗಿಕವಾಗಿ ನುಡಿದನೆಂಬುದೇ ಅವನ ಭಾವನೆಯೆಂದು ತೋರುತ್ತದೆ. ಆ ವೇಳೆಗೆ ಬ್ರಾಹ್ಮಣ ವೇಷಧಾರಿಯಾಗಿ ಬಂದ ಇಂದ್ರನು, "ಎಲೈ ಕರ್ಣ! ಮಹತ್ತರವಾದ ಭಿಕ್ಷವನ್ನು ಯಾಚಿಸುವೆನು." ಎಂದು ತಿಳಿಸುವನು. ಕರ್ಣನು ಅವನನ್ನು ಆದರದಿಂದ ಬರಮಾಡಿಕೊಂಡು, ಭಕ್ತಿಯಿಂದ ನಮಸ್ಕರಿಸುವನು. ವೇಷಧಾರಿಯಾದ ಇಂದ್ರನು "ನಾನು ಏನೆಂದು ಹೇಳಬೇಕು ? ದೀರ್ಘಾಯುವಾಗೆಂದರೆ ದೀರ್ಘಾಯುವಾಗಿ ಬಿಡುವನು. ಏನನ್ನೂ ಹೇಳದೆ ಸುಮ್ಮನಿದ್ದರೆ ಮೂಢನೆಂದು ಭಾವಿಸುವನು. ಎರಡನ್ನೂ ಬಿಟ್ಟು ಏನನ್ನು ಹೇಳಲಿ? ಆಗಲಿ, ಹೀಗೆ ಮಾಡುವೆನು" ಎಂದುಕೊಂಡು, "ಸೂರ್ಯನ ಹಾಗೂ, ಚಂದ್ರನ ಹಾಗೂ, ಹಿಮವಂತನ ಹಾಗೂ, ಸಾಗರದ ಹಾಗೂ, ನಿನ್ನ ಯಶಸ್ಸು ಚಿರಕಾಲ ಸ್ಥಿರವಾಗಿರಲಿ!" ಎಂದು ಹರಸುವನು. ವಿಪ್ರನೇಕೆ ತನಗೆ ಹೀಗೆ ಆಶೀರ್ವದಿಸಿದನೆಂದು ಅವನ ಮನಸ್ಸಿನಲ್ಲಿ ಯೋಚನೆಯು ಹುಟ್ಟುವುದು. ಕೊನೆಗೆ ವಿಪ್ರನು ಹಾಗೆ ಹರಸಿದುದೇ ಸೊಗಸೆಂದು ಅವನು ಕ್ಷಣಮಾತ್ರದಲ್ಲಿ ನಿರ್ಧರಿಸಿ, ಪುರುಷನು ಪ್ರಯತ್ನ ಪೂರ್ವಕವಾಗಿ ಧರ್ಮವನ್ನು ಸಾಧಿಸಬೇಕು. ರಾಜನ ಸಂಪತ್ತು ಹಾವಿನ ನಾಲಗೆಯಂತೆ ಚಪಲತೆಯುಳ್ಳುದಾಗಿ ಚಂಚಲವಾದುದು. ಆದಕಾರಣ, ಪ್ರಜಾಪಾಲನವೇ ಸರ್ವಸ್ವವೆಂದು ಬಗೆದು ವರ್ತಿಸಿದರೆ, ದೇಹವು ಹತವಾದರೂ ಗುಣಗಳು ಶಾಶ್ವತವಾಗಿ ನಿಲ್ಲುವುವು" * ಎಂದುಕೊಳ್ಳುವನು. ಅಂಗರಾಜನಾದ ಕರ್ಣನು, ಧರ್ಮಪರಾಯಣನಾದ ಮತ್ತು ಪ್ರಜಾಪಾಲನ ಧುರೀಣನಾದ ಪ್ರಭುವೂ ಹೌದೆಂಬುದು ಇದರಿಂದ ಸೂಚಿತವಾಗುವುದು. ಕರ್ಣನು ವಿಪ್ರನಿಗೆ ಬೇಕಾದುದೇನೆಂದು ವಿನಯದಿಂದ ಕೇಳುವನು. ವಿಪ್ರನು ಸಸೇಮಿರಾ. ಅವನಿಗೆ, "ಮಹತ್ತರವಾದ ಭಿಕ್ಷವನ್ನು

---

* "ಧರ್ಮೋ ಹಿ ಯತ್ನೈಃ ಪುರುಷೇಣ ಸಾಧ್ಯೋ
ಭುಜಂಗ ಜಿಹ್ವಾಚಪಲಾ ನೃಪಶ್ರಿಯಃ ।
ತಸ್ಮಾತ್ ಪ್ರಜಾಪಾಲನಮಾತ್ರಬುದ್ಧ್ಯಾ
ಹತೇಷು ದೇಹೇಷು ಗುಣಾ ಧರಂತೇ ॥"

ಯಾಚಿಸುವೆನು. ” ಎಂಬುದೇ ಮಂತ್ರಜಪ. ಗೋಸಹಸ್ರವು ಬೇಕೆ-
ಎಂಬುದಾಗಿ ಕರ್ಣನು ಕೇಳುವನು. ಅಲ್ಪಕಾಲ ಕ್ಷೀರವನ್ನು ಕುಡಿಯು
ವುದಕ್ಕೆ ಮಾತ್ರ ಅವುಗಳಿಂದ ಸಹಾಯವಾಗುವ ಕಾರಣ, ವಿಪ್ರನು ಬೇಡ
ವೆನ್ನುವನು. ಕರ್ಣನು ಅದನ್ನು ಕೇಳಿ, ಸಹಸ್ರ ಕುದುರೆಗಳನ್ನು ಕೊಡಲೆ-
ಎಂದು ಕೇಳುವನು. ಮುಹೂರ್ತ ಮಾತ್ರದ ಅಶ್ವಾರೋಹಣದಿಂದ ತನ
ಗೇನೂ ಪ್ರಯೋಜನವಿಲ್ಲವೆಂದು ವಿಪ್ರನು ತಿಳಿಸುವನು. ಬಳಿಕ ಆನೆ
ಗಳ ಹಿಂಡನ್ನು ಕೊಡಲೆ– ಎಂದು ಕರ್ಣನು ಕೇಳುವನು. ವಿಪ್ರನಿಗೆ
ಅದೂ ಬೇಡ. ಅನಂತರ ಯಥೇಷ್ಟವಾಗಿ ಸುವರ್ಣವನ್ನು ಕೊಡುವು
ದಾಗಿ ಕರ್ಣನು ಹೇಳುವನು. ವಿಪ್ರನು ಅದನ್ನೂ ಒಲ್ಲನು. ಹಾಗಾ
ದರೆ ಭೂಮಿಯನ್ನು ಗೆದ್ದು ಕೊಡಲೆ- ಎಂದು ಕರ್ಣನು ಕೇಳುವನು.
ಭೂಮಿಯನ್ನು ಕಟ್ಟಿಕೊಂಡು ತನಗೇನೆಂದು ವಿಪ್ರನು ನುಡಿಯುವನು.
ಕರ್ಣನು “ ಅಗ್ನಿಷ್ಟೋಮ ಫಲವನ್ನು ದಾನಮಾಡಲೆ? ” ಎಂದು ಕೇಳು
ವನು ವಿಪ್ರನು ಅದನ್ನೂ ಬೇಡವೆನ್ನುವನು. ಕೊನೆಗೆ ಕರ್ಣನು “ ನನ್ನ
ಶಿರಸ್ಸನ್ನೇ ಕೊಡಲೆ ? ” ಎಂದು ಕೇಳುವನು. ವಿಪ್ರನು ಅಪ್ರತಿಭನಾಗಿ,
“ ಕೂಡದು, ಕೂಡದು. ” ಎನ್ನುವನು. ಅತಿದಾನಿಯಾದ ಕರ್ಣನು
ಅರ್ಥಿಗಳಿಗೆ ಪ್ರಾಣವನ್ನೇ ಬೇಕಾದರೂ ಸಮರ್ಪಿಸಲು ಸಿದ್ಧವಾಗಿರತಕ್ಕ
ವನು. ಅವನು ಅವಿನಯದಿಂದ, “ನನ್ನ ಶಿರಸ್ಸನ್ನೇ ಕೊಡಲೆ ? ” ಎಂದು
ಕೇಳುವುದಿಲ್ಲ. ಮೊದಲು ಬ್ರಾಹ್ಮಣನನ್ನು ತನ್ನ ಬಳಿಗೆ ಕರೆಯೆಂದು
ಶಲ್ಯನಿಗೆ ಹೇಳಿ ಆ ಬಳಿಕ, “ ಬೇಡ, ಬೇಡ, ನಾನೇ ಕರೆಯುತ್ತೇನೆ.
ಭಗವನ್! ಈ ಕಡೆ, ಈ ಕಡೆಗೆ ಬಿಜಯ ಮಾಡಿ” ಎಂದು ಅವನು ಆಡಿದ
ನುಡಿಗಳೇ ಇದಕ್ಕೆ ಪ್ರಮಾಣ “ ಆ ಬ್ರಾಹ್ಮಣನನ್ನು ಕರೆ ” ಎಂದುದಕ್ಕೆ
ಶಲ್ಯನೆಲ್ಲಿ ತನ್ನ ಅವಿನಯದಿಂದ ನೊಂದುಕೊಂಡಾನೋ, ಆ ಬ್ರಾಹ್ಮಣ
ನೆಲ್ಲಿ ನೊಂದುಕೊಂಡಾನೋ, ಎಂದು ಚಿಂತಿಸಿ ತಾನೇ ಅವನನ್ನು ಕರೆದ
ವಿನಯ ಶೀಲನು ಕರ್ಣನು. ಅವನ ಹೃದಯವು ಅತಿ ಕೋಮಲವಾದುದು.
ಕೊನೆಗೆ ಕರ್ಣನು, “ ದೇವಾಸುರರಿಗೆ ಅಭೇದ್ಯವಾದ ನನ್ನ ಕವಚವೂ,
ಕುಂಡಲಗಳೂ ಬೇಕೆ ? ” ಎಂದು ಕೇಳುವನು. ವೇಷಧಾರಿಯಾದ
ಇಂದ್ರನು, “ಕೊಡು, ಕೊಡು,” ಎಂದು ಸಂಭ್ರಮದಿಂದ ಹೇಳುವನು.

ಅವನು ನಿಜವಾದ ಬ್ರಾಹ್ಮಣನಿರಬಹುದೆ ಅಥವಾ ಕೃಷ್ಣನ ಕಪಟೋಪಾಯವೇನಾದರೂ ನಡೆದಿರಬಹುದೆ ಎಂದು, ಆಗ ಕರ್ಣನು ತನ್ನ ಮನಸ್ಸಿನಲ್ಲಿ ತಾನೇ ಸಂಶಯಪಡುವನು. ಹಾಗಿದ್ದರೂ ಇರಲೆಂದೂ, ಅದನ್ನು ಮನಸ್ಸಿಗೆ ಹಚ್ಚಿಕೊಳ್ಳುವುದು ಅಯುಕ್ತವೆಂದೂ, ನಿರ್ಧರಮಾಡಿ ಕವಚಕುಂಡಲಗಳನ್ನು ಕೊಡಹೋಗುವನು. ಪ್ರಾಣರಕ್ಷಣೆಯ ಸಾಧನವಾಗಿ ಉಳಿದಿರುವ ಅವುಗಳನ್ನೂ ಕೊಟ್ಟುಬಿಟ್ಟರೆ ಗತಿಯೇನೆಂದು ಭಾವಿಸಿ ಶಲ್ಯರಾಜನು ಕೂಡದೆಂದು ನಿಷೇಧಿಸುವನು. ದಾನವೀರನಾದ ಕರ್ಣನು ಅದನ್ನು ಕೇಳುವಹಾಗಿಲ್ಲ.

ಆಗ ಅವನು ಹೇಳುವ ಮಾತುಗಳನ್ನು ಕೇಳಿ ಎಂತಹವರೂ ತಲೆದೂಗುವಂತಿದೆ. ಆದಕಾರಣ, ಕಲಿತ ವಿದ್ಯೆಯೂ ಕಾಲಕ್ರಮದಲ್ಲಿ ಕ್ಷೀಣತೆ ಹೊಂದಿ ಮರೆಯುತ್ತ ಬರುವುದು. ಆಳವಾಗಿ ಬೇರು ಬಿಟ್ಟಿರುವ ಮರಗಳೂ ಬಿದ್ದುಹೋಗುವುವು. ಜಲಾಶಯದ ನೀರೂ ಬತ್ತಿಹೋಗುವುದು. ಹೋಮ ಮಾಡಿದ ಫಲವೂ, ದಾನ ಮಾಡಿದ ಫಲವೂ, ಶಾಶ್ವತವಾಗಿ ಇದ್ದಹಾಗೆಯೇ ಇರುವುವು " * ಎಂಬ ಮಾತುಗಳನ್ನು ಕೇಳಿ ಶಲ್ಯನು ಸುಮ್ಮನಾದುದೇನೂ ಹೆಚ್ಚಲ್ಲ. ಸರಳವಾಗಿ ರಸಭರಿತವಾಗಿಯೂ, ಮನೋಹರವಾಗಿಯೂ, ಇರುವಂತೆ ವಾಕ್ಯಗಳನ್ನು ಜೋಡಿಸುವುದರಲ್ಲಿ ಭಾಸನು ನಿಸ್ಸೀಮನಾಗಿದ್ದಾನೆ. ಅವನು ಎಷ್ಟು ಸುಲಭವಾಗಿ ಬಣ್ಣದ ತೇರನ್ನೇ ಕಟ್ಟಿ ಸಿದ್ಧವಾಗಿ ನಿಲ್ಲಿಸಬಲ್ಲನೆಂಬುದಕ್ಕೆ ಈ ಮಾತುಗಳೇ ಒಂದು ನಿದರ್ಶನ. ಕರ್ಣಭಾರದಲ್ಲಿಯ ಕರ್ಣನ ಸ್ವಭಾವವು ಎಷ್ಟು ಉದಾತ್ತವಾದುದೆಂಬುದಕ್ಕೆ ಅವನ ಈ ನುಡಿಗಳೂ ಸಾಕ್ಷ್ಯವಾಗಿವೆ. ಕರ್ಣನು ಕೊನೆಗೂ ಕವಚಕುಂಡಲಗಳನ್ನು ಕೊಟ್ಟೇ

---

* " ಶಿಕ್ಷಾ ಕ್ಷಯಂ ಗಚ್ಛತಿ ಕಾಲಪರ್ಯಯಾತ್
ಸುಬದ್ಧಮೂಲಾ ನಿಪತಂತಿ ಪಾದಪಾಃ ।
ಜಲಂ ಜಲಸ್ಥಾನಗತಂ ಚ ಶುಷ್ಯತಿ
ಹುತಂ ಚ ದತ್ತಂ ಚ ತಥೈವ ತಿಷ್ಠತಿ ॥ "

ಬಿಡುವನು. ಬ್ರಾಹ್ಮಣ ವೇಷಧಾರಿಯಾದ ಇಂದ್ರನೂ ಹೊರಟುಹೋಗುವನು. ಬಳಿಕ ಶಲ್ಯರಾಜನು ಕರ್ಣನನ್ನು ಕುರಿತು, "ಇಂದ್ರನು ನಿನ್ನನ್ನು ವಂಚಿಸಿದನು" ಎಂದು ಹೇಳುವನು. ಆಗ ಕರ್ಣನು ಆಡುವ ದರ್ಪದ ನುಡಿಗಳನ್ನು ಎಷ್ಟು ಕೊಂಡಾಡಿದರೂ ಸಾಲದು. ಕರ್ಣನು ಉತ್ತರ ಹೇಳುವುದೇನು? "ಅಲ್ಲವೇ ಅಲ್ಲ; ನಾನೇ ಇಂದ್ರನನ್ನು ವಂಚಿಸಿದ ಹಾಗಾಯಿತು. ಏಕೆಂದರೆ, ದ್ವಿಜರು ಭಕ್ತಿ ಶ್ರದ್ಧೆಗಳಿಂದ ಮಾಡುವ ಯಜ್ಞಗಳಲ್ಲಿ ಹವಿರ್ಭಾಗವನ್ನು ಪಡೆಯುವ, ಕಿರೀಟಧಾರಿಯಾಗಿ ವೈಭವಯುಕ್ತನಾಗಿ ಐರಾವತವನ್ನೇರಿ ಮೆರೆಯುವ, ದಾನವ ಸಂಘವನ್ನು ಮರ್ದಿಸಿ ಪರಾಕ್ರಮವನ್ನು ತೋರಿಸುವ, ಮಹೇಂದ್ರನು (ವೇಷಧಾರಿಯಾಗಿ ಬಂದು) ನನ್ನನ್ನು ಯಾಚಿಸಿ, ನನ್ನಿಂದಲ್ಲವೇ ತನ್ನ ಇಷ್ಟಾರ್ಥವನ್ನು ಪಡೆದುದು!" ಎಂದು ಹೇಳುವನು. "ಕರ್ಣಭಾರದಲ್ಲಿ ಸ್ವಪ್ರತಿಷ್ಠೆಯಿಂದ ಬೀಗುವ ಕರ್ಣನ ಘನತೆಯು ಒಡೆದು ಮೂಡಿದೆ"* ಎಂದು ಡಾಕ್ಟರ್ ಎ. ಬೆರ್ರಿಡೇಲ್‌ಕೀತ್ ರವರು ಹೇಳಿರುವುದನ್ನು ನೋಡಿದರೆ ಬಹಳ ಆಶ್ಚರ್ಯವಾಗುತ್ತದೆ. ಕರ್ಣನು ಸ್ವಪ್ರತಿಷ್ಠೆಯಿಂದ ಬೀಗುವ ಸ್ವಭಾವದವನೆನ್ನಲು, ಕರ್ಣಭಾರದಲ್ಲಿ ಮತ್ತೆಲ್ಲಿಯೂ ಆಧಾರವಿಲ್ಲ. ಆಧಾರವಿದೆಯೆನ್ನುವುದಾದರೆ ಮೇಲೆ ಹೇಳಿದ ಮಾತುಗಳಲ್ಲಿರಬೇಕು. ಏಕೆಂದರೆ, ಉಳಿದ ಕಥಾಸಂದರ್ಭಗಳ ಜೊತೆಯಲ್ಲಿ ತೂಗಿ ನೋಡದೆ, ಇದೊಂದು ಶ್ಲೋಕವನ್ನೇ ಪರಿಗಣಿಸಿದರೆ ಕರ್ಣನು ಸ್ವಪ್ರತಿಷ್ಠೆಯನ್ನು ಹೇಳಿಕೊಂಡಿರಬಹುದೆನ್ನಿಸುತ್ತದೆ. ಪಂಡಿತವರ್ಯರಲ್ಲೊಬ್ಬರಾದ ಆ ಮಹನೀಯರೂ ಒಪ್ಪಿಕೊಳ್ಳುವಂತೆ ಕರ್ಣನು ಘನತೆಯ ಗಣಿಯಾಗಿದ್ದಾನೆ. ಇಂದ್ರನೂ ತನ್ನಿಂದ ದಾನವನ್ನು ಸ್ವೀಕರಿಸಿದನಲ್ಲಾ ಎಂಬ ಸಂತೋಷದಲ್ಲಿ ಅವನು ಹಾಗೆ ಹೇಳಿದಹಾಗೆ ತೋರುತ್ತದೆ. ವಿಪ್ರನಾಗಿ ತನ್ನ ಬಳಿಗೆ ಬಂದಿದ್ದವನು ವೇಷಧಾರಿಯೆಂಬ ಅನುಮಾನವಿದ್ದೂ, ಕರ್ಣನು ತನ್ನ ಪ್ರಾಣರಕ್ಷಣೆಯ ಸಾಧನವನ್ನೇ ಧಾರಾಳ ಮನಸ್ಸಿನಿಂದ ಕೊಟ್ಟು, ಇಂದ್ರನು ತನ್ನನ್ನು ವಂಚಿ

---

* "In the Karnabhara the nobility of the haughty Karna is emphasized" Dr. A. Berridale Keith.

ಸಿದುದನ್ನು ಕೇಳಿ ಹೀಗೆ ಹೇಳಿರುವುದರಲ್ಲಿ ಕರ್ಣನ ಸ್ವಭಾವಕ್ಕೆ ಕುಂದು ತರುವುದೊಂದೂ ಇಲ್ಲ. ಅಷ್ಟು ದೊಡ್ಡ ಇಂದ್ರನೇ ವಂಚಿಸಬಹುದಂತೆ. ಕರ್ಣನು ಸಂತೋಷಭರದಲ್ಲಿ ಈ ಮಾತುಗಳನ್ನಾಡಿದರೆ ತಪ್ಪೆ? ಡಾಕ್ಟರ್ ಕೀತ್‌ರವರಿಗೆ ನಿರಾಧಾರವಾಗಿ ಅಂತಹ ಅಭಿಪ್ರಾಯವು ಏಕೆ ಹುಟ್ಟಿತೋ ತಿಳಿಯದು. ಕವಿಕಲ್ಪಿತವಾದ ಮುಂದಿನ ಕಥಾ ಸಂವಿಧಾನದ ಸೊಗಸನ್ನು ನೋಡೋಣ.

ಬಳಿಕ ಬ್ರಾಹ್ಮಣ ರೂಪದಿಂದ ದೇವದೂತನೊಬ್ಬನು ಬರುವನು. ಕವಚಕುಂಡಲಗಳನ್ನು ಸ್ವೀಕರಿಸಿದ ಸುರೇಂದ್ರನು ಪಶ್ಚಾತ್ತಾಪದಿಂದ ಪಾಂಡವರಲ್ಲೊಬ್ಬನನ್ನು ಸಂಹರಿಸಲು ಸಾಧಕವಾದ "ವಿಮಲಾ" ಎಂಬ ಹೆಸರಿನ ಸಾಯಕವನ್ನು ಕಳುಹಿಸಿರುವುದಾಗಿ ತಿಳಿಸಿ, ದೇವದೂತನು ಅದನ್ನು ಸ್ವೀಕರಿಸೆಂದು ಕರ್ಣನಿಗೆ ಹೇಳುವನು. ಅದು ಕರ್ಣನ ಸತ್ತ್ವಪರೀಕ್ಷೆಯ ಸನ್ನಿವೇಶ. ಕಲಾದೃಷ್ಟಿಯಿಂದಲೂ ಅದು ಸೊಗಸಾಗಿದೆ. ತಾನು ಬಹು ಕಷ್ಟಪಟ್ಟು ಸಂಪಾದಿಸಿದ ಅಸ್ತ್ರಗಳೆಲ್ಲ ನಿರ್ವೀರ್ಯವಾಗಿ ತನ್ನ ಕವಚಕುಂಡಲಗಳನ್ನೂ ಕೊಟ್ಟುಬಿಟ್ಟಿರುವ ಆ ಸನ್ನಿವೇಶದಲ್ಲಿ ಅವನಿಗೆ ಆ ಅಸ್ತ್ರವು ಬಹಳ ಬೆಲೆಯುಳ್ಳ ಸಾಧನ. ಆದರೂ ತಾನು ಕೊಟ್ಟುದಕ್ಕೆ ಪ್ರತಿಯಾಗಿ ಅದನ್ನು ಸ್ವೀಕರಿಸುವುದಿಲ್ಲವೆಂದೇ ಸಾತ್ವಿಕ ಶ್ರೇಷ್ಠನಾದ ಆ ದಾನವೀರನು ಹೇಳಿಬಿಡುತ್ತಾನೆ. **ಮಹಾಭಾರತದ** ಕರ್ಣನಾದರೊ ಕನಸಿನಲ್ಲಿ ಸೂರ್ಯನು ಕೊಟ್ಟ ಎಚ್ಚರಿಕೆಗನುಸಾರವಾಗಿ ತನ್ನ ಕವಚಕುಂಡಲಗಳಿಗೆ ಪ್ರತಿಯಾಗಿ ಅಸ್ತ್ರವನ್ನು ಕೊಡಬೇಕೆಂಬ ಸಮಯದ ಮೇಲೆ ಅವುಗಳನ್ನು ಕೊಡುತ್ತಾನೆ. **ಮಹಾಭಾರತದ** ಕರ್ಣನಿಗಿಂತ ಇಲ್ಲಿಯ ಕರ್ಣನು ಸಾತ್ವಿಕನೆಂಬುದನ್ನು ಹೇಳಬೇಕಾದುದೇ ಇಲ್ಲ. ಬ್ರಾಹ್ಮಣ ವೇಷಧಾರಿಯಾದ ದೇವದೂತನು "ಬ್ರಾಹ್ಮಣ ವಚನಕ್ಕಾಗಿ ಅದನ್ನು ಸ್ವೀಕರಿಸು" ಎನ್ನುವನು. ತನ್ನೆದುರಿಗಿರುವವನನ್ನು ಬ್ರಾಹ್ಮಣನೆಂದೇ ಭಾವಿಸಿರುವ ಕರ್ಣನು, ಬ್ರಾಹ್ಮಣ ವಚನವನ್ನು ಮೀರಲಾರದೆ ಅದನ್ನು ಸ್ವೀಕರಿಸುವನು. ದೇವದೂತನು, ಹೊರಟುಹೋಗುವನು. ಬಳಿಕ, ರಥವನ್ನೇರಿ ಕರ್ಣನೂ, ಶಲ್ಯನೂ,

ರಣಭೂಮಿಗೆ ಹೊರಡುವರು. ಆ ವೇಳೆಗೆ ಪ್ರಳಯಸಾಗರ ಘೋಷ ದಂತೆ ಸಮರಭೂಮಿಯಿಂದ ಅರ್ಜುನನ ಶಂಖಧ್ವನಿಯೂ ಕೇಳಬರು ವುದು. ಅರ್ಜುನನಿರುವ ಸ್ಥಳಕ್ಕೆ ತನ್ನ ರಥವನ್ನು ಬಿಡುವಂತೆ ಕರ್ಣನು ಶಲ್ಯರಾಜನಿಗೆ ವಿನಯ ಪೂರ್ವಕವಾಗಿ ತಿಳಿಸುವನು. ಅವನು ಅದ ಕ್ಕೊಪ್ಪಿ, "ಒಳ್ಳೆಯದು, ಆಗಲಿ," ಎಂದು ಹೇಳಿ ರಥವನ್ನು ನಡೆ ಯಿಸುವನು. ಅಲ್ಲಿಗೆ ಕರ್ಣಭಾರವು ಮುಗಿಯುವುದು.

**ಪಾತ್ರರಚನೆ**:— ಈ ರೂಪಕದಲ್ಲಿ ನಾವು ಗಮನಿಸಬೇಕಾದುದು ಕರ್ಣನ ಪಾತ್ರವೊಂದೇ. ಕರ್ಣನು ಶೂರಾಗ್ರಣಿಯಾಗಿ, ದಾನವೀರ ನಾಗಿ, ರಾಜಧರ್ಮಪರಾಯಣನಾಗಿ, ಘನತೆಯ ಗಣಿಯಾಗಿದ್ದಾನೆ. ತಾನು ಶ್ರಮಪಟ್ಟು ಸಾಧಿಸಿದ್ದ ಅಸ್ತ್ರಗಳೆಲ್ಲ ಯುದ್ಧಕಾಲದಲ್ಲಿ ಅಪ್ರಯೋಜಕ ವಾಗಲೆಂದು ತನಗೆ ಶಾಪಕೊಟ್ಟ ಪರಶುರಾಮನ ವಿಚಾರದಲ್ಲಿ ಕೂಡ ಅವನು ಭಕ್ತಿಯನ್ನೇ ತೋರ್ಪಡಿಸಿ, "ಮುನಿವರ" ನೆಂದೂ "ಭೃಗು ವಂಶ ಕೇತು" ವೆಂದೂ, ಗುರುವೆಂದೂ, ವರ್ಣಿಸುತ್ತಾನೆ. ಕರ್ಣನು ಮಹಾನುಭಾವನೆಂಬುದಕ್ಕೆ ಇದೊಂದೇ ಸಾಕು. ತನ್ನ ದುರ್ದೈವ ವಶ ದಿಂದ ವಜ್ರಮುಖಿಯೆಂಬ ಕೀಟವು ಬಂದು ತೊಡೆಯನ್ನು ಕೊರೆದು ಶಾಪವನ್ನು ಕೊಡಿಸಿತೆಂಬುದು ಅವನ ಭಾವನೆ. ಅರ್ಥಿಗಳ ಬಯಕೆ ಯನ್ನು ಪೂರ್ತಿಗೊಳಿಸುವುದರಲ್ಲಿ ತನ್ನ ತಲೆಯನ್ನೊಪ್ಪಿಸುವುದಕ್ಕೂ ಅವ ನು ಸಿದ್ಧವಾಗಿದ್ದಾನೆ. ಅಂಗರಾಜನಾಗಿ ಚಕ್ರೇಶ್ವರನ ಆಪ್ತಮಿತ್ರನಾಗಿ ರಾಜವೈಭವದ ಮಧ್ಯದಲ್ಲಿದ್ದೂ ವಿನೀತನಾಗಿ ರಾಜನ ಸಂಪತ್ತುಗಳು ಹಾವಿನ ನಾಲಿಗೆಯಂತೆ ಚಪಲತೆಯುಳ್ಳವುಗಳೆಂದು ("ಭುಜಂಗ ಜಿಹ್ವಾ ಚಪಲಾ ನೃಪಶ್ರಿಯಃ") ಹೇಳುವ ಮಟ್ಟಿಗೆ ಅವನಿಗೆ ನಿತ್ಯಾನಿತ್ಯ ವಿವೇಕವಿದೆ. ಆದಕಾರಣ ಅವನ ದಾನಗಳೂ ಧರ್ಮಪಾರಾಯಣತೆ ಯೂ ಮತ್ತಷ್ಟು ಉಜ್ಜ್ವಲವಾಗಿ ಬೆಳಗುತ್ತವೆ. ತಾನೇ ಹೃದಯಪರಿ ತಾಪದಿಂದ ಪಾಡುಪಡುತ್ತಿದ್ದೂ, ತಾನೂ ತನ್ನ ಕುದುರೆಗಳೂ ಅಂದು ರಣರಂಗದಿಂದ ಹಿಂತಿರುಗುವುದಿಲ್ಲವೆಂದು ಶಂಕಿಸುತ್ತಿದ್ದೂ ತನ್ನ ವಿಷ ಯವಾಗಿ ಅನುಕಂಪ ಬುದ್ಧಿಯಿಂದ ಸಂತಪಿಸಿದ ಶಲ್ಯರಾಜನಿಗೆ ಕರ್ಣನು

ತಾನೇ ಸಮಾಧಾನ ಹೇಳುತ್ತಾನೆ. ಕೌರವರಿಗೆ ಸಂತೋಷವಾಗುವಂತೆ ಅರ್ಜುನನೊಡನೆ- ಯುಧಿಷ್ಠಿರನ ಸೋಲಿನ ದೆಸೆಯಿಂದ ಕುಪಿತನಾಗಿ ಯಥಾಶಕ್ತಿ ಯುದ್ಧಮಾಡಲು ನಿಂತು ಶಂಖವನ್ನು ಮೊಳಗಿಸುತ್ತಿರುವ ಅರ್ಜುನನೊಡನೆ- ಯುದ್ಧಮಾಡಲು ಆ ಸ್ಥಿತಿಯಲ್ಲಿ ಕೂಡ ನಿರ್ಧರಿಸಿ ಕ್ಷಾತ್ರತೇಜವನ್ನು ಮೆರೆಯುತ್ತಾನೆ. ಭಾಸಮಹಾಕವಿಯು ಚಿತ್ರಿಸಿರುವ ಕರ್ಣನು ತ್ಯಾಗರಾಜ; ಸಾತ್ವಿಕತೆಯ ದೇವಗಂಗೆ; ಶೌರ್ಯ ಪರಾಕ್ರಮಗಳ ಅಮರಜ್ಯೋತಿ.



# ಊರುಭಂಗ

## ೧. ಕಥಾಸಾರಾಂಶ

ದುರ್ಯೋಧನನ ಸಹೋದರರಾದ ದುಶ್ಶಾಸನನೇ ಮುಂತಾದವರೂ, ಅವನ ಆಪ್ತರಾದ ಕರ್ಣನೇ ಮುಂತಾದವರೂ ಮೃತರಾಗಿ, ಕೊಂಬೆಗಳೆಲ್ಲ ಹೋಗಿರುವ ಮರದಂತೆ ಅವನೊಬ್ಬನೇ ಉಳಿದಿರುವನು. ವೀರನಾದ ದುರ್ಯೋಧನನು ಆಗಲೂ ಸಂಧಿಗೊಪ್ಪದೆ ಯುದ್ಧಮಾಡುವನು. ಪಾಂಡವರಲ್ಲಿ ಒಬ್ಬನೊಡನೆ ಅವನು ಯುದ್ಧಮಾಡಬೇಕೆಂದು ಗೊತ್ತಾಗುವುದು. ಅದರಂತೆ ಅವನು ಭೀಮನೊಡನೆ ಯುದ್ಧಮಾಡಲಿಚ್ಛಿಸುವನು. ಭೀಮದುರ್ಯೋಧನರಿಗೆ ನಡೆದ ಗದಾಯುದ್ಧವೂ, ದುರ್ಯೋಧನನ ಮರಣವೂ ಊರುಭಂಗದ ಕಥಾವಸ್ತು.

## ೨. ವಿಮರ್ಶೆ

**ಸಂವಿಧಾನ ಕೌಶಲ** :— ನಾಯಕನು ಮೃತಪಡುವಂತೆ ಚಿತ್ರಿತವಾಗಿರುವುದು ಸಂಸ್ಕೃತಭಾಷೆಯ ರೂಪಕಗಳಲ್ಲೆಲ್ಲ ಇದೊಂದೇ ಒಂದು ರೂಪಕದಲ್ಲಿ. ಮರಣವನ್ನು ರಂಗಸ್ಥಳದ ಮೇಲೆ ತೋರಿಸಕೂಡದೆಂಬ ನಿಯಮವನ್ನು ಭಾಸನು ಅನುಸರಿಸಿಲ್ಲ. ಬಾಲಚರಿತದಲ್ಲಿ ಚಾಣೂರ, ಮುಷ್ಟಿಕ, ಕಂಸ ಈ ಮೂವರೂ ಮೃತಪಡುತ್ತಾರೆ. ಅಭಿಷೇಕನಾಟಕದಲ್ಲಿ ವಾಲಿಯು ಮೃತನಾಗುತ್ತಾನೆ. ಭಾಸನು ಮಹಾಭಾರತದ ಕಥೆಯನ್ನು ರೂಪಕಕ್ಕೆ ಸರಿಹೋಗುವಂತೆ ಮಾರ್ಪಡಿಸಿಕೊಂಡು ಈ ವಿಷಾದಾಂತ ರೂಪಕವನ್ನು ಬರೆದಿದ್ದಾನೆ. ಕವಿಯು ಮೂಲಗ್ರಂಥದಲ್ಲಿಲ್ಲದ ಸನ್ನಿವೇಶಗಳನ್ನೂ ಕಲ್ಪಿಸಿದ್ದಾನೆ. ಅಲ್ಲದೆ ಮಹಾಭಾರತದ ನೃಶಂಸ ದುರ್ಯೋಧನನಿಗಿಂತ ಉತ್ತಮನಾದ ದುರ್ಯೋಧನನನ್ನೂ ಕಡೆದು ನಿಲ್ಲಿ

ಸಿದ್ಧಾನೆ. ಒಂದೇ ಅಂಕದಲ್ಲಿ ರೂಪಕವು ಮುಗಿದರೂ, ಕವಿಯು ಒಂದೇ ಕಡಲೆಯ ಕಾಳಿನಲ್ಲಿ ಒಂದು ಕಡಲನ್ನೇ ತುಂಬಿರುವಂತೆ ತೋರುತ್ತದೆ.

ಮಹಾಭಾರತವು ಐದನೆಯ ವೇದವೆಂದು ಪ್ರಸಿದ್ಧವಾಗಿದೆ. ಅದರಲ್ಲಿ ಸಾರತರವಾದ ಭಾಗಗಳಲ್ಲೊಂದರ ಆಧಾರದ ಮೇಲೆ ಬರೆದ ರೂಪಕವು ಮನೋಹರವಾಗಿರಲೇಬೇಕು. ಪ್ರತಿಭಾಶಾಲಿಯಾದ ದೊಡ್ಡ ಕವಿಯೇ ಆ ಕೆಲಸವನ್ನು ಹಿಡಿದಮೇಲೆ ಕೇಳತಕ್ಕದೇನುಂಟು ? ಮಹಾಭಾರತವು ನಮ್ಮ ದೇಶದ ಪ್ರಾಚೀನ ಗ್ರಂಥವೆಂಬ ದುರಭಿಮಾನವೇ ಈ ಮಾತುಗಳಿಗೆ ಕಾರಣವೆಂದು ಆಕ್ಷೇಪಿಸುವವರು ಕೂಡ, ಯೋಗಿ ಅರವಿಂದ ಘೋಷರೇ ಮುಂತಾದ ಮಹನೀಯರ ವಾಣಿಗಳಲ್ಲಾದರೂ ನಂಬಿಕೆಯಿಡಬಹುದಾಗಿದೆ. ಅಮೆರಿಕಾ ಖಂಡದವರಾದ ಪ್ರೊಫೆಸರ್ ಎ. ಆರ್. ಆರೆಂಜ್ ಎಂಬ ವಿದ್ವಾಂಸರೊಬ್ಬರು ಮಹಾಭಾರತದ ವಿಚಾರವಾಗಿ ಬರೆದಿರುವುದನ್ನು ನೋಡಿದರಂತು, ಅದರ ವಿಷಯದಲ್ಲಿ ನಮ್ಮ ಹೆಮ್ಮೆಯೂ, ಪ್ರೀತಿಯೂ ಹೆಚ್ಚುತ್ತವೆ. ೧೯೨೬ನೆಯ ಇಸವಿಯಲ್ಲಿ ಅವರು ಒಂದು ಲೇಖನವನ್ನು ಬರೆದಿದ್ದಾರೆ. ಈಗಿನ ಕಾಲದ ಪಾಶ್ಚಿಮಾತ್ಯ ಸಾಹಿತ್ಯವು ಸತ್ತ್ವಹೀನವಾಗುತ್ತ ಬರುತ್ತಿದೆಯೆಂಬ ಅಂಶವನ್ನು ನೆನೆದು ಮನನೊಂದು, ಹಿಂದೆ ಗ್ರೀಸಿನಿಂದ ಯೂರೋಪು ಖಂಡದ ಇತರ ದೇಶಗಳು ಉದ್ಧಾರವಾದಂತೆ ಈಗ ಭರತಖಂಡದ ಸಾಹಿತ್ಯದಿಂದ ಉದ್ಧಾರವಾಗಬಹುದೆಂದು ಸೂಚಿಸಿ ಆ ಬಳಿಕ ಆ ಲೇಖನದಲ್ಲಿ ಅವರು ಮಹಾಭಾರತವನ್ನು ಪ್ರಶಂಸೆ ಮಾಡಿದ್ದಾರೆ. ಆ ಲೇಖನದ ಕೆಲವು ಅಮೋಘ ವಾಣಿಗಳ * ತಾತ್ಪರ್ಯವಿಷ್ಟು : "....ಆದರೆ

* "...But is the case hopeless and is culture irrevocably doomed ? there is a remedy and not an impossible one : its name is Ancient India. Ancient India stands in the same relation to us 'children' of Europe as Ancient Egypt occupied toward the 'children' of Greece.

ನಮಗೆ ಉದ್ಧಾರದ ಆಶೆಯೇ ಇಲ್ಲವೊ? ಸಂಸ್ಕೃತಿಯು ಉದ್ಧಾರವಾಗದಷ್ಟು ಮಟ್ಟಿನ ದುರವಸ್ಥೆಯೊದಗಿದೆಯೊ? ಇಲ್ಲ. ಒಂದು ಉದ್ಧಾರ ಸಾಧನವಿದೆ. ಅದರ ಸಹಾಯವು ನಮಗೆ ದೊರೆಯುವುದು ಸಾಧ್ಯವುಂಟು. ಪ್ರಾಚೀನ ಭರತಖಂಡವೆಂಬುದು ಆ ಉದ್ಧಾರ ಸಾಧನದ ಹೆಸರು. ಗ್ರೀಸ್ ದೇಶದವರ ವಿಷಯದಲ್ಲಿ ಪ್ರಾಚೀನ ಐಗುಪ್ತ (ಈಜಿಪ್ಟ್) ದೇಶಕ್ಕೆ ಯಾವಸ್ಥಾನವಿದ್ದು ಅದರಿಂದ ಉಪಕಾರವಾಯಿತೋ ಯೂರೋಪಿನವರಾದ ನಮ್ಮ ವಿಷಯದಲ್ಲಿ ಪ್ರಾಚೀನ ಭರತಖಂಡಕ್ಕೆ ಅದೇ ಸ್ಥಾನವಿದ್ದು (ಅದರ ಸಾಹಿತ್ಯದಿಂದ) ಉಪಕಾರವಾಗುತ್ತದೆ. ಇಂದಿನ ಯೂರೋಪು ಖಂಡವೆಂದರೆ ಹಿಂದಿನ ಗ್ರೀಸಿನ ಪರಿಪುಷ್ಟವಾದ ಬೃಹತ್ತರ ರೂಪ. ಮೇಲಾಗಿ, ಭರತ ಖಂಡವು ನಮ್ಮೆಲ್ಲರಿಗೂ ಅತ್ಯಂತ ಪ್ರಾಚೀನಕಾಲದ ಮಾತೃಸ್ಥಾನ; ನಮ್ಮ ಬುಡಕಟ್ಟಿನ ಅತ್ಯಂತ ಪ್ರಾಚೀನಕಾಲದ ಮೂಲಸ್ಥಾನ. ಭರತ ಖಂಡವೇ ನಮ್ಮ ಮನುಷ್ಯ ಕುಲಕ್ಕೆ ಆದಿ ಮಾತಾಪಿತೃಗಳಾದ ಇವ್ ಮತ್ತು ಆಡಂ................

---

Europe to-day is Ancient Greece writ large. India, moreover, is our most ancient parent ; our oldest racial ancestor ; our Adam and Eve.............

" The Mahabharata competently translated into English under the supervision of the late Max Muller, and shortly to be beautifully retranslated and published under the auspices of the English Academy of Literature is the greatest single effort of literary creation of any culture in human history. It is difficult for any mind to conceive the mind that conceived it ; and the effort to do so is almost itself a liberal education! A walk through its table of contents is more than a sabbath-day's journey. The Iliad and Odyssey are episodes in it ; and the celebrated Bhagawad-gita is simply the

"ಮಹಾಭಾರತವು ಹಿಂದೆ ಮ್ಯಾಕ್ಸ್ ಮುಲ್ಲರ್ ಅವರ ನೇತೃತ್ವದಲ್ಲಿ ಇಂಗ್ಲಿಷ್ ಭಾಷೆಗೆ ಉತ್ತಮರೀತಿಯಲ್ಲಿ ಭಾಷಾಂತರವಾಗಿದ್ದಿತು. ಈಗ ಅದು ಮತ್ತೊಮ್ಮೆ ಸೊಗಸಾಗಿ ಭಾಷಾಂತರವಾಗಿ 'ಇಂಗ್ಲಿಷ್ ಅಕ್ಯಾಡಮಿ ಆಫ್ ಲಿಟರೇಚರ್' ಎಂಬ ಸಾಹಿತ್ಯ ಸಂಸ್ಥೆಯ ಆಶ್ರಯದಲ್ಲಿ ಪ್ರಕಟವಾಗುವುದಾಗಿದೆ. ಸಂಸ್ಕೃತಿ ಪೂರಿತವಾದ ಸಾಹಿತ್ಯ ಗ್ರಂಥಗಳಲ್ಲೆಲ್ಲ ಮಹಾಭಾರತದಷ್ಟು ದೊಡ್ಡ ಗ್ರಂಥವು ಒಬ್ಬ ಗ್ರಂಥಕರ್ತನಿಂದ ಹುಟ್ಟಿದ ನಿದರ್ಶನವು ಪ್ರಪಂಚದ ಇತಿಹಾಸದಲ್ಲೇ ಮತ್ತೊಂದಿಲ್ಲ. ಮಹಾಭಾರತವನ್ನು ರಚಿಸಿದ ಮಹಾಪುರುಷನ ಮೇಧಾಶಕ್ತಿಯ ಪ್ರಮಾಣವೆಷ್ಟೆಂಬುದನ್ನು ಗ್ರಹಿಸುವುದೇ ಎಂತಹ ಮೇಧಾವಿಗೂ ಕಷ್ಟವಾದ ಅಂಶ; ಅದನ್ನು ಗ್ರಹಿಸುವ ಪ್ರಯತ್ನ ಮಾಡಿದರೇಯೇ, ಅದೇ ಒಂದು ಉದಾರವಾದ ಉಚ್ಚಶಿಕ್ಷಣದ ವಿದ್ಯಾಭ್ಯಾಸ. ಮಹಾಭಾರತದ ವಿಷಯಾನುಕ್ರಮಣಿಕೆಯನ್ನು ಓದಿ ಮನನಮಾಡಿದರೇ ಸಾಕು; ಪವಿತ್ರವಾದ ಜ್ಞಾನಯಾತ್ರೆ ಮಾಡಿದಹಾಗೆ. ಮಹಾಭಾರತಕ್ಕೆ ಹೋಲಿಸಿದರೆ (ಹೋಮರ್ ಕವಿಯ) ಇಲಿಯಾಡ್ ಮತ್ತು ಆಡಿಸ್ಸಿ ಎಂಬೆರಡು ದೊಡ್ಡ ಗ್ರಂಥಗಳೂ ದೊಡ್ಡದೊಂದು ಕಥೆಯೊಳಗಿನ ಚಿಕ್ಕ ಉಪಕಥೆಗಳಿಗೆ ಸಮಾನ; ಸುಪ್ರಸಿದ್ಧವಾದ ಭಗವದ್ಗೀತೆಯು, ಮಹಾಭಾರತ ಯುದ್ಧದಲ್ಲಿ ನಡೆಯುವ ಹಲವು ಕದನಗಳಲ್ಲೊಂದು ನಡೆಯುವುದಕ್ಕೆ ಮುಂಚೆ ಒತ್ತಡವೆಗೇ ನಡೆದ ಸಂಭಾಷಣೆಯು ಮಾತ್ರ. ನೂರುಗಟ್ಟಲೆಯಾಗಿ ಪಾತ್ರಗಳು; ಕಾಲಪುರುಷನೇ ನಿರ್ಮಿಸಿದ ಅನಂತ ಘಟನೆಗಳಂತೆ ತೋರುವ ಅಸಂಖ್ಯಾತ ಘಟನೆಗಳುಳ್ಳ ಕಥೆಗಳು. ಇಷ್ಟಾದರೂ ಒಟ್ಟು ಕಾವ್ಯದ ಸಂವಿಧಾನ ಕ್ರಮವನ್ನು ಮರೆತಂತೆ ತೋರುವ

---

record of a single conversation on the eve of one of its many battles. Characters appear in hundreds, and episodes follow episodes with the infinite resourcefulness of Time. Nevertheless, there is no moment when the plan of the work is forgotten. At regular stages by astronomical clock-time as it were, every thing is gathered

ಪ್ರಸಂಗವೇ ಒದಗುವಂತಿಲ್ಲ. ಕೊಂಚವಾದರೂ ಅವಸರವಾಗಲಿ ಆಲಸ್ಯ ವಾಗಲಿ ಇಲ್ಲದೆ ಗ್ರಹಗಳ ಗತಿಯಂತೆ ಕ್ರಮಬದ್ಧವಾದ ಅಚ್ಚುಕಟ್ಟಿನಿಂದ ಕೂಡಿ, ಮೂಲ ಕಥಾ ಪ್ರವಾಹದ ನೂತನ ನೂತನ ತರಂಗಗಳಂತೆ ಘಟನೆಗಳ ಮೇಲೆ ಘಟನೆಗಳು ಸೇರಿ ರೂಪಗೊಳ್ಳುತ್ತವೆ........ಹೀಗಿದ್ದರೂ ವಾಚಕರ ಮನಸ್ಸಿನ ನಾಡಿಯ ಗತಿಯನ್ನು ವ್ಯಾಸರು ಏಕಪ್ರಕಾರವಾಗಿ ಮೊದಲಿನಿಂದ ಕೊನೆಯವರೆಗೂ ಗ್ರಹಿಸಿ ಗಮನದಲ್ಲಿಟ್ಟುಕೊಂಡಿರುವ ಪುಟ್ಟಿಗೆ ಮತ್ತಾವ ಗ್ರಂಥಕರ್ತನೂ ತನ್ನ ಕಾವ್ಯದ ವಿಷಯದಲ್ಲಿ ಮಾಡಿಲ್ಲವೆಂದು ಹೇಳಬೇಕಾಗಿದೆ. ಮಹಾಭಾರತವನ್ನು ವ್ಯಾಸರು ಹೇಳಿ ಬರೆಯಿಸಿದರಂತೆ. ಅದನ್ನು ಬರೆದುಕೊಂಡ ಗಣೇಶನು ಗ್ರಂಥದ ಯಾವ ಭಾಗದಲ್ಲಾದರೂ ಅರ್ಥವೇನಾದರೂ ತನಗೆ ಸ್ಪಷ್ಟವಾಗದೆ ಹೋದರೆ ತಾನು ಬರೆವಣಿಗೆಯನ್ನು ಅಲ್ಲಿಗೇ ನಿಲ್ಲಿಸಿ ಹೊರಟುಹೋಗುವುದಕ್ಕೆ, ಅವಕಾಶ ಕೊಡಬೇಕೆಂಬ ಸಮಯದ ಮೇಲೆ ಬರೆಯಲಾರಂಭಿಸಿದನಂತೆ. (ಅರ್ಥವು ಸ್ಪಷ್ಟವಾಗಿಲ್ಲದ ಘಟ್ಟವೇ ಒದಗದ ಕಾರಣ) ಗ್ರಂಥವು ಪೂರ್ತೈಸುವ ವರೆಗೂ ಗಣೇಶನು ಬರೆವಣಿಗೆಯನ್ನು ನಿಲ್ಲಿಸಲಿಲ್ಲ. (ಮಹಾಭಾರತವನ್ನು ಓದಲಾರಂಭಿಸಿದರೆ ಅರ್ಥದ ಸೊಗಸಿನಿಂದ ಅದನ್ನು ಮುಗಿಸುವವರೆಗೂ ನಿಲ್ಲಿಸುವುದಕ್ಕಾಗುವುದಿಲ್ಲವಾದುದರಿಂದ) ಮಹಾಭಾರತವನ್ನು ಓದುವವರಲ್ಲಿ ಪ್ರತಿಯೊಬ್ಬನೂ ಗಣೇಶನಂತೆಯೇ ಆಗುತ್ತಾನೆ.

"................ಕೇವಲ ಸಾಹಿತ್ಯದಂತೆ ಮಾತ್ರವೇ ಪರಿಗಣಿಸಿದರೂ ಸಹ, ಮಹಾಭಾರತದಷ್ಟು ದೊಡ್ಡದಾದ ಕಲಾಪೂರ್ಣ ಸಾಹಿತ್ಯ ಗ್ರಂಥವು ಮತ್ತೊಂದಿಲ್ಲ. ಅದರ ಮೇಲ್ಪಂಕ್ತಿಯೂ ಅದರಿಂದ ಲಭಿ

---

together or is re-shuffled for a fresh phase of the continous history. .. .....Never was a writer more currently aware of his readers than Vyasa, the author; Ganesha, who transcribed it to Vyasa's dictation, had stipulated that he should be released if once the meaning ceased to be plain to him and he was not released until the end. And Ganesha is every reader.

ಸುವ ಸ್ಫೂರ್ತಿಯೂ ಅನೇಕ ಮುಖವಾಗಿವೆ; ಮತ್ತು ಕಾಲಪುರುಷನ ಸೃಷ್ಟಿಯಂತೆಯೇ ಸತ್ತ್ವಮಯವಾಗಿ ಸಾರತಮವಾಗಿವೆ.

"ಮಹಾಭಾರತವನ್ನು ಓದುವುದರಿಂದ ಈಚಿನ ಕಾಲದವುಗಳಾದ ಗ್ರಂಥಗಳನ್ನು ಓದುವುದರಿಂದ ದೊರೆಯದ ಪ್ರತ್ಯಕ್ಷಾನುಭವವು ದೊರೆಯುತ್ತದೆ. ವಾಸ್ತವಾನುಭವದ ಶಿಕ್ಷಣದಿಂದ ಸ್ವಭಾವವು ಮಾರ್ಪಟ್ಟು ಹೊಸರೂಪವನ್ನು ಪಡೆದಂತೆ ಮಹಾಭಾರತವನ್ನೋದಿದವನ ಸ್ವಭಾವವೇ ಮಾರ್ಪಟ್ಟು ಅವನು ಹೊಸ ಮನುಷ್ಯನೇ ಆಗುತ್ತಾನೆ."

ಆ ಮಹನೀಯರು ಮಹಾಭಾರತವನ್ನು ಈ ರೀತಿ ಕೊಂಡಾಡಿದ್ದಾರೆ. ಪೌರ್ವಾತ್ಯ ಪಾಶ್ಚಿಮಾತ್ಯ ಪಂಡಿತರನೇಕರು ಶ್ಲಾಘಿಸಿರುವ ಮಹಾಭಾರತದ ಕಥಾವಸ್ತುವಿನಲ್ಲಿ ಅತ್ಯಂತ ಸ್ವಾರಸ್ಯವಾದ ಭಾಗಗಳಲ್ಲೊಂದಾದ ಗದಾಯುದ್ಧದ ಸನ್ನಿವೇಶವನ್ನು ಆಧಾರವಾಗಿಟ್ಟುಕೊಂಡು ಭಾಸನಂತಹ ದೊಡ್ಡ ಕವಿಯು ರೂಪಕ ರಚನೆ ಮಾಡಿದ ಮೇಲೆ ಅದರ ಸೊಬಗನ್ನು ಕೇಳಬೇಕೆ?

ಊರುಭಂಗರೂಪಕವು ಪ್ರಾರಂಭವಾಗುವ ವೇಳೆಗೆ ಕೌರವ ಸೇನೆಯಲ್ಲಿ ದುಶ್ಶಾಸನ ಕರ್ಣಾದಿಗಳೆಲ್ಲರೂ ಮೃತಪಟ್ಟು ದುರ್ಯೋಧನನೊಬ್ಬನೂ, ಯುಧಿಷ್ಠಿರ ಸೇನೆಯಲ್ಲಿ ಪಾಂಡವರೈವರೂ ಜನಾರ್ದನನೂ, ಉಳಿದಿರುವರು. ಸ್ಥಾಪನೆಯಲ್ಲಿ ಸೂತ್ರಧಾರನು ಈ ಅಂಶವನ್ನು ಪಾರಿಪಾರ್ಶ್ವಕನಾದ ಮಾರಿಷನೊಡನೆ ಹೇಳಿ, ಸಮಂತ ಪಂಚಕದಲ್ಲಿ ದುರ್ಯೋ

---

"............Taken as literature simply, as the most colossal work of literary art ever created, its example and inspiration are as multiform and vital as Time itself.

"Unlike the reading of derivative works of art, the reading of Mahabharata is a first hand experience. One ends it different just as one emerges different from every thing real."—A. R. Orange.

ಧನನಿಗೂ, ಭೀಮನಿಗೂ ಗದಾಯುದ್ಧವಾಗುವುದನ್ನು ಸೂಚಿಸುವನು. ಅನಂತರ ಮೂವರು ಭಟರು ಪ್ರವೇಶಿಸಿ, ರಣರಂಗದ ಭೀಕರ ಸ್ಥಿತಿಯನ್ನು ವರ್ಣಿಸುವರು. ಮಾವಟಿಗರಿಲ್ಲದೆ ಆನೆಗಳು ಅಂಕೆತಪ್ಪಿ ಓಡುತ್ತಿರುವುವು. ಕುದುರೆಗಳು ಸಾರಥಿಯಳಿದ ಬರಿಯ ರಥಗಳನ್ನೆಳೆದುಕೊಂಡು ಅಲೆಯುತ್ತಿರುವುವು. ಯುದ್ಧದಲ್ಲಿ ಮಡಿದ ವೀರರ ಮತ್ತು ಆನೆ ಕುದುರೆಗಳ ರಕ್ತದಿಂದ ರಣಭೂಮಿಯು ಕೆಸರಾಗಿರುವುದು. ನರಿಗಳೂ, ರಣಹದ್ದುಗಳೂ ಅಲ್ಲಲ್ಲಿ ಮೃತ ದೇಹಗಳ ಮಾಂಸವನ್ನು ಕಿತ್ತು ತಿನ್ನುತ್ತಿರುವುವು. ಒಬ್ಬರ ಶೌರ್ಯಕ್ಕೆ ಮತ್ತೊಬ್ಬರು ನಿಕಷಪ್ರಾಯವಾಗಿ ಯುದ್ಧಮಾಡಿ ಮರಣಕಾಲದಲ್ಲಿ ಕೂಡ ಭೀತರಾಗದೆ ಮಡಿದುಬಿದ್ದ ವೀರರ ಮುಖಗಳು ಅಲುಗಾಡದ ನೆಲದಾವರೆಗಳಂತೆ ಬಾಣದ ನಾಳಗಳ ಮೇಲೆ ನಿಂತಿರುವುವು. ಭಟರು, "ಇಂತಹ ಕ್ಷತ್ರಿಯ ವೀರರ ಮೇಲೆ ಕೂಡ ಮೃತ್ಯುವಿನ ಕೈ ನಡೆಯಿತೆ?" ಎಂದು ವಿಸ್ಮಿತರಾಗಿರುವಲ್ಲಿ ಸಿಡಿಲಿನಂತೆ ಧ್ವನಿಯು ಕೇಳಿಸುವುದು. ಅದು ಭೀಮದುರ್ಯೋಧನರ ಗದೆಗಳು ತಗುಲಿದ ಶಬ್ದ. ಗದಾಯುದ್ಧಕಾಲದಲ್ಲಿ ವ್ಯಾಸರೂ, ಬಲರಾಮವಿದುರರೂ, ಕುರುವೃದ್ಧರೂ, ಯಾದವವೃದ್ಧರೂ ಇದ್ದಂತೆ ಭಾಸಮಹಾಕವಿಯು ಸೂಚಿಸಿದ್ದಾನೆ. ಇದು ಮಹಾಭಾರತದಲ್ಲಿಲ್ಲದ ಸಂಗತಿ. ರಂಗಸ್ಥಳವು ಜನರಿಂದ ತುಂಬಿರಬೇಕೆಂಬ ದೃಷ್ಟಿಯಿಂದಲೂ ಈ ಮಾರ್ಪಾಡು ವಿಹಿತವಾಗಿದೆ. ದುರ್ಯೋಧನನಲ್ಲಿ ಪ್ರೀತಿಯಿರುವ ಬಲರಾಮನು—ಬಾಹುಗಳೇ ಆಯುಧವಾಗಿರುವ ವೀರಾಗ್ರಣಿಯಾದ ಬಲರಾಮನು—ದುರ್ಯೋಧನನಿಗೂ ಗುರುವಾಗಿ ಗದಾಯುದ್ಧದ ವಿಚಾರದಲ್ಲಿ ಸರ್ವರಿಗೂ ಆಚಾರ್ಯನಂತಿರುವ ಬಲರಾಮನು—ಗದಾಯುದ್ಧ ಕಾಲದಲ್ಲಿ ಮೊದಲಿನಿಂದ ದುರ್ಯೋಧನನ ಮರಣದವರೆಗೂ ಅಲ್ಲಿದ್ದಂತೆ ಸಂವಿಧಾನವನ್ನು ಕಲ್ಪಿಸಿರುವುದು ಬಂಧುರವಾಗಿದೆ. ಇದರ ಮೇಲೆ ಹಲಾಯುಧನಿಗೆ ದುರ್ಯೋಧನನಲ್ಲಿ ತುಂಬ ವಾತ್ಸಲ್ಯವಿದ್ದಂತೆ ಕವಿಯು ಮಾರ್ಪಾಡು ಮಾಡಿದ್ದಾನೆ. ಭಾಸಕವಿಯ ಅನುಕಂಪಾಮೃದುವಾದ ಹೃದಯವೇ ಅದಕ್ಕೆ ಕಾರಣವಾಗಿರಬೇಕು. ಭೀಮನನ್ನು ಪ್ರೋತ್ಸಾಹಿಸಲು ಶ್ರೀಕೃಷ್ಣನೂ, ಯುಧಿಷ್ಠಿರನೇ ಮುಂತಾದವರೂ ಇರುವಲ್ಲಿ ದುರ್ಯೋಧನ

ನಲ್ಲಿ ಪ್ರೀತಿಯುಳ್ಳವರಾರೂ ಅವನ ಬಳಿಯಲ್ಲಿಲ್ಲದೆ ಅವನೊಬ್ಬ ದೇಸಿಗ
ನಂತೆ ಯುದ್ಧಮಾಡಿದ ಮಹಾಭಾರತದ ಸನ್ನಿವೇಶವನ್ನು ಕಂಡು ಭಾಸನು
ಮನಮರುಗಿರಬೇಕು. ಆದುದರಿಂದಲೇ ಬಲರಾಮನು (ಮಹಾಭಾರತ
ದಲ್ಲಿ ಹೇಳಿರುವಂತೆ ದುರ್ಯೋಧನನ ತೊಡೆ ಮುರಿದು ನೆಲಕ್ಕುರುಳಿದ
ಮೇಲೆ ಕೆರಳಿ ಕೊನೆಗೆ ಕೃಷ್ಣನ ದಾಕ್ಷಿಣ್ಯದಿಂದ ದ್ವಾರಕಿಗೆ ಹೊರಟು
ಹೋಗದೆ) ಶಿಷ್ಯಪ್ರಿಯತೆಯಿಂದ ಕೂಡಿ, ದುರ್ಯೋಧನನು ಮರಣ
ಹೊಂದುವವರೆಗೂ ಅವನ ಬಳಿಯಲ್ಲಿದ್ದಂತೆ ಆತನು ಚಿತ್ರಿಸಿರಬೇಕು.

ದುರ್ಯೋಧನನೂ, ಭೀಮನೂ ಗದೆಗಳಿಂದ ಹೋರಾಡುವುದನ್ನು
ರಂಗಸ್ಥಳದಲ್ಲಿ ತೋರಿಸದೆ, ಮೂವರು ಭಟರೇ ಅದನ್ನೂ ವಿಧವಿಧ
ವಾಗಿ ವರ್ಣಿಸುವಂತೆ ಮಾಡಿರುವುದು ಶ್ಲಾಘ್ಯವಾಗಿದೆ. ಅಭಿಷೇಕ
ನಾಟಕದಲ್ಲಿ ರಾಮರಾವಣರ ಯುದ್ಧವನ್ನು ಮೂವರು ವಿದ್ಯಾಧರರು
ವರ್ಣಿಸುತ್ತಾರೆ. (ಯಜ್ಞಶಾಲೆಯು ಉರಿಯುತ್ತಿರುವುದನ್ನು ಪಂಚರಾತ್ರ
ದಲ್ಲಿ ಮೂವರು ಬ್ರಾಹ್ಮಣರು ವರ್ಣಿಸುತ್ತಾರೆ). ಯುದ್ಧವೇ ಮುಂತಾ
ದವುಗಳು ಎಂದರೆ ರಂಗಸ್ಥಳದಲ್ಲಿ ನಿಜತ್ವದ ಭ್ರಾಂತಿಯುಂಟಾಗುವಂತೆ
ತೋರಿಸುವುದು ಅಸಾಧ್ಯವಾಗಿರತಕ್ಕವುಗಳು ದೂರದಲ್ಲಿ ನಡೆಯುತ್ತಿರು
ವಂತೆ ಸನ್ನಿವೇಶವನ್ನು ಕಲ್ಪಿಸಿ ಅವುಗಳನ್ನು ಇತರರು ಹೃದಯಂಗಮ
ವಾಗುವ ರೀತಿಯಲ್ಲಿ ವರ್ಣಿಸುವಂತೆ ಮಾಡಿರುವುದು ಉತ್ತಮವಾದ
ಸಂವಿಧಾನ್ಯಕೌಶಲ. ಪ್ರಪಂಚದಲ್ಲೆಲ್ಲ ಸುಪ್ರಸಿದ್ಧನಾದ ನಾಟಕ ಲೇಖ
ಕನೂ ಕಲಾಕೋವಿದನೂ ಆದ ಷೇಕ್ಸ್‌ಪಿಯರ್ ಮಹಾಕವಿಯು ಬರೆದ
ನಾಟಕಗಳಲ್ಲಿ ಕೂಡ ಈ ಬಗೆಯ ಸಂವಿಧಾನ ಕೌಶಲವಿಲ್ಲದ ನ್ಯೂನತೆಯು
ಇದ್ದೇ ಇದೆ. ಉದಾಹರಣೆಗಾಗಿ ಜ್ಯೂಲಿಯಸ್ ಸೀಜರ್ ನಾಟಕದಲ್ಲಿ
ಬಹುಶಃ ತೂರ್ಯವನ್ನು ಹಿಡಿದವನೊಬ್ಬನೂ, ನಗಾರಿಯನ್ನು ಹಿಡಿದವ
ನೊಬ್ಬನೂ, ಇತರ ಕೆಲವು ಪಾತ್ರಗಳೂ ರಂಗವನ್ನು ಪ್ರವೇಶಿಸುವಂತೆ
ಮಾಡಿ, ರಣರಂಗದ ಭಾವನೆಯನ್ನುಂಟುಮಾಡಬೇಕೆಂಬ ಪ್ರಯತ್ನವು
ಸಫಲವಾಗಿಲ್ಲವೆಂಬುದನ್ನು ಎಲ್ಲರೂ ಒಪ್ಪಲೇಬೇಕು ; ಐರೋಪ್ಯ ವಿಮ
ರ್ಶಕರಲ್ಲಿ ಕೂಡ ಕೆಲವರು ಹಾಗೆ ಅಭಿಪ್ರಾಯಪಟ್ಟಿದ್ದಾರೆ.

ಮೂವರು ಭಟರೂ, ಭೀಮದುರ್ಯೋಧನರ ಗದಾಯುದ್ಧವನ್ನು ವರ್ಣಿಸುತ್ತ ಬರುವರು. ದ್ರೌಪದಿಯು ಅನುಭವಿಸಿದ ಅವಮಾನದ ನೆನಪಿನಿಂದ ಕುಪಿತನಾಗಿರುವ ಭೀಮನಿಗೂ, ಸಹೋದರರ ವಧೆಯಿಂದ ಕ್ರೋಧಹೊಂದಿರುವ ದುರ್ಯೋಧನನಿಗೂ ಯುದ್ಧವೆಂದಮೇಲೆ ಕೇಳ ಬೇಕೆ ? ದುರ್ಯೋಧನನ ಪೆಟ್ಟಿನಿಂದ ಭೀಮನ ಎದೆಯಲ್ಲಿ ಗಾಯವಾಗು ವುದು. ಭೀಮನು ರಭಸದಿಂದ ಹೊಡೆದು ದುರ್ಯೋಧನನ ಹೆಗಲಿನ ಮಾಂಸವು ಕೊಚ್ಚಿಹೋಗುವಂತೆ ಮಾಡುವನು. ರೋಷೋದ್ದೀಪಿತನಾದ ದುರ್ಯೋಧನನು ಆಯಸಿಕ್ಕುವಂತೆ ತನ್ನ ದೇಹವನ್ನೇ ಕುಗ್ಗಿಸಿ ನಿಂತಿದ್ದು ಸರಕ್ಕನೆ ಭೀಮನನ್ನು ಗದೆಯಿಂದ ಹೊಡೆದುದನ್ನೂ, ಭೀಮನ ಹಣೆಯೂ, ಭುಜಗಳೂ ಗದೆಯ ಪೆಟ್ಟಿಗೆ ಸಿಕ್ಕಿ ರಕ್ತಸುರಿದು, ವಜ್ರಾಯುಧದ ಪೆಟ್ಟಿಗೆ ಸಿಕ್ಕಿದ ಹೇಮಕೂಟದಂತೆ ಅವನು ಮೂರ್ಛಿತನಾಗಿ ನೆಲಕ್ಕುರುಳಿದು ದನ್ನೂ ಭಟರು ವಿವರಿಸುವರು. ಆಗಿನ ಸ್ಥಿತಿಯಲ್ಲಿ ಯುಧಿಷ್ಠಿರ ಮುಂತಾ ದವರ ಸ್ಥಿತಿಯು ಹೇಗಿದ್ದಿತೆಂಬುದನ್ನು ವರ್ಣಿಸಿರುವ ಶ್ಲೋಕವನ್ನು * ಒಬ್ಬ ಭಟನೇ ಹೇಳದೆ, ಅದರ ಮೊದಲನೆಯ ಪಾದವನ್ನು ಮೂರನೆಯ ಭಟನೂ, ಎರಡನೆಯ ಪಾದವನ್ನು ಎರಡನೆಯ ಭಟನೂ, ಮೂರನೆಯ ಪಾದವನ್ನು ಮೂರನೆಯ ಭಟನೂ, ನಾಲ್ಕನೆಯ ಪಾದವನ್ನು ಆ ಮೂವರೂ, ಹೇಳುವುದು ರಂಗಸ್ಥಳದ ಕಲೆಯ ದೃಷ್ಟಿಯಿಂದ ಬಹು ಚೆನ್ನಾಗಿದೆ. “ವ್ಯಾಸನು ಗಲ್ಲದ ಮೇಲೆ ಬೆರಳನ್ನಿಟ್ಟುಕೊಂಡು ಮುಖವನ್ನು ಮೇಲ ಕ್ಕೆತ್ತಿಕೊಂಡು ನಿಂತಿದ್ದಾನೆ. ಯುಧಿಷ್ಠಿರನು ದೈನ್ಯದಿಂದಿದ್ದಾನೆ. ವಿದು ರನು ಕಣ್ಣೀರನ್ನು ಸುರಿಸುತ್ತ ನಿಂತಿದ್ದಾನೆ. ಅರ್ಜುನನು ಗಾಂಡೀವ

---

* ತೃತೀಯಃ—“ ಏಕಾಗ್ರಾಙ್ಗುಲಿ ಧಾರಿತೋನ್ನತಮುಖೋ ವ್ಯಾಸಃ ಸ್ಥಿತೋ ವಿಸ್ಮಿತಃ

ದ್ವಿತೀಯಃ—ದೈನ್ಯಂ ಯಾತಿ ಯುಧಿಷ್ಠಿರೋಽತ್ರ ವಿದುರೋ ಬಾಷ್ಪಾಕುಲಾ ಕ್ಷಃ ಸ್ಥಿತಃ ।

ತೃತೀಯಃ—ಸ್ಪೃಷ್ಟಂ ಗಾಂಡಿವಮರ್ಜುನೇನ ಗಗನಂ ಕೃಷ್ಣಸ್ಸಮುದ್ವೀಕ್ಷತೇ

ಸರ್ವೇ—ಶಿಷ್ಯಪ್ರೀತಿತಯಾ ಹಲಂ ಭ್ರಮಯತೇ ರಾಮೋ ರಣಪ್ರೇಕ್ಷಕಃ ॥ ”

ಧನುಸ್ಸನ್ನು ಮುಟ್ಟಿ ನೋಡುತ್ತಿದ್ದಾನೆ. ಕೃಷ್ಣನು ಗಗನವನ್ನು ನೋಡು ತ್ತಿದ್ದಾನೆ. ರಣಪ್ರೇಕ್ಷಕನಾದ ಬಲರಾಮನು ಶಿಷ್ಯಪ್ರೀತಿಯಿಂದ ನೇಗಿ ಲನ್ನು ತಿರುಗಿಸುತ್ತಿದ್ದಾನೆ '' ಎಂಬುದು ಆ ಶ್ಲೋಕದ ಅರ್ಥ. ಭಾಸನು ಪಾತ್ರಗಳ ಹೃದಯಗಳನ್ನೇ ವೀಣೆಯಾಗಿ ಮಾಡಿಕೊಂಡು ನುಡಿಸಬಲ್ಲ ಸಾಮರ್ಥ್ಯವಂತನೆಂಬುದಕ್ಕೆ ಆ ಶ್ಲೋಕವು ಉತ್ತಮವಾದೊಂದು ನಿದ ರ್ಶನ. ವಿದುರನು ಕಂಬನಿಯನ್ನು ಸುರಿಸುತ್ತಿರುವಲ್ಲಿ ಯುಧಿಷ್ಠಿರನು ದೈನ್ಯದಿಂದಿದ್ದನೆಂದು ವರ್ಣಿಸಿ, ತನ್ಮೂಲಕ ಯುಧಿಷ್ಠಿರನ ದುಃಖಾವೇಗವು ಕಂಬನಿಯನ್ನು ಸುರಿಸುವ ಅವಸ್ಥೆಯನ್ನೂ ಮೀರಿದ್ದುದನ್ನು ವ್ಯಂಗ್ಯವಾಗಿ ಸೂಚಿಸಿರುವುದಂತು ಬಹಳ ಸ್ವಾರಸ್ಯವಾಗಿ ಅಪ್ರತಿಮ ಮನೋಹರ ವಾಗಿದೆ.

ಭಟರಲ್ಲಿ ಮೊದಲನೆಯವನು ದುರ್ಯೋಧನನನ್ನು ವರ್ಣಿಸಿರು ವಂತೆ * ಊರುಭಂಗದ ದುರ್ಯೋಧನನು ವೀರತ್ವದ ನೆಲೆ; ಅಭಿಮಾನ ವುಳ್ಳವನಾದರೂ ವಿನಯಶೀಲ ; ಅತಿಸಾಹಸಿ. ಭೀಮನು ಕೆಳಗೆ ಬಿದ್ದಿರು ವಾಗ—ಅವನು ಮೂರ್ಛೆಯಿಂದೆಚ್ಚೆತ್ತ ಮೇಲೆ—ವ್ಯಾಜಾಂತರದಿಂದ ಕೃಷ್ಣನು ತೊಡೆಯನ್ನು ತಟ್ಟಿಕೊಳ್ಳುವನು. ದುರ್ಯೋಧನನ ತೊಡೆಗೆ ಹೊಡೆಯಬೇಕೆಂಬ ಈ ಸಂಜ್ಞೆಯಿಂದ ಉತ್ತೇಜಿತನಾದ ಭೀಮನು ಹಣೆಯ ಮೇಲಿನ ಬೆಮರನ್ನೂ ರಕ್ತವನ್ನೂ ಕೈ ಬೆರಳುಗಳಿಂದ ಒರಸಿ ಕೊಳ್ಳುತ್ತ ಉತ್ಸಾಹದಿಂದ ಮೇಲಕ್ಕೆದ್ದು ಮತ್ತೆ ಹೋರಾಟಕ್ಕುಪ ಕ್ರಮಿಸಿ, ಕ್ರೋಧದಿಂದ ಗರ್ಜಿಸುತ್ತ, ಹಲ್ಲುಮುಡಿಯನ್ನು ಕಚ್ಚಿ ದುರ್ಯೋ ಧನನ ತೊಡೆಗೆ ಗದೆಯಿಂದ ಅಪ್ಪಳಿಸಿ ಹೊಡೆಯುವನು. ಭೀಮನು ಮೂರ್ಛಿತನಾಗಿ ಕೆಳಗೆ ಬಿದ್ದಿದ್ದಾಗ ಪ್ರಹರಿಸದೆ ಗದಾಯುದ್ಧ ನಿಯಮಕ್ಕೆ ಕಟ್ಟು ಬಿದ್ದು ತನ್ಮೂಲಕವಾಗಿ ತನ್ನ ಆಭಿಜಾತ್ಯ ಗುಣವನ್ನು ಪ್ರದ ರ್ಶಿಸಿದ ದುರ್ಯೋಧನನು—ತೊಡೆಗೆ ಹೊಡೆಯಕೂಡದೆಂಬ ಗದಾಯುದ್ಧ

---

* " ವೀರ್ಯಾಲಯೋ ವಿವಿಧರತ್ನ ವಿಚಿತ್ರಮೌಲಿ
ರ್ಯುಕ್ತೋಭಿಮಾನ ವಿನಯದ್ಯುತಿ ಸಾಹಸೈಶ್ಚ ! "

* * * *

ನಿಯಮವನ್ನು ಉಲ್ಲಂಘಿಸುವ ಅನ್ಯಾಯಕ್ಕೆ ಲಕ್ಷ್ಯಮಾಡದ-ಭೀಮಸೇನನ ಗದೆಯಿಂದ ಆಹತನಾಗಿ ನೆಲಕ್ಕುರುಳುವನು. ಅದನ್ನು ಕಂಡು ಭಟರು ಮೂವರೂ, "ಹಾ! ಅಯ್ಯೋ! ಮಹಾರಾಜನು ಬಿದ್ದನು" ("ಹಾ, ಧಿಕ್, ಪತಿತೋ ಮಹಾರಾಜಃ") ಎನ್ನುವರು. ಇಲ್ಲಿ, "ಹಾ, ಅಯ್ಯೋ" (ಹಾ, ಧಿಕ್) ಎಂಬ ಪದಗಳು ಪ್ರಯೋಗಿಸಲ್ಪಟ್ಟಿರುವುದೂ ಒಂದು ವಿಶೇಷ. ಇದರಿಂದ ಭಟರ ಅನುತಾಪವು ಸೂಚಿತವಾಗುವುದು. ದುರ್ಯೋಧನನಲ್ಲಿ ಸದ್ಗುಣಗಳಿಲ್ಲದೆ ಕೇವಲ ದುರ್ಗುಣಗಳೇ ತುಂಬಿದ್ದ ಪಕ್ಷಕ್ಕೆ ಅವರೆಂದಿಗೂ ಪರೋಕ್ಷದಲ್ಲಿ ಹಾಗೆ ("ಹಾ, ಧಿಕ್") ಎಂದುಕೊಂಡು ಅನುತಾಪ ಪಡುತ್ತಿರಲಿಲ್ಲ. ಭೂಭಾರವು ಇಳಿಯಿತೆಂದು ಬಹುಶಃ ಅವರು ಮೂವರೂ ಸೂಚಿಸುತ್ತಿದ್ದರೆಂದು ತೋರುವುದು. ಇಷ್ಟಕ್ಕೂ ಅವರಲ್ಲಿ ಮೊದಲನೆಯವನು ದುರ್ಯೋಧನನ ಸದ್ಗುಣಗಳನ್ನು ಬಾಯಿ ತುಂಬ ಕೊಂಡಾಡಿಯೇ ಇದ್ದಾನೆ.

ಭೀಮನು ಅನುಚಿತಕಾರ್ಯವನ್ನೆಸಗಿದುದಕ್ಕಾಗಿ ಬಲರಾಮನು ಕೋಪೋದ್ದೀಪಿತನಾಗುವನು. ರೋಷದ ಆವೇಗದಲ್ಲಿ ಅವನಿಗೆ ಕೆಲವು ಕ್ಷಣಗಳ ಕಾಲ ಏನೂ ತೋರದೆ ಹೋಗಿ, ಅವನು ಕಣ್ಣುಗಳನ್ನು ಮುಚ್ಚಿಕೊಂಡು ನಿಲ್ಲುವನು. ಅವನು ಕಣ್ಣುಗಳನ್ನು ತೆರೆಯುವಷ್ಟರಲ್ಲಿ ಯುದ್ಧರಂಗದಿಂದ ಶಿಬಿರಕ್ಕೆ ಓಡಿಹೋಗದಿದ್ದರೆ ಭೀಮನು ಅವನ ರೋಷಕ್ಕೆ ಬಲಿಯಾಗಬೇಕಾಗುವುದೆಂದು ವ್ಯಾಸರು ಶಂಕಿಸುವರು. ಅಲ್ಲದೆ ಹೊರಡಬೇಕೆಂದು ಭೀಮಾದಿಗಳಿಗೆ ಸಂಜ್ಞೆಮಾಡಿ ಅವರು ಹಾರಿಹೋಗುವರು. ಕೃಷ್ಣನು ಕೂಡಲೆ ಭೀಮನಿಗೆ ಕರಾವಲಂಬನವನ್ನು ಕೊಟ್ಟುಕೊಂಡು ಅತಿಶೀಘ್ರವಾಗಿ ಅವನನ್ನು ಕರೆದುಕೊಂಡು ಹೋಗುವನು. ಉಳಿದ ನಾಲ್ವರು ಪಾಂಡವರೂ ಅವರನ್ನು ಹಿಂಬಾಲಿಸುವರು. ಮಹಾಭಾರತದಲ್ಲಿಯ ಕಥೆಯ ಪ್ರಕಾರ ದುರ್ಯೋಧನನು ತೊಡೆಯು ಮುರಿದು ನೆಲಕ್ಕೆ ಬಿದ್ದಾಗ ನೆಲದಮೇಲೆ ಬಿದ್ದಿರುವ ದುರ್ಯೋಧನನ ತಲೆಯನ್ನು ಭೀಮನು ತನ್ನ ಕಾಲಿನಿಂದ ಒದೆಯುವನು. ಭೀಮಾದಿಗಳಿಗೆ ಬಲರಾಮನ ಭಯವನ್ನು ತಂದಿಟ್ಟು, ಭಾಸಮಹಾಕವಿಯು ಆ ಬಗೆಯ ಅಪಚಾರದ

ಸನ್ನಿವೇಶಕ್ಕೆ ಅವಕಾಶವನ್ನೇ ತಪ್ಪಿಸಿರುವನು. ತೊಡೆ ಮುರಿದು ರಕ್ತ
ಸಿಕ್ತಾಂಗನಾಗಿ ನೆಲಕ್ಕುರುಳಿದ ದುರ್ಯೋಧನನೊಡನೆ ಒಂದು ಮಾತನ್ನೂ
ಆಡದೆ ಬಲರಾಮನು ಕಣ್ಣುಗಳನ್ನು ತೆರೆಯುವುದಕ್ಕೆ ಮೊದಲೇ ವ್ಯಾಸರು
ಹಾರಿಹೋದಂತೆ ಕವಿಯು ಚಿತ್ರಿಸಿದ್ದಾನೆ. ಇದನ್ನು ನೋಡಿದರೆ,
ವ್ಯಾಸರು ಮೊದಲಿನಿಂದಲೂ ಕೇವಲ ಪಾಂಡವ ಪಕ್ಷಪಾತಿಗಳಾಗಿದ್ದು
ದರ ಪರಾಕಾಷ್ಠದಶೆಯನ್ನು ಸೂಚಿಸಿ ಕೊಂಚ ಅಣಕ ಮಾಡುವುದು
ಅವರ ಉದ್ದೇಶವಿರಬಹುದೆ, ಅಥವಾ ವ್ಯಾಸಕೃಷ್ಣರಂತಹವರು ಕೂಡ
ಕ್ಷಣಮಾತ್ರದಲ್ಲಿ ಓಡುವಂತೆ ಮಾಡಿದ ಬಲರಾಮನ ಕೋಪದ ಪ್ರಭಾವ
ವೆಷ್ಟೆಂಬುದನ್ನು ಸೂಚಿಸಿರಬಹುದೆ—ಎಂದು ಸಂದೇಹವುಂಟಾಗುತ್ತದೆ.
ಕ್ರೋಧದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಬಲರಾಮನು ತಮ್ಮ
ಕಡೆಗೆ, ಎಂದರೆ ರಂಗಸ್ಥಳಕ್ಕೆ, ಬರುತ್ತಿರುವುದನ್ನು ಭಟರಲ್ಲಿ ಮೊದಲನೆ
ಯವನು ಸೂಚಿಸುವನು. ಅನಂತರ ಮೂವರು ಭಟರೂ ದುರ್ಯೋ
ಧನನ ಬಳಿಗೆ ಹೋಗಿ ಸೇವೆಮಾಡುವುದಾಗಿ ಮಾತನಾಡಿಕೊಂಡು
ತೆರಳುವರು. ಅಲ್ಲಿಗೆ ವಿಷ್ಕಂಭವು ಮುಗಿಯುವುದು.

ಆ ಬಳಿಕ ಬಲರಾಮನು ಪ್ರವೇಶಿಸಿ, ಶತ್ರು' ಬಲಕ್ಕೆ, ಮೃತ್ಯು
ಸ್ವರೂಪವಾದ ತನ್ನ ಹಲಾಯುಧವನ್ನಾಗಲಿ, ರಣಪ್ರೇಕ್ಷಕನಾಗಿದ್ದ ತನ್ನ
ನ್ನಾಗಲಿ, ಗದಾಯುದ್ಧನಿಯಮವನ್ನಾಗಲಿ ಲಕ್ಷ್ಯಮಾಡದೆ ದುರಹಂಕಾರ
ದಿಂದ ಭೀಮನು ದುರ್ಯೋಧನನ ತೊಡೆಗೆ ಗದೆಯಿಂದ ಹೊಡೆದು (ವಿನಯ
ಶೀಲನಾಗಿದ್ದ ದುರ್ಯೋಧನನನ್ನು ನೆಲಕ್ಕುರುಳಿಸಿ ಆ ಮೂಲಕ) ಕುಲದ
ವಿನಯ ಸಮೃದ್ಧಿಯನ್ನೇ ಉರುಳಿಸಿದನೆಂದು ಗರ್ಜಿಸುವನು. ಒಡನೆಯೇ
ಅವನು, "ಎಲೈ ದುರ್ಯೋಧನ! ಒಂದು ಮುಹೂರ್ತಕಾಲ ಬದುಕಿರು''
ಎಂದು ಕೂಗಿ ಹೇಳಿ, ಬೆಮರಿನಿಂದಲೂ, ರಕ್ತದಿಂದಲೂ ಒದ್ದೆಯಾಗಿ
ರುವ ಭೀಮನ ಎದೆಗೆ ತನ್ನ ಹಲಾಯುಧವನ್ನು ನಾಟಿ ಅವನನ್ನು
ಧ್ವಂಸಮಾಡಿ ಬರುವುದಾಗಿ ಉದ್ಘೋಷಿಸಿ ವೀರತ್ವದಿಂದ ಮತ್ತನಾಗಿ
ನಿಲ್ಲುವನು. ಮಹಾಭಾರತದ ದುರ್ಯೋಧನನಾಗಿದ್ದರೆ ಅಗತ್ಯವಾಗಿ
ಆ ರೀತಿ ಮಾಡಬೇಕೆಂದು ಉತ್ತರ ಹೇಳುತ್ತಿದ್ದನು. ಬಲರಾಮನು

ಆ ರೀತಿ ಭೀಮನನ್ನು ವಧೆಮಾಡುವುದು ಊರು ಭಂಗದ ದುರ್ಯೋಧನನಿಗೆ ಸ್ವಲ್ಪವೂ ಇಷ್ಟವಿಲ್ಲ. ಬಲರಾಮನ ಮಾತುಗಳು ಮುಗಿದೊಡನೆಯೆ ನೇಪಥ್ಯದಿಂದ, "ಭಗವಾನ್ ಹಲಾಯುಧನು ಪ್ರಸನ್ನನಾಗಬೇಕು, ಪ್ರಸನ್ನನಾಗಬೇಕು" ಎಂಬ ಮಾತುಗಳು ಕೇಳಿ ಬರುವುವು. ಬಲರಾಮನು ಆ ಕಡೆ ನೋಡಿ, "ಈ ಅವಸ್ಥೆಗೆ ಗುರಿಯಾಗಿದ್ದೂ ಬಡಪಾಯಿಯಾದ ದುರ್ಯೋಧನನು ನನ್ನ ಕಡೆಗೆ ಬರುತ್ತಿದ್ದಾನೆ. ತೇಜಸ್ವಿಯಾದ ಈತನು ಸಮರಚಂದನವಾದ ರಕ್ತಲೇಪದಿಂದ ಒಪ್ಪಿ (ತೊಡೆಮುರಿದಿರುವ ಕಾರಣದಿಂದ) ಭುಜವನ್ನು ಊರಿ ಮಗುವಿನಂತೆ ತೆವಳಿಕೊಂಡು ಧೂಳಿಧೂಸರವಾಗಿ ಪಾಟಲವರ್ಣದಿಂದ ಕಾಣುತ್ತಿರುವ ಭುಜವುಳ್ಳವನಾಗಿ ಸಮುದ್ರಮಥನವು ಮುಗಿದ ಮೇಲೆ ದೇವಾಸುರರು ಮಂದರಪರ್ವತದಿಂದ ತೆಗೆದು ಸಮುದ್ರಕ್ಕೆ ಬಿಟ್ಟ ವಾಸುಕಿಯು ಸಮುದ್ರದ ನೀರಿನಲ್ಲಿ ಶ್ರಮದಿಂದ ಹೆಡೆಯನ್ನೆಳೆದುಕೊಂಡು ಸಂಚರಿಸಿ ಕಷ್ಟಪಟ್ಟಹಾಗೆ (ತಲೆಯನ್ನೆತ್ತಿಕೊಂಡು) ಬರುತ್ತಿದ್ದಾನೆ" ಎಂದು * ಹೇಳಿ ಸಂಕಟಪಡುತ್ತಾನೆ. ಆತನ ವರ್ಣನೆಯಿಂದ ಮನಮರುಗದಿರುವುದಾರಿಗೂ ಸಾಧ್ಯವಿಲ್ಲ. ಆ ಬಳಿಕ ನಡೆಯುವ ಸಂಗತಿಗಳಿಂದಲಂತು, ಅಂತಃಕರಣವೇ ಕರಗಿ ನೀರಾಗುವುದು.

ದುರ್ಯೋಧನನ ಸಂಸ್ಕಾರವಾದರೂ ಎಷ್ಟು ಉಚ್ಚತರಗತಿಯದು! ಆಗಿನ ವಿಪನ್ನಾವಸ್ಥೆಯಲ್ಲಿ ಕೂಡ, ಅವನು ಭೀಮನನ್ನು ದೋಷದಿಂದ ದೂಷಿಸಿ ಪ್ರಲಾಪಿಸುವುದೇ ಇಲ್ಲ. ಅವನು, "ಇದೋ ನಾನು! ಭೀಮನು ಗದಾಯುದ್ಧ ನಿಯಮವನ್ನುಲ್ಲಂಘಿಸಿ ಗದೆಯಿಂದ ಹೊಡೆದು ತೊಡೆಗಳೆರಡೂ ಜರ್ಜರಿಸಿ ಹೋಗುವಂತೆ ಮಾಡಿರುವಲ್ಲಿ ನೆಲದಮೇಲೆ ಭುಜಗಳಿಂದ ತೆವಳುತ್ತ (ಆಗಲೇ) ಮೃತವಾಗಿರುವ ದೇಹಾರ್ಧದೊಡನೆ

---

* "ಶ್ರೀಮಾನ್ ಸಂಯುಗ ಚಂದನೇನ ರುಧಿರೇಣಾರ್ದ್ರಾನುಲಿಪ್ತಚ್ಛವಿ
ಭೂಸಂಸರ್ಪಣ ರೇಣು ಪಾಟಲ ಭುಜೋ ಬಾಲವ್ರತಂ ಗ್ರಾಹಿತಃ |
ನಿರ್ವೃತ್ತೇಽಮೃತ ಮಂಥನೇ ಕ್ಷಿತಿಧರಾನ್ಮುಕ್ತ ಸ್ಸುರೈಸ್ಸಾಸುರೈ
ರಾಕರ್ಷನ್ನಿವ ಭೋಗಮರ್ಣವಜಲೇ ಶ್ರಾನ್ತೋಜ್ಝಿತೋ ವಾಸುಕಿಃ ||"

ಕೂಡಿದ್ದೇನೆ" * ಎಂದು ಮಾತ್ರವೇ ಹೇಳಿ ತನ್ನ ದೊಡ್ಡತನವನ್ನು ತೋರಿಸಿಕೊಳ್ಳುತ್ತಾನೆ. ಅನಂತರ ದುರ್ಯೋಧನನು ಅತಿ ಕಷ್ಟದಿಂದ ತೆವಳಿಕೊಂಡು ಹಲಾಯುಧನನ್ನು ಸಮೀಪಿಸಿ; "ಭಗವಾನ್ ಹಲಾಯುಧನು ಪ್ರಸನ್ನನಾಗಬೇಕು, ಪ್ರಸನ್ನನಾಗಬೇಕು. (ಮೇಲಕ್ಕೇಳಲಾರದೆ) ಭೂಮಿಯಲ್ಲಿ ಬಿದ್ದಿರುವ ನಾನು ನನ್ನ ತಲೆಯನ್ನು ನಿನ್ನ ಚರಣಗಳ ಮೇಲಿಟ್ಟು ಕೇಳಿಕೊಳ್ಳುವೆನು. ಇಂದು ನೀನು ಈ ರೋಷವನ್ನು ಮೊದಲು ಬಿಟ್ಟುಬಿಡು. ಕುರುಕುಲದಲ್ಲಿ ಉತ್ತರಕ್ರಿಯೆಗಳಿಗೆ ಮೇಘಸ್ವರೂಪರಾಗಿರುವ (ಎಂದರೆ ನೀರೆರೆಯುವ ಮೇಘದಂತಿರುವ) ಅವರು ಜೀವಿಸಿರಲಿ. ವೈರವೂ ಹೋಯಿತು. ಯುದ್ಧದ ಕಥೆಯೂ ಪೂರೈಸಿತು. ನಾನೂ ಮೃತನಾಗುವುದರಲ್ಲಿದ್ದೇನೆ" ಎಂದು † ಹೇಳುವನು. ಹೀಗೆ ಹೇಳುವುದು ಸದ್ಗುಣವಂತರಲ್ಲದ ಸಾಮಾನ್ಯರಿಂದ ಸಾಧ್ಯವೆ? ತಾನು ಪಾಂಡವರಿಗೆ ಅನ್ಯಾಯಮಾಡಿದಾಗಿನಿಂದಲೂ ಅವನ ಮನಸ್ಸಿನಲ್ಲಿ ಎಷ್ಟು ಮಟ್ಟಿನ ಭಾವಗಳ ಒಳತೋಟಿಯು ಮಸಗಿ, ಕೊನೆಗೆ ಅವನ ಮನಸ್ಸು ಈ ಪರಿಪಕ್ವಸ್ಥಿತಿಗೆ ಬಂದಿರಬೇಕು! ಊರುಭಂಗದ ದುರ್ಯೋಧನನು ಯುದ್ಧದಲ್ಲಿ ಹೊಡೆದಾಡಿದುದು ಕೂಡ ಮಾನಕ್ಕಾಗಿಯೇ ಹೊರತು ಮತ್ತಾವ ಹೇಯವಾದ ಉದ್ದೇಶದಿಂದಲೂ

---

* "ಏಷ ಭೋಃ !

ಭೀಮೇನ ಭಿತ್ತ್ವಾ ಸಮಯವ್ಯವಸ್ಥಾಂ
ಗದಾನಿಪಾತ ಕ್ಷತ ಜರ್ಜರೋರುಃ ।
ಭೂಮೌ ಭುಜಾಭ್ಯಾಂ ಪರಿಕೃಷ್ಯಮಾಣಂ
ಸ್ವಂ ದೇಹಮರ್ಧೋಪರತಂ ವಹಾಮಿ ॥ "

† "ಪ್ರಸೀದತು ಪ್ರಸೀದತು ಭಗವಾನ್ ಹಲಾಯುಧಃ ।
ತ್ವತ್ಪಾದಯೋರ್ನಿಪತಿತಂ ಪತಿತಸ್ಯ ಭೂಮಾ
ವೇತಚ್ಛಿರಃ ಪ್ರಥಮಮುದ್ಯ ವಿಮುಂಚ ರೋಷಮ್ ।
ಜೀವನ್ತು ತೇ ಕುರುಕುಲಸ್ಯ ನಿವಾಪ ಮೇಘಾ
ವೈರಂ ಚ ವಿಗ್ರಹಕಥಾ ಚ ವಯಂ ಚ ನಷ್ಟಾಃ ॥ "

ಅಲ್ಲ. ಧೃತರಾಷ್ಟ್ರನು ಮುಂದೆ ಅವನನ್ನು, "ಕುಲಮಾನಿ" ಎಂದು ಕರೆಯುವನು. ತನಗಾಗಿ ದುಃಖಿಸಕೂಡದೆಂದು ತಂದೆಗೆ ತಿಳಿಸುವಲ್ಲಿ ಅವನು, "ಯಾವ ಮಾನವನ್ನು ಜೊತೆಯಲ್ಲಿಟ್ಟುಕೊಂಡು ಹುಟ್ಟಿದೆನೋ, ಅದೇ ಮಾನದಿಂದಲೇ ಕೂಡಿ ಸ್ವರ್ಗಲೋಕಕ್ಕೆ ಹೋಗುತ್ತೇನೆ" ("ಏನ್ನೈವ ಮಾನೇನ ಸಮಂ ಪ್ರಸೂತಸ್ತೇನೈವ ಮಾನೇನ ದಿವಂ ಪ್ರಯಾಮಿ") ಎಂದು ಹೇಳುವನು. ಅಲ್ಲದೆ ಮುಂದೆ ತನ್ನ ಪತ್ನಿಯಾದ ಪೌರವಿಯನ್ನು ಸಂತೈಸುವಾಗ, ತಾನು ಮಾನಿಯೆಂಬುದನ್ನು ಸೂಚಿಸುವನು. ಅವನು ಅಶ್ವತ್ಥಾಮನೊಡನೆ ಕೂಡ, "ರಾಜರು ಮಾನಶರೀರರು" ("ಮಾನ ಶರೀರಾ ರಾಜಾನಃ") ಎಂದು ಹೇಳಿ ತಾನು ಮಾನಧನನೆಂಬುದನ್ನು ಸೂಚಿಸುವನು. ತಾನು ಆ ಮಾನದ ಸಲುವಾಗಿ ಹೋರಾಡಿದವನೆಂದು ಬಾಯಿಬಿಟ್ಟು ಹೇಳುವನು. ಅವನಿಗೆ ತಾನು ಕೆಳಗೆ ಬಿದ್ದ ಬಳಿಕ ಶತ್ರುಗಳ ಮೇಲೆ ಇತರರು ಸೇಡುತೀರಿಸಬೇಕೆಂಬ ಆಕ್ರೋಶವೇ ಇಲ್ಲ. ಆದುದರಿಂದಲೇ ಬಲರಾಮನೊಡನೆ ಅವನು ಹಾಗೆ ಹೇಳುವುದು.

ಆದರೂ ಬಲರಾಮನ ಕೋಪವು ಇಳಿಯುವುದಿಲ್ಲ. ಬಲರಾಮನು ಅವನನ್ನು ಮುಹೂರ್ತಕಾಲ ಜೀವವನ್ನು ಬಿಗಿಹಿಡಿದುಕೊಂಡಿರುವಂತೆ ಹೇಳುವನು. ದುರ್ಯೋಧನನು ಹಲಾಯುಧನನ್ನು, "ನೀನೇನು ಮಾಡುವೆ ?" ಎಂದು ಕೇಳುವನು. ತನ್ನ ಆಯುಧಕ್ಕೆ ಪಾಂಡವರನ್ನು ಬಲಿಕೊಟ್ಟು, ಅವರ ರಥಾಶ್ವಗಜಗಳನ್ನು ಧ್ವಂಸಮಾಡಿ ಬರುವುದಾಗಿ ಬಲರಾಮನು ಉತ್ತರಕೊಡುವನು. ಆಗ ದುರ್ಯೋಧನನು "ಕೂಡದು ಕೂಡದು, ನೀನು ಹಾಗೆ ಮಾಡಕೂಡದು. ಭೀಮನ ಪ್ರತಿಜ್ಞೆಯು ನೆರವೇರಿತು. ನನ್ನ ನೂರ್ವರು ಸಹೋದರರೂ ಮೃತರಾದರು. ನಾನೂ ಹೀಗೆ ದುರವಸ್ಥೆಗೊಳಗಾಗಿ ಮೃತನಾಗುವುದರಲ್ಲಿದ್ದೇನೆ. ನಾನೂ ಮೃತನಾದ ಮೇಲೆ, ಇನ್ನು ಯುದ್ಧದಿಂದೇನು ಪ್ರಯೋಜನ ? * ಎಂದು

---

* "ಮಾ ಮಾ ಭವಾನೇವಂ ।
ಪ್ರತಿಜ್ಞಾವಸಿತೇ ಭೀಮೇ ಗತೇ ಭ್ರಾತೃಶತೇ ದಿವಂ ।
ಮಯಿಚೈವಂ ಗತೇ ರಾಮ ! ವಿಗ್ರಹಃ ಕಿಂ ಕರಿಷ್ಯತಿ ॥"

ಹೇಳುವನು. ಅದಕ್ಕೆ ಬಲರಾಮನು, "ನನ್ನೆದುರಿಗೇ ನೀನು ವಂಚಿತನಾದೆಯಲ್ಲಾ-ಎಂಬುದಾಗಿ ನನಗೆ ರೋಷವುಂಟಾಗಿದೆ" ("ಮತ್ಪ್ರತ್ಯಕ್ಷಂ ವಂಚಿತೋ ಭವಾನಿತ್ಯುತ್ಪನ್ನೋ ಮೇ ರೋಷಃ") ಎಂದು ಉತ್ತರ ಹೇಳುವನು. ಬಳಿಕ ದುರ್ಯೋಧನನು ತಾನು ವಂಚಿತನಾಗಲಿಲ್ಲವೆಂದೂ, ತಾನು ಮಾಡಿದ ಅಕೃತ್ಯಗಳಿಗೆ ತನ್ನ ಪ್ರಾಣಗಳು ಎಂದೋ ಹೊಣೆಯಾಗಿ ಪಣವಾಗಿದ್ದುವೆಂದೂ, ತಾನು ಛಲದಿಂದ ಚೋದಿತನಾಗಿ, ಕೊನೆಗೂ ಛಲದಿಂದ ಪರಾಜಿತನಾಗಿ, ಛಲಕ್ಕೆ ಅಧೀನನಾಗಿ ಲಾಕ್ಷಾಗೃಹ ದಹನವೇ ಮುಂತಾದ ಘೋರಕರ್ಮಗಳನ್ನಾಚರಿಸಿ ಪರಿಣಾಮದಲ್ಲಿ ದುರವಸ್ಥೆಗೊಳಗಾದುದಾಗಿಯೂ, ಛಲವು ತನ್ನನ್ನು ಜಯಿಸಿತೇ ಹೊರತು ತನ್ನನ್ನು ಯಾರೂ ಜಯಿಸಿದಂತಾಗಲಿಲ್ಲವೆಂದೂ ಉತ್ತರ ಹೇಳುವನು. ಬಳಿಕ ಬಲರಾಮನು, "ನಿನ್ನನ್ನು ವಂಚನೆಯಿಂದ ಜಯಿಸಿದ ಭೀಮಸೇನನು ಹೋಗುತ್ತಿರುವನು, ನೋಡು" ಎನ್ನುವನು. ಆಗ ತಾನು ಭೀಮನಿಂದ ವಂಚಿತನಾಗಲಿಲ್ಲವೆಂದೂ, ಇಂದ್ರನ ಪಾರಿಜಾತ ವೃಕ್ಷವನ್ನು ಕೂಡ ತಂದ ಜಗತ್ಪ್ರಿಯನಾದ ಹರಿಯಿಂದ ಭೀಮನ ಗದಾಪ್ರಹಾರ ಮುಖದಿಂದ ಮೃತ್ಯುವಿಗೆ ಒಪ್ಪಿಸಲ್ಪಟ್ಟುದಾಗಿಯೂ ದುರ್ಯೋಧನನು ತಿಳಿಸುವನು. ಈ ಮಾತುಗಳನ್ನೆಲ್ಲಾ ಹೇಳಬೇಕಾದರೆ ಅವನ ಮನಸ್ಸು ಎಷ್ಟು ಮಟ್ಟಿನ ಪಶ್ಚಾತ್ತಾಪದಿಂದ ದಗ್ಧವಾಗಿ ಹೋಗಿರಬೇಕು! ತಾನು ಛಲಕ್ಕಧೀನನಾಗಿ-ಪ್ರಾಣವನ್ನಾದರೂ ಬಲಿಯಾಗಿ ಅರ್ಪಿಸಿ ತನ್ನ ಮಾನಕ್ಕೆ ಚ್ಯುತಿಬಾರದಂತೆ ನೋಡಿಕೊಳ್ಳುವ ಛಲಕ್ಕಧೀನನಾಗಿ- ನಡೆಯಿಸುತ್ತಿದ್ದ ಘೋರಕೃತ್ಯಗಳು ಪಾಪಹೇತುವೆಂದು ಹಲವು ಸಾರಿ ಆ ಮಾನಧನನಿಗೆ ತೋರಿ ಬಂದಿರಬೇಕು. ಅವನು ಭಾವವೈವಿಧ್ಯದ ಒಳತೋಟಿಯಿಂದ ಬೆಂದು ಹೋಗಿರಬೇಕು.

ಅಂತು, ಅವನು ಆ ಮಾತುಗಳನ್ನು ಮುಗಿಸುವ ವೇಳೆಗೆ ಧೃತರಾಷ್ಟ್ರನೂ, ಗಾಂಧಾರಿಯೂ, ಮಗನನ್ನು ಹುಡುಕಿಕೊಂಡು ಅಲ್ಲಿಗೆ ಬರುವರು. ಅವರೊಡನೆ ದುರ್ಯೋಧನನ ಮಗನಾದ ದುರ್ಜಯನೂ ಬರುವನು. ದುರ್ಯೋಧನನ ಇಬ್ಬರು ಪತ್ನಿಯರೂ ಬರುವರು. ದುರ್ಯೋಧ

ನನು ವಂಚನಾನಿಹತನಾಗಿ ಬಿದ್ದ ಸಂಗತಿಯು ಧೃತರಾಷ್ಟ್ರನ ಕಿವಿಗೂ ಬಿದ್ದಿರುವುದು. ಅವನು ಬಹಳವಾಗಿ ವ್ಯಥೆಪಡುತ್ತ ಮಗನನ್ನು ಹುಡುಕಿಕೊಂಡು ಸಮರಭೂಮಿಯಲ್ಲಿ ಅವನನ್ನು ಕೂಗುತ್ತ ಬರುವನು. ಗಾಂಧಾರಿಯೂ ದುಃಖಪಡುತ್ತ, "ಮಗುವೆ! ನನಗೆ ಮಾರುತ್ತರವನ್ನು ಹೇಳು" ಎಂದು ಕೂಗುತ್ತ ಬರುವಳು. ಅವರೆಲ್ಲರೂ ದುರ್ಯೋಧನನನ್ನು ಹುಡುಕಿಕೊಂಡು ಬಂದು ಅವನೊಡನೆ ಮಾತನಾಡುವ ಸನ್ನಿವೇಶವನ್ನು ಭಾಸಮಹಾಕವಿಯೇ ಕಲ್ಪಿಸಿದ್ದಾನೆ. ದೃಶ್ಯಕಾವ್ಯವಾದ ರೂಪಕದ ದೃಷ್ಟಿಯಿಂದ ಈ ಮಾರ್ಪಾಡು ರಮಣೀಯವಾಗಿದೆ. ಧೃತರಾಷ್ಟ್ರನು ಯಮನನ್ನುದ್ದೇಶಿಸಿ, "ಎಲೈ ಕೃತಾಂತಹತಕ, ಮಾನವೀರ್ಯಪ್ರದೀಪ್ತರಾಗಿ ಸಮರಪಂಡಿತರಾಗಿ ವೀರಾಗ್ರಣಿಗಳಾದ ನೂರು ಮಂದಿ ಪುತ್ರರನ್ನು ಪಡೆದೂ, ಒಬ್ಬ ಮಗನು ಒಂದು ಸಾರಿ ಬಿಟ್ಟ ತಿಲತರ್ಪಣೋದಕವನ್ನು ಪಾನಮಾಡುವುದಕ್ಕೂ ಮಾನಿಯಾದ ಈ ಧೃತರಾಷ್ಟ್ರನು ಯೋಗ್ಯನೆನಿಸದೆ ಹೋದನೆ?'' ಎಂದು ಹೇಳುವುದನ್ನು ನೋಡಿ ನಮ್ಮ ಹೃದಯವು ಅನುತಾಪದಿಂದ ತುಂಬಿಹೋಗುವುದು. ಧೃತರಾಷ್ಟ್ರನು ಮಗನನ್ನು ಕೂಗುತ್ತ, "ಮಗು, ದುರ್ಯೋಧನ, ಹದಿನೆಂಟು ಅಕ್ಷೌಹಿಣೀ ಸೈನ್ಯದ ಮಹಾರಾಜ! ಎಲ್ಲಿರುವೆ?" ("ಪುತ್ರ! ದುರ್ಯೋಧನ! ಅಷ್ಟಾದಶಾಕ್ಷೌಹಿಣೀ ಮಹಾರಾಜ! ಕ್ವಾಸಿ") ಎಂದು ಕೂಗಿದುದು ದುರ್ಯೋಧನನ ಕಿವಿಗೆ ಬೀಳುವುದು. ಆದರೂ, ಅವನು—ಮಾನಧನನಾದ ಆ ವೀರಪುರುಷನು—ತನ್ನ ಆಗಿನ ಸ್ಥಿತಿಯಲ್ಲಿ ತಂದೆಗೆ ಮಾರುತ್ತರ ಹೇಳುವುದಕ್ಕೂ ಲಜ್ಜೆಪಟ್ಟು ಸುಮ್ಮನಿರುವನು. ಅಲ್ಲದೆ ಅವನು ತನ್ನಲ್ಲಿ ತಾನು, "ಇಪ್ಪೊತ್ತೀಗ ಮಹಾರಾಜನಾಗಿದ್ದೇನೆ'' ("ಅದ್ಯಾಸ್ಮಿ ಮಹಾರಾಜಃ'') ಎಂದುಕೊಳ್ಳುವನು. ತನ್ನ ಸೋಲಿಗಾಗಿ ಅವನು ಎಷ್ಟು ಲಜ್ಜಿತನಾಗಿ, ತಾನು ಛಲವನ್ನು ಮೆರೆದುದಕ್ಕಾಗಿ ಎಷ್ಟು ಮರ್ಮಾಹತನಾಗಿ, ಪದವಿ ಪ್ರತಿಷ್ಠೆಗಳ ಕ್ಷಣಭಂಗುರತೆಯನ್ನು ಎಷ್ಟುಮಟ್ಟಿಗೆ ಮನಗಂಡು ಈ ಮಾತುಗಳನ್ನು ನುಡಿದಿರಬೇಕು! ಧೃತರಾಷ್ಟ್ರನು ಆ ಬಳಿಕ, "ಮಗನೆ, ಬಾ ಬಾ ನನಗೆ ನಮಸ್ಕರಿಸು, ಬಾ'' (ಏಹಿ ಪುತ್ರ! ಅಭಿವಾದಯಸ್ವ ಮಾಂ'') ಎನ್ನುವನು. ದುರ್ಯೋಧನನು ವಾಡಿಕೆಯಾಗಿ ಬಂದು

ಬಂದು ನಮಸ್ಕರಿಸುತ್ತಿದ್ದುದನ್ನು ನೆನೆದು ದುಃಖಾರ್ತನಾಗಿ ಧೃತರಾಷ್ಟ್ರನು ಹಾಗೆ ಹೇಳುವನು. ಅದನ್ನು ಕೇಳಿ, ದುರ್ಯೋಧನನು ತಾನು ತಂದೆಗೆ ನಮಸ್ಕರಿಸಲಿಲ್ಲವಲ್ಲಾ—ಎಂದು ವಿದ್ಯುತ್‌ಸ್ಪೃಷ್ಟನಾದವನಂತೆ ಧಿಗ್ಗನೆದ್ದು ನಮಸ್ಕರಿಸಲಿಚ್ಛಿಸುವನು. "ಇದೋ, ಇದೋ, ಬಂದೆ" ("ಅಯಮಯಮಾಗಚ್ಛಾಮಿ") ಎಂದು ಹೇಳಿ, ಮೇಲಕ್ಕೇಳಲು ಪ್ರಯತ್ನಿಸುವನು. ಮಾತಾಪಿತೃಗಳಿಗೆ ಅಭಿವಂದಿಸಬೇಕೆಂಬ ಉತ್ಸಾಹಭರದಲ್ಲಿ ತನ್ನ ತೊಡೆಗಳು ಮುರಿದುಹೋಗಿರುವುದೇ ಅವನ ಗಮನಕ್ಕೆ ಬರುವುದಿಲ್ಲ. ಉತ್ಸಾಹಭರದಲ್ಲಿ ಏಳಹೋದವನು ಹಾಗೆಯೇ ಬೀಳುವನು. ಆಗ, "ಅಯ್ಯೋ! ಇದು ನನಗೆ ಎರಡನೆಯ ಪ್ರಹಾರ. ಅಯ್ಯೋ ಕಷ್ಟ, ಕಷ್ಟ" ("ಹಾ ಧಿಕ್ | ಅಯಂ ಮೇ ದ್ವಿತೀಯಃ ಪ್ರಹಾರಃ | ಕಷ್ಟಂ ಭೋಃ | ") ಎಂದುಕೊಳ್ಳುವನು. ಗುರುಜನರ ಪಾದಾಭಿವಂದನೆಗೆ ಅವಕಾಶ ತಪ್ಪಿತಲ್ಲಾ—ಎಂದು ಅವನು ವ್ಯಥೆಪಡುವನು. ಗುರುವಾದ ಬಲರಾಮನನ್ನು 'ಭಗವಾನ್' ಎಂದು ಅವನು ಸಂಬೋಧಿಸುವನು. ಗುರುಜನರಲ್ಲಿ ಅವನಿಗಿರುವ ಭಕ್ತಿ ಗೌರವಗಳು ಸ್ತುತ್ಯವಾದವುಗಳು.

ದುರ್ಜಯನು ಇನ್ನೂ ಬಹಳ ಚಿಕ್ಕ ವಯಸ್ಸಿನ ಬಾಲಕ. ಅವನು ತಮ್ಮ ತಾತನ ಬಟ್ಟೆಯ ತುದಿಯನ್ನು ಹಿಡಿದು ಎಳೆಯುತ್ತಿರುವನು. ಈ ಅಂಶವು ಸ್ವಾಭಾವಿಕವಾಗಿ ಎಷ್ಟು ರಮಣೀಯವಾಗಿದೆ! ದುರ್ಯೋಧನನಿಗೆ ದುರ್ಜಯನೆಂಬ ಚಿಕ್ಕವಯಸ್ಸಿನ ಮಗನಿದ್ದ ಸಂಗತಿಯು ಮಹಾಭಾರತದಲ್ಲಿಲ್ಲ ಅದು ಭಾಸಕವಿಯ ಕಲ್ಪನೆ. ಅದರಿಂದಲೂ ಅವನ ಸಂವಿಧಾನ ಕೌಶಲವು ವ್ಯಕ್ತವಾಗುತ್ತದೆ. ಚಿಕ್ಕವಯಸ್ಸಿನ ಆ ಬಾಲಕನು ತಂದೆಯನ್ನು ಕಳೆದುಕೊಳ್ಳುವ ಸನ್ನಿವೇಶವು ಕರುಳನ್ನೇ ಕೊರೆಯುವಂತಿದೆ. (ಲಕ್ಷ್ಮಣನೆಂಬ ತರುಣವಯಸ್ಸಿನ ಕುಮಾರನಿದ್ದು ಅವನು ಯುದ್ಧದಲ್ಲಿ ಮೃತನಾದನೆಂದು ಮಹಾಭಾರತದಲ್ಲಿ ಹೇಳಿದೆ.) ಧೃತರಾಷ್ಟ್ರನಿಗೆ ದುಃಖಭರದಲ್ಲಿ ಯುಕ್ತಾಯುಕ್ತ ವಿವೇಚನೆಯೇ ಇಲ್ಲವಾಗಿದೆ. ಏಕೆಂದರೆ, ದುರ್ಯೋಧನನನ್ನು ಹುಡುಕುವಂತೆ ಅವನು ದುರ್ಜಯನಿಗೆ ಹೇಳುವನು. ದುರ್ಜಯನಿಗಾದರೋ ಸುತ್ತಿ ಸುತ್ತಿ ಕಾಲುನೋವು.

ದುರ್ಜಯನು ತಾನು ದಣಿದುಹೋಗಿರುವುದಾಗಿ ತಿಳಿಸುವನು. ಧೃತ ರಾಷ್ಟ್ರನು ಅಲ್ಲಿಗೂ ಬಿಡದೆ—ಮಗುವಾದ ದುರ್ಜಯನನ್ನು ಆದರಿಸದೆ— "ಹುಡುಕು ನಡೆ. ಆಬಳಿಕ ನೀನು ತಂದೆಯ ತೊಡೆಯನ್ನೇರಿ ವಿಶ್ರಮಿಸಿ ಕೊಳ್ಳಬಹುದು." ("ಗಚ್ಛ, ಪಿತುರಂಕೇ ವಿಶ್ರಮಿಷ್ಯಸಿ") ಎಂದು ಹೇಳುತ್ತಾನೆ. ಪಾಪ! ದುರ್ಜಯನು, "ತಾತ! ನಾನು ಹೋಗುವೆನು" ಎಂದು ಹೇಳಿ, (ಮುಂದೆಬಂದು) "ತಂದೆಯೆ, ಎಲ್ಲಿರುವೆ?" ಎಂದು ಕೂಗುತ್ತ ದುರ್ಯೋಧನನನ್ನು ಹುಡುಕಲು ಹೊರಡುವನು. ಮಗನು ತನ್ನ ಬಳಿಗೆ ಬರುತ್ತಿರುವುದನ್ನು ನೋಡಿ, ಆಗಿನ ಅವಸ್ಥೆಯಲ್ಲಿಯೂ ದುರ್ಯೋಧನನು ತನ್ನನ್ನು ಪುತ್ರಸ್ನೇಹವು ದಹಿಸುತ್ತಿರುವುದಾಗಿ ಹೇಳಿ ಕೊಳ್ಳುವನು. ದುರ್ಜಯನು ತಂದೆಯನ್ನು ಕಂಡು, ಎಂದಿನಂತೆ ಆದರ ದಿಂದ ಅವನ ತೊಡೆಯನ್ನೇರುವನು. ದುರ್ಯೋಧನನಿಗೆ ಅದರಿಂದ ಚಿತ್ರಹಿಂಸೆ. ತೊಡೆಯಮೇಲೆ ಹತ್ತಿ ಪ್ರೀತಿಯನ್ನು ತೋರಿಸಿದ ಮಗ ನನ್ನು ಮುದ್ದಿಸಲು ಅವನಿಗೆ ಸಾಧ್ಯವಿಲ್ಲ. ದುರ್ಯೋಧನನು ಅವನನ್ನು ನಿವಾರಿಸಿ, "ದುರ್ಜಯ, ದುರ್ಜಯ" ಎನ್ನುವನು. ತನಗೆ ನೋವೆಂದು ತಿಳಿಸಲು ಆ ಮಾನಧನನಿಗೆ ಇಷ್ಟವಿಲ್ಲ. ಹೀಗೆ ಮಗನನ್ನು ಕೂಗಿ ನಿವಾರಿಸಬೇಕಾಗಿ ಬಂದ ಸಂಕಟದ ಜ್ವಾಲೆಯು ಹೃದಯದಿಂದ ಭಗ್ಗನೆ ಏಳುವುದು. ಆಗ, ದುರ್ಯೋಧನನು ಬೆಂಕಿಯಲ್ಲಿ ಬಿದ್ದ ಹುಳುವಿನಂತೆ ಪರಿತಪಿಸುತ್ತ, "ಅಯ್ಯೋ ಕಷ್ಟ! ದುರ್ಜಯನು ಪ್ರೀತಿಯನ್ನು ಹೀಗೆ ಪ್ರದರ್ಶಿಸುತ್ತಿದ್ದುದು ನನ್ನ ಕಣ್ಣಿಗೆ ಹಬ್ಬವೇ ಆಗುತ್ತಿದ್ದಿತು. ಚಂದ್ರನಂತಿದ್ದ ಅದೇ ಪ್ರೀತಿಜನನವೇ ಕಾಲವಿಪರ್ಯಾಸದ ದೆಸೆಯಿಂದ ಈಗ ಬೆಂಕಿಯ ಸಾದೃಶ್ಯವನ್ನು ಹೊಂದಿದೆ"* ಎಂದು ಸಂಕಟಪಡುವನು.

ಆ ಬಳಿಕ ತಂದೆ ಮಕ್ಕಳಿಗೆ ನಡೆಯುವ ಸಂಭಾಷಣೆಯು ಹೃದಯ ವೇಧಕವಾಗಿದೆ. ಕಲಾಸೌಂದರ್ಯದ ದೃಷ್ಟಿಯಿಂದ ಈ ಪ್ರಪಂಚದಲ್ಲಿ

---

* "ಭೋಃ ಕಷ್ಟಂ!

ಹೃದಯಪ್ರೀತಿಜನನೋ ಯೋ ಮೇ ನೇತ್ರೋತ್ಸವಃ ಸ್ವಯಂ ।
ಸೋಽಯಂ ಕಾಲವಿಪರ್ಯಾಸಾಚ್ಚಂದ್ರೋ ವಹ್ನಿತ್ವಮಾಗತಃ ॥"

ಆಚಂದ್ರಾರ್ಕವಾಗಿ ಬಾಳುವ ಉತ್ತಮ ಸಾಹಿತ್ಯದೊಡನೆ ಅದೂ ಸೇರ ತಕ್ಕುದಾಗಿದೆ. ದುರ್ಜಯನಿಗೆ ಒಂದೂ ತಿಳಿಯದು. ಅವನಿಗೆ ತನ್ನ ಸ್ಥಿತಿಯನ್ನು ತಿಳಿಸಲು ದುರ್ಯೋಧನನಿಗೆ ಇಷ್ಟವಿಲ್ಲ. ಔಚಿತ್ಯವನ್ನರಿತ ವಿವೇಕಿಯಲ್ಲವೇ ಅವನು! ದುರ್ಜಯನು ತನ್ನ ಬಾಲಭಾವದ ಚಾಪಲ್ಯ ದಿಂದ, "ತೊಡೆಯ ಮೇಲೆ ಕೂತುಕೊಳ್ಳದ ಹಾಗೆ ನೀನು ಅಡ್ಡಿಮಾಡು ವುದೇಕೆ?" ("ಅಂಕೇ ಉಪವೇಸಂ ಕಿಂ ಣಿಮಿತ್ತಂ ತುವಂ ವಾರೇಸಿ!") ಎಂದು ಕೇಳುವನು. ದುರ್ಯೋಧನನು ದುಃಖಾಗ್ನಿಯಿಂದ ಪರಿತಪ್ತ ನಾಗಿ, "ಮಗು, ನೀನು ಹಿಂದಿನಿಂದ ಕುಳಿತುಕೊಳ್ಳುತ್ತಿದ್ದ ಈ ತೊಡೆ ಯನ್ನು ಬಿಟ್ಟು (ಬೇಕಾದಕಡೆ) ಅಲ್ಲಲ್ಲಿ ಕುಳಿತುಕೊ. ಮುಂಚೆ ನೀನು ಅನುಭವಿಸುತ್ತಿದ್ದ ಈ ಸುಖಾಸನವು ಇವೊತ್ತಿನಿಂದ ನಿನಗಿಲ್ಲ" * ಎಂದು ಹೇಳುವನು. ಇದು ಪುಟ್ಟ ದುರ್ಜಯನ ಮನಸ್ಸಿಗೆ ಅರ್ಥವಾಗದು. "ಇನ್ನು ಮುಂದೆ ನಿನಗೆ ಎಂದಿನಂತೆ ಏರಿ ಆಟವಾಡಲು ಈ ತೊಡೆಯು ದೊರೆಯುವಹಾಗಿಲ್ಲ." ಎಂದು ತಂದೆಯು ಹೇಳಿದುದನ್ನು ಕೇಳಿ, ಬಹುಶಃ ತಮ್ಮ ತಂದೆಯು ಊರನ್ನು ಬಿಟ್ಟು ಎಲ್ಲಿಗೋ ಹೋಗಬಹು ದೆಂದು ನಿರ್ಧರಿಸಿ, "ಹಾಗಾದರೆ ನೀನು ಎಲ್ಲಿಗೆ ಹೋಗುವೆ?" ಎಂದು ಅವನು ಕೇಳುವನು. ದುರ್ಯೋಧನನು ಇದಕ್ಕೆ ಏನು ಉತ್ತರವನ್ನು ಹೇಳಿಯಾನು? ಅವನು, "ನನ್ನ ನೂರುಮಂದಿ ಸಹೋದರರನ್ನೂ ಅನು ಸರಿಸಿ ಹೋಗುವೆನು" ("ಭ್ರಾತೃಶತಮನುಗಚ್ಛಾಮಿ") ಎಂದು ಉತ್ತರ ಹೇಳುವನು. ಅವರೆಲ್ಲರೂ ಮೃತರಾಗಿರುವುದು ದುರ್ಜಯನಿಗೆ ತಿಳಿಯದು. ಅವರು ಯಾವುದೋ ಊರಿಗೆ ಹೋಗಿದ್ದಾರೆಂಬುದೇ ಅವನ ಭಾವನೆ. ದುರ್ಯೋಧನನೂ ಅದಕ್ಕೆ ಸರಿಯಾಗಿ ಹೀಗೆ ಹೇಳಿದ್ದಾನೆ. ದುರ್ಜ ಯನು ಅದನ್ನು ಕೇಳಿ, "ನನ್ನನ್ನೂ ಅಲ್ಲಿಗೇ ಕರೆದುಕೊಂಡು ಹೋಗು" ಎನ್ನುವನು. ದುರ್ಯೋಧನನು, "ಹೋಗು, ಮಗು, ಭೀಮಸೇನನ ಬಳಿಗೆ ಹೋಗಿ ಮಾತನಾಡು" ("ಗಚ್ಛ ಪುತ್ರ! ವೃಕೋದರಂ ಬ್ರೂಹಿ"!)

---

* "ತ್ಯಕ್ತ್ವಾ ಪರಿಚಿತಂ ಪುತ್ರ! ಯತ್ರಯತ್ರ ತ್ವಯಾಸ್ಯತಾಂ |
ಅದ್ಯ ಪ್ರಭೃತಿ ನಾಸ್ತೀದಂ ಪೂರ್ವಭುಕ್ತಂ ತವಾಸನಂ||"

ಎನ್ನುವನು. ಭೀಮಸೇನನೇ ದುರ್ಯೋಧನನ ತೊಡೆಗಳನ್ನು ಮುರಿದಿರುವುದರಿಂದ, ಅವನ ಈ ಮಾತುಗಳಿಗೆ, "ನೀನು ಹೋಗಿ ಈ ಸಂಗತಿಯನ್ನು ವೃಕೋದರನಿಗೆ ತಿಳಿಸಿದರೆ, ಅವನು ನಿನ್ನನ್ನೂ ಕಳುಹಿಸಿಕೊಡುವನು. ಎಂದರೆ ನನ್ನಂತೆಯೇ ನಿನ್ನನ್ನೂ ಕೊಲ್ಲುವನು." ಎಂಬ ತಾತ್ಪರ್ಯವೇನಾದರೂ ಇರಬಹುದೇ—ಎಂಬುದಾಗಿ ಸಂಶಯವು ಹುಟ್ಟಿದರೂ ಹುಟ್ಟಬಹುದು. ಆದರೆ ಆದ್ಯಂತವಾಗಿ ದುರ್ಯೋಧನ ಪಾತ್ರವನ್ನು ಪರಿಗಣಿಸಿದರೆ ಇಂತಹ ಅಪಾರ್ಥಕ್ಕೆ ಅವಕಾಶವೇ ಇಲ್ಲ. ದುರ್ಯೋಧನನ ಮನಸ್ಸಿನಲ್ಲಿ ದ್ವೇಷವೇ ಇಲ್ಲ. ತನ್ನ ಮಗನಿಗೆ ಮುಂದೆ ಪಾಂಡವರೇ ಗತಿಯೆಂಬುದನ್ನು ನಿರ್ಧರಿಸಿ ಅವನು ಹೀಗೆ ಹೇಳಿದ್ದಾನೆ. ಆದರೆ, ವೃಕೋದರನ ಬಳಿಗೇ ಹೋಗುವಂತೆ ಅವನು ಮಗನಿಗೇಕೆ ತಿಳಿಸಿದ್ದಾನೆಂದು ಸಂದೇಹವು ಬರಬಹುದು. ಗದಾಯುದ್ಧ ನಿಯಮ ವಿರುದ್ಧವಾಗಿ ತಂದೆಯನ್ನು ಪ್ರಹರಿಸಿದವನು, ತನ್ನ ಅನ್ಯಾಯವರ್ತನೆಗಾಗಿ ಪಶ್ಚಾತ್ತಾಪ ಪಟ್ಟು, ಮಗನಾದ ದುರ್ಜಯನಲ್ಲಿ ಇತರರೆಲ್ಲರಿಗಿಂತ ವಿಶೇಷ ಆದರವನ್ನು ತೋರಿಸಿಯಾನೆಂಬುದು ದುರ್ಯೋಧನನ ಭರವಸೆಯಿರಬಹುದು. ಆದುದರಿಂದಲೇ ಅವನು ಹಾಗೆ ಹೇಳಿರಬೇಕು. ಆದರೆ, ದುರ್ಜಯನು ಮುಂದೆ ಹೆಜ್ಜೆಯನ್ನೇ ಇಡುವವನಲ್ಲ. "ನಿನ್ನನ್ನು ಹುಡುಕುತ್ತಿದ್ದಾರೆ, ಬಾ, ಹೋಗೋಣ" ಎಂದು ಅವನು ತಂದೆಗೆ ತಿಳಿಸುವನು:—

**ದುರ್ಯೋಧನ:**—"ಮಗು, ಯಾರು ನನ್ನನ್ನು ಹುಡುಕುತ್ತಿದ್ದಾರೆ?"
**ದುರ್ಜಯ:**—"ಅಜ್ಜ, ತಾತ, ಎಲ್ಲರೂ; ಅಂತಃಪುರದವರೆಲ್ಲರೂ."
**ದುರ್ಯೋಧನ:**—"ಹೋಗು ಮಗು, ನಾನು ಬರುವಹಾಗಿಲ್ಲ. ಅಸಮರ್ಥನಾಗಿದ್ದೇನೆ.
**ದುರ್ಜಯ:**—"ನಾನು ನಿನ್ನನ್ನು ಎತ್ತಿಕೊಂಡು ಹೋಗುತ್ತೇನೆ, ಬಾ"
**ದುರ್ಯೋಧನ:**—"ಮಗು, ನೀನು ಇನ್ನೂ ಹುಡುಗ."

ಇದು ನಿಜ. ಬಾಲಕನು ಏನು ಹೇಳುವುದಕ್ಕೂ ತೋರದೆ, ಹಿಂದೆ ನೋಡುವನು. ಧೃತರಾಷ್ಟ್ರನೇ ಮುಂತಾದವರನ್ನು ಕಾಣುವನು.

"ಆರ್ಯರೆ, ಮಹಾರಾಜನು ಇಲ್ಲಿದ್ದಾನೆ" ಎಂದು ಕೂಗಿ ಹೇಳುವನು. ದೇವಿಯರಿಬ್ಬರೂ, "ಹಾ, ಹಾ, ಮಹಾರಾಜ!" ಎಂದು ರೋದಿಸುವರು. ಭಾಸನು ದುರ್ಯೋಧನನ ಹೆಂಡತಿಯಾದ ಭಾನುಮತಿಯ ಹೆಸರನ್ನು ತಂದಿಲ್ಲ. ದುರ್ಯೋಧನನಿಗೆ ಪೌರವಿ ಮಾಳವಿಯರೆಂಬ ಮಹಿಷಿಯರಿದ್ದಂತೆ ಸೂಚಿಸಿದ್ದಾನೆ. ಮಗನು ಎಲ್ಲಿರುವನೆಂದು ಧೃತರಾಷ್ಟ್ರನೂ, ಗಾಂಧಾರಿಯೂ ಹುಡುಕುವರು. ಅಯ್ಯೋ ಪಾಪ! ದುರ್ಜಯನು ಏನನ್ನೂ ಅರಿಯದ ಬಾಲಕ. "ಮಹಾರಾಜನು, ಇಲ್ಲಿ ನೆಲದ ಮೇಲೆ ಕೂತಿದ್ದಾನೆ" ಎಂದು ಹೇಳುವನು. ಮಗನಿಗೆ ಒದಗಿದ ದುರವಸ್ಥೆಗಾಗಿ ಧೃತರಾಷ್ಟ್ರನು ಪ್ರಲಾಪಿಸುವನು. ಧೃತರಾಷ್ಟ್ರನಿಗೆ ದುಃಖಾವೇಗದಲ್ಲಿ ತನ್ನ ಬಳಿಯಲ್ಲಿರುವವಳು ಗಾಂಧಾರಿಯೆಂಬುದೇ ಗೊತ್ತಾಗದು. ಅವನು "ಇವಳು ಯಾರು?" ಎನ್ನುವನು. ಗಾಂಧಾರಿಯು ವೀರಮಾತೆ. ಆಗಲೂ ಅವಳು, "ಮಹಾರಾಜ! ನಾನು ಅಭೀತಪುತ್ರಪ್ರದಾಯಿನಿ" ಎಂದು ಉತ್ತರ ಹೇಳುವಳು. ಇತರರು ದುರ್ಯೋಧನನನ್ನು ಮಹಾರಾಜನೆನ್ನಬಹುದು. ಧೃತರಾಷ್ಟ್ರನೂ ದುರ್ಯೋಧನನನ್ನೇ ಮಹಾರಾಜನೆನ್ನಬಹುದು. ಗಾಂಧಾರಿಗೆ ಮಾತ್ರ ಇನ್ನೂ ಧೃತರಾಷ್ಟ್ರನೇ ಮಹಾರಾಜ ಪದವಿಯಲ್ಲಿರತಕ್ಕವನೆಂದೇ ಭಾವನೆ. ತನ್ನ ತಾಯಿಯು ತನ್ನನ್ನು ಅಭೀತನೆಂದುದನ್ನು ಕೇಳಿ, ಮಾನಧನನಾದ ದುರ್ಯೋಧನನು, "ಇಂದಿಗೆ ನಾನು ಹುಟ್ಟಿದುದು ಸಾರ್ಥಕವಾಯಿತು" ಎಂದು ಹೇಳಿಕೊಂಡು ಸಂತೋಷಪಡುವನು. ಧೃತರಾಷ್ಟ್ರನ ದುಃಖವನ್ನು ಹೇಳತೀರದು. ಸಮಾಧಾನಮಾಡಿಕೊಳ್ಳುವಂತೆ ದುರ್ಯೋಧನನು ತಂದೆಯನ್ನು ಸಂತೈಸುವನು. ಧೃತರಾಷ್ಟ್ರನು, "ನನ್ನ ನೂರು ಮಕ್ಕಳೂ ಮೃತರಾಗಿ ಕೊನೆಗೆ ನೀನೂ ಮರಣ ಹೊಂದುವಂತಿರುವ ದುಃಖವನ್ನು ಹೇಗೆ ಸೈರಿಸಲಿ?" ಎಂದು ಪ್ರಲಾಪಿಸಿ ಮೂರ್ಛಿತನಾಗುವನು. ದುರ್ಯೋಧನನು ಅವನನ್ನು ಸಂತೈಸಿ ಮೂರ್ಛೆ ತಿಳಿಯುವಂತೆಮಾಡಿ ಮತ್ತೆ ಸಮಾಧಾನ ಹೇಳುವನು. ಧೃತರಾಷ್ಟ್ರನು, "ಏನೆಂದು ಸಮಾಧಾನಹೊಂದಲಿ?" ಎಂದು ಸಂಕಟದಿಂದ ಕೇಳುವನು. ಮಾನಧನನಾದ ಆ ವೀರಾಗ್ರಣಿಯು, "ಯುದ್ಧರಂಗದಲ್ಲಿ

ಪರಾಙ್ಮುಖನಾಗದೆ ನಾನು ಹತನಾದೆನೆಂದು, ತಂದೆಯೆ, ನನ್ನಲ್ಲಿ ಅನುಗ್ರಹಮಾಡಿ ಶೋಕವನ್ನು ನಿಗ್ರಹಿಸು. ನಿನ್ನ ಚರಣಗಳಿಗೆ ನಮಸ್ಕಾರ ಮಾಡಿ ತಲೆಯನ್ನು ಅವುಗಳ ಮೇಲೆ ಊರಿದ ನಾನು ಜ್ವಲಿಸುತ್ತಿರುವ ಗೃಹಾಗ್ನಿಗೆ ನಮಸ್ಕಾರ ಮಾಡಬೇಕೆಂಬ ಯೋಚನೆಯೇ ಇಲ್ಲದೆ, ಯಾವ ಮಾನವನ್ನು ಜೊತೆಯಲ್ಲಿಟ್ಟುಕೊಂಡು ಹುಟ್ಟಿದೆನೋ ಅದೇ ಮಾನದೊಡನೆ ಪರಲೋಕಕ್ಕೆ ಹೋಗುತ್ತೇನೆ" ಎನ್ನುವನು. ಧೃತರಾಷ್ಟ್ರನು ತನಗೆ ಅಗ್ನಿದೇವನಿಗಿಂತ ಪವಿತ್ರನಾದ ಪೂಜ್ಯನೆಂಬುದು ಆ ಪಿತೃಭಕ್ತನ ಆಶಯ. ಧೃತರಾಷ್ಟ್ರನ ದುಃಖವನ್ನು ಕಂಡು ಬಲರಾಮನಿಗೂ ಅನುತಾಪ. ಬಲರಾಮನು ತಾನು ಅಲ್ಲಿರುವುದನ್ನು ಧೃತರಾಷ್ಟ್ರನಿಗೆ ಆ ಸಮಯದಲ್ಲಿ ಹೇಗೆ ತಿಳಿಸುವುದೆಂದು ಸುಮ್ಮನಾಗುವನು. ದುರ್ಯೋಧನನಿಗೆ ತಾಯಿಯಲ್ಲಿ ಎಷ್ಟು ಪ್ರೀತಿಯುಂಟೆಂಬುದು, ಅವನು ಅವಳಿಗೆ ತಿಳಿಸುವ ಮಾತುಗಳಿಂದಲೇ ತಿಳಿಯುತ್ತದೆ. ದುರ್ಯೋಧನನು ಅವಳನ್ನು ಕುರಿತು, "ನಿನಗೆ ನಮಸ್ಕರಿಸಿ ಹೇಳಿಕೊಳ್ಳುತ್ತೇನೆ. ನಾನು ಪುಣ್ಯ ಮಾಡಿದ್ದರೆ ಮುಂದಿನ ಜನ್ಮದಲ್ಲಿಯೂ ನೀನೇ ನನಗೆ ತಾಯಿಯಾಗು"* ಎಂದು ಹೇಳುವನು. ದುರ್ಯೋಧನನು ತಂದೆಯೊಡನೆಯೂ, ತಾಯಿಯೊಡನೆಯೂ ಆಡುವ ಮಾತುಗಳಿಂದ ತಟಕ್ಕನೆ ಕಂಬನಿಯು ಉರುಳುವುದು. ದುರ್ಯೋಧನನು ಛಲಕ್ಕೆ ವಶನಾಗಿ ಯುದ್ಧಕ್ಕೆ ಕೈಹಾಕಿದವನಾದರೂ, ಅವನು ಪುಣ್ಯಕರ್ಮಗಳನ್ನೇ ಆಚರಿಸುತ್ತಿದ್ದವನೆಂಬುದೂ, ಅವನು ಸುಪುತ್ರನೆಂಬುದೂ, ಈ ಶ್ಲೋಕದಿಂದ ವ್ಯಕ್ತನಾಗುತ್ತವೆ. ಮುಂದೆ ಗಾಂಧಾರಿಯು ಹೇಳುವ "ನನ್ನ ಮನೋರಥವನ್ನೇ ನೀನೂ ಹೇಳಿದೆ" ಎಂಬ ಮಾತುಗಳಿಂದ ಅದು ಮತ್ತಷ್ಟು ದೃಢಪಡುತ್ತದೆ. ದುರ್ಯೋಧನನು ಪುಣ್ಯಾತ್ಮನಾದ ಸತ್ಪುತ್ರನಾಗಿಲ್ಲದೆ ಹೋಗಿದ್ದರೆ, ಅವಳು ಹಾಗೆ ಬಯಸುತ್ತಲೇ ಇರಲಿಲ್ಲ. ದುರ್ಯೋಧನನು ಅಭಿಮಾನದಿಂದ ತನ್ನ ಎದೆಯ ಮತ್ತು ಭುಜದ ಗಾಯಗಳನ್ನು ತನ್ನ ಪತ್ನಿ

---

* "ನಮಸ್ಕೃತ್ಯ ವದಾಮಿ ತ್ವಾಂ ಯದಿ ಪುಣ್ಯಂ ಮಯಾ ಕೃತಂ ।
ಅನ್ಯಸ್ಯಾಮಪಿ ಜಾತ್ಯಾಂ ಮೇ ತ್ವಮೇವ ಜನನೀ ಭವ ॥"

ಯಾದ ಮಾಳವಿಗೆ ತೋರಿಸಿ ಅವುಗಳಿಂದ ತನ್ನ ಭುಜಗಳು ಶೋಭಿ
ಸುತ್ತಿವೆಯೆಂದು ತಿಳಿಸುವನು. ಅವುಗಳು ಅನರ್ಘ್ಯರತ್ನಾಭರಣಗಳಾಗಿ
ದ್ದಂತೆ ಭಾವಿಸಿಕೊಂಡು ಅವನು ಹೆಮ್ಮೆಪಡುತ್ತಿದ್ದನೆಂದರೂ ಅತಿ
ಶಯೋಕ್ತಿಯಲ್ಲ. ಮಾಳವಿಯು ಇನ್ನೂ ಅಳುತ್ತಿರುವುದನ್ನು ನೋಡಿ,
"ನಿನ್ನ ಪತಿಯು ಯುದ್ಧದಲ್ಲಿ ಪರಾಙ್ಮುಖನಾಗಿ ಹತನಾಗಲಿಲ್ಲ. ಹೀಗಿದ್ದೂ
ಕ್ಷತ್ರಿಯ ರಮಣಿಯಾದ ನೀನು ಅಳುವುದೇಕೆ?" ("ಭರ್ತಾ ತೇ ನ ಪರಾ
ಙ್ಮುಖೋ ಯುಧಿ ಹತಃ ಕಿಂ ಕ್ಷತ್ರಿಯೇ! ರೋದಿಷಿ") ಎಂದು ಸಂತೈಸು
ವನು. ಬಳಿಕ ಅವನು ತನ್ನ ಮತ್ತೊಬ್ಬ ಹೆಂಡತಿಯಾದ ಪೌರವಿ
ಯೊಡನೆ, "ಪೌರವಿ, ನೀನೂ ಕೇಳು. ವೇದೋಕ್ತವಾದ ನಾನಾ
ಕ್ರತುಗಳನ್ನು ನೆರವೇರಿಸಿದೆನು. ಬಾಂಧವರನ್ನು ಪೋಷಿಸಿದೆನು. ನೂರು
ಮಂದಿ ಸೋದರರ ಸಹಾಯದಿಂದ ಶತ್ರುಗಳನ್ನು ನಿಗ್ರಹಿಸಿ ಅವರನ್ನು
ಮೆಟ್ಟಿ ನಿಂತು ಆಳಿದೆನು. ಆಶ್ರಿತರಿಗೂ ಪರಿಜನರಿಗೂ ಆಶಾಭಂಗ
ವೆಂದೂ ಆಗಿಲ್ಲ. ಯುದ್ಧದಲ್ಲಿ ಹದಿನೆಂಟು ಅಕ್ಷೋಹಿಣೀ ಸೈನ್ಯದ
ರಾಜರುಗಳೆಲ್ಲ ಸಂತಪ್ತರಾದರು. ಹೀಗೆ ಬಾಳಿದ ನನ್ನ ಮಾನವನ್ನು
ನೋಡು, ಮಾನಿನಿ. ನನ್ನಂತಹವರ ಪತ್ನಿಯರು ಅಳಲೇಕೂಡದು"
ಎನ್ನುವನು. ಸಹಗಮನ ಮಾಡಲು ನಿಶ್ಚಯಿಸಿರುವ ಆ ವೀರ
ಪತ್ನಿಯು, "ನಾನೆಲ್ಲಿಗೆ ಹೋಗಬೇಕೆಂಬುದನ್ನು ನಿಶ್ಚಯಿಸಿದ್ದೇನೆ.
ನಾನು ಅಳುವುದಿಲ್ಲ" ಎಂದು ಉತ್ತರ ಹೇಳುವಳು. ಆ ಬಳಿಕ
ಅವನು ದುರ್ಜಯನಿಗೆ ಉಪದೇಶ ಹೇಳುವುದನ್ನು ನೋಡಿ ನಮ್ಮ
ಅಂತಃಕರಣವೇ ಕರಗಿ ನೀರಾಗುವುದು. ಪಾಂಡವರನ್ನು ದುರ್ಯೋ
ಧನನಂತೆಯೇ ದುರ್ಜಯನು ಭಾವಿಸಿಕೊಂಡಿರಬೇಕು. ಗಾಂಧಾರಿ
ಕುಂತಿಯರು ಹೇಳಿದಂತೆ ಕೇಳಬೇಕು. ಸುಭದ್ರಾ ದ್ರೌಪದಿಯ
ರನ್ನು ತಾಯಿಯರಂತೆ ಕಾಣಬೇಕು. ಅಭಿಮಾನ ದೀಪ್ತಹೃದಯನಾದ
ತನ್ನ ತಂದೆ ದುರ್ಯೋಧನನು ರಣಭೂಮಿಯಲ್ಲಿ ತದನುಗುಣವಾದ
ವೀರತ್ವದಿಂದ ಕಾದಿ ಮೃತನಾದನೆಂಬುದನ್ನು ಮನಸ್ಸಿನಲ್ಲಿಟ್ಟುಕೊಂಡಿರ
ಬೇಕು—ಎಂದು ಮುಂತಾಗಿ ಹೇಳುವ ಅವನ ಆ ಉಪದೇಶವನ್ನು
ಕೇಳಿ ಬಲರಾಮನು ಕೂಡ, "ಆಶ್ಚರ್ಯ! ವೈರವು ಪಶ್ಚಾತ್ತಾಪವಾಗಿ
ಪರಿಣಮಿಸಿತು" ಎಂದು ಹೇಳಿ ವಿಸ್ಮಿತನಾಗುವನು.

ಶೋಕರಸ ಮಿಶ್ರಿತವಾದ ಈ ದೃಶ್ಯವನ್ನು ನೋಡಿ ನಮ್ಮ ಮನಸ್ಸು ಕುಸಿದು ಬಿದ್ದಿರುವುದು. ಆ ಸಮಯಕ್ಕೆ ಸರಿಯಾಗಿ ಪಾಂಡವರ ಮೇಲೆ ಕೋಪಿಸಿಕೊಂಡು ಭಯಂಕರವಾದ ಆಟೋಪದಿಂದ "ಸರಭಸನಾಗಿ" ಅಶ್ವತ್ಥಾಮನು ಪ್ರವೇಶಿಸುವಂತೆ ಮಾಡಿ, ಕವಿಯು ತನ್ನ ಕಲಾಕೌಶಲವನ್ನು ಪ್ರದರ್ಶಿಸಿರುವನು. ತಾನು ತಂದೆಯ ಶ್ರಾದ್ಧವನ್ನು ಮಾಡುತ್ತಿರುವಲ್ಲಿ ಕುರುಕುಲ ತಿಲಕನಾದ ದುರ್ಯೋಧನನು ವಂಚಿತನಾದನೆಂದು ಅವನು ಹೇಳಿಕೊಳ್ಳುವನು. ಕುರುರಾಜನ ಆಜ್ಞೆಯನ್ನು ನಿರೀಕ್ಷಿಸುತ್ತ ಅಂಜಲಿಬದ್ಧರಾಗಿದ್ದ ಹನ್ನೊಂದು ಅಕ್ಷೌಹಿಣೀ ಸೈನ್ಯದ ರಾಜರುಗಳು, ಪರಶುರಾಮನೂ ಗೆಲ್ಲಲಾರದ ಭೀಷ್ಮರು, ದ್ರೋಣಾಚಾರ್ಯರು - ಇವರುಗಳು ಯುದ್ಧಮಾಡಿಯೂ ದುರ್ಯೋಧನನು ಸೋತುದು ವಿಧಿವಿಲಾಸವೆಂದು ಅಶ್ವತ್ಥಾಮನು ಸೂಚಿಸುವನು. ಅವನು ಕುರುರಾಜನ ಅವಸ್ಥೆಯನ್ನು ನೋಡಿ ಸಂತಾಪಪಡುತ್ತ, ಸಮೀಪಕ್ಕೆ ಬಂದು, "ಕುರುರಾಜ! ಇದೇನು (ಈ ಅವಸ್ಥೆ)?" ("ಭೋಃ ಕುರುರಾಜ! ಕಿಮಿದಂ") ಎಂದು ಕೇಳುವನು. ಅದಕ್ಕೆ ದುರ್ಯೋಧನನು, "ಗುರುಪುತ್ರ! ಅತೃಪ್ತಿಪಟ್ಟುದರ ಫಲ" ("ಗುರುಪುತ್ರ! ಫಲಮಪರಿತೋಷಸ್ಯ") ಎಂದು ಉತ್ತರ ಹೇಳುವನು. ಛಲಗಾರನಾದ ಅವನು ಕಣ್ಣುಮುಚ್ಚಿಕೊಂಡು ಉದ್ಧತತನದಿಂದ ವರ್ತಿಸಲಿಲ್ಲವೆಂಬುದೂ, ಭಾವವೈವಿಧ್ಯದ ಒಳತೋಟೆಯಿಂದ ಕ್ಷತವಿಕ್ಷತನಾಗಿ ಅವನು ವಿನಾಶದ ದಾರಿಯನ್ನು ಹಿಡಿದು ವರ್ತಿಸಿಯೂ ಮಾನಧನನಾಗಿ ಮೆರೆದನೆಂಬುದೂ, ಇದರಿಂದ ಸೂಚಿತವಾಗುವುವು. ಗರುಡಾರೂಢನಾಗಿ ಚಕ್ರಧರನಾದ ಕೃಷ್ಣನನ್ನೂ, ಭೀಮನನ್ನೂ ಧ್ವಂಸಮಾಡಿಬರುವುದಾಗಿ ಅಶ್ವತ್ಥಾಮನು ಪ್ರತಿಜ್ಞೆ ಮಾಡುವನು. ದುರ್ಯೋಧನನು ಅವನನ್ನು ನಿರೋಧಿಸಿ, "ಬೇಡ, ಬೇಡ, ನೀನು ಹಾಗೆ ಮಾಡಬೇಡ. ಪಟ್ಟಾಭಿಷಿಕ್ತರಾದ ರಾಜರುಗಳೆಲ್ಲರೂ (ಮೃತರಾಗಿ) ಭೂದೇವಿಯ ಮಡಿಲಿನಲ್ಲಿ ಮಲಗಿದರು. ಕರ್ಣನು ಸ್ವರ್ಗವನ್ನು ಸೇರಿದನು. ಭೀಷ್ಮನು ಯುದ್ಧದಲ್ಲಿ ಪರಾಜಿತನಾದನು. ಯುದ್ಧಮುಖದಲ್ಲಿ ನನ್ನ ನೂರ್ವರು ಸಹೋದರರೂ ಹತರಾದರು. ನಾನೂ ಹೀಗಾಗಿ ಈ ಅವಸ್ಥೆಯಲ್ಲಿದ್ದೇನೆ. ಗುರುಪುತ್ರ, ನೀನು ಧನಸ್ಸನ್ನು

ತೆಗೆದಿಡು ಎಂದು ಹೇಳುವನು. ದುರ್ಯೋಧನನು ಭಾವವೈವಿಧ್ಯದ ಒಳ ತೋಟಿಯಿಂದ ಕ್ಷತವಿಕ್ಷತನಾಗಿ ಗಳಿಸಿರುವ ಶಾಂತಿಭಂಡಾರದ ಬೆಲೆಯನ್ನು ಅಶ್ವತ್ಥಾಮನು ಅರಿತುಕೊಳ್ಳಲಾರನು. ಅವನು ವಿಸ್ಮಿತನಾದುದರ ಜೊತೆಗೆ ಅಲ್ಪಸ್ವಲ್ಪ ಅಸಮಾಧಾನದಿಂದಲೂ ಕೂಡಿ, "ಎಲೈ ಕುರುರಾಜ! ಯುದ್ಧದಲ್ಲಿ ಇಂದು ಭೀಮನು ನಿನ್ನ ಜುಟ್ಟನ್ನೆಳೆದು ಗದಾಪ್ರಹರಣ ಮಾಡಿದುದರಿಂದ ನಿನ್ನ ತೊಡೆಗಳೊಡನೆ ನಿನ್ನ ದರ್ಪವನ್ನೂ ಕೊಂಡು ಹೋದನೆ?" ಎಂದು ಕೇಳುವನು. ದುರ್ಯೋಧನನ ಶಾಂತಿಯು ಅಲ್ಲಿಗೂ ಅಂದಗೆಡದು. ಅವನು ಅಶ್ವತ್ಥಾಮನೊಡನೆ, "ಹಾಗಲ್ಲ. ರಾಜರು ಮಾನ ಶರೀರರು. ಮಾನಕ್ಕಾಗಿಯೇ ನಾನು ನಿಗ್ರಹಮಾರ್ಗವನ್ನವಲಂಬಿಸಿದುದು" ("ಮಾ ಮೈವಂ । ಮಾನಶರೀರಾ ರಾಜಾನಃ । ಮಾನಾರ್ಥಮೇವ ಮಯಾ ನಿಗ್ರಹೋ ಗೃಹೀತಃ" ।) ಎಂದು ವಾದಿಸುವನು. ಅತಿಮಾನಿಯಾದ ಛಲಗಾರನಾಗಿರುವ ದೋಷವೊಂದನ್ನು ಬಿಟ್ಟರೆ ದುರ್ಯೋಧನನ ಉಳಿದ ಗುಣಗಳೆಲ್ಲ ಸದ್ಗುಣಗಳೇ! ತಾವು ಪಾಂಡವರನ್ನು ದ್ಯೂತದಲ್ಲಿ ಸೋಲಿಸಿ, ಕಷ್ಟಕ್ಕೀಡುಮಾಡಿ ವನಮೃಗಗಳ ಜೊತೆಯಲ್ಲಿರಲು ಕಾಡಿಗಟ್ಟಿದುದು, ದ್ರೌಪದಿಯ ಕೇಶಪಾಶವನ್ನು ಹಿಡಿದೆಳೆದು ಅವಮಾನಗೊಳಿಸಿದುದು, ಬಾಲಕನಾದ ಪುತ್ರ ಅಭಿಮನ್ಯುವನ್ನು ಕೊಂದುದು, ಇವುಗಳನ್ನೆಲ್ಲ ಅಶ್ವತ್ಥಾಮನೊಡನೆ ಹೇಳಿಕೊಂಡು ತನ್ನ ಅಕಾರ್ಯಗಳಿಗಾಗಿ ದುರ್ಯೋಧನನು ಪಶ್ಚಾತ್ತಾಪಪಡುವನು. ಆದರೂ, ಅಶ್ವತ್ಥಾಮನ ಕೋಪವು ಇಳಿಯುವುದಿಲ್ಲ. ಅವನು ತಾನು ಕೃತಪ್ರತಿಜ್ಞನಾಗಿರುವುದನ್ನೂ ಸೂಚಿಸಿ, ಅಂದು ರಾತ್ರಿಯೇ ರಣಕೋಲಾಹಲವನ್ನೆಬ್ಬಿಸಿ ಪಾಂಡವರನ್ನು ಧ್ವಂಸಮಾಡುವುದಾಗಿ ಮತ್ತೆ ಪ್ರಮಾಣಮಾಡುವನು. ಆ ವೇಳೆಗೆ ದುರ್ಯೋಧನನ ಪ್ರಜ್ಞೆಯು ತಪ್ಪಿ ಸಾವು ಸಮೀಪಿಸುತ್ತಿರುವುದು. ಆದುದರಿಂದಲೇ ಅವನು ಪಾಂಡವರನ್ನು ಕೊಲ್ಲಕೂಡದೆಂದು ಅಶ್ವತ್ಥಾಮನಿಗೆ ಮೊದಲಿನಂತೆ ಮತ್ತೆ ತಿಳಿಸುವುದಿಲ್ಲ. ಗುರುಪುತ್ರನು ಪ್ರತಿಜ್ಞೆಯನ್ನು ನೆರವೇರಿಸತಕ್ಕವನೇ ಸರಿಯೆಂದು ಬಲರಾಮನೂ ನುಡಿಯುವನು. ಬಲರಾಮನು ಅಲ್ಲಿರುವುದನ್ನು ಕ್ರೋಧಾವೇಗದಿಂದ ಉನ್ಮತ್ತನಾಗಿದ್ದ ಅಶ್ವತ್ಥಾಮನು ಆಗ ನೋಡುವನು; "ಪೂಜ್ಯನಾದ ಹಲಾ

ಯುಧನು" ಎಂದು ಹೇಳುವನು. ಧೃತರಾಷ್ಟ್ರನು ದುಃಖಪಾರವಶ್ಯ ವನ್ನು ತಾಳಲಾರದೆ, "ಅಯ್ಯೋ! ವಂಚನೆಯನ್ನು ಕಂಡವನೂ ಇದ್ದಾ ನೆಯೆ?" ("ಹಂತ ಸಾಕ್ಷಿಮತೀ ಖಲು ವಂಚನಾ!") ಎಂದು ಪೇಚಾಡು ವನು. ಅಶ್ವತ್ಥಾಮನು, ವೀರತ್ವದ ಕೆಚ್ಚಿನಿಂದ ಉದ್ರೇಕಿತನಾಗಿ, "ದುರ್ಜಯ, ಇಲ್ಲಿ ಬಾ, ತಂದೆಯ ಪರಾಕ್ರಮದಿಂದ ನಿನಗೆ ಸಲ್ಲತಕ್ಕದಾಗಿ ಆತನ ಭುಜಬಲದಿಂದ ಆರ್ಜಿತವಾಗಿರುವ ರಾಜ್ಯಕ್ಕೆ ಪಟ್ಟಾಭಿಷೇಕವಿಲ್ಲ ದೆಯೇ ವಿಪ್ರನಾದ ನನ್ನ ವಚನಗಳಿಂದ ರಾಜನಾಗು"* ಎಂದು ಹೇಳಿ, ತಾನು ಅಂದು ರಾತ್ರಿ ಪಾಂಡವರನ್ನು ಕೊಂದು ಸ್ವಾಧೀನಪಡಿಸಿಕೊಳ್ಳಬೇ ಕೆಂದಿರುವ ರಾಜ್ಯಕ್ಕೆ ಪಟ್ಟಾಭಿಷೇಕವಿಲ್ಲದೆಯೇ ದುರ್ಜಯನನ್ನು ರಾಜನ ನ್ನಾಗಿ ಮಾಡುವನು. ಅಶ್ವತ್ಥಾಮನ ವರ್ತನೆಯು ಕಲಾಸೌಂದರ್ಯದ ದೃಷ್ಟಿಯಿಂದ ರಮ್ಯವಾದುದು. ಅಶ್ವತ್ಥಾಮನ ವೀರವಾಣಿಗಳ ದುಂದು ಭಿಯು ಮೊಳಗುತ್ತಿರುವುದು ನಿಜ. ಆದರೂ ಹೆಣಗಳಿಂದ ತುಂಬಿ ಭೀಕರ ಸ್ಮಶಾನ ಸದೃಶವಾಗಿರುವ ರಣರಂಗದಲ್ಲಿ (ತಂದೆಗೆ ಮರಣಕಾಲವು ಸನ್ನಿ ಹಿತವಾಗಿರುವುದರಿಂದ) ತಬ್ಬಲಿಯಾಗುವುದರಲ್ಲಿರುವ ಆ ಹಸುಳೆ ದುರ್ಜ ಯನು ರಾಜನೆಂಬ ಉದ್ಘೋಷವೇ ಎಂದು ಕಳವಳ ಹೊಂದಿದ ನಮ್ಮ ಮನಸ್ಸು ಶೋಕಾವೇಗದಿಂದ "ಅಯ್ಯೋ" ಎಂದು ಚೀರಿಡುತ್ತದೆ. ಹಾಗಾಗಬೇಕೆಂಬುದೇ ಕಲಾವಿದನಾದ ಕವಿಯ ಉದ್ದೇಶವಾಗಿರಬೇಕು.

ಅಶ್ವತ್ಥಾಮನ ಮಾತುಗಳು ಮುಗಿಯುವ ವೇಳೆಗೆ ದುರ್ಯೋಧನನ ಅಂತ್ಯಕಾಲವು ಸಮೀಪಿಸಿರುವುದು. ವೀರನಿಗುಚಿತವಾದ ಮರಣವನ್ನು ಬಯಸುತ್ತಿದ್ದ ಮಾನಧನನಾದ ಆ ವೀರಾಗ್ರಣಿಯು ಪ್ರಜ್ಞೆತಪ್ಪಿ ಮಾತ ನಾಡಿಕೊಳ್ಳುತ್ತ, "ನನ್ನ ಆಶೆಯು ಈಗ ನೆರವೇರಿತು. ನನ್ನ ಪ್ರಾಣ ಗಳು ಹೋಗುತ್ತಿವೆ. ಇದೋ! ಶಂತನುವೇ ಮುಂತಾದ ನನ್ನ ಪಿತೃ

---

* "ದುರ್ಜಯ! ಇತಸ್ತಾವತ್ ।
ಪಿತೃವಿಕ್ರಮದಾಯಾದ್ಯೇ ರಾಜ್ಯೇ ಭುಜಬಲಾರ್ಜಿತೇ ।
ವಿನಾಭಿಷೇಕಂ ರಾಜಾ ತ್ವಂ ವಿಪ್ರೋಕ್ತ್ಯೈರ್ವಚನೈರ್ಭವ ॥"

ಪಿತಾಮಹರು! ಕರ್ಣನನ್ನು ಮುಂದಿಟ್ಟುಕೊಂಡು ಬಂದಿರುವ ನನ್ನ ನೂರು ಮಂದಿ ಸಹೋದರರು. ಅದೋ, ಐರಾವತವನ್ನೇರಿ ಮಹೇಂದ್ರನ ಕರತಲದ ಅವಲಂಬನದಿಂದ ಶೋಭಿಸುತ್ತಿರುವ ಕಾಕಪಕ್ಷಧರನಾದ ಅಭಿಮನ್ಯುವು ನನ್ನನ್ನು ಕೋಪದಿಂದ ತರ್ಜನೆ ಮಾಡುತ್ತಿದ್ದಾನೆ. ನನ್ನನ್ನು ಎದುರುಗೊಳ್ಳಲು ಬಂದಿರುವ ಊರ್ವಶಿಯೇ ಮುಂತಾದ ಅಪ್ಸರೆಯರು, ಮೂರ್ತೀಭವಿಸಿರುವ ಮಹಾಸಾಗರಗಳು; ಇದೋ, ಗಂಗಾ ಮುಂತಾದ ಮಹಾನದಿಗಳು: ಇದೋ, ನನ್ನನ್ನು ಕರೆದೊಯ್ಯಲು ಕಾಲನು ಕಳು ಹಿಸಿರುವ ಸಹಸ್ರ ಹಂಸಗಳು ಪ್ರಯುಕ್ತವಾಗಿರುವ ವೀರವಾಹಿಯಾದ ವಿಮಾನ. ಇದೋ, ಇದೋ ಬಂದೆ'' ಎಂದು ಹೇಳಿ ಮೃತಪಡು ವನು. ಈ ಮಾತುಗಳಿಂದ ಊರುಭಂಗದ ದುರ್ಯೋಧನನ ಪಶ್ಚಾ ತ್ತಾಪದಗ್ಧವಾದ ಹೃದಯವೇ ನಮ್ಮೆದುರಿಗೆ ನಿಲ್ಲುತ್ತದೆ. ತನ್ನ ಸಹೋ ದರರಿಗಿಂತ ಅವನಿಗೆ ಕರ್ಣನಲ್ಲಿ ಹೆಚ್ಚಿನ ಪ್ರೀತಿಯಿದ್ದುದನ್ನೂ, ಅಭಿಮ ನ್ಯುವಿನಲ್ಲಿ ತಾನು ಅಪರಾಧಿಯೆಂಬ ಭಾವನೆಯು ಅವನಿಗಿದ್ದುದನ್ನೂ ಅವನ ಮಾತುಗಳು ಮನೋಹರವಾಗಿ ಸೂಚಿಸುವುವು. ಐರಾವತವ ನ್ನೇರಿ ಬರುತ್ತಿರುವ ಕಾಕಪಕ್ಷಧರನಾದ ಅಭಿಮನ್ಯುವು ಕೋಪದಿಂದ ತನ್ನನ್ನು ತರ್ಜಿಸುತ್ತಿರುವನೆಂದು ದುರ್ಯೋಧನನು ಹೇಳಿಕೊಂಡು ನಮ್ಮ ಕಂಬನಿಯ ಕಾಣಿಕೆಯನ್ನು ಸ್ವೀಕರಿಸುವನು. ಕರ್ಣನು ಸೂರ್ಯನ ರಥದಲ್ಲಿ ಕುಳಿತು ನಗೆಮಲ್ಲಿಗೆಯಿಂದ ತನ್ನನ್ನು ಎದುರುಗೊಳ್ಳಲು ಬರು ತ್ತಿದ್ದನೆಂದು ಒಂದುವೇಳೆ ದುರ್ಯೋಧನನು ಹೇಳಿಕೊಂಡಿದ್ದರೂ ಅವ ನಿಗೆ ಆ ಕಾಣಿಕೆಯು ದೊರೆಯುತ್ತಿರಲಿಲ್ಲ. ಕಾಕಪಕ್ಷಧರನಾದ ಅಭಿಮ ನ್ಯುವೆಂಬುದರಲ್ಲಿ ಅವನು ಚಿಕ್ಕವಯಸ್ಸಿನವನೆಂಬ ಭಾವವು ಮಾತ್ರವೇ ಅಲ್ಲದೆ, ಅವನ ಕಾಕಪಕ್ಷವನ್ನು ಸೂಚಿಸಿದ ದುರ್ಯೋಧನನ ಹೃದಯ ದಲ್ಲಿರುವ ಕುಮಾರನ ಮೇಲಣ ಪ್ರೀತಿಯೂ ವ್ಯಕ್ತವಾಗುತ್ತದೆ. ದಶ ರಥನು ಪುತ್ರವಾತ್ಸಲ್ಯದಿಂದ ಕೂಡಿ, ಕಾಕಪಕ್ಷಧರನಾದ ಕಿರಿಯ ವಯ ಸ್ಸಿನ ಶ್ರೀರಾಮಚಂದ್ರನನ್ನು ವಿಶ್ವಾಮಿತ್ರನೊಡನೆ ಯಜ್ಞರಕ್ಷಣೆಗಾಗಿ ಕಳುಹಿಸಲಾರದೆ ಪುತ್ರಪ್ರೇಮವನ್ನು ತನ್ನ ಹೃದಯದಿಂದ ಉಕ್ಕಿಸಿದ ಸನ್ನಿವೇಶದ ದೆಸೆಯಿಂದ "ಕಾಕಪಕ್ಷ" ವೆಂಬ ಪದಕ್ಕೆ ಜೀವಕಳೆ

ಬಂದಿದೆ. ಆದಕಾರಣ, ಕಾಕಪಕ್ಷಧರನಾದ ಅಭಿಮನ್ಯುವೆಂದು ಬಣ್ಣಿಸುವ ದುರ್ಯೋಧನನ ಹೃದಯದಿಂದ ಮುದ್ದಿನ ಹೊನಲೇ ಹರಿಯುವಂತೆ ತೋರುತ್ತದೆ.

ತನ್ನನ್ನು ಕರೆದೊಯ್ಯಲು ಕಾಲನು ಕಳುಹಿಸಿದ ವೀರವಾಹಿ ವಿಮಾನಕ್ಕೆ ಸಹಸ್ರ ರಾಜಹಂಸಗಳು ಪ್ರಯುಕ್ತವಾಗಿದ್ದುವೆಂದು ದುರ್ಯೋಧನನು ಹೇಳಿಕೊಳ್ಳುತ್ತಾನೆ. ಸಾವಿರ ಗಿಳಿಗಳೋ, ಗರುಡಗಳೋ ಅಥವಾ ಇತರ ಹಕ್ಕಿಗಳೋ ಆ ವಿಮಾನವನ್ನು ಹೊತ್ತುಕೊಂಡು ಹಾರಿ ಹೋದುವೆಂದು ಬಣ್ಣಿಸದೆ ರಾಜಹಂಸಗಳನ್ನೇ ಕವಿಯು ತಂದಿರುವುದೂ ಕಲಾದೃಷ್ಟಿಯಿಂದ ಮನೋಹರವಾಗಿದೆ. ಏಕೆಂದರೆ ಊರುಭಂಗದ ದುರ್ಯೋಧನನ ಸ್ವಭಾವವೇ ಸಾಂಕೇತಿಕವಾಗಿ ಇದರಿಂದ ಸೂಚಿತವಾಗುತ್ತದೆ. ರಾಜಹಂಸದ ದೇಹದಲ್ಲಿ ಕೊಕ್ಕೂ ಕಾಲುಗಳೂ ಕೆಂಪು. ಉಳಿದ ಬಹು ಭಾಗವೆಲ್ಲ ಶುಭ್ರವಾಗಿರುತ್ತದೆ. ಬಿಳಿಯ ಬಣ್ಣವು ಸಾತ್ವಿಕತೆಯನ್ನೂ, ಕೆಂಪು ಬಣ್ಣವು ರಜೋಗುಣವನ್ನೂ ಸೂಚಿಸುತ್ತವೆ. ಊರುಭಂಗದ ದುರ್ಯೋಧನನಲ್ಲಿ ಗುರುಹಿರಿಯರಲ್ಲಿ ಭಕ್ತಿ, ವಿನಯ, ಶೌರ್ಯ ಮುಂತಾದ ಗುಣಗಳೆಲ್ಲ ಪರಿಸ್ಫುಟವಾಗಿ ಅವನು ಒಟ್ಟಿನಮೇಲೆ ಸಾತ್ವಿಕನಾಗಿದ್ದರೂ, ಛಲದ ದೆಸೆಯಿಂದ ಅಕೃತ್ಯಗಳನ್ನಾಚರಿಸಿದ ದೋಷರೂಪದ ರಜೋಗುಣವಾದ ಅಗಡುತನವೂ ಅವನಲ್ಲಿದ್ದುದನ್ನು, ರಾಜಹಂಸಗಳನ್ನು ವೀರವಾಹಿ ವಿಮಾನಕ್ಕೆ ಹೂಡಿದ್ದ ಅಂಶವು ಬಹುಚೆನ್ನಾಗಿ ತೋರಿಸುತ್ತದೆ. ಅಭಿಷೇಕ ನಾಟಕದ ವಾಲಿಯೂ ವೀರಶ್ರೇಷ್ಠ; ಸದ್ಗುಣಭರಿತನಾದ ಸಾತ್ವಿಕ; ಆದರೂ ಅವನಲ್ಲಿ ಕೂಡ ರಜೋಗುಣವು ಸ್ವಲ್ಪಮಟ್ಟಿಗೆ ದಾಂಧಲೆ ಮಾಡಿ ಅವನ ನಾಶಕ್ಕೆ ಕಾರಣವಾಯಿತು. ಆದುದರಿಂದ, ಅವನಿಗಾಗಿ ಕಾಲನು ಕಳುಹಿಸಿದ ವಿಮಾನಕ್ಕೂ ರಾಜಹಂಸಗಳು ಪ್ರಯುಕ್ತವಾಗಿದ್ದುವೆಂದು ಅವನ ಅಂತ್ಯಕಾಲದ ವಚನಗಳಿಂದ ಕವಿ ಹೇಳಿಸಿದ್ದಾನೆ. ಈ ಆಶಯವು ಸಾಂಕೇತಿಕವಾಗಿ ಹುದುಗಿದೆಯೆಂಬುದನ್ನು ಒಪ್ಪದಿರುವವರೂ ಸಹ, ಸಾವಿರ ರಾಜಹಂಸಗಳನ್ನು ಹೂಡಿದ ವೀರವಾಹಿ ವಿಮಾನವೆಂಬ ಕಲ್ಪನೆಯೇ ಕಲಾವಿಭವದ ದೃಷ್ಟಿಯಿಂದ ಸೊಂಪುಗೂಡಿ ಸೊಗಸಾಗಿದೆಯೆಂಬುದನ್ನಾದರೂ ಒಪ್ಪಬಹುದಲ್ಲವೆ!

.... ದುರ್ಯೋಧನನು ಆಡುವ ಕೊನೆಯ ಮಾತುಗಳಲ್ಲಿ ಊರ್ವಶಿಯೇ ಮುಂತಾದ ಅಪ್ಸರೆಯರ ಸುದ್ದಿಯು ಬಂದಿದೆಯಷ್ಟೆ. ಆದರಿಂದ ಅವನ ವಿಷಯಲಾಲಸೆಯು ಸೂಚಿತವಾಗುವುದೆಂಬ ಅಪಾರ್ಥಕ್ಕೆ ಅವಕಾಶವಿಲ್ಲದಿರಲೆಂಬ ಉದ್ದೇಶದಿಂದ, ಮೂರ್ತೀಭವಿಸಿರುವ ಮಹಾರ್ಣವಗಳನ್ನೂ ಮತ್ತು ಗಂಗಾ ಮುಂತಾದ ಪವಿತ್ರ ನದಿಗಳನ್ನೂ ದುರ್ಯೋಧನನು ಕಂಡುದಾಗಿ ಕವಿಯು ಅವನಿಂದ ಹೇಳಿಸಿದ್ದಾನೆ. ಅಪ್ಸರೆಯರೆಂದರೆ ಭಾಸಮಹಾಕವಿಯ ದೃಷ್ಟಿಯಲ್ಲಿ ಅಮರಲೋಕದ ಅಖಂಡ ಕಲಾ ಸೌಭಾಗ್ಯದ ಉಪಾಸಕ ವ್ಯಕ್ತಿಗಳೆಂಬ ಪವಿತ್ರ ಭಾವನೆಯಿದೆಯೇ ಹೊರತು, ಕಾಮೋಪಭೋಗದ ಹೇಯವೃತ್ತಿಯ ಕಲ್ಪನೆಯಲ್ಲ. ಏಕೆಂದರೆ ವಿಷಯವಾಸನೆಯನ್ನು ಚಿತ್ರಿಸುವುದು ಆತನ ಉದ್ದೇಶವಾಗಿದ್ದ ಪಕ್ಷಕ್ಕೆ ಅಪ್ಸರೆಯರನ್ನು ಅವನು ತರುತ್ತಿದ್ದ ಸನ್ನಿವೇಶವೇ ಬೇರೆ. ಅಭಿಮನ್ಯು ಮಹೇಂದ್ರರೊಡನೆಯೂ, ಕರ್ಣನೊಡನೆಯೂ ತನ್ನ ಸಹೋದರರೊಡನೆಯೂ, ಪವಿತ್ರ ತೀರ್ಥಗಳೊಡನೆಯೂ ಅವರು ಬಂದಂತೆ ಆಗ ಕವಿಯು ವರ್ಣಿಸುತ್ತಿರಲೇ ಇಲ್ಲ. ಇಷ್ಟಕ್ಕೂ, ಚಾರುದತ್ತ ರೂಪಕದ ಗಣಿಕೆಯನ್ನೇ ಸಾಧ್ವೀರತ್ನವಾಗಿ ಚಿತ್ರಿಸಿದ ಭಾಸಮಹಾಕವಿಯು, ದುರ್ಯೋಧನನಂತಹ ವೀರಶ್ರೇಷ್ಠನನ್ನು ಮೋಹವಿಕಾರಕ್ಕೊಳಗು ಮಾಡುವ ಭೋಗ ಸಾಮಗ್ರಿಗಳಂತೆ ಅಪ್ಸರೆಯರನ್ನು ಚಿತ್ರಿಸುವ ಬಗೆ ಹೇಗೆ ?

ದುರ್ಯೋಧನನು ಮೃತಪಟ್ಟಬಳಿಕ, ಪುತ್ರಶೋಕದಿಂದ ಆಹತನಾದ ಧೃತರಾಷ್ಟ್ರನು ತನ್ನ ಮಕ್ಕಳನ್ನು ನಾಶಗೊಳಿಸಿ ಅನಿಷ್ಟಕರವಾದ ರಾಜ್ಯದಲ್ಲಿರದೆ ಸಾಧುಶ್ರೇಷ್ಠರಿಂದ ತುಂಬಿ "ಸಜ್ಜನ ಧನ" ಗಳಾಗಿರುವ ತಪೋವನಗಳಿಗೆ ತೆರಳುವುದಾಗಿ * ತನ್ನ ನಿಶ್ಚಯವನ್ನು ನುಡಿಯುವನು. ಇಲ್ಲಿ ತಪೋವನಗಳೆಂದು ಬಹುವಚನವು ಸೂಚಿತವಾಗಿರುವುದೂ ಒಂದು ವಿಶೇಷ. ತಪೋವನದಿಂದ ತಪೋವನಕ್ಕೆ ತೆರಳಿ ಅವನು

* ಯಾಮ್ಯೇಷ ಸಜ್ಜನಧನಾನಿ ತಪೋವನಾನಿ
ಪುತ್ರಪ್ರಣಾಶ ವಿಫಲಂ ಹಿ ಧಿಗಸ್ತು ರಾಜ್ಯಮ್"

ಶಾಂತಿಯನ್ನು ಗಳಿಸಬೇಕಾಗಿದೆ. ನಿಂತಲ್ಲಿ ನಿಲ್ಲಲಾರದೆ ಪರಿತಪಿಸುವ ಸ್ಥಿತಿಯಲ್ಲಿರುವ ಅವನ ಹೃದಯದ ತಳಮಳವೂ ಸಂಕಟವೂ ವಾನಪ್ರಸ್ಥಾಶ್ರಮಿಗಳಂತೆ ಒಂದು ತಪೋವನದಲ್ಲಿ ಶಾಂತಿ ಸಮಾಧಾನಗಳನ್ನು ಕಾಣಲು ಅವಕಾಶ ಕೊಡುವಂತಿಲ್ಲ; ಕೇವಲ ಸಣ್ಣ ವಿಚಾರಗಳಲ್ಲಿ ಕೂಡ ಹೀಗೆ ಭಾಸಕವಿಯು ತನ್ನ ಸಂವಿಧಾನ ಸಾಮರ್ಥ್ಯದ ಕೈಚಳಕವನ್ನು ತೋರಿಸಿದ್ದಾನೆ. ಅಶ್ವತ್ಥಾಮನು ಶತ್ರುಶಿಬಿರದಲ್ಲಿ ಮಲಗಿರುವ ಪಾಂಡವರು, ಪಾಂಚಾಲರು ಮುಂತಾದವರನ್ನು ಕೊಲ್ಲಲು ತಾನು ಧನುರ್ಧಾರಿಯಾಗಿ ಹೊರಡುವುದಾಗಿ ಹೇಳುವನು. ಅಲ್ಲಿಗೆ ಊರುಭಂಗ ರೂಪಕವು ಮುಗಿಯುವುದು. ಅಶ್ವತ್ಥಾಮನ ಕೊನೆಯ ಮಾತುಗಳಿಂದ ಕೂಡ ವ್ಯಂಗ್ಯವಾಗಿ ಒಂದು ಸೂಚನೆಯಿರುವಂತೆ ತೋರುತ್ತದೆ: ಅವನು ತನ್ನ ತಂದೆಯ ಶ್ರಾದ್ಧಕರ್ಮವನ್ನು ಪೂರೈಸಿಕೊಂಡು ಬಂದು ದುರ್ಯೋಧನನನ್ನು ನೋಡುವನು. ಅಶ್ವತ್ಥಾಮನು ಬಂದಾಗ ಅಪರಾಹ್ನವು ಕಳೆದು ಬಹುಕಾಲವಾಗಿದ್ದುದನ್ನೂ ಅವನು ದುರ್ಯೋಧನನ ಬಳಿಯಲ್ಲಿಲ್ಲದೆ ಹೋದುದಕ್ಕೆ ಕಾರಣವನ್ನೂ ಸೂಚಿಸಲು ಕವಿಯು ಇಲ್ಲಿ ಶ್ರಾದ್ಧವಿಚಾರವನ್ನು (ಮಹಾಭಾರತದಲ್ಲಿಲ್ಲದ ಸಂವಿಧಾನವನ್ನು) ಕಲ್ಪಿಸಿದ್ದಾನೆ. ತೊಡೆಗಳನ್ನು ಮುರಿದುಕೊಂಡು ರಕ್ತಮಯವಾಗಿರುವ ದೇಹದಿಂದಲೂ, ಕೆದರಿದ ಕೇಶಜಾಲದಿಂದಲೂ ಕೂಡಿರುವ ದುರ್ಯೋಧನನನ್ನು ಅಶ್ವತ್ಥಾಮನು ಮುಳುಗುವ ಸೂರ್ಯನಿಗೆ ಹೋಲಿಸುವನು. ಬಹುಶಃ ಪಶ್ಚಿಮ ದಿಗಂತದಲ್ಲಿ ಮುಳುಗುವುದರಲ್ಲಿರುವ ಸೂರ್ಯನನ್ನೂ ಕಂಡು ಅವನು ಈ ರೀತಿ ವರ್ಣಿಸುವನೆಂದು ತೋರುತ್ತದೆ. ಅನಂತರ ಸ್ವಲ್ಪ ಹೊತ್ತಿಗೇ ದುರ್ಯೋಧನನು ಮೃತಪಡುವನು. ಅಂತು, ಆ ವೇಳೆಗೆ ಸೂರ್ಯಾಸ್ತವಾದುದರಿಂದಲೇ, ಮಲಗಿರುವವರನ್ನು ವಧೆಮಾಡಲು ತಾನು ಬಾಣಪಾಣಿಯಾಗಿ ಹೊರಡುವುದಾಗಿ ಅಶ್ವತ್ಥಾಮನು ನುಡಿಯುವಂತೆಯೂ ತೋರುವುದು. ಅತ್ತ ದಿನಮಣಿಯಾದ ಸೂರ್ಯನು ಮುಳುಗಿದಂತೆ ಇತ್ತ ಕುರುಕುಲ ಸೂರ್ಯನೂ ಮುಳುಗಿದನೆಂದು ಸೂಚಿಸಿ ತಾನು ಚಿತ್ರಿಸಿದ ಮಹಾ ವ್ಯಕ್ತಿಗೆ ತನ್ನ ಕಾಣಿಕೆಯನ್ನರ್ಪಿಸುವುದಕ್ಕಾಗಿ ಕವಿಯು ಈ ಸನ್ನಿವೇಶವನ್ನು ಕಲ್ಪಿಸಿರಬಹುದೆ?

**ಪಾತ್ರರಚನೆ:**—ಈ ರೂಪಕದಲ್ಲಿ ಕವಿಯ ದೃಷ್ಟಿಯು ಮುಖ್ಯವಾಗಿ ನೆಲಸಿರುವುದು ದುರ್ಯೋಧನ ಪಾತ್ರವೊಂದರಲ್ಲ; ಉಳಿದ ಪಾತ್ರಗಳ ಮೇಲೆ ಬೀಳುವುದೆಲ್ಲ ಅವನ ಅಪಾಂಗ ಪ್ರಭೆಯು ಮಾತ್ರವೇ. ಅಷ್ಟುಮಟ್ಟಿನ ಆ ಕಡೆಗಣ್ಣಿನ ನೋಟದ ಪ್ರಭೆಯಿಂದಲೇ ಆ ಪಾತ್ರಗಳೆಲ್ಲ ತೇಜಸ್ವಿಗಳಾಗಿ ಪರಿಣಮಿಸಿರುವಲ್ಲಿ, ದುರ್ಯೋಧನ ಪಾತ್ರದ ಸೊಬಗನ್ನು ಕೇಳಬೇಕೆ?

**ದುರ್ಯೋಧನ**

ದುರ್ಯೋಧನನು ಭೀಮನ ಗದಾಘಾತದಿಂದ ನೆಲಕ್ಕುರುಳಿದ ಮೇಲೆ ನಡೆದಿರುವುದನ್ನು ಮಹಾಭಾರತದ ಅದೇ ಕಥಾಭಾಗಕ್ಕೆ ಹೋಲಿಸಿ ನೋಡಿದರೆ, ಊರುಭಂಗದ ದುರ್ಯೋಧನನು ಮಹಾನುಭಾವನೆಂಬ ಅಂಶವು ವ್ಯಕ್ತವಾಗುವುದು.

**ಮಹಾಭಾರತದ ದುರ್ಯೋಧನನ** ತೊಡೆಗಳನ್ನು ತನ್ನ ಗದಾಘಾತದಿಂದ ಮುರಿದು ನೆಲಕ್ಕುರುಳಿಸಿದಮೇಲೆ ಭೀಮನು ಅವನ ತಲೆಯನ್ನು ತುಳಿದು ಅವನ ತಲೆಯಮೇಲೆ ಕುಣಿಯುವನು. ‡ ಗದಾಯುದ್ಧ ನಿಯಮಕ್ಕೆ ವಿರುದ್ಧವಾಗಿ ತೊಡೆಗಳಿಗೆ ಗದೆಯಿಂದ ಹೊಡೆದುದೂ ಅಲ್ಲದೆ ನೆಲಕ್ಕೆ ಬಿದ್ದವನ ವಿಚಾರದಲ್ಲಿ ಭೀಮನು ಆ ರೀತಿ ಅಪಚಾರ ಮಾಡಿದುದನ್ನು ಕಂಡು ಯುಧಿಷ್ಠಿರನು, "ನಿನ್ನ ಪ್ರತಿಜ್ಞೆಯು ನೆರವೇರಿತು. ಇನ್ನು ಈ ರೀತಿ ಮಾಡುವುದು ಉಚಿತವಲ್ಲ. ಅವನು (ಮೂರ್ಧಾಭಿಷಿಕ್ತನಾದ) ರಾಜ, ನಮ್ಮ ಬಂಧು" § ಎಂದು ಹೇಳಿ ಭೀಮನ ವಿಕಟ ವರ್ತನೆಯನ್ನು ನಿರೋಧಿಸಿ ನಿಲ್ಲಿಸುವನು. ಅಲ್ಲದೆ,

---

‡ "ಶಿರಶ್ಚ ರಾಜಸಿಂಹಸ್ಯ ಪಾದೇನ ಸಮಲೋಡಯತ್ ॥"

§ "ಗತೋಽಸಿ ವೈರಸ್ಯಾನೃಣ್ಯಂ ಪ್ರತಿಜ್ಞಾ ಪೂರಿತಾ ತ್ವಯಾ ।
ಶುಭೇನೈವಾಶುಭೇನಾಥ ಕರ್ಮಣಾ ವಿರಮಾಧುನಾ ॥
ಮಾ ಶಿರೋಽಸ್ಯ ಪದಾ ಮರ್ದೀರ್ಮಾಧರ್ಮಸ್ತೇಽತಿಗೋ ಭವೇತ್ ;
ರಾಜಾ ಜ್ಞಾತಿರ್ಹತಶ್ಚಾಯಂ ನೈತನ್ನ್ಯಾಯ್ಯಂ ತವಾನಘ ॥"

ಅವನು ದುರ್ಯೋಧನನಿಗೆ ಸಂಭವಿಸಿದ ವಿಪತ್ತಿಗಾಗಿ ಕಂಬನಿಯನ್ನು ಸುರಿಸುತ್ತ, ನೆಲದಮೇಲೆ ಬಿದ್ದಿರುವ ಆ ವೀರನ ಬಳಿಗೆ ಹೋಗಿ ಗದ್ಗದ ಧ್ವನಿಯಿಂದ ಸಮಾಧಾನ ವಚನಗಳನ್ನಾಡುವನು. ಅಲ್ಲದೆ "ದುಃಖಾರ್ತ" ನಾಗಿ ಪ್ರಲಾಪಿಸುವನು. ಕೃಷ್ಣನು ದುರ್ಯೋಧನನ ಹೀನ ಕಾರ್ಯ ಗಳನ್ನು ಅವನ ನೆನಪಿಗೆ ತಂದು ಬಿರುನುಡಿಗಳನ್ನಾಡಿದಾಗ, ಆವನು ಸರ್ಪದಂತೆ ಬುಸುಗುಟ್ಟುತ್ತ "ಋಜುಮಾರ್ಗದಲ್ಲಿ ಯುದ್ಧಮಾಡುತ್ತಿದ್ದ ಸಾವಿರಾರುಮಂದಿ ರಾಜರುಗಳನ್ನು ಅನೇಕ ಛದ್ಮೋಪಾಯಗಳಿಂದ ವಂಚಿಸಿ ಘಾತಿಸಿದ ನೀನು ಲಜ್ಜಾವಿಹೀನನು, ನಿರ್ಘೃಣನು. ಸಮರ ದಲ್ಲಿ ನನ್ನೊಡನೆಯೂ, ಕರ್ಣನೊಡನೆಯೂ, ಭೀಷ್ಮ ದ್ರೋಣರೊಡ ನೆಯೂ ಋಜುಮಾರ್ಗದಲ್ಲಿ ಯುದ್ಧ ಮಾಡಿದ್ದರೆ ನಿನಗೆ ನಿಶ್ಚಯವಾಗಿ ಜಯವೇ ಆಗುತ್ತಿರಲಿಲ್ಲ" * ಎಂದು ಮೂದಲಿಸುವನು. ಅವನ ಮಾತು ಗಳಲ್ಲಿ ನಿಜವಿಲ್ಲದೆ ಇಲ್ಲ. ಪಾಂಡವರು ನ್ಯಾಯವಾಗಿ ಯುದ್ಧಮಾಡಿ ಭೀಷ್ಮದ್ರೋಣರನ್ನೂ, ಕರ್ಣನನ್ನೂ ಸೋಲಿಸಲಿಲ್ಲ. ದುರ್ಯೋಧನ ನೊಡನೆ ಅಧರ್ಮ ಯುದ್ಧವನ್ನೇ ಹೂಡಬೇಕೆಂದು ಗದಾಯುದ್ಧಕ್ಕೆ ಮುಂಚಿನಿಂದಲೂ ಕೃಷ್ಣನು ಪ್ರೇರೇಪಿಸುವನು. ಗದಾಯುದ್ಧಕ್ಕೆ ಮುಂಚೆ ಅರ್ಜುನನೊಡನೆ ಕೃಷ್ಣನು ಹೇಳುವ "ಧರ್ಮದಿಂದ ಯುದ್ಧ ಮಾಡು ವುದಾದರೆ ಭೀಮನು ಜಯಿಸುವುದಿಲ್ಲ. ಅನ್ಯಾಯದಿಂದ ಯುದ್ಧ ಮಾಡಿದರೇಯೇ ಅವನು ದುರ್ಯೋಧನನನ್ನು ಕೊಂದಾನು" † ಎಂಬ ಮಾತುಗಳೂ, "ಶತ್ರುನಾಶಕರನಾದ ಭೀಮನು ಆ ಪ್ರತಿಜ್ಞೆಯನ್ನು ನೆರ ವೇರಿಸಲಿ. ಮೋಸಗಾರನಾದ ದುರ್ಯೋಧನನನ್ನು ಮೋಸದಿಂದಲೇ

---

* "ಘಾತಯಿತ್ವಾ ಮಹೀಪಾಲಾನೃಜುಯುದ್ಧಾನ್ಸಹಸ್ರಶಃ ।
ಜಿಹ್ಮೈರುಪಾಯೈರ್ಬಹುಭಿರ್ನ ತೇ ಲಜ್ಜಾ ನ ತೇ ಘೃಣಾ ॥
ಯದಿ ಮಾಂ ಚಾಪಿ ಕರ್ಣಂ ಚ ಭೀಷ್ಮದ್ರೋಣೌ ಚ ಸಂಯುಗೇ ।
ಋಜುನಾ ಪ್ರತಿಯುಧ್ಯೇಥಾ ನ ತೇ ಸ್ಯಾದ್ವಿಜಯೋ ಧ್ರುವಮ್ ॥"

† ಭೀಮಸೇನಸ್ತು ಧರ್ಮೇಣ ಯುಧ್ಯಮಾನೋ ನ ಜೇಷ್ಯತಿ ।
ಅನ್ಯಾಯೇನ ತು ಯುಧ್ಯನ್ವೈ ಹನ್ಯಾದೇವ ಸುಯೋಧನಮ್"

ಕೊಲ್ಲಲಿ" * ಎಂಬ ಮಾತುಗಳೂ ಇದಕ್ಕೆ ಪ್ರಮಾಣ. ಅಂತು, ಅನ್ಯಾಯದ ಯುದ್ಧಕ್ಕೆ ಮೊದಲೇ ಏರ್ಪಾಡು ನಡೆದಿರುವುದು. ಅಧರ್ಮಯುದ್ಧವು ನಡೆದು ದುರ್ಯೋಧನನು ಕೆಳಕ್ಕೆ ಬಿದ್ದುದನ್ನೂ, ಭೀಮನು ಅವನ ತಲೆಯನ್ನು ಒದೆದು ಅದರಮೇಲೆ ಕುಣಿದುದನ್ನೂ, ಕಂಡು ಬಲರಾಮನು ರೋಷಪೂರಿತನಾಗಿ "ಛೆ! ವೃಕೋದರನು ಮಾಡಿದಂತೆ ನಾಭಿಯಿಂದ ಕೆಳಕ್ಕೆ ಗದೆಯಿಂದ ಹೊಡೆದುದನ್ನು ಧರ್ಮಯುದ್ಧದಲ್ಲಿ ಎಂದೂ ಕಂಡುದಿಲ್ಲ'' § ಎಂದು ಗರ್ಜಿಸಿ ತನ್ನ ಆಯುಧವನ್ನೆತ್ತಿ ಭೀಮನ ಮೇಲೆ ಕೈಮಾಡಲುದ್ಯುಕ್ತನಾಗುವನು. ಕೃಷ್ಣನು ಅವನಿಗೆ ವಿಧವಿಧವಾಗಿ ಸಮಾಧಾನ ಹೇಳಿದಮೇಲೆ, ಅವನು ರಥಾರೂಢನಾಗಿ ದ್ವಾರಕಾ ನಗರಕ್ಕೆ ಪ್ರಯಾಣಮಾಡುವನು. (ಊರುಭಂಗದ ಬಲರಾಮನಂತೆ ಮಹಾಭಾರತದ ಬಲರಾಮನು, ದುರ್ಯೋಧನನು ಮೃತಪಡುವವರೆಗೂ ಅಲ್ಲಿರುವುದಿಲ್ಲ.) ರಾಜನಾದ ದುರ್ಯೋಧನನ ತಲೆಯನ್ನು ಒದೆದು ತನಗೆ ಅಸಮಾಧಾನವನ್ನುಂಟುಮಾಡಿರುವುದನ್ನು ಮತ್ತೆ ಸೂಚಿಸಿ ತಮ್ಮ ವಂಶದವನಾದ ಅವನು ಮೃತಪಡುವ ಸ್ಥಿತಿಯಲ್ಲಿರುವುದಕ್ಕಾಗಿ ತನಗೆ ಸಂತಾಪವೆಂದು ದುಃಖಾರ್ತನಾದ ಯುಧಿಷ್ಠಿರನು ಕೃಷ್ಣನೊಡನೆ ತಿಳಿಸುವನು. ಕೃಷ್ಣನು ಅವನಿಗೆ ಸಮಾಧಾನ ಹೇಳುವನು. ಅನಂತರ ಪಾಪಾತ್ಮನಾದ ದುರ್ಯೋಧನನು ಪರಾಜಿತನಾದನೆಂದು ತನ್ನ ಕಡೆಯವರಿಗೆ ಕೃಷ್ಣನು ಹೇಳಿದುದನ್ನು ಕೇಳಿ, ದುರ್ಯೋಧನನು ಅವನ ಅನ್ಯಾಯಗಳನ್ನೆಲ್ಲ ಒಕ್ಕಣಿಸುವನು. ಅನಂತರ ಕೃಷ್ಣನು ಅವನನ್ನು ಕುರಿತು ಅವನ ಅಕಾರ್ಯಗಳನ್ನೆಲ್ಲ ತಿಳಿಸಿ ಅವಕ್ಕೆ ತಕ್ಕ ಫಲವು ಲಭಿಸಿತೆಂದು ಹೇಳಿ ಮೂದಲಿಸುವನು. ಇಬ್ಬರ ಮಾತುಗಳಲ್ಲಿಕೂಡ—ಬಲುಹುಂಟು; ಬಿರುಸುಂಟು; ಭೀಷಣತೆಯುಂಟು! ಕ್ರೂರನಾರಾಚಗಳಂತೆ ನಾಟುವ ಶಕ್ತಿಯುಂಟು.

---

* "ಸೋಽಯಂ ಪ್ರತಿಜ್ಞಾಂ ತಾಂ ಚಾಪಿ ಪಾಲಯಿತ್ವಾರಿಕರ್ಶನಃ ||
ಮಾಯಾವಿನಂ ತು ರಾಜಾನಂ ಮಾಯಯೈವ ನಿಕೃಂತತು" ||

§ "ಅಹೋ ಧಿಗ್ಯದಧೋನಾಭೇಃ ಪ್ರಹೃತಂ ಧರ್ಮವಿಗ್ರಹೇ |
ನೈತದ್ದೃಷ್ಟಂ ಗದಾಯುದ್ಧೇ ಕೃತವಾನ್ ಯದ್ವೃಕೋದರಃ ||

ಕೃಷ್ಣನು ರಣಭೂಮಿಯನ್ನು ಬಿಟ್ಟು ಪಾಂಡವರೊಡನೆ ಹೊರಟು ಹೋಗುವುದಕ್ಕೆ ಮುಂಚೆ, ಮಹಾಭಾರತದ ದುರ್ಯೋಧನನು ಆತನೊಡನೆ ಆಡುವ ಕೊನೆಯ ಮಾತುಗಳಂತು, ಕಡುಗಲಿಯಾದ ಕೌರವನ ಶೌರ್ಯಕ್ಕೆ ತಕ್ಕವುಗಳು ; ವ್ಯಾಸರು "ರಾಜಸಿಂಹ" ನೆಂದು ವರ್ಣಿಸಿ ಒರೆಹಿಡಿದು ತೋರಿರುವ ಆ ವೀರನ ಬಣ್ಣಕ್ಕೆ ಅನುರೂಪವಾದವುಗಳು; ಕವಿತಾಪ್ರಪಂಚದಲ್ಲಿ ಚಿರಜೀವಿಗಳೆನಿಸಿ ಸುಪ್ರಸಿದ್ಧರಾಗಿರುವ ಹೋಮರ್, ವರ್ಜಿಲ್, ಡ್ಯಾಂಟೆ, ಮಿಲ್ಟನ್ ಮುಂತಾದ ಕವಿಗಳು ಚಿತ್ರಿಸಿರುವ ಶೂರರ ವೀರವಾಣಿಗಳಾವುವಕ್ಕೂ ಕಡಮೆಯೆನಿಸದೆ ವೀರತ್ವಕ್ಕೇ ಒಪ್ಪವಿಡುವಂತಿರುವಷ್ಟು ಘನತೆ ಗಾಂಭೀರ್ಯಗಳಿಂದ ಕೂಡಿರತಕ್ಕವುಗಳು. ಆ ರಾಜಸಿಂಹ ಗರ್ಜನೆಯ ಮಾತುಗಳಿವು ;* "ನಾನು ಅಧ್ಯಯನಮಾಡಿದೆ. ವಿಧಿಗನುಸಾರವಾಗಿ ದಾನಮಾಡಿದೆ. ಆಸಮುದ್ರ ಪರ್ಯಂತವೂ ಪೃಥ್ವಿಯ ಪ್ರಭುತ್ವವನ್ನು ಮಾಡಿ ಶತ್ರುಗಳ ತಲೆಯನ್ನು ಮೆಟ್ಟಿ ಆಳಿದೆ. ನನಗೆ ಲಭಿಸುವುದಕ್ಕಿಂತ ಉತ್ತಮವಾದ ಸಾವು ಮತ್ತಾರಿಗೆ ದೊರೆತೀತು ? ಸ್ವಧರ್ಮದಲ್ಲಿ ಪ್ರೀತಿಯುಳ್ಳ ಕ್ಷತ್ರಿಯರಿಗಾವುದು ಇಷ್ಟವೋ ಆ ವೀರಮರಣವಿದು ಸಮನಿಸಿರುವುದು ನನಗೆ ಲಭಿಸುವುದಕ್ಕಿಂತ ಉತ್ತಮವಾದ ಸಾವು ಮತ್ತಾರಿಗೆ ದೊರೆತೀತು ? ಮನುಷ್ಯರು ಪಡೆಯುವುದು ಸುಲಭವಲ್ಲದಿರುವ ಮತ್ತು ದೇವತೆಗಳೂ ಅನುಭವಿಸಲು ಯೋಗ್ಯವಾದ ಐಹಿಕ ಭೋಗಗಳನ್ನನುಭವಿಸಿದೆ. ಉತ್ತಮವಾದ ಐಶ್ವರ್ಯವನ್ನು ಅನು

---

* "ಅಧೀತಂ ವಿಧಿವದ್ದತ್ತಂ ಭೂಃ ಪ್ರಶಸ್ತಾ ಸಸಾಗರಾ ।
ಮೂರ್ಧ್ನಿ ಸ್ಥಿತಮಮಿತ್ರಾಣಾಂ ಕೋ ನು ಸ್ವಂತತರೋ ಮಯಾ ॥
ಯದಿಷ್ಟಂ ಕ್ಷತ್ರ ಬನ್ಧೂನಾಂ ಸ್ವಧರ್ಮಮನುಪಶ್ಯತಾಮ್ ।
ತದಿದಂ ನಿಧನಂ ಪ್ರಾಪ್ತಂ ಕೋ ನು ಸ್ವಂತತರೋ ಮಯಾ ॥
ದೇವಾರ್ಹಾ ಮಾನುಷಾ ಭೋಗಾಃ ಪ್ರಾಪ್ತಾ ಅಸುಲಭಾ ನೃಪೈಃ ।
ಐಶ್ವರ್ಯಂ ಚೋತ್ತಮಂ ಪ್ರಾಪ್ತಂ ಕೋ ನು ಸ್ವಂತತರೋ ಮಯಾ ॥
ಸುಹೃತ್ಸಾನುಬನ್ಧಶ್ಚ ಸ್ವರ್ಗಂ ಗಂತಾSಹಮಚ್ಯುತ ।
ಯೂಯಂ ಗರ್ಹಿತಸಂಕಲ್ಪಾ ಶೋಚನ್ತೋ ವರ್ತಯಿಷ್ಯಥ ॥"

ಭವಿಸಿ ಆಳಿಸಿ. ನನಗೆ ಲಭಿಸಿರುವುದಕ್ಕಿಂತ ಉತ್ತಮವಾದ ಸಾವು ಮತ್ತಾರಿಗೆ ದೊರೆತೀತು? ಬಂಧುಮಿತ್ರರೊಡನೆ ನಾನು ಸ್ವರ್ಗಕ್ಕೆ ಹೋಗುವೆನು. ಸಂಕಲ್ಪವು ಈಡೇರದ (ಎಂದರೆ ನಿಮ್ಮ ವೈಭವವನ್ನು ನೋಡಿ ಹರ್ಷಿಸುವ ಜನರೆಲ್ಲರೂ ಮೃತರಾಗಿರುವ ಕಾರಣ, ಅವರೆದುರಿಗೆ ಅಭ್ಯುದಯ ಹೊಂದಬೇಕೆಂಬ ಸಂಕಲ್ಪವು ಈಡೇರದ) ನೀವುಗಳು ದುಃಖಿಸುತ್ತ ಇಲ್ಲಿರಿ." ಗದಾಯುದ್ಧದ ಸನ್ನಿವೇಶಕ್ಕೆ ಮೊದಲು ಕೃಪಾಚಾರ್ಯನು ಪಾಂಡವರೊಡನೆ ಸಂಧಿ ಮಾಡಿಕೊಳ್ಳುವುದೇ ಯುಕ್ತವೆಂದಾಗ "ಇದು ಪೌರುಷವಿಹೀನರಾಗಿ ದೈನ್ಯವನ್ನು ತೋರಿಸುವ ಕಾಲವಲ್ಲ. ನಾವು ಕೆಚ್ಚಿನಿಂದ ಯುದ್ಧಮಾಡಬೇಕಾದ ಕಾಲವಿದು. ಮಿತ್ರರನ್ನೂ, ಭ್ರಾತೃಗಳನ್ನೂ ಮತ್ತು ಅಜ್ಜಂದಿರನ್ನೂ ವಧೆಮಾಡಿಸಿ ಈಗ ನಾನು ಜೀವವನ್ನುಳಿಸಿಕೊಂಡರೆ ಲೋಕವು ನನ್ನನ್ನು ನಿಜವಾಗಿಯೂ ನಿಂದಿಸುವುದು. ಬಂಧು ವಿಹೀನನಾದ ನನ್ನ ರಾಜಭೋಗವಾದರೂ ಎತರದು?"* ಎಂದು ಮಾನಧನನೂ, ಬಂಧುಪ್ರೇಮಿಯೂ ಆದ ವೀರನಿಗೆ ತಕ್ಕ ವಾಣಿಗಳನ್ನಾಡಿ, ಕ್ಷತ್ರಿಯರೆಲ್ಲರಿಂದಲೂ ಶ್ಲಾಘನೆಯನ್ನು ಪಡೆದಿದ್ದ ಕೆಚ್ಚೆದೆಯ ಕಟ್ಟಾಳಿಗೆ ತಕ್ಕಮಾತುಗಳಲ್ಲವೇ ಇವು! ಸಾವು ಸಮನಿಸಿದ್ದರೂ ಧೀರತೆಯಳಿಯದ ವೀರನ ವಾಣಿಗಳಲ್ಲವೇ ಇವು!

ಮಹಾಭಾರತದ ದುರ್ಯೋಧನನು ಉದ್ಧತನಾಗಿ ಅಕಾರ್ಯಮಾಡಿದವನಾದರೂ ಅವನೆಂತಹ ವೀರನೆಂಬುದೂ, ಅವನೆಂತಹ ವಿದ್ಯಾಪ್ರೇಮಿಯೆಂಬುದೂ, ಅವನೆಂತಹ ಬಂಧು ಪ್ರೇಮಿಯೆಂಬುದೂ ಮೇಲೆ ಉದಾಹರಿಸಿರುವ ಅವನ ಮಾತುಗಳಿಂದ ವ್ಯಕ್ತವಾಗುತ್ತವೆ. ಭೀಮನು ತನ್ನ ತಲೆಯನ್ನು ಕಾಲಿನಿಂದೊದೆದು ಘಾತಿಸಿದುದಕ್ಕೂ ಅವನು ವಿಷಾದ

---

* "ನಾಯಂ ಕ್ಲೀಬಾಯಿತುಂ ಕಾಲಃ ಸಂಯೋದ್ಧುಂ ಕಾಲ ಏವ ನಃ ।
ಪಾತಯಿತ್ವಾ ವಯಸ್ಯಾಂಶ್ಚ ಭ್ರಾತೃಾನಥ ಪಿತಾಮಹಾನ್ ॥
ಜೀವಿತಂ ಯದಿ ರಕ್ಷೇಯಂ ಲೋಕೋ ಮಾಂ ಗರ್ಹಯೇದ್ಧ್ರುವಮ್ ।
ಕೀದೃಶಂ ಚ ಭವೇದ್ರಾಜ್ಯಂ ಮಮ ಹೀನಸ್ಯ ಬಂಧುಭಿಃ ॥"

ಪಡೆದ "ನನ್ನ ತಲೆಯನ್ನು ಭೀಮನು ತನ್ನ ಕಾಲಿನಿಂದ ಒದೆದನೆಂಬ ವಿಷಾದವೂ ನನಗಿಲ್ಲ. ಇನ್ನು ಸ್ವಲ್ಪಹೊತ್ತಿಗೆ ಕಾಗೆಗಳೋ, ನರಿಗಳೋ ಅಥವಾ ಹದ್ದುಗಳೋ ನನ್ನ ತಲೆಯಮೇಲೆ ಹೆಜ್ಜೆಯನ್ನಿಟ್ಟುಬಿಡುತ್ತವೆ"* ಎನ್ನುವನು. ತನ್ನ ದೇಹವನ್ನು ಹದ್ದು ಕಾಗೆಗಳೂ, ನರಿಗಳೂ ಕಿತ್ತು ತಿನ್ನುವ ಭೀಕರ ದೃಶ್ಯವನ್ನು ತನ್ನೆದುರಿಗೆ ಕಲ್ಪಿಸಿಕೊಂಡು ಮೃತ್ಯು ಮುಖದಲ್ಲಿ ಈ ಮಾತುಗಳನ್ನಾಡುವುದು ಸಾಮಾನ್ಯರಿಗೆ ಸಾಧ್ಯವೆ? ಆದುದರಿಂದಲೇ ಮಹಾಭಾರತದಲ್ಲಿ, "ವಿವೇಕಿಯಾದ ಕುರುರಾಜನ ಈ ವಾಕ್ಯವು ಮುಗಿದಾಗ (ದೇವತೆಗಳು) ಸುಗಂಧವನ್ನು ಬೀರುವ ಪುಷ್ಪ ವೃಷ್ಟಿಯನ್ನು ಕರೆದರು" ಎಂದು ಹೇಳಿರುವುದು! ಪುಷ್ಪವೃಷ್ಟಿಯಾಯಿ ತೆಂದು ಮಾತ್ರವೇ ಹೇಳುವುದರಿಂದ ತೃಪ್ತಿಗೊಳ್ಳದೆ ವ್ಯಾಸರು ಸುಗಂಧ ವನ್ನು ಬೀರುವ ಪುಷ್ಪಗಳ "ಮಹದ್ವರ್ಷ"ವೇ ಆಯಿತೆಂದು ಹೇಳಿ ದ್ದಾರೆ. ದುರ್ಯೋಧನನ ಮಾತುಗಳೆಂತಹವೆಂಬುದಕ್ಕೆ ಈ "ಮಹದ್ವರ್ಷ" ವಾಯಿತೆಂಬುದೊಂದೇ ತೀರ ಅನುರೂಪವಾದ ವಿವರಣೆ.

ಮೇಲೆ ಸೂಚಿಸಿರುವ ನಾನಾ ಅಂಶಗಳನ್ನೂ ಗಮನಿಸಿದರೆ, ಭಾಸಮಹಾಕವಿಯು ಊರು ಭಂಗದ ದುರ್ಯೋಧನ ಪಾತ್ರವನ್ನು ಕಡೆದು ನಿಲ್ಲಿಸುವಲ್ಲಿ ಮಾಡಿರತಕ್ಕ ಮಾರ್ಪಾಡುಗಳು ವ್ಯಕ್ತವಾಗುವುವು. ಮಹಾಭಾರತದ ದುರ್ಯೋಧನನಂತೆ ಅವನೂ ಶೂರಾಗ್ರಣಿ. ಛಲದಿಂದ ಚೋದಿತನಾಗಿ ಅನೇಕ ಅಕಾರ್ಯಗಳನ್ನು ಮಾಡಿ ಕೊನೆಗೆ ಛಲಕ್ಕೆ ಬಲಿಯಾಗುವ ಊರುಭಂಗದ ದುರ್ಯೋಧನನಲ್ಲಿ ಅದೊಂದು ಅವ ಗುಣವನ್ನು ಬಿಟ್ಟರೆ ಉಳಿದವುಗಳೆಲ್ಲ ಸದ್ಗುಣಗಳೇ. ಅವನ ಮಾತಾ ಪಿತೃ ಪ್ರೇಮ, ಗುರುಭಕ್ತಿ, ವಿನಯ, ಶೌರ್ಯ, ಪರಿಜನರ ಮೇಲಣ ದಾಕ್ಷಿಣ್ಯ, ಮುಂತಾದ ಸದ್ಗುಣಗಳು ಚಿತ್ತಾಕರ್ಷಕವಾಗಿವೆ. ಧೃತ

---

* "ನ ಮೇ ವಿಷಾದೋ ಭೀಮೇನ ಪಾದೇನ ಶಿರ ಆಹತಮ್ ।
ಕಾಕಾ ವಾ ಕಂಕಗೃಧ್ರಾ ವಾ ನಿಧಾಸ್ಯಂತಿ ಪದಂ ಕ್ಷಣಾತ್ ॥"

‡ "ಅಸ್ಯ ವಾಕ್ಯಸ್ಯ ನಿಧನೇ ಕುರುರಾಜಸ್ಯ ಧೀಮತಃ ।
ಅಪತತ್ಸು ಮಹದ್ವರ್ಷಂ ಪುಷ್ಪಾಣಾಂ ಪುಣ್ಯಗಂಧಿನಾಮ್ ॥"

ರಾಷ್ಟ್ರನು ವರ್ಣಿಸುವಂತೆ ಅವನು "ಕಾಂಚನ ಸ್ತಂಭ ಸಮಪ್ರಮಾಣ" ನಾದ ಶೂರಾಗ್ರಣಿ; "ಕುಲಮಾನಿ;" "ಮಾನವೀರ್ಯ ಪ್ರದೀಪ್ತ". ತಾನು ಮಾಡುತ್ತಿದ್ದುದು ಅಕಾರ್ಯವೆಂದು ಬಹುಕಾಲದಿಂದ ಅವನ ಮನಸ್ಸಿನಲ್ಲಿ ಒಳತೋಟಿ ಮಸಗಿ ಪಶ್ಚಾತ್ತಾಪವುಂಟಾಗಿರುವುದು. ಆದರೂ ಅವನೇ ಅಶ್ವತ್ಥಾಮನೊಡನೆ ಹೇಳುವಂತೆ ರಾಜರು ಮಾನಶರೀರರು. ಮಾನಕ್ಕಾಗಿ ಅವನು ಯುದ್ಧವನ್ನು ಮುಂದುವರಿಸಿದನು. ಆದಾಗ್ಯೂ ಪಶ್ಚಾತ್ತಾಪದ ಅಗ್ನಿಯಿಂದ ಅವನ ಮನಸ್ಸು ತಪ್ತವಾಗಿ ಪುಟವಿಕ್ಕಿದ ಚಿನ್ನವಾಯಿತು. ವೈರವು ಪಶ್ಚಾತ್ತಾಪವಾಗಿ ಪರಿಣಮಿಸಿತೆಂಬ ಬಲರಾಮನ ವಾಣಿಯೇ ಅದಕ್ಕೆ ಪ್ರಮಾಣ. ಬಲರಾಮನು ಇತರರ ದೋಷಗಳನ್ನೆತ್ತಿ ಹಾಕತಕ್ಕವನೇ ಹೊರತು, ಅವುಗಳನ್ನು ಬಚ್ಚಿಟ್ಟು ಹೂಗಳಿಂದ ಪೂಜಿಸಿ ಮುಖೋಲ್ಲಾಸಕ್ಕಾಗಿ ಮೃದುನುಡಿಗಳನ್ನಾಡುವವನೇ ಅಲ್ಲ. ಅವನು ಹೀಗೆಂದು ಹೇಳಿದಮೇಲೆ ಅದಕ್ಕಿಂತ ಹೆಚ್ಚಿನ ಪ್ರಮಾಣ ವಾವುದೂ ಬೇಡ.

**ಷೇಕ್ಸ್‌ಪಿಯರ್ ಮಹಾಕವಿಯ ರುದ್ರನಾಟಕ ನಾಯಕರ ಹೋಲಿಕೆ**

ಸ್ಥೂಲವಾಗಿ ನೋಡಿದರೆ, ಊರುಭಂಗದ ದುರ್ಯೋಧನನನ್ನು ಷೇಕ್ಸ್‌ಪಿಯರ್ ಮಹಾಕವಿಯ ರುದ್ರನಾಟಕಗಳ ನಾಯಕರಿಗೆ ಹೋಲಿಸಬಹುದು. ಷೇಕ್ಸ್‌ಪಿಯರ್ ಮಹಾಕವಿಯು ತಾನು ಬರೆದಿರುವ ರುದ್ರನಾಟಕಗಳ ("ಟ್ರ್ಯಾಜೆಡಿ"ಗಳ) ನಾಯಕರು ತಮ್ಮ ತಮ್ಮಲ್ಲಿರುವ ಒಂದು ದೋಷದ ದೆಸೆಯಿಂದ ತಮ್ಮ ತಮ್ಮ ವಿನಾಶದ ದಾರಿಯನ್ನು ತಾವೇ ಕಲ್ಪಿಸಿಕೊಂಡು ತಮ್ಮ ಕೃತ್ಯಗಳ ಫಲವಾಗಿ ಪರಿಣಾಮದಲ್ಲಿ ಮೃತಪಡುವಂತೆ ಚಿತ್ರಿಸಿದ್ದಾನೆ. ಅಲ್ಲದೆ ಅವರು ಭಾವವೈವಿಧ್ಯದ ಒಳತೋಟಿಯಿಂದ (Conflict of feelings) ಕೂಡಿ ತೊಳಲುತ್ತಾರೆ. ಅವರಿಗೆ ನಾಶಕರವಾಗಿ ಪರಿಣಮಿಸುವ ಒಂದು ದುರ್ಗುಣವನ್ನು ಅಥವಾ ನ್ಯೂನತೆಯನ್ನು ಬಿಟ್ಟರೆ, ಉಳಿದವುಗಳೆಲ್ಲ ಸದ್ಗುಣಗಳೇ. ಆದಕಾರಣ ಷೇಕ್ಸ್‌ಪಿಯರ್ ಮಹಾಕವಿಯ ರುದ್ರನಾಟಕದ ನಾಯಕನು ಮೃತಪಡು

ವುದನ್ನು ಕಂಡ ಹೃದಯವು ಅನುತಾಪ ಮುಗ್ಧವಾಗಿ, " ಪಾಪ ! ಇಷ್ಟು ಒಳ್ಳೆಯವನಾಗಿದ್ದೂ, ಇದೊಂದು ದೋಷದ ದೆಸೆಯಿಂದ ಸಾವಿಗೆ ಮಾರ್ಗವನ್ನು ತನ್ನ ಕೃತ್ಯಗಳ ಫಲವಾಗಿ ಕಲ್ಪಿಸಿಕೊಂಡು, ತಾನು ಬದುಕಿರುವವರೆಗೂ ಕೋಟಲೆಗೊಳಗಾಗಿ ಕೊನೆಗೆ ತಾನೂ ಮೃತನಾದನಲ್ಲಾ ! ಅಯ್ಯೋ ಪಾಪ ! " ಎಂದು ಆತನಿಗಾಗಿ ಮರುಗಿ, ಕರಗಿ, ನೀರಾಗುವುದು. ಊರು ಭಂಗದ ದುರ್ಯೋಧನನ ವಿಷಯವೂ ಇದೇ ವಿಧವಾಗಿದೆ. ಅವನಲ್ಲಿ ಸದ್ಗುಣಗಳೇ ತುಂಬಿವೆ. ಆದರೂ ಅವನು ಮಾನಧನನಾದ ಛಲಗಾರ. ಇದೊಂದು ದೋಷದ ದೆಸೆಯಿಂದಲೇ ಅವನು ಮೃತನಾಗುವುದು. ಹೀಗಿರುವ ಊರು ಭಂಗದ ದುರ್ಯೋಧನನ ಸದ್ಗುಣಗಳನ್ನೇ ಪರಿಗಣಿಸದೆ ಡಾಕ್ಟರ್ ಎ. ಬೆರ್ರಿಡೇಲ್ ಕೀತ್‌ರವರು, "ದುರ್ಯೋಧನನ ಸ್ವಭಾವದಲ್ಲಿ ದುರ್ಗುಣಗಳೆಲ್ಲ ಕಂಡು ಬಂದರೂ, ಮರಣಕಾಲದಲ್ಲಿ ಶೌರ್ಯವನ್ನು ಮೆರೆದು ಮೃತಪಡುತ್ತಾನೆ " * ಎಂದು ಹೇಳಿರುವುದು ವಿಚಿತ್ರವಾಗಿದೆ. ಅವರು ಹೇಳಿರುವ ಮಾತುಗಳು ಮಹಾಭಾರತದ ದುರ್ಯೋಧನನಿಗೆ ಒಪ್ಪುತ್ತವೆ. ಅಲ್ಲಿರುವ ದುರ್ಯೋಧನ ಚಿತ್ರವೇ ಊರುಭಂಗದಲ್ಲಿದ್ದಂತೆ ಭ್ರಮಿಸಿ ಆ ರೀತಿ ಅವರು ಹೇಳಿರುವಂತೆ ತೋರುತ್ತದೆ. ಪಾಂಡವರನ್ನು ಕೊಲ್ಲುವುದಾಗಿ ಹೇಳಿದ ಬಲರಾಮನನ್ನೂ ಅಶ್ವತ್ಥಾಮನನ್ನೂ ದುರ್ಯೋಧನನು ನಿಷೇಧಿಸಿ, ಅವರು ಆರೀತಿ ಮಾಡಕೂಡದೆಂದು ಕೋರುವಾಗ್ಗೆ ಆಡುವ ನುಡಿಗಳನ್ನು ಮಾತ್ರವೇ ಪರಿಗಣಿಸಿದರೂ ಅವರ ಮಾತುಗಳು ಸಮಂಜಸವಾಗಿಲ್ಲವೆಂಬ ಅಂಶವು ಸ್ಪಷ್ಟವಾಗುವುದು. ಮಹಾಭಾರತದ ದುರ್ಯೋಧನನು ಗದಾಘಾತದಿಂದ ನೆಲಕ್ಕುರುಳಿದ ಮೇಲೆ ವೀರವಾಣಿಗಳನ್ನಾಡಿ, ಸಾವು ನೋವುಗಳನ್ನೂ ಲಕ್ಷ್ಯಮಾಡದೆ ಇರುವನು. ಆದರೂ ಅವನಿಗೆ ಪಾಂಡವರ ಮೇಲಿನ ದ್ವೇಷವು ಹೋಗಿಲ್ಲ. ಅಶ್ವತ್ಥಾಮನು ಕೋಪದಿಂದ ಉರಿಯುತ್ತ ಬಂದು, ತಾನು ಹೋಗಿ ಅಂದು ರಾತ್ರಿ ಪಾಂಡವರನ್ನು ವಧಿಸುವುದಾಗಿ ಹೇಳಿದಾಗ ದುರ್ಯೋಧನನು ಅವನಿಗೆ ಸೇನಾಪತ್ಯಾಭಿಷೇಕ ಮಾಡಿಸಿ

---

* " But Duryodhana, with all his demerits as a man, remains heroic in his death "—Dr. A. Berridale Keith.

ಕಳುಹಿಸುವನು. ಅಶ್ವತ್ಥಾಮನು ಅಂಧಕಾರಾವೃತವಾಗಿರುವ ರಾತ್ರಿಯಲ್ಲಿ ಹಿಂತಿರುಗಿ ಬಂದು, "ದುರ್ಯೋಧನ! ಬದುಕಿರುವೆಯಾದರೆ ನಿನ್ನ ಕಿವಿಗೆ ಸುಖಕರವಾಗಿರುವ ಈ ಮಾತುಗಳನ್ನು ಕೇಳು. ಪಾಂಡವರ ಕಡೆ ಏಳುಮಂದಿ ಉಳಿದಿದ್ದಾರೆ. ನಮ್ಮ ಕಡೆ ನಾವು ಮೂವರು ಉಳಿದು ಬಂದಿದ್ದೇವೆ. ಪಾಂಚಾಲರು ಹತರಾದರು. ಪಾಂಡವರ ಪುತ್ರರು ಹತರಾದರು. ಪಾಂಡವರ ಶಿಬಿರದಲ್ಲಿ ನಿದ್ರಿಸುತ್ತಿದ್ದ ಜನರೂ ಹತರಾದರು. ವಾಹನಗಳಾದ ಸಮಸ್ತ ಪ್ರಾಣಿಗಳೂ ಹತವಾದುವು" ಎಂದು ಹೇಳುವನು. ಆಗ ದುರ್ಯೋಧನನು ಹರ್ಷಿತನಾಗಿ, "ನೀನು ಕೃಪ ಸಾತ್ಯಕಿಯರೊಡನೆ ಇಂದು ನನಗೆ ಮಾಡಿದ ಉಪಕಾರವನ್ನು ಭೀಷ್ಮನು ಮಾಡಲಿಲ್ಲ; ಕರ್ಣನು ಮಾಡಲಿಲ್ಲ. ನಿನ್ನ ತಂದೆಯೂ ಮಾಡಲಿಲ್ಲ" ‡ ಎಂದು ಉತ್ತರಕೊಟ್ಟು ಮೃತನಾಗುವನು. ಮಲಗಿ ನಿದ್ರಿಸುತ್ತಿರುವ ಬಾಲಕರಾದ ಉಪಪಾಂಡವರ ಕಗ್ಗೊಲೆಯೂ ದುರ್ಯೋಧನನಿಗೆ ಸಂತೋಷಕರ. ಮಹಾಭಾರತದ ಈ ದುರ್ಯೋಧನನಿಗೂ, ಅಭಿಮನ್ಯುವಿನ ವಧೆಗಾಗಿ ಪಶ್ಚಾತ್ತಾಪದಗ್ಧನಾಗಿ ತೊಳಲುವ ಊರುಭಂಗದ ದುರ್ಯೋಧನನಿಗೂ ಅಜಗಜಾಂತರವಾದ ವ್ಯತ್ಯಾಸ.

**ಮಿಲ್ಟನ್ ಮಹಾಕವಿಯ ಸ್ಯಾಮ್ಸನ್: ಊರು ಭಂಗದ ದುರ್ಯೋಧನ**

ಜಗತ್ಪ್ರಸಿದ್ಧನಾದ ಮಿಲ್ಟನ್ ಮಹಾಕವಿಯು ತನ್ನ "ಸ್ಯಾಮ್ಸನ್ ಆಗೊನಿಸ್ಟೀಸ್" ಎಂಬ ಏಕಾಂಕ ನಾಟಕದಲ್ಲಿ ಚಿತ್ರಿಸಿರುವ ಸ್ಯಾಮ್ಸನ್ ಪಾತ್ರದೊಡನೆ ಊರು ಭಂಗದ ದುರ್ಯೋಧನನನ್ನು ಹೋಲಿಸಿ ನೋಡಿದರೂ ಭಾಸ ಮಹಾಕವಿಯ ಪಾತ್ರರಚನಾ ಸಾಮರ್ಥ್ಯವು ವ್ಯಕ್ತವಾಗುತ್ತದೆ. ಎರಡು ಪಾತ್ರಗಳಿಗೂ ಪರಸ್ಪರ ಸಾಮ್ಯ ವೈಷಮ್ಯಗಳಿವೆ.

ಸ್ಯಾಮ್ಸನ್ ಎಂಬವನೂ ದುರ್ಯೋಧನನಂತೆ ದೊಡ್ಡ ವಂಶದಲ್ಲಿ ಹುಟ್ಟಿದವನು; ಲೋಕೈಕವೀರ. ಅವನ ತಂದೆಯು ಹೇಳುವಂತೆ ಅವ

---

‡ "ನಮೋऽಕರೋತ್ತ್ವದ್ಗಾಂಗೇಯೋ ನ ಕರ್ಣೋ ನ ಚ ತೇ ಪಿತಾ!
ಯತ್ತ್ವಯಾ ಕೃಪಭೋಜಾಭ್ಯಾಂ ಸಹಿತೇನಾದ್ಯಮೇ ಕೃತಮ್ ॥"

ನೊಬ್ಬನೇ ಒಂದು ಸೈನ್ಯ; ತಾನೊಬ್ಬನೇ ನಿಂತು ಶತ್ರುದಳವನ್ನು ಧ್ವಂಸಮಾಡಿದವನು. ಸಿಂಹವು ಕುರಿಯ ಮರಿಗಳನ್ನು ಸೀಳುವಂತೆಯೇ ಅನಾಯಾಸವಾಗಿ ಸಿಂಹಗಳನ್ನೇ ಸೀಳಿದವನು. ಸ್ಯಾಮ್ಸನ್ ಮತ್ತು ದುರ್ಯೋಧನರ ಸಾಮ್ಯವು ಅಲ್ಲಿಗೇ ಮುಗಿಯಲಿಲ್ಲ. ಅಜೇಯರಾದ ಅವರೀರ್ವರೂ ವಂಚನೆಯ ದೆಸೆಯಿಂದ ವಿಪತ್ತಿಗೊಳಗಾದವರು. ಇಬ್ಬರ ವಿಚಾರದಲ್ಲಿ ಕೂಡ, ನಾವು ಕಾಣುವುದು, ಮರಣವು ಸಂಭವಿಸುವ ವರೆಗಿನ ಅಂತ್ಯಕಾಲದ ಜೀವನ ಚಿತ್ರದ ಒಂದೇ ಒಂದು ದೃಶ್ಯ.

ಸ್ಯಾಮ್ಸನ್, ತನ್ನ ಶತ್ರು ರಾಜ್ಯದವಳಾದ ಮತ್ತು ಅನ್ಯಮತೀಯಳಾದ ಡಲೀಲ ಎಂಬಾಕೆಯನ್ನು ವಿವಾಹ ಮಾಡಿಕೊಳ್ಳುವನು. ಆ ಮೊದಲೇ ಅವನು ಮತ್ತೊಬ್ಬಳನ್ನು ಮದುವೆಯಾಗಿದ್ದು ಅವಳನ್ನು ಪರಿತ್ಯಜಿಸಿದ್ದ ಕಾರಣ, ತನಗೂ ಆ ಅವಸ್ಥೆಯೇ ಒದಗೀತೆಂಬ ಭಯದಿಂದ ಅವಳು ತನ್ನ ಪತಿಯನ್ನು ತನ್ನ ಬೆಡಗಿನಿಂದ ಒಲಿಸಿಕೊಂಡು ಅವನು ಅಜೇಯನಾಗಿದ್ದುದರ ರಹಸ್ಯವನ್ನು ತಿಳಿದುಕೊಳ್ಳುವಳು. ಅವಳ ರಾಜ್ಯದ ಮುಖಂಡರೂ, ದಂಡಾಧಿಕಾರಿಗಳೂ, ಅರಸುಗಳೂ, ಆ ರಹಸ್ಯವನ್ನು ತಮಗೆ ತಿಳಿಸಬೇಕೆಂದು ಅವಳನ್ನು ಬೇಡುವರು, ಬೆದರಿಸುವರು, ಪ್ರಾರ್ಥಿಸುವರು. ಒಬ್ಬರಿಗೂ ತಿಳಿಸಕೂಡದೆಂದು ತನ್ನ ಪತಿಯು ಹೇಳಿದ್ದ ರಹಸ್ಯವನ್ನು ಅವಳು ತನ್ನ ರಾಜ್ಯದವರಿಗೆ ತಿಳಿಸುವಳು. ಈ ವಂಚನೆಯ ದೆಸೆಯಿಂದ ಸ್ಯಾಮ್ಸನ್ ತನ್ನ ಶತ್ರುಗಳಿಂದ ಪರಾಜಿತನಾಗಿ ಅವರ ಕ್ರೌರ್ಯದಿಂದ ಕಣ್ಣುಗಳನ್ನು ಕಳೆದುಕೊಂಡು ಅವರ ರಾಜ್ಯದಲ್ಲಿ ಸೆರೆಮನೆಯಲ್ಲಿರುವನು. ನಾಟಕವು ಆರಂಭವಾಗುವ ವೇಳೆಗೆ ಅವನನ್ನು ಕಾವಲಿನವನೊಡನೆ ಸೆರೆಮನೆಯಿಂದ ಬಯಲಿಗೆ ಬಿಟ್ಟಿರುವರು. ಉತ್ಸವದ ದಿನಗಳಲ್ಲಿ ಸೆರೆಯಾಳುಗಳು ದುಡಿಯುವುದನ್ನು ತಪ್ಪಿಸಿ ವಿರಾಮ ಕೊಟ್ಟು ಅವರು ಗಾಳಿಬೆಳಕುಗಳ ಸವಿಯನ್ನನುಭವಿಸಲು ಹೊರಗೆ ಬಿಡುವುದು ವಾಡಿಕೆ. ಸ್ಯಾಮ್ಸನ್ ಹೀಗೆ ಹೊರಗೆ ಬಂದದಿನ, ಶತ್ರು ರಾಜ್ಯವಾದ ಆ ನಾಡು ಅವನ (ಸ್ಯಾಮ್ಸನನ) ಭಯದಿಂದ ಪಾರಾದುದರ ಸಂತೋಷಕ್ಕಾಗಿ ನಡೆಯುವ ದೊಡ್ಡ ಹಬ್ಬ. ಆ ಕಾರಣದಿಂದ

ಅವನ ದುಃಖವು ಮತ್ತಷ್ಟು ಹೆಚ್ಚಾಗಿರುವುದು. ಹಲವು ದಿನಗಳಿಂದ ದುಡಿದು ದುಡಿದು ದಣಿದಿರುವ ತನ್ನ ದೇಹಕ್ಕೆ ಬಯಲಿನ ತಂಗಾಳಿಯು ಆಪ್ಯಾಯನವನ್ನುಂಟುಮಾಡುವುದಾಗಿದ್ದರೂ ತನ್ನ ಮನಸ್ಸು ನೆಮ್ಮದಿಯಾಗಿಲ್ಲವೆಂದೂ ಬಗೆಬಗೆಯ ಯೋಚನೆಗಳು ತನ್ನನ್ನು ಕೊರೆಯುತ್ತಿವೆಯೆಂದೂ ಅವನು ಹೇಳಿಕೊಳ್ಳುವನು. ಅವನು ತನ್ನ ಹಿಂದಿನ ಉಚ್ಚ ದಶೆಯನ್ನು ನೆನೆದು ಹಂಬಲಿಸುವನು; ತನ್ನ ದುರವಸ್ಥೆಗಾಗಿ ಸಂಕಟ ಪಡುವನು. ರಾಜತ್ವವು ಕೂಡ ಅಶಾಶ್ವತವೆಂಬ ನಿತ್ಯಾನಿತ್ಯವಿವೇಕವನ್ನು ಪಡೆದು ತನ್ನ ತಂದೆಯು, "ಹದಿನೆಂಟು ಅಕ್ಷೌಹಿಣೀ ಸೈನ್ಯದ ಮಹಾರಾಜ! ಎಲ್ಲಿರುವೆ" ಎಂದು ಕೂಗಿದಾಗ, "ಇಂದು ಮಹಾರಾಜನಾಗಿದ್ದೇನೆ" ಎಂದುಕೊಂಡ ಊರುಭಂಗ ರೂಪಕದ ದುರ್ಯೋಧನನ ಮನಸ್ಸಿನ ಸಮತೆಯನ್ನು ಸ್ಯಾಮ್ಸನ್ ಕಾಣಲಾರ. ಅವನು ಅಂಧನಾಗಿರುವುದು ನಿಜ; ಅವನು ದುರ್ಭರವಾದ ತನ್ನ ಅವಸ್ಥೆಯನ್ನು ವರ್ಣಿಸಿಕೊಂಡು ಮೊದಲೇ ಅಂಧನಾಗಿರುವ ತನ್ನ ಅಂಧಕಾರವು ದ್ವಿಗುಣಿತವಾಗುವ ಮರಣಕಾಲವೂ ಸಮೀಪಿಸುತ್ತಿರುವುದೆಂದು ‡ ಹೇಳಿದಾಗ

‡ "All otherwise to me my thoughts portend,
That these dark orbs no more shall treat with light,
Nor the other light of life continue long,
But yield to **double darkness** nigh at hand"

ಈ ಸಂದರ್ಭದಲ್ಲಿ ಅಂಧಕಾರವು ದ್ವಿಗುಣಿತವಾಗುವಂತೆ ಮಿಲ್ಟನ್ ಮಹಾಕವಿಯು ವರ್ಣಿಸಿರುವುದು ಮನೋಹರವಾಗಿದೆ ಊರುಭಂಗದ ಧೃತರಾಷ್ಟ್ರನು ವಂಚನೆಯಿಂದ ತನ್ನ ಮಗನು ಯುದ್ಧದಲ್ಲಿ ಹತನಾದುದನ್ನು ಕೇಳಿ ಕಂಬನಿದುಂಬಿ ಮೊದಲೇ **ಅಂಧವಾಗಿರುವ** ತನ್ನ ಮುಖವು ಅದರಿಂದ **ಅಂಧತರವಾಯಿತೆಂದು** ಹೇಳುವ ಮಾತುಗಳು ("ವಂಚನಾ ನಿಹತಂ ಶ್ರುತ್ವಾ ಸುತಮುದ್ಯಾಹವೇ ಮಮ । ಮುಖಮಂತರ್ಗತಾಸ್ರಾಕ್ಷಮಂಧಮಂಧತರಂ ಕೃತಮ್ ॥") ನೆನಪಿಗೆ ಬರುತ್ತವೆ. ಇಬ್ಬರು ಕವಿಗಳೂ ಸ್ವತಂತ್ರವಾಗಿ ಬರೆದಿದ್ದೂ, ಒಂದರ ಪಡಿಯಚ್ಚು ಮತ್ತೊಂದೆಂದು ತೋರುವ ಈ ಬಗೆಯ ವರ್ಣನಾ ಸಾದೃಶ್ಯವಿದೆ.

ನಮ್ಮ ಹೃದಯವೇ ಕಲಕಿ ಹೋಗುವುದೂ ನಿಜ. ಆದರೂ ಅಂಧ ರಾದವರೂ ಬದುಕಿರಲು ಇಷ್ಟಪಡುವುದು ಜೀವನದಲ್ಲಿ ಕಂಡುಬರುವ ಸನ್ನಿವೇಶ. ಆದಕಾರಣ, ಅಂಧನಾಗಿದ್ದು ಬದುಕಿರುವ ಅವಕಾಶವು ದೊರೆತಿರುವ ಸ್ಯಾಮ್ಸನ್ ಎಂಬಾತನ ವಿಪತ್ತಿಗಿಂತ ಸಾವು ಸಮನಿಸುವುದರಲ್ಲಿರುವ ದುರ್ಯೋಧನನಿಗೆ ಸಂಭವಿಸಿರುವ ವಿಪತ್ತು ಹೆಚ್ಚಿನದು. ಹಾಗಿದ್ದೂ ಮನಸ್ಸಿನ ಸಮತೆಯನ್ನು ತೋರ್ಪಡಿಸುವ ದುರ್ಯೋಧನನ ಸ್ವಭಾವವು ಅವನದಕ್ಕಿಂತ ಹೆಚ್ಚು ಸಂಸ್ಕೃತವಾದುದು.

ಸ್ಯಾಮ್ಸನನ ತಂದೆಯು ಅವನನ್ನು ನೋಡಲು ಬಂದನೆಂದು ಅವನ ಮಿತ್ರರಾದ ಮೇಳದವರು ಸೂಚಿಸುವರು ಮಾನಧನನೂ ಪಿತೃಭಕ್ತಿಯುಳ್ಳವನೂ, ಆದ ಆತನು ಆಗ "ಅಯ್ಯೋ, ಇದುವರೆಗೆ ಪ್ರಸುಪ್ತವಾಗಿದ್ದು ಈಗ ಆ ಹೆಸರು ಕಿವಿಗೆ ಬಿದ್ದುದರಿಂದ ಎಚ್ಚರಗೊಂಡು ಪೀಡಿಸುತ್ತಿರುವ ಮತ್ತೊಂದು ಆಂತರ ದುಃಖ. ನನ್ನ ಆಘಾತದ ನವಾವತಾರ" † ಎಂದು ಹೇಳುವನು. ಈ ಮಾತುಗಳು ಊರುಭಂಗದ ದುರ್ಯೋಧನನು ತನ್ನ ಅಂತಃಪುರದ ಸ್ತ್ರೀಯರು ತನ್ನನ್ನು ಹುಡುಕುತ್ತ ರೋದಿಸುವುದನ್ನು ಕಂಡು, "ಗದಾಘಾತದ ಪೆಟ್ಟು ಮೊದಲು ಬಿದ್ದುದೇ ತಿಳಿಯಲಿಲ್ಲ. ಈಗ ನನಗೆ ಗದಾಘಾತವಾಯಿತು" ಎಂದೂ, ತನ್ನ ತಂದೆಗೆ ನಮಸ್ಕಾರಮಾಡಲು ಆತನ ಬಳಿಗೆ ಹೋಗಲು ಪ್ರಯತ್ನಿಸಿದಾಗ ವಿಫಲಮನೋರಥನಾಗಿ ನೋವಿನಿಂದ ನರಳುತ್ತ, "ಇದು ನನಗೆ ಎರಡನೆಯ ಸಲದ ಗದಾಪ್ರಹಾರ" ಎಂದೂ ಹೇಳುವುದನ್ನು ನೆನಪಿಗೆ ತರುವುವು. ಸ್ಯಾಮ್ಸನನ ತಂದೆಯೂ ಊರುಭಂಗದ ಧೃತರಾಷ್ಟ್ರನಂತೆ ಅಮಿತವಾದ ಪುತ್ರವಾತ್ಸಲ್ಯವುಳ್ಳವನು. ಅವನು ತನ್ನ ಮಗನಿಗೆ ಶಾಂತನಾಗಿರುವಂತೆ ಹೇಳುವನು. ಮಗನನ್ನು ಬಿಡಿಸಿಕೊಂಡು ಹೋಗಲು ಆ ವೃದ್ಧನು ತನ್ನ ಸರ್ವಸ್ವವನ್ನೂ ತ್ಯಾಗಮಾಡಿ ನಿರ್ಗತಿಕನಾದ ಬಡವನಾಗುವುದಕ್ಕೂ ಸಿದ್ಧವಾಗಿರುವನು. ತನ್ನ ನಾಡಿನವರೆಲ್ಲ

† "Ay me! Another inward grief, awaked
With mention of that name, renews the assault"

ರಿಗಿಂತ ಧನಿಕನಾಗಿರುವ ಆತನು, ತನ್ನ ನಾಡಿನವರೆಲ್ಲರಿಗಿಂತಲೂ ಬಡ ವನಾಗಿ ಪುತ್ರಭಾಗ.ವೊಂದನ್ನು ಮನೆಯಲ್ಲಿಟ್ಟುಕೊಂಡು ಬಾಳಲಿಚ್ಛಿಸು ವನು. ಮಗನ ದುರವಸ್ಥೆಗಾಗಿ ಹಲುಬಿ, ಶತ್ರುಗಳಿಗೆ ಹಣವನ್ನು ಕೊಟ್ಟೋ ಅಥವಾ ಇತರ ಮಾರ್ಗದಲ್ಲಿಯೋ ತಾನು ಸ್ಯಾಮ್ಸನನನ್ನು ಬಿಡಿಸಿಕೊಂಡು ಹೋಗುವ ಪ್ರಯತ್ನ ಮಾಡುವುದಾಗಿ ಅವನಿಗೆ ತಿಳಿಸಿ ವೃದ್ಧನು ಹೊರಟುಹೋಗುವನು. ಸ್ಯಾಮ್ಸನನು ತನ್ನ ದುರವಸ್ಥೆಗಾಗಿ ಸಂತಾಪಪಡುತ್ತ, ಆಶೆಭರವಸೆಗಳೆಲ್ಲಕ್ಕೂ ದೂರವಾದ ತನ್ನ ದುರವಸ್ಥೆ ಗಾಗಿ ಮರುಗಿ, ತನ್ನ ಸಂಕಟಕ್ಕೆ ಸಿದ್ಧೌಷಧವಾದ ಮರಣವೇ ಶರ ಣೆಂದು ಕೊರಗಿ ಅದು ಲಭಿಸಿದರೆ ಸಾಕೆಂದು ಪ್ರಾರ್ಥಿಸುವನು. * ಮೇಳ ದವರಾದ ಮಿತ್ರರು ತಾಳ್ಮೆಯಿಂದಿರಬೇಕೆಂದು ಅವನಿಗೆ ಸಮಾಧಾನ ಹೇಳುವರು. ಅಶ್ವತ್ಥಾಮನು ಬಂದು, "ಮಹಾರಾಜ, ಇದೇನಿದು?" ಎಂದು ಕೇಳಿದಾಗ, "ಗುರುಪುತ್ರ! ಅತ್ಯಪ್ರಿಯ ಫಲ" ಎಂದು ಉತ್ತರ ಹೇಳುವ ಊರುಭಂಗದ ದುರ್ಯೋಧನನ ಸಂಸ್ಕಾರಕ್ಕೂ ಸ್ಯಾಮ್ಸನನ ಸ್ವಭಾವಕ್ಕೂ ಬಲುದೂರ. ಇವೆರಡು ಕೃತಿಗಳಲ್ಲಿ ನಾವು ಕಾಣುವ ದೃಶ್ಯ ಗಳೂ ಹೃದಯವೇಧಕವಾಗಿಯೇ ಇವೆ; ಸಂಕಟಕರವಾಗಿಯೇ ಇವೆ. ಆದರೆ ಸ್ಯಾಮ್ಸನನಿಗಿಂತ ಹೆಚ್ಚಿನ ಸಂಸ್ಕಾರವೂ ಸಂಯಮವೂ ಊರು ಭಂಗದ ದುರ್ಯೋಧನನಲ್ಲಿವೆ. ಸ್ಯಾಮ್ಸನನ ತಂದೆಯು ಹೊರಟುಹೋದ ಮೇಲೆ ಮೇಳದವರು ಅವನಿಗೆ ಸಮಾಧಾನ ಹೇಳುತ್ತಿರುವಲ್ಲಿ ಅವನ ಹೆಂಡತಿಯು ಬಂದುದನ್ನು ಕಂಡು, "ನಿನ್ನ ಹೆಂಡತಿಯು ಬಂದಿರುವಳು" ಎನ್ನುವರು. ಸ್ಯಾಮ್ಸನ್, ಕರ್ಣಕಠೋರವಾದ ಆ ಮಾತುಗಳನ್ನು ಕೇಳಿ ಕೋಪದಿಂದುರಿಯುತ್ತ, "ನನ್ನ ಹೆಂಡತಿಯೆ! ನನಗೆ ದ್ರೋಹಿ! ಅವಳು ನನ್ನ ಬಳಿಗೆ ಬರಲೇ ಕೂಡದು" ಎಂದು ಗರ್ಜಿಸುವನು. ತನ್ನ ದುಡುಕು

---

* "Nor am I in the list of them that hope;
Hopeless are all my evils, all remediless
This one prayer yet remains, might I be heard,
No long petition; speedy death,
The close of all my miseries, and the balm."

ನಡೆವಳಿಕೆಗಾಗಿ ತಾನು ಪಶ್ಚಾತ್ತಾಪಪಟ್ಟು, ಕಂಬನಿ ಸುರಿಸಿ ಗೋಳಿಟ್ಟು, ಕ್ಷಮೆಯನ್ನು ಬೇಡಲು ಬಂದಿರುವುದಾಗಿ ಆಕೆಯು ತಿಳಿಸುವಳು. ಸ್ಯಾಮ್ಸನ್ ಶಾಂತನಾಗದೆ, "ನಡೆ, ನಡೆ, ಕಿರುಬವೇ ನಡೆ! ಇವೆಲ್ಲ ನಿನ್ನ ಎಂದಿನ ಬೆಡಗು ಬಿನ್ನಾಣಗಳೇ," * ಎಂದು ಮುಂತಾಗಿ ಮೂದಲಿಸಿ ನುಡಿಯು ವನು; ಅವಳ ಮಾತುಗಳಲ್ಲಿ ಮೋಸವೇ ತುಂಬಿದೆಯೆಂದು ಹಳಿಯು ವನು. ಅವಳು ಅನಂತರ ಮತ್ತೆ ಅವನ ಕ್ಷಮೆಯನ್ನು ಬೇಡುವಳು; ರಹಸ್ಯವನ್ನು ಕಾಪಾಡಿಕೊಳ್ಳಲಾರದ ಸ್ತ್ರೀಮಾತ್ರ ಸಹಜವಾದ ದೌರ್ಬಲ್ಯ ದಿಂದಲೂ, ತನ್ನ ರಹಸ್ಯವನ್ನು ತಿಳಿದುಕೊಳ್ಳಲಿಚ್ಛಿಸಿದವರು ತನ್ನ ಪತಿಗೆ ಕೇಡುಮಾಡುವುದಿಲ್ಲವೆಂದು ವಾಗ್ದಾನಮಾಡಿದುದರಿಂದಲೂ ತಾನು ದುಡುಕಿ ನಡೆದುದಾಗಿ ಅವಳು ತಿಳಿಸುವಳು. ಸ್ಯಾಮ್ಸನ್ ಕ್ರುದ್ಧನಾಗಿ ಅವ ಳನ್ನು ವಿಧವಿಧವಾಗಿ ಜರಿದು, ಕೊನೆಗೆ "ದೌರ್ಬಲ್ಯವು ಕಾರಣವೆಂದೆ. ನಾನು ಅದನ್ನು ನಂಬುವೆನು. ನಿಜ; ನಿನ್ನ ಜನಾಂಗದವರು ಕೊಡಬಂದ ಹೊನ್ನನ್ನು ಬಿಡಲಾರದ ದೌರ್ಬಲ್ಯ. ದೌರ್ಬಲ್ಯನಿಮಿತ್ತವಾಗಿ ಕ್ಷಮೆಯು ದೊರೆಯುವುದಾದರೆ, ನರವಧೆ ಮಾಡಿದವನಾವನುತಾನೆ, ದ್ರೋಹವನ್ನಾ ಚರಿಸಿದವನಾವನುತಾನೆ, ಪಿತೃವಧೆ ಮಾಡಿದವನಾವನುತಾನೆ, ನಿಷಿದ್ಧ ಸ್ತ್ರೀಸಂಗ ಮಾಡಿದವನಾವನುತಾನೆ, ಧರ್ಮದ್ರೋಹ ಮಾಡಿದವನಾವನು ತಾನೆ, ದೌರ್ಬಲ್ಯದ ಕಾರಣವನ್ನು ಸೂಚಿಸದಿರುವನು? ದುರ್ಗುಣವೆಲ್ಲ ದೌರ್ಬಲ್ಯವೆ! ನೀನು ದೌರ್ಬಲ್ಯದ ಕಾರಣವನ್ನು ಹೇಳಿದರೆ ದೇವನಲ್ಲಾ ಗಲಿ ಮಾನವನಲ್ಲಾಗಲಿ ನಿನಗೆ ಕ್ಷಮೆ ದೊರೆಯಲಾರದು" ಎಂದು ಮುಂತಾಗಿ ತಿಳಿಸುವನು. ಆಕೆಯು ತಾನು ಹಣದ ಆಶೆಗಾಗಿ ಹಾಗೆ ಮಾಡಲಿಲ್ಲವೆಂದು ತಿಳಿಸಿ, ತಾನು ಆ ರೀತಿ ಮಾಡಿದ ಸಂದರ್ಭವನ್ನು ವಿವರಿಸಿ ಹೇಳುವಳು. ತನ್ನ ಬುದ್ಧಿಯು ಮೋಸಹೋಯಿತೆಂದೂ, ತಾನು ದುಡುಕಿ ನಡೆದು ತಪ್ಪುಮಾಡಿದುದಾಗಿಯೂ ಅದಕ್ಕೆ ಪ್ರತಿಯಾಗಿ ತಾನು ಅವನನ್ನು ಎಚ್ಚರಿಕೆಯಿಂದಲೂ ಪ್ರೀತಿಯಿಂದಲೂ ನೋಡಿಕೊಳ್ಳುವುದಾ ಗಿಯೂ, ದೃಷ್ಟಿಯೊಂದು ಇಲ್ಲದಿದ್ದರೂ ಉಳಿದ ಇಂದ್ರಿಯಾರ್ಥಗಳಿಂದ

---

* "Out, out, hyæna! these are thy wonted arts,"

ಸೌಖ್ಯ ಪಡುವುದು ಸಾಧ್ಯವೆಂದೂ, ತಾವೀರ್ವರೂ ಸುಖವಾಗಿರಬಹು ದೆಂದೂ, ತಾನು ಮೊದಲಿಗಿಮ್ಮಡಿಯಾದ ಪ್ರೀತಿಯಿಂದ ಅವನನ್ನು ಉಪ ಚರಿಸಿ ದೃಷ್ಟಿಯನ್ನು ಕಳೆದುಕೊಂಡ ದುಃಖವೇ ತೋರದಂತೆ ಸುಖಪಡಿಸು ವುದಾಗಿಯೂ ಹೇಳುವಳು. ಅವನು ಆ ಬಳಿಕಲೂ ಅವಳನ್ನು ಭಂಗಿಸಿ ತಾನು ಮತ್ತೆ ಬಲೆಗೆ ಬೀಳುವುದಿಲ್ಲವೆಂದೂ, ಅವಳ ದಾಸ್ಯದ ಸೆರೆಮನೆಯು ತನಗೆ ಬೇಡವೆಂದೂ ಹೇಳಿ ತಿರಸ್ಕರಿಸುವನು; ಅಲ್ಲದೆ, ಆ ಸ್ಥಿತಿಗೆ ಹೋಲಿ ಸಿದರೆ ತಾನಿದ್ದ ಸೆರೆಮನೆಯು ಸ್ವಾತಂತ್ರ್ಯದ ನೆಲೆಯೆಂದೂ ತಿಳಿಸುವನು. ಕೊನೆಗೆ ಅವಳು ಹತಾಶಳಾಗಿ, "ನಾನು ನಿನ್ನ ಬಳಿಸಾರಿ ನಿನ್ನ ಕೈಯನ್ನು ಮುಟ್ಟುವುದಕ್ಕಾದರೂ ಅನುಮತಿ ಕೊಡು" ಎಂದು ಬೇಡುವಳು. ಅವನು ಅದಕ್ಕೆ ಉತ್ತರವಾಗಿ, "ಬೇಡ. ನಿನ್ನ ಜೀವದ ಹೊಣೆಗಾದರೂ ಹಾಗೆ ಮಾಡಬೇಡ. ನೀನು ಬಳಿಸಾರಿದರೆ ನನ್ನ ರೋಷವೆಲ್ಲ ಜಾಗ್ರತವಾಗಿ ಹೊರಹೊಮ್ಮಿ ನಿನ್ನ ಅಂಗಾಂಗಗಳನ್ನೂ ಸೀಳುವಂತೆ ನನ್ನನ್ನು ಪ್ರೇರಿಸ ಬಹುದು ದೂರದಲ್ಲಿರುವಾಗ ನಿನಗೆ ಕ್ಷಮೆ ತೋರಿರುವೆನು. ಆದರಿಂದ ತೃಪ್ತಳಾಗಿ ಹೊರಡು. ನಿನ್ನ ಸುಳ್ಳಿಗಾಗಿ, ಕೀರ್ತಿಭಾಜನರಾದ ಮತ್ತು ವಿಶ್ವಾಸಶೀಲೆಯರಾದ ಪತಿವ್ರತೆಯರ ಗುಂಪಿನಲ್ಲಿ ನಿನ್ನನ್ನು ಚಿರಸ್ಮರ ಣೀಯಳನ್ನಾಗಿ ನೆಲೆಗೊಳಿಸಲು ಸಾಧಕವಾಗಿರುವ ನಿನ್ನ ಸುಳ್ಳಿನ ದೆಸೆ ಯಿಂದ ಹುಟ್ಟಿದ ಪುಣ್ಯಕಾರ್ಯಗಳಿಗಾಗಿ, ಸಂತಾಪ ಪಡು. ಶೀಘ್ರವಾಗಿ ನೀನೇ ತಂದುಕೊಂಡ ವೈಧವ್ಯವನ್ನು ದಾಂಪತ್ಯಧರ್ಮಕ್ಕೆ ದ್ರೋಹ ವೆಣಿಸಿ ಗಳಿಸಿದ ಹೊನ್ನುಗಳಿಂದ ಸಂತವಿಟ್ಟು ಸಂತೋಷಪಡು" ಎಂದು ಹೇಳುವನು. ಅವಳು ಹೊರಟುಹೋದ ಬಳಿಕ ಅವಳನ್ನು ಕಾಲಸರ್ಪ ವೆಂದು ಕರೆದು ಗಳುಹುವನು. ಆ ವೇಳೆಗೆ ಹಬ್ಬದೂಟದಿಂದ ಸಂತಸ ಗೊಂಡಿರುವ ಶತ್ರುಪಕ್ಷದ ಶ್ರೀಮಂತರೆದುರಿಗೆ—ಅವನನ್ನು ದುರವಸ್ಥೆ ಗೀಡುಮಾಡಿದವರೆದುರಿಗೆ—ಅವನು ತನ್ನ ಬಲಪ್ರದರ್ಶನದ ಸಾಹಸ ಕೃತ್ಯಗಳನ್ನು ನೆರವೇರಿಸಿ ಅವರನ್ನು ಸಂತೋಷಪಡಿಸಲು ಬರಬೇಕೆಂದು ಅವನನ್ನು ಅಧಿಕಾರಿಗಳು ಕರೆಯುವರು. ಮೊದಲು ಒಪ್ಪದೆ, ಅವನು ಆ ಬಳಿಕ ಅವರ ದರ್ಪಕ್ಕೆ ಬೆದರಿದವನಂತೆ ನಟಿಸಿ ಅಧಿಕಾರಿಗಳೊಡನೆ ಹೋಗುವನು. ಬಯಲಿನಲ್ಲಿ ನಡೆಯುವ ಸಾಹಸಕಾರ್ಯಪ್ರದರ್ಶನವನ್ನು

ನೋಡಿ ಉಲ್ಲಾಸಪಡಲು ಶತ್ರುಗಳು ಮಹಡಿಯ ಮೇಲೆ ಕುಳಿತಿರುವರು. ಸ್ಯಾಮ್ಸನನು ಮಹಡಿಯ ಆಧಾರ ಸ್ತಂಭಗಳೆರಡನ್ನೂ ತಬ್ಬಿ, ತಳ್ಳಿ, ಉರುಳಿಸಿಬಿಡುವನು. ತನ್ನ ಶತ್ರುಗಳೊಡನೆ ತಾನೂ ಮೃತನಾಗಿ ಸೇಡನ್ನು ತೀರಿಸಿಕೊಳ್ಳುವನು. ಇದು ಸ್ಯಾಮ್ಸನನ ದ್ವೇಷಾಗ್ನಿಯ ದಳ್ಳುರಿಯ ಚಿತ್ರ. ಭೀಮನ ವಂಚನೆಯಿಂದ ರೋಷಪರವಶನಾದ ಬಲರಾಮನೂ, ಆಬಳಿಕ ಅಶ್ವತ್ಥಾಮನೂ ಪಾಂಡವರನ್ನು ಧ್ವಂಸಮಾಡುವುದಾಗಿ ಹೇಳಿದಾಗ ಬೇಡ ವೆಂದು ಬೇಡಿದ ಊರು ಭಂಗದ ದುರ್ಯೋಧನನ ಅಂತಸ್ತು ಎಷ್ಟು ಹೆಚ್ಚಿನದೆಂಬುದನ್ನು ಹೇಳಬೇಕಾದ ಆವಶ್ಯಕತೆಯೇ ಇಲ್ಲ. ಊರು ಭಂಗದ ದುರ್ಯೋಧನನದು ಹೇಡಿಯ ದೈನ್ಯವಲ್ಲ; ಶೂರನ ಕ್ಷಮೆ; ಪಶ್ಚಾತ್ತಾಪದಗ್ಧನ ತಾಳ್ಮೆ ಸೌಜನ್ಯಗಳು. ಒಟ್ಟಿನಲ್ಲಿ ಮಿಲ್ಟನ್ ಮಹಾ ಕವಿಯ ಸ್ಯಾಮ್ಸನ್ ಪಾತ್ರದ ಚಿತ್ರಕ್ಕಿಂತ ಭಾಸ ಮಹಾಕವಿಯ ಊರು ಭಂಗದ ದುರ್ಯೋಧನ ಪಾತ್ರದ ಚಿತ್ರವು ಶ್ರೇಷ್ಠವಾಗಿದೆ. ಆದರೆ, ಹಲವು ಸದ್ಗುಣಗಳನ್ನು ದುಷ್ಟನಾದ ದುರ್ಯೋಧನನ ತಲೆಗೆ ಕಟ್ಟಿ ತೋರಿಸಿರುವ ಆ ಚಿತ್ರಕ್ಕಿಂತ, ಸ್ಯಾಮ್ಸನ್ ಪಾತ್ರದ ಚಿತ್ರವೇ ನೈಸರ್ಗಿಕ ವಾಗಿ ರಮಣೀಯವಾಗಿದೆಯೆಂದೂ ಕೆಲವರು ಅಭಿಪ್ರಾಯಪಡಬಹುದು. ಹುಟ್ಟುಕೇಡಿಗರಾದ ಬ್ರೂಟಸ್ ಮತ್ತು ಕ್ಯಾಸಿಯಸ್ ಎಂಬ ಐತಿಹಾಸಿಕ ವ್ಯಕ್ತಿಗಳನ್ನು ಜ್ಯೂಲಿಯಸ್ ಸೀಜರ್ ನಾಟಕದಲ್ಲಿ ಮೇಲಿನಮಟ್ಟಕ್ಕೇರಿಸಿ ಷೇಕ್ಸ್‌ಪಿಯರ್ ಮಹಾಕವಿಯು ಕಲಾವೈಭವವನ್ನು ಬೆಳಗಿರುವುದರ ಮರ್ಮವೇನೆಂಬುದನ್ನಾದರೂ ಅವರು ಪರ್ಯಾಲೋಚಿಸಿ ನೋಡುವುದು ಮೇಲು.

**ಇತರ ಪಾತ್ರಗಳು**

ಊರುಭಂಗ ರೂಪಕದ ಬಲರಾಮನು ಮಹಾಭಾರತದಲ್ಲಿ ವರ್ಣಿತ ನಾಗಿರುವ ಬಲರಾಮನಿಗಿಂತ ದಾಕ್ಷಿಣ್ಯಪರ; ವೀರಾಗ್ರಣಿ. ದುರ್ಯೋ ಧನನು ಮೃತಪಡುವವರೆಗೂ ಅವನ ಬಳಿಯಲ್ಲಿರು ತ್ತಾನೆ. ಧೃತರಾಷ್ಟ್ರನು ದುರ್ಯೋಧನನ ಬಳಿಗೆ ಬಂದಾಗ ಆತನಿಗೆ ಸಮಾಧಾನ ಹೇಳಲಸಾಧ್ಯವಾದ ಆ ಸನ್ನಿವೇಶದಲ್ಲಿ ಅವನು ಸುಮ್ಮನಿರುವುದೇ,

ಪರೋಕ್ಷವಾಗಿ ಆತನ ಸಂಸ್ಕಾರ ಸೌಜನ್ಯಗಳನ್ನು ಸೂಚಿಸುವುದು. ಭಾಸ ಮಹಾಕವಿಯು ಮಾಡಿರುವ ಮೌನದ ಸದುಪಯೋಗಕ್ಕೆ ಇದೂ ಒಂದು ನಿದರ್ಶನ.

ಧೃತರಾಷ್ಟ್ರನ ಪುತ್ರವಾತ್ಸಲ್ಯವು ಬಹು ಚೆನ್ನಾಗಿ ಚಿತ್ರಿತವಾಗಿದೆ. ಆತನು, "ವೀರ್ಯಾಕರ" ನೆಂದೂ, ಕನಕಯೂಪದಂತೆ ದೀರ್ಘ ಬಾಹುವುಳ್ಳವನೆಂದೂ, ಮೂರು ಲೋಕಗಳನ್ನೂ ಸ್ವಾಧೀನಪಡಿಸಿ ಕೊಂಡಾನೆಂಬ ಶಂಕೆಯಿಂದ ದೇವತೆಗಳು ಅವನನ್ನು ಅಂಧನನ್ನಾಗಿ ಮಾಡಿರಬೇಕೆಂದೂ ಬಲರಾಮನು ಆತನನ್ನು ವರ್ಣಿಸುವನು. ಆತನು ಆ ಆಕಾರಕ್ಕೆ ತಕ್ಕ ಪ್ರಜ್ಞಾಶಾಲಿಯಾದ ವಿವೇಕಿ; ಸಹೃದಯ. ಆದುದ ರಿಂದಲೇ ಪುತ್ರದುಃಖ ಪೀಡಿತನಾದ ಆತನು ತಪೋವನಕ್ಕೆ ಹೋಗ ಲಿಚ್ಛಿಸುವುದು. ಮಹಾಭಾರತದ ಧೃತರಾಷ್ಟ್ರನಿಗಿರುವಂತೆ ಭೀಮನ ಮೇಲಣ ರೋಷವೇ ಊರುಭಂಗದ ಧೃತರಾಷ್ಟ್ರನಲ್ಲಿ ಉಳಿದಿಲ್ಲ. ಮಹಾಭಾರತದ ಧೃತರಾಷ್ಟ್ರನು ತನ್ನ ಪುತ್ರರನ್ನು ವಧಿಸಿದ ಭೀಮ ನಲ್ಲಿ ರೋಷ ಪರವಶನಾಗಿರುವನು; ಯುಧಿಷ್ಠಿರನನ್ನು ಆಲಿಂಗಿಸು ವಾಗಲೇ ಪ್ರೀತಿಯಿಲ್ಲದ ಧೃತರಾಷ್ಟ್ರನು, ಭೀಮನನ್ನು ಆಲಿಂಗಿಸ ಹೋದಾಗ ಉರಿಯುವ ಬೆಂಕಿಯಂತಿದ್ದುದನ್ನು ಕಂಡ ಕೃಷ್ಣನು ಭೀಮ ನನ್ನು ಪಕ್ಕಕ್ಕೆ ಸೆಳೆದು, ಅಲ್ಲಿದ್ದ ಕಬ್ಬಿಣದ ಭೀಮ ಪ್ರತಿಮೆಯನ್ನು ಧೃತರಾಷ್ಟ್ರನು ಅಪ್ಪುವಂತೆ ಮಾಡುವನು. ರೋಷಪರವಶನಾದ ಧೃತ ರಾಷ್ಟ್ರನ ಗಾಢಾಲಿಂಗನ ಸುಖವನ್ನು ಪಡೆದ ಆ ಪ್ರತಿಮೆಯು ಪುಡಿ ಯಾಗುವುದು. ಆ ಬಳಿಕ ಕೃಷ್ಣನಿಂದ ಅವನು ವಾಸ್ತವಸ್ಥಿತಿಯನ್ನು ತಿಳಿದು ನಾಚಿ, ರೋಷವನ್ನು ಬಿಟ್ಟುಬಿಡುವನು. ಊರುಭಂಗದ ಧೃತ ರಾಷ್ಟ್ರನು ತಪೋವನಕ್ಕೆ ತೆರಳುವುದಾಗಿ ನಿರ್ಧರಿಸುವುದರಿಂದಲೇ ರೂಪ ಕವು ಮುಗಿಯುವುದರಿಂದ, ಆತನು ಮಹಾಭಾರತದ ಧೃತರಾಷ್ಟ್ರನಿಗಿಂತ ಸುಸಂಸ್ಕೃತನಾಗಿರುವಂತೆ ಚಿತ್ರಿಸಬೇಕೆಂಬುದು ಕವಿಯ ಆಶಯವೆಂದು ತೋರುವುದು. ಇಷ್ಟಕ್ಕೂ ದುರ್ಯೋಧನಾದಿಗಳೆಲ್ಲ ಮೃತರಾದಮೇಲೆ —ಅಶ್ವಮೇಧಪರ್ವದ ಕಥೆಯು ಸಾಗುವಷ್ಟು ಕಾಲವು ಕಳೆದಮೇಲೆ

ಕೂಡ—ಅಶ್ವಮೇಧ ಯಜ್ಞದಲ್ಲಿ ಉದ್ಯುಕ್ತರಾದ ಯುಧಿಷ್ಠಿರಾದಿಗಳಿಂದ ಮಹಾರಾಜನೆಂದು ಕರೆಯಿಸಿಕೊಂಡು ರಾಜಭೋಗಗಳನ್ನನುಭವಿಸುತ್ತಿದ್ದವನು ಮಹಾಭಾರತದ ಧೃತರಾಷ್ಟ್ರ; ತನ್ನ ಮಗನಾದ ದುರ್ಯೋಧನನಿಗೆ ಸರ್ವಾಧಿಕಾರವನ್ನು ವಹಿಸಿ ತಾನೇ ಅವನನ್ನು "ಮಹಾರಾಜ" ಎಂದು ಕರೆಯುತ್ತಿದ್ದು ಅವನ ಮರಣಾನಂತರ ರಾಜ್ಯದಲ್ಲಿರಲಾರದೆ ತಪೋವನಕ್ಕೆ ತೆರಳಲಿಚ್ಛಿಸಿದವನು ಊರುಭಂಗದ ಧೃತರಾಷ್ಟ್ರ.

ಅಶ್ವತ್ಥಾಮನು ಮಹಾಭಾರತದಲ್ಲಿರುವಂತೆಯೇ ಊರುಭಂಗದಲ್ಲಿ ಸಹ, ಶತ್ರುಗಳ ಮೇಲಣ ಕೋಪದಿಂದುರಿಯುತ್ತ ದೇಹವನ್ನು ಧರಿಸಿದ ಜ್ವಾಲಾಮುಖಿಯಂತೆ ತೋರುವ ವೀರ; ಸ್ವಾಮಿಗೆ ಹರ್ಷವನ್ನೆಸಗುವೆನೆಂಬ ನಂಬಿಕೆಯಿಂದ ನಿದ್ರಿಸುತ್ತಿರುವವರ ಕಗ್ಗೊಲೆಗೂ ಅವನು ಸಿದ್ಧವಾಗಿದ್ದಾನೆ. ಆದರೆ ದುರ್ಯೋಧನನೇ ಬೇಡವೆನ್ನುತ್ತಾನೆ. ದುರ್ಯೋಧನನ ಮರಣಾನಂತರ, ಅಶ್ವತ್ಥಾಮನು ಪಾಂಡವರ ವಧೆಗೆ ಹೊರಡುವುದಾಗಿ ವೀರಾಲಾಪ ಮಾಡುತ್ತಾನೆ. ಆದರೆ ಅವನು ಆರೀತಿ ವಧೆ ಮಾಡಿದನೋ ಇಲ್ಲವೋ ಹೇಳುವಂತಿಲ್ಲ.

ದುರ್ಜಯ ಪಾತ್ರವು ಕವಿಯ ಸೃಷ್ಟಿ. ಆ ಬಾಲಕನ ಪಾತ್ರವು ನಿಸರ್ಗರಮಣೀಯವಾಗಿದೆ. ಸರಳವಾಗಿ ಸೊಂಪುಗೂಡಿರುವ ಅವನ ಮುದ್ದುಮಾತುಗಳೆಷ್ಟು ಹಿತವಾಗಿವೆಯೋ ಅವುಗಳ ಸನ್ನಿವೇಶವೂ ಅಷ್ಟೇ ದುಃಖಕರವಾಗಿದೆ. ಎಂತಹ ಕಠಿನ ಹೃದಯರೂ ಕಂಬನಿಯ ಕಾಣಿಕೆಯನ್ನೊಪ್ಪಿಸುವಂತೆ ಮಾಡುವ ಉದ್ದೇಶದಿಂದಲೇ ಕವಿಯು ಅವುಗಳನ್ನು ಕಲ್ಪಿಸಿದ್ದಾನೆ.

ವೀರಮಾತೆಯೂ, ತಾನು ವೀರಮಾತೆಯೆಂಬ ಅಭಿಮಾನಶಾಲಿನಿಯೂ ಆದ ಗಾಂಧಾರಿಯ ಪಾತ್ರವೂ ಮನೋಹರವಾಗಿದೆ. ಅವಳಿಗೆ ಕರುಳನ್ನೇ ಹಿಂಡುತ್ತಿರುವ ಶೋಕ. ಆದರೂ, ತಾನು, "ಅಭೀತಪುತ್ರ ಪ್ರದಾಯಿನಿ" ಎಂಬ ಹೆಮ್ಮೆ ಅವಳದು. ಅವಳು ಪತಿವ್ರತೆಯಾದ ಸಹಧರ್ಮಿಣಿ. ಅವಳು ಪುತ್ರ ಪೌತ್ರರನ್ನು ನೋಡುವ ಕುತೂಹಲವನ್ನೂ

ತಡೆದು ಕಣ್ಣುಗಳಿಗೆ ಬಟ್ಟೆಯನ್ನು ಕಟ್ಟಿಕೊಂಡು ಕುರುಡಳಂತಿದ್ದ ಸಂಯಮಶಾಲಿನಿ. * ಅವಳ ಆ ವರ್ತನೆಯನ್ನೊಪ್ಪದೆ ಹಾಸ್ಯ ಮಾಡುವವರೂ, ಅದರ ಹಿಂದಿರುವ ಅಗಾಧ ಪ್ರೇಮ ಹೃದಯದ ಸ್ವಾರ್ಥತ್ಯಾಗವನ್ನೂ ಸ್ಥಿರನಿಶ್ಚಯವನ್ನೂ ಮೆಚ್ಚಿ ತಲೆದೂಗಲೇ ಬೇಕು. ಗಾಂಧಾರಿಗೆ ಸೊಸೆಯರಲ್ಲಿ ಪುತ್ರಿಕಾಪ್ರೇಮ. ಅವಳು ಅವರನ್ನು ಜಾತೆಯರೆಂದೇ ಕರೆಯುವಳು. ದುರ್ಯೋಧನನೇ ಮುಂದಿನ ಜನ್ಮದಲ್ಲಿ ತನ್ನ ಮಗನಾಗಬೇಕೆಂದು ಅವಳಿಗೆ ಆಶೆ; ಅವಳೇ ತನ್ನ ಮಾತೆಯಾಗಬೇಕೆಂದು ಅವನಿಗೂ ಅಭಿಲಾಷೆ. ಇಬ್ಬರೂ ಧನ್ಯರು. ಅವಳಂತಹ ವಾತ್ಸಲ್ಯಮಯಿಯಾದ ಮಾತೆಯೆಂಬುದಕ್ಕೆ ಇದಕ್ಕಿಂತ ಹೆಚ್ಚಿನ ನಿದರ್ಶನವೇ ಬೇಡ.

---

* ಮಹಾಭಾರತದ ಗಾಂಧಾರಿಯೂ ಹೀಗೆಯೇ ಮಾಡುವಳು. ಅವಳೆಷ್ಟು ಪತ್ಯಪಕ್ಷಪಾತಿಯೆಂಬುದು ದುರ್ಯೋಧನಾದಿಗಳ ಮರಣಾನಂತರ ಶ್ರೀಕೃಷ್ಣನು ಅವಳನ್ನು ಕುರಿತು, "ಜಯಾರ್ಥಿಯಾದ ದುರ್ಯೋಧನನಿಗೆ 'ಮೂಢ! ನನ್ನ ಮಾತನ್ನು ಕೇಳು. ಎಲ್ಲಿ ಧರ್ಮವೋ ಅಲ್ಲಿ ಜಯ' ಎಂದು ಕಠಿನವಾದ ಮಾತುಗಳನ್ನು ನೀನು ಹೇಳಿದ್ದೆ. ಎಲೈ ನೃಪಾತ್ಮಜೆ! ಆ ನಿನ್ನ ಮಾತುಗಳು ಈಗ ನಿಜವಾದುವೆಂದು ಭಾವಿಸು. ಎಲೈ ಕಲ್ಯಾಣಿ! ಹಾಗೆ ಭಾವಿಸಿ ದುಃಖಕ್ಕೆ ಮನಗೊಡದಿರು" ("ದುರ್ಯೋಧನಸ್ತ್ವಯಾಚೋಕ್ತೋ ಜಯಾರ್ಥೀ ಪರುಷಂ ವಚಃ। ಶೃಣು ಮೂಢ ವಚೋ ಮಹ್ಯಂ ಯತೋ ಧರ್ಮಸ್ತತೋ ಜಯಃ॥ ತದಿದಂ ಸಮನುಪ್ರಾಪ್ತಂ ತವ ವಾಕ್ಯಂ ನೃಪಾತ್ಮಜೇ। ಏವಂ ವಿದಿತ್ವಾ ಕಲ್ಯಾಣಿ ಮಾಸ್ಮ ಶೋಕೇ ಮನಃ ಕೃಥಾಃ॥") ಎಂದು ಹೇಳುವ ಮಾತುಗಳಿಂದ ಗೊತ್ತಾಗುವುದು. ಆಕೆಯು ಕೋಪವನ್ನು ಬಿಟ್ಟು ಯುಧಿಷ್ಠಿರಾದಿಗಳನ್ನು ತಾಯಿಯಂತೆ ಸಮಾಧಾನಪಡಿಸಿ ಸಂತೈಸಿದಳೆಂಬ ಅಂಶವಂತು ("ಗಾಂಧಾರೀ ವಿಗತಕ್ರೋಧಾ ಸಾಂತ್ವಯಾಮಾಸ ಮಾತೃವತ್॥") ಆಕೆಯ ಸೌಜನ್ಯಕ್ಕೆ ರನ್ನಗನ್ನಡಿ.

---o---

# ಐದನೆಯ ತರಂಗ

---

## ಕವಿಕಲ್ಪಿತವಾದ ಕಥಾವಸ್ತುವುಳ್ಳ ರೂಪಕಗಳು

ಚಾರುದತ್ತ
ಅವಿಮಾರಕ

# ಚಾರುದತ್ತ

---

## ಅವತರಣಿಕೆ

ಇದು ನಾಲ್ಕು ಅಂಕಗಳಿಗೇ ನಿಂತುಹೋಗಿರುವ ಅಪೂರ್ಣ ರೂಪಕ. ನಾವು ಹಿಂದೆಯೇ ಸೂಚಿಸಿರುವಂತೆ ಈ ರೂಪಕದ ಉಳಿದ ಅಂಕಗಳು ದಿವಂಗತರಾದ ಡಾಕ್ಟರ್ ಟಿ. ಗಣಪತಿಶಾಸ್ತ್ರಿಗಳವರಿಗೆ ದೊರೆತ ಪ್ರತಿಗಳಲ್ಲಿ ಇಲ್ಲದೆ ಹೋದುದು ಇದಕ್ಕೆ ಕಾರಣವೋ, ಅಥವಾ ಕವಿಯೇ ರೂಪಕವನ್ನು ಪೂರೈಸಲಿಲ್ಲವೋ ತಿಳಿಯದು. ಅವರಿಗೆ ದೊರೆತ ಎರಡು ಪ್ರತಿಗಳಲ್ಲೊಂದರ ಕೊನೆಯಲ್ಲಿ ಮಾತ್ರವೇ, "ಚಾರುದತ್ತವು ಮುಗಿದುದು" * ಎಂಬ ವಾಕ್ಯವಿದ್ದುದಾಗಿಯೂ ಮತ್ತೊಂದು ಪ್ರತಿಯಲ್ಲಿ ಅದು ಇರಲಿಲ್ಲವೆಂದೂ ಅವರು ಸೂಚಿಸಿದ್ದಾರೆ. ಆದಕಾರಣ, ನಾಲ್ಕು ಅಂಕಗಳಿಗೇ ಈ ರೂಪಕವು ಮುಗಿಯಿತೆಂದು ನಿರ್ಧರವಾಗಿ ನುಡಿಯುವಂತಿಲ್ಲ. ನಾಲ್ಕನೆಯ ಅಂಕದ ಕೊನೆಯಲ್ಲಿ ಕಥಾವಸ್ತುವು ಮುಕ್ತಾಯವಾಗಿ ನೆಲೆಗೆ ನಿಲ್ಲದೆ ಹೋಗಿರುವುದನ್ನು ನೋಡಿದರಂತು, ರೂಪಕವೆಂದಿಗೂ ಅಲ್ಲಿಗೇ ಮುಗಿಯುವುದಿಲ್ಲವೆಂದು ಹೇಳಲು ಕಾರಣವುಂಟು. ಈಗ ಉಪಲಬ್ಧವಾಗಿರುವ ಪ್ರತಿಗಳನ್ನು ಬರೆದುಕೊಂಡವರಿಗೆ ಒಂದು ವೇಳೆ ಮುಂದಿನ ಅಂಕಗಳು ದೊರೆಯದೆ ಹೋಗಿರಬೇಕು. ಇಲ್ಲವೇ ಕವಿಯೇ ನಾಲ್ಕು ಅಂಕಗಳನ್ನು ಮಾತ್ರವೇ ಬರೆದು ಉಳಿದ ಅಂಕಗಳನ್ನು ಬರೆಯದೆ ರೂಪಕವನ್ನು ಅಪೂರ್ಣವಾಗಿ ಬಿಟ್ಟಿರಬೇಕು.

## ೧. ಕಥಾಸಾರಾಂಶ

ಈ ರೂಪಕದಲ್ಲಿ ಚಿತ್ರಿತವಾಗಿರುವುದು ಗುಣಪಕ್ಷಪಾತಿನಿಯಾದ ವಸಂತಸೇನೆಯೆಂಬ ವೇಶ್ಯೆಯೊಬ್ಬಳು ಚಾರುದತ್ತನೆಂಬ ಬ್ರಾಹ್ಮಣನಲ್ಲಿ

---

* "ಅವಸಿತಂ ಚಾರುದತ್ತಮ್"

ಅನುರಕ್ತಳಾದುದರ ಕಥಾವಿವರ. ಚಾರುದತ್ತನು ಉಜ್ಜಯಿನೀ ನಗರದಲ್ಲಿದ್ದ ದೊಡ್ಡ ವರ್ತಕ. ಬಂಧು ಮಿತ್ರರಿಗೂ ದೀನಾನಾಥರಿಗೂ ಯಥೇಷ್ಟವಾಗಿ ದ್ರವ್ಯದಾನಮಾಡಿ ದರಿದ್ರನಾದವನು. **ಮೊದಲನೆಯ ಅಂಕದಲ್ಲಿ** ರಾಜನ ಮೈದುನನಾದ ಶಕಾರನು ವಿಟನೊಡಗೂಡಿ ವಸಂತಸೇನೆಯನ್ನು ಅಟ್ಟಿಕೊಂಡು ಬರುವನು. ಕಾಮಪೀಡಿತನಾದ ಆ ದಡ್ಡನ ಕೈಯಿಂದ ಪಾರಾಗಲು ವಸಂತಸೇನೆಯು ಚಾರುದತ್ತನ ಮನೆಯೊಳಕ್ಕೆ ಹೋಗುವಳು. ಚಾರುದತ್ತನ ಮನೆಯೊಳಗಿನಿಂದ ಬಂದ ರದನಿಕೆಯೆಂಬ ಸೇವಕಿಯೇ ವಸಂತಸೇನೆಯೆಂದು ರಾತ್ರಿಯ ಅಂಧಕಾರದಲ್ಲಿ ಭ್ರಮಿಸಿ ಶಕಾರನು ಅವಳನ್ನು ಆಕ್ರಮಣಮಾಡುವನು. ವಿದೂಷಕನಾದ ಮೈತ್ರೇಯನು ತನ್ನ ಮಿತ್ರ ಚಾರುದತ್ತನ ಮನೆಯಿಂದ ದೀಪವನ್ನು ತರುವನು. ಶಕಾರನೂ ವಿಟನೂ ಹೊರಟುಹೋಗುವರು. ವಸಂತಸೇನೆಯು ಆ ದುಷ್ಟರ ಕಾಟವನ್ನು ಚಾರುದತ್ತನಿಗೆ ತಿಳಿಸಿ, ತನ್ನ ಆಭರಣಗಳನ್ನು ಆತನಲ್ಲಿ ನ್ಯಾಸವಾಗಿಟ್ಟು ಹೊರಡುವಳು. ಮೈತ್ರೇಯನನ್ನು ಚಾರುದತ್ತನು ಆಕೆಯೊಡನೆ ಕಳುಹಿಸುವನು. **ಎರಡನೆಯ ಅಂಕದಲ್ಲಿ** ನಾವು ಕಾಣುವುದು, ಚಾರುದತ್ತನಲ್ಲಿ ಅನುರಕ್ತೆಯಾದ ವಸಂತಸೇನೆಯನ್ನು. ಚಾರುದತ್ತನ ಗುಣಗಾನವನ್ನು ಕೇಳಿ ಅವಳ ಅನುರಾಗವು ಮತ್ತಷ್ಟು ವೃದ್ಧಿಯಾಗುವುದು. **ಮೂರನೆಯ ಅಂಕದಲ್ಲಿ** ಚಾರುದತ್ತನೂ ಮೈತ್ರೇಯನೂ ಸಂಗೀತ ಗೋಷ್ಠಿಯಿಂದ ಬರುವರು. ವಸಂತಸೇನೆಯ ಆಭರಣಗಳ ರಕ್ಷಣೆಯ ಭಾರವನ್ನು ವಹಿಸಿದ್ದ ಮೈತ್ರೇಯನ ಪೆಚ್ಚುತನದಿಂದ, ಆಭರಣಗಳ ಕರಂಡಕವು ಕಳ್ಳತನಕ್ಕಾಗಿ ಕನ್ನವನ್ನು ಕೊರೆದು ಒಳಕ್ಕೆ ಬಂದ ಸಜ್ಜಲಕನೆಂಬ ಚೋರನ ಕೈ ಸೇರುವುದು. ಆಭರಣಗಳು ಕಳ್ಳನ ಕೈ ಸೇರಿದುದಕ್ಕಾಗಿ ಚಾರುದತ್ತನು ಮನನೊಂದು ತನ್ನ ಪತ್ನಿಯು ಒಪ್ಪಿಸಿದ ಮುಕ್ತಾಹಾರವನ್ನು ವಸಂತಸೇನೆಗೆ ಕೊಟ್ಟುಬರುವಂತೆ ಮೈತ್ರೇಯನಿಗೆ ತಿಳಿಸುವನು. **ನಾಲ್ಕನೆಯ ಅಂಕದಲ್ಲಿ** ಸಜ್ಜಲಕನು ತಾನು ಕದ್ದ ಆಭರಣಗಳೊಡನೆ ತನ್ನ ಪ್ರಿಯೆಯೂ ವಸಂತಸೇನೆಯ ದಾಸಿಯೂ ಆದ ಮದನಿಕೆಯನ್ನು ಕಾಣಲು ಬರುವನು. ಅವಳನ್ನು ವಸಂತಸೇನೆಯಿಂದ ಬಿಡಿಸಿಕೊಂಡು ಹೋಗುವ ಶುಲ್ಕಕ್ಕಾ

ಗಿಯೇ ಅವನು ಕಳ್ಳತನಕ್ಕೆ ಹೊರಟಿದ್ದುದು. ಅವನು ವಸಂತಸೇನೆಯ ಮನೆಗೆ ಬಂದು, ನಡೆದುದೆಲ್ಲವನ್ನೂ ಮದನಿಕೆಗೆ ತಿಳಿಸುವನು. ಅವಳು ಆ ಆಭರಣಗಳು ತನ್ನ ಒಡತಿಯವುಗಳೆಂಬುದನ್ನು ಗುರುತಿಸಿ, ಚಾರುದತ್ತನು ಅವುಗಳನ್ನು ಕಳುಹಿಸಿದನೆಂದು ಹೇಳಿ ಅವುಗಳನ್ನು ಒಪ್ಪಿಸಬೇಕೆಂದು ಅವನಿಗೆ ತಿಳಿಸುವಳು. ವಸಂತಸೇನೆಯು ಮರೆಯಲ್ಲಿ ನಿಂತು ಆ ಮಾತುಗಳನ್ನು ಕೇಳುವಳು. ಅಷ್ಟರಲ್ಲಿ ಮೈತ್ರೇಯನು ಬಂದು, ತನ್ನ ಮಿತ್ರನು ಆಭರಣಗಳನ್ನು ದ್ಯೂತದಲ್ಲಿ ಸೋತು ಅವಕ್ಕೆ ಪ್ರತಿಯಾಗಿ ಮುತ್ತಿನ ಹಾರವನ್ನು ಕಳುಹಿಸಿದನೆಂದು ವಸಂತಸೇನೆಗೆ ತಿಳಿಸಿ, ಆಕೆಗೆ ಅದನ್ನು ಕೊಟ್ಟು ಹೋಗುವನು. ಅನಂತರ ಸಜ್ಜಲಕನು ವಸಂತಸೇನೆಗೆ ಒಡವೆಗಳನ್ನೊಪ್ಪಿಸಿ ಚಾರುದತ್ತನು ಅವುಗಳನ್ನು ಕಳುಹಿಸಿದನೆಂದು ಹೇಳುವನು. ವಸಂತಸೇನೆಯು ಮದನಿಕೆಯನ್ನು ಆಭರಣಗಳಿಂದ ಅಲಂಕರಿಸಿ ಅವನೊಡನೆ ಕಳುಹಿಸುವಳು; ಅನಂತರ ಮುತ್ತಿನ ಹಾರವನ್ನು ಚಾರುದತ್ತನಿಗೊಪ್ಪಿಸಲು ಆತನ ಮನೆಗೆ ವಸಂತಸೇನೆಯು ಹೊರಡುವಳು. ಅಲ್ಲಿಗೆ ನಾಲ್ಕನೆಯ ಅಂಕವು ಪೂರೈಸುವುದು.

## ೨. ವಿಮರ್ಶೆ

**ಸಂವಿಧಾನ ಕೌಶಲ:**—ಸಾಮಾನ್ಯ ವರ್ಗದವರನ್ನು ಮುಖ್ಯಪಾತ್ರಗಳನ್ನಾಗಿಟ್ಟುಕೊಂಡು ಕವಿಯು ರೂಪಕ ರಚನೆ ಮಾಡತಕ್ಕವನೆಂಬುದಕ್ಕೆ ಚಾರುದತ್ತವೂ ಉತ್ತಮವಾದೊಂದು ನಿದರ್ಶನ. ಇದರ ನಾಯಕನು ಬಡಬ್ರಾಹ್ಮಣನಾದ ಚಾರುದತ್ತ. ಉಳಿದ ಮುಖ್ಯಪಾತ್ರಗಳಲ್ಲಿ ಬಡವ ಮೈತ್ರೇಯನೊಬ್ಬ; ವೇಶ್ಯೆ ವಸಂತಸೇನೆಯೊಬ್ಬಳು. ಈ ಮೂರು ಮುಖ್ಯ ಪಾತ್ರಗಳನ್ನು ಕಲ್ಪಿಸಿ ಕವಿಯು ಸ್ವಾರಸ್ಯವಾಗಿ ರೂಪಕರಚನೆ ಮಾಡಿದ್ದಾನೆ. ಕಥಾವಸ್ತುವು ಕವಿಯಿಂದಲೇ ಕಲ್ಪಿತವಾಗಿರುವುದು ಮತ್ತೂ ವಿಶೇಷ. ಗುಣಾಢ್ಯನ ಬೃಹತ್ಕಥೆಯ ಆಧಾರದ ಮೇಲೆ ರಚಿತವಾಗಿರುವ ಮೂರು ಗ್ರಂಥಗಳಲ್ಲೊಂದರಲ್ಲಿ ಲೋಹಜಂಘನೆಂಬ ದರಿದ್ರ ಬ್ರಾಹ್ಮಣನಲ್ಲಿ ಅನುರಕ್ತೆಯಾದ ರೂಪಿಣಿಕಾ ಎಂಬ (ಧನಿಕಳಾದ) ಕನ್ಯೆಗೆ ಅವನನ್ನು ಮದುವೆಯಾಗಕೂಡದೆಂದು ಆಕೆಯ ತಾಯಿಯು ಬುದ್ಧಿವಾದ ಹೇಳಿದ

ಕಥೆಯಿದೆ. ಆ ಕಥೆಯು ಗುಣಾಢ್ಯನ ಬೃಹತ್ಕಥೆಯಲ್ಲಿದ್ದು ಅದರ ಆಧಾರದ ಮೇಲೆ ಚಾರುದತ್ತವು ಹುಟ್ಟಿರಬಹುದೇ—ಎಂಬ ಶಂಕೆಯು ಉಂಟಾಗ ಬಹುದು. ಆದರೆ ಚಾರುದತ್ತರೂಪಕದ ಘಟನೆಗಳನ್ನು ನೋಡಿದರೆ, ಅದು ಕವಿಯಿಂದಲೇ ಸ್ವತಂತ್ರವಾಗಿ ಕಲ್ಪಿತವಾದುದೆಂದು ಧಾರಾಳವಾಗಿ ಹೇಳಬಹುದು. ಸಾಮಾಜಿಕರೂಪಕವಾದ ಚಾರುದತ್ತದ ಸ್ಥಾಪನೆಯೂ ಅದಕ್ಕೆ ತಕ್ಕಹಾಗಿರುವುದು ನಾವು ಗಮನಿಸಬೇಕಾದ ಮತ್ತೊಂದು ಮುಖ್ಯ ವಾದ ಅಂಶ. ಉಳಿದ ಹನ್ನೆರಡು ರೂಪಕಗಳಲ್ಲಿರುವಂತೆ ಈ ರೂಪಕ ದಲ್ಲಿ ಸೂತ್ರಧಾರನು ಭಗವತ್ಪ್ರಾರ್ಥನೆಯ ಶ್ಲೋಕವನ್ನು ಹೇಳುವುದಿಲ್ಲ. ಉಳಿದ ರೂಪಕಗಳ ಸೂತ್ರಧಾರರಂತೆ ಸಂಸ್ಕೃತದಲ್ಲಿ ಮಾತನಾಡುವು ದಿಲ್ಲ. ಜನರ ಬಳಕೆಯ ಭಾಷೆಯಾದ ಪ್ರಾಕೃತದಲ್ಲಿ ಮಾತನಾಡುತ್ತಾನೆ. ಬೆಳಗ್ಗೆ ಮನೆಯನ್ನು ಬಿಟ್ಟು ಹೊರಟು ಹಲವೆಡೆ ಅಲೆದಾಡಿ ಹಸಿದು ಬಂದಿರುವ ಸೂತ್ರಧಾರನೂ ದರಿದ್ರನಾಗಿರುವುದರಿಂದ, ದರಿದ್ರ ಚಾರು ದತ್ತನು ನಾಯಕನಾಗಿರುವ ರೂಪಕಕ್ಕೆ ಸರಿಯಾದ ಹಿನ್ನೆಲೆಯಂತೆ ಸ್ಥಾಪನೆಯು ಶೋಭಿಸುತ್ತಿದೆ. ಹಾಸ್ಯರಸಪ್ರೇಮಿಯಾದ ಭಾಸನ ತಿಳಿ ಯಾದ ಹಾಸ್ಯರಸಕ್ಕೂ, ಮನಸ್ಸು ಪರಿತುಷ್ಟವಾಗಿದ್ದರೆ ದರಿದ್ರರೂ ಹರ್ಷ ಪಡಬಹುದೆಂಬುದಕ್ಕೂ, ಸೂತ್ರಧಾರ ನಟಿಯರ ಸಂಭಾಷಣವು ನಿದರ್ಶನ ವಾಗಿದೆ. ಹಸಿದು ಬಂದಿರುವ ಸೂತ್ರಧಾರನು ಒಳ್ಳೆಯ ಭೋಜನ ದೊರೆತೀತೆಂದು ಹಾರೈಸಿ ತನ್ನ ಪತ್ನಿಯಾದ ನಟಿಯನ್ನು ಕರೆಯುವನು. ನಟಿಯು ಪ್ರವೇಶಿಸುವಳು. ಅವರ ಸಂಭಾಷಣದ ಸೊಗಸನ್ನು ನೋಡಿ:—

**ನಟಿ:**—ಆರ್ಯನೆ, ಇದೋ ಬಂದೆನು. ಆರ್ಯ, ನಿಜವಾಗಿಯೂ ಸರಿಯಾದ ಸಮಯಕ್ಕೇ ಬಂದೆ.

**ಸೂತ್ರಧಾರ:**—ಆರ್ಯಳೆ, ನಮ್ಮ ಮನೆಯಲ್ಲೇನಾದರೂ ಊಟಕ್ಕೆ ಮಾರ್ಗ ವುಂಟೊ ?

**ನಟಿ:**—ಉಂಟು.

**ಸೂತ್ರಧಾರ:**—ಚಿರಂಜೀವಿಯಾಗಿ ಬಾಳು. ಇದೇರೀತಿ ಸೊಗಸಾದ ಊಟಗ ಳನ್ನೊದಗಿಸುತ್ತಿರು.

**ನಟಿ:**—ಆರ್ಯನೆ, ನಿನ್ನ ಆಗಮನವನ್ನೇ ನಿರೀಕ್ಷಿಸುತ್ತ ನಿಂತಿದ್ದೆ.

**ಸೂತ್ರಧಾರ:**—ನನ್ನ ಇಷ್ಟವಸ್ತುಗಳೆಲ್ಲ ಇವೆಯೊ ?

**ನಟಿ:**—ಇವೆ.

**ಸೂತ್ರಧಾರ:**......ಹಾಗೇನು ? ದೇವತೆಗಳು ನಿನ್ನನ್ನು ಆಶೀರ್ವದಿಸಿ ಕಾಪಾಡಲಿ! ಆರ್ಯಳೆ, ಏನೇನು, ಏನೇನು ಉಂಟು ?

**ನಟಿ:**—ತುಪ್ಪ, ಬೆಲ್ಲ, ಮೊಸರು, ಅಕ್ಕಿ, ಎಲ್ಲಾ.

**ಸೂತ್ರಧಾರ:**—ಇವೆಲ್ಲ ನಮ್ಮ ಮನೆಯಲ್ಲಿವೆಯೆ ?

**ನಟಿ:**—ಅಲ್ಲ, ಅಲ್ಲ (ನಮ್ಮ ಮನೆಯಲ್ಲಲ್ಲ) ; ಅಂಗಡಿಯಲ್ಲಿವೆ.

**ಸೂತ್ರಧಾರ:**—ಛಿ, ಅನಾರ್ಯಳೆ ! ನಿನ್ನ ಆಶೆಯೂ ಇದೇ ರೀತಿ ಭಂಗವಾಗಿ ಹೋಗಲಿ. ಚಂಡಮಾರುತವು ಪರ್ವತಕ್ಕಿಂತ ಮೇಲಕ್ಕೇರಿಸಿ ಕೆಳಕ್ಕೆಸೆದ ಹುಲ್ಲಿನಂತೆ ನನ್ನ ಸ್ಥಿತಿಯಾಗಿದೆ.

**ನಟಿ:**—ಹೆದರಬೇಡ ಹೆದರಬೇಡ. ಆರ್ಯನೆ, ಒಂದು ಮುಹೂರ್ತಕಾಲ ತಾಳು. ಎಲ್ಲವೂ ಸಿದ್ಧವಾಗುತ್ತದೆ. ದೊರೆತಹಾಗೆಯೆ. ಈ ದಿನ ನನ್ನ ಉಪವಾಸವ್ರತಕ್ಕೆ ಆರ್ಯನು ಸಹಾಯಕನಾಗಬೇಕು.

**ಸೂತ್ರಧಾರ:**—ಆರ್ಯಳೆ, ಉಪವಾಸವ್ರತದ ಹೆಸರೇನು ?

**ನಟಿ:**—ಅನುರೂಪನಾದ ಪತಿಯನ್ನು ಕೊಡುವ ಉಪವಾಸವ್ರತವೆಂದು.

**ಸೂತ್ರಧಾರ:**— ಮುಂದಿನ ಜನ್ಮದಲ್ಲೇನು ?

**ನಟಿ:**—ಹೌದು.

ಮುಂದಿನ ಜನ್ಮದಲ್ಲಿ ಅನುರೂಪನಾದ ಪತಿಯನ್ನು ಪಡೆಯಲು ಉಪವಾಸ ವ್ರತವನ್ನಾಚರಿಸುವುದೆಂದರೆ ಈ ಜನ್ಮದಲ್ಲಿ ದೊರೆತಿರುವ ಪತಿಯ ಸ್ವಭಾವವು ಪ್ರಶಸ್ತವಾಗಿಲ್ಲವೆಂಬುದು ತಾನೆ ನಟಿಯ ವಾಕ್ಯದ ಧ್ವನಿ ? ಇದು ಪ್ರೇಕ್ಷಕರಿಗೆ ವಿನೋದವನ್ನುಂಟುಮಾಡತಕ್ಕುದಾಗಿದ್ದರೂ ಸೂತ್ರಧಾರನಿಗೆ ಕೋಪಬರುವಂತಹುದಾಗಿಯೂ ಇದೆ. ಆದರೆ ಅವನು ಕೋಪಿಸಿಕೊಳ್ಳುವುದೇ ಇಲ್ಲ. ಹಸಿದು ಬಂದಿರುವಾಗಲೂ ಅವನು ಈ ಬಗೆಯ ವಿನೋದಕ್ಕೆ ಸಿದ್ಧವಾಗಿರುವನು. ಸೂತ್ರಧಾರ ನಟಿಯರದು ಸ್ನೇಹ ಸಲುಗೆಗಳಿಂದ ಕೂಡಿದ, ಸರಸಮಯವಾಗಿರುವ ದಾಂಪತ್ಯ. ಆದ

ಕಾರಣ, ನಟಿಯ ಮಾತುಗಳನ್ನು ಕೇಳಿ ಅವನು ನಕ್ಕಿರಬೇಕು; ಅವನು ನಕ್ಕುದನ್ನು ಕಂಡು ಅವಳೂ ನಕ್ಕಿರಬೇಕು. ಚೂರ್ಣಗೋಷ್ಠನೆಂಬಾತನು ಈ ಉಪವಾಸ ವ್ರತದ ವಿಚಾರವನ್ನು ತನ್ನ ಪತ್ನಿಗೆ ಉಪದೇಶಿಸಿದನೆಂದು ಕೇಳಿ ಸೂತ್ರಧಾರನು, "ಸಾಧು, ಚೂರ್ಣಗೋಷ್ಠ, ಸಾಧು" ಎಂದು ಹೇಳುವಷ್ಟು ಹಾಸ್ಯಪ್ರಿಯತೆಯು ಅವನಲ್ಲಿದೆ. ಈ ಮಾತುಗಳಲ್ಲಿ ವ್ಯಂಗ್ಯವಾಗಿ ಕೊಂಚ ಅಣಕವೂ ಇರಬಹುದು. ಆದರೆ ನಟಿಯು, "ಆರ್ಯನು ಅನುಗ್ರಹಿಸುವುದಾದರೆ, ನಮ್ಮಂತಹವರಿಗೆ ತಕ್ಕ ಬ್ರಾಹ್ಮಣನೊಬ್ಬನನ್ನು ಭೋಜನಕ್ಕೆ ಕರೆದುಕೊಂಡು ಬರಬೇಕೆಂಬುದು ನನ್ನ ಅಭಿಲಾಷೆ" ಎಂದು ಹೇಳಿದುದನ್ನು ಕೇಳಿ ಅವನು, "ಧರ್ಮದಿಂದ ಕೂಡಿದುದಲ್ಲವೇ ಈ ನಿಯೋಗವು! ಅದರಿಂದ ನನಗೆ ಊಟವೂ ದೊರೆಯುತ್ತದೆ. ಆರ್ಯಳೆ, ಹಾಗಿದ್ದರೆ ನೀನು ಮನೆಯೊಳಕ್ಕೆ ಹೋಗು. ನಾನು ನಮ್ಮಂತಹವರಿಗೆ ತಕ್ಕ ಬ್ರಾಹ್ಮಣನೊಬ್ಬನನ್ನು ಹುಡುಕುತ್ತೇನೆ" ಎಂದು ಉತ್ತರ ಕೊಡುವುದನ್ನು ನೋಡಿದರೆ ಆ ಮಾತುಗಳಲ್ಲಿ ಅಣಕಕ್ಕಿಂತ ಹಾಸ್ಯ ಪ್ರವೃತ್ತಿಯೇ ಬಹಳ ಹೆಚ್ಚಾಗಿದೆಯೆಂಬ ಅಂಶವು ವ್ಯಕ್ತವಾಗುತ್ತದೆ.

ತಿಳಿಯಾದ ಹಾಸ್ಯವನ್ನು ಚಿತ್ರಿಸಿ ನಮ್ಮ ಮನಸ್ಸನ್ನು ಹಿಗ್ಗಿಸಲು ಕವಿಗೆ ಸಾಮರ್ಥ್ಯವಿರುವಂತೆಯೇ ದರಿದ್ರನ ದೈನ್ಯವನ್ನು ಚಿತ್ರಿಸಿ ನಮ್ಮ ಹೃದಯವನ್ನು ಕಲಕುವುದಕ್ಕೂ ಕವಿಗೆ ಸಾಮರ್ಥ್ಯವಿದೆ; ದೂರದಲ್ಲಿ ಹೋಗುತ್ತಿರುವ ಮೈತ್ರೇಯನನ್ನು ನೋಡಿ ಸೂತ್ರಧಾರನು, "ಆರ್ಯ! ಭೋಜನಕ್ಕೆ ಬರಬೇಕು. ದರಿದ್ರನ ಮನೆಯ ಆಹ್ವಾನವೆಂದು ಸಮ್ಮತಿಸದೆ ನನಗೆ ಅವಮಾನ ಮಾಡಬೇಡ. ಸಮೃದ್ಧವಾದ ಭೋಜನವು ದೊರೆಯುವುದು. ತುಪ್ಪ, ಬೆಲ್ಲ, ಮೊಸರು, ಅಕ್ಕಿ, ಇವೆಲ್ಲ ನಮ್ಮ ಮನೆಯಲ್ಲುಂಟು. ದಕ್ಷಿಣೆಗೆ ನಾಣ್ಯಗಳೂ ಇವೆ" ಎಂದು ಕೂಗಿ ಹೇಳುವನು. ದರಿದ್ರರು ಕೊಡುಗೈಯಿಂದ ತ್ಯಾಗಮಾಡುವಾಗಲೂ ದೈನ್ಯದಿಂದ ಬವಣೆಪಡುವುದನ್ನು ಕವಿಯು ಬಹು ಚೆನ್ನಾಗಿ ಚಿತ್ರಿಸಿ, ನಮ್ಮ ಹೃದಯದಿಂದ ಅನುತಾಪವು ಉಕ್ಕಿಹರಿಯುವಂತೆ ಮಾಡಿದ್ದಾನೆ. ಮೈತ್ರೇ

ಯನು ನೇಪಥ್ಯದಿಂದ, "ಮತ್ತೊಬ್ಬರನ್ನು, ಮತ್ತೊಬ್ಬರನ್ನು ನೀನು ಊಟಕ್ಕೆ ಕರೆ. ನಾನು ಬಡವನಲ್ಲ" ಎಂದು ಕೂಗಿ ಉತ್ತರ ಹೇಳುವುದನ್ನು ನೋಡಿ ನಮ್ಮ ಮನಸ್ಸು ಅನುಕಂಪದಿಂದ ಮತ್ತಷ್ಟು ಕುಸಿದು ಬೀಳುವುದು. ದರಿದ್ರನ ಮನೆಗೆ ತಾನು ಊಟಕ್ಕೆ ಹೋಗಕೂಡದೆಂಬ ಸೊಕ್ಕಿನಿಂದ ಅಥವಾ ತಿರಸ್ಕಾರ ಬುದ್ಧಿಯಿಂದ ಮೈತ್ರೇಯನು ತಾನು ಬಡವನಲ್ಲವೆಂದು ಉತ್ತರ ಹೇಳುವುದಿಲ್ಲ. ತನ್ನ ಮಿತ್ರನಾದ ಚಾರುದತ್ತನು ದರಿದ್ರನಾಗಿರುವ ಕಾರಣದಿಂದ, ಅವನ ಆಶ್ರಿತನಾಗಿರುವ ತಾನು ಇನ್ನೂ ದರಿದ್ರನೆಂದು ನಿರ್ಧರಿಸಿ ಸೂತ್ರಧಾರನು ತನ್ನನ್ನು ಊಟಕ್ಕೆ ಕರೆಯುತ್ತಿರುವನೆಂಬುದು ಮೈತ್ರೇಯನ ಭಾವನೆ. ಆದುದರಿಂದ ತಾನು ಊಟಕ್ಕೆ ಒಪ್ಪಿಕೊಂಡರೆ, ತನ್ನ ಮಿತ್ರ ಚಾರುದತ್ತನು ದರಿದ್ರನೆಂಬುದು ಸಿದ್ಧವಾಗಲು ಅವಕಾಶವುಂಟೆಂಬುದು ಅವನ ಆಶಯ. ಆದಕಾರಣ ಅವನು ಹಸಿವಿನಿಂದ ಬಾಧೆಪಡುತ್ತಿದ್ದರೂ—ಭೋಜನ ದಕ್ಷಿಣೆಗಳು ತಪ್ಪಿ ಹೋಗುವುವೆಂದು ಮರುಕಪಡುತ್ತಿದ್ದರೂ--ಊಟಕ್ಕೆ ಒಪ್ಪಿಕೊಳ್ಳದೆ ತಾನು ಬಡವನಲ್ಲವೆಂದು ಹೇಳಿಕೊಳ್ಳುವನು. ಮೈತ್ರೇಯನು ಅವರಿವರ ಮನೆಗಳಿಗೆ ಊಟಕ್ಕೆ ಹೋಗಿ ಹೊಟ್ಟೆಹೊರೆದುಕೊಂಡು ಚಾರುದತ್ತನ ಮನೆಯೊಳಗೆ ವಾಸಮಾಡುವ ಸ್ಥಿತಿಯಲ್ಲಿರುವನು. ಆದರೂ, ಚಾರುದತ್ತನು ದರಿದ್ರನೆಂಬ ಭಾವನೆಗೆ ಅವಕಾಶವಾಗುವುದನ್ನು ಅವನು ಸೈರಿಸನು. ಸೂತ್ರಧಾರನು ಅವನ ಮಾತುಗಳನ್ನು ಕೇಳಿ, "ಘೃತ ಗುಡ ದಧಿ ಸುಸಮೃದ್ಧ" ವಾದ ಭೋಜನವು ದೊರೆಯುವುದೆಂದೂ, ತೊವ್ವೆ, ಉಪ್ಪಿನಕಾಯಿಯೂ ಉಂಟೆಂದೂ ಸತ್ಕಾರದಿಂದ ಸಮರ್ಪಿಸುವ ಆ ಭೋಜನಕ್ಕೆ ಬರಬೇಕೆಂದೂ ಮತ್ತೆ ಹೇಳುವನು. ಅಲ್ಲಿಗೆ ಸ್ಥಾಪನೆಯು ಪೂರೈಸುವುದು.

ಅನಂತರ ವಿದೂಷಕನು (ಮೈತ್ರೇಯನು) ಸೂತ್ರಧಾರನ ಮಾತುಗಳಿಗೆ ಮತ್ತೊಮ್ಮೆ ಉತ್ತರಕೊಡುತ್ತ, "ಮತ್ತೊಬ್ಬರನ್ನು, ಮತ್ತೊಬ್ಬರನ್ನು, ನೀನು ಊಟಕ್ಕೆ ಕರೆ. ನಾನು ಬಡವನಲ್ಲ. ನಾನು ಬಡವನಲ್ಲವೆಂದು ಹೇಳುತ್ತಿಲ್ಲವೆ?" ಎಂದು ಮುಂತಾಗಿ ಹೇಳುತ್ತ ರಂಗಸ್ಥಳಕ್ಕೆ

ಪ್ರವೇಶಿಸುವನು. ಚಾರುದತ್ತನ ವೈಭವದ ದಿನಗಳಲ್ಲಿ, "ಭ್ರೂಕ್ಷೇಪ" ಮಾತ್ರದಿಂದ ತನಗೆ ಹಗಲಿರುಳೂ ಅವನ ಮನೆಯಲ್ಲಿ ಮಿಷ್ಟಾನ್ನ ಭೋಜನವು ದೊರೆಯುತ್ತಿದ್ದ ಬಗೆ, ಚಿತ್ರಕಾರನು ಸುತ್ತಲೂ ಬಣ್ಣಗಳ ತಟ್ಟೆಗಳನ್ನಿಟ್ಟುಕೊಂಡು ಚಿತ್ರಲೇಖನಕ್ಕೆ ಕುಳಿತಂತೆ ತಾನೂ ಬಗೆಬಗೆಯ ಭಕ್ಷ್ಯಭೋಜ್ಯಗಳನ್ನಿಟ್ಟುಕೊಂಡು ಬೀದಿಯ ಬಸವನಂತೆ ಮೆಲ್ಲುತ್ತಿದ್ದುದು, ಚಾರುದತ್ತನಿಗೆ ದಾರಿದ್ರ್ಯ ಬಂದ ಬಳಿಕ ತಾನು ಇತರರ ಮನೆಗಳಿಗೆ ಹೋಗಿ ಹೊಟ್ಟೆ ಹೊರೆದುಕೊಂಡು ಮಲಗಲು ಮಾತ್ರ ಪಾರಿವಾಳ ದಂತೆ ಅವನ ಮನೆಗೆ ಬರುತ್ತಿರುವುದು, ಮುಂತಾದ ವಿಚಾರಗಳನ್ನು ಮೈತ್ರೇಯನು ಸ್ವಗತ ಭಾಷಣದಲ್ಲಿ ಬಣ್ಣಿಸಿ, ಆ ಬಳಿಕ (ಅಂದು ಷಷ್ಠಿ ಯಾದಕಾರಣ) ದೇವ ಕಾರ್ಯವನ್ನಾಚರಿಸುವ ಚಾರುದತ್ತನ ಬಳಿಗೆ ಹೋಗುವನು.

ಮುಂದಿನ ದೃಶ್ಯದಲ್ಲಿ ಚಾರುದತ್ತನು ತನ್ನ ದಾರಿದ್ರ್ಯಕ್ಕಾಗಿ ದುಃಖಿಸುತ್ತ ವಿದೂಷಕನೊಡನೆ ಪ್ರವೇಶಿಸುವನು. ಚೇಟಿಯಾದ ರದ ನಿಕೆಯೂ ಅವರೊಡನೆ ಪ್ರವೇಶಿಸುವಳು. ಚಾರುದತ್ತನು ಪಶುಪಕ್ಷಿಗಳ ಪ್ರಯೋಜನಾರ್ಥವಾಗಿ ಪೂರ್ವದಂತೆ ಸಮೃದ್ಧವಾಗಿ ಬಲಿದಾನ ಮಾಡು ವುದಕ್ಕಿಲ್ಲದ ತನ್ನ ಸ್ಥಿತಿಯನ್ನು ಹಳಿದುಕೊಳ್ಳುತ್ತ, "ಮಾನವಂತನಾದ ಮನುಷ್ಯನಿಗೆ ದಾರಿದ್ರ್ಯವು ಜೀವನ್ಮರಣ ಸದೃಶವಾದುದು. ಏಕೆಂದರೆ, ನನ್ನ ಮನೆಯ ಯಾವ ಅಂಗಳಗಳಲ್ಲಿ ಸಮೃದ್ಧವಾದ ಬಲಿದಾನಗಳನ್ನು ಮಾಡಿದಾಗ್ಗೆ ಹಂಸಗಳ ಮತ್ತು ಸಾರಸಪಕ್ಷಿಗಳ ಗುಂಪು ಗುಂಪುಗಳೇ ಹೂಗಳನ್ನು ಒಂದು ಕಡೆಗೆ ಒತ್ತರಿಸಿ ಬಲಿದಾನದ ಧಾನ್ಯಗಳನ್ನು ತಿಂದು ತೃಪ್ತವಾಗುತ್ತಿದ್ದುವೋ ಅದೇ ಅಂಗಳಗಳಲ್ಲಿ ಹುಟ್ಟಿರುವ ಯವಧಾನ್ಯದ ಮೊಳಕೆಗಳ ಮಧ್ಯದಲ್ಲಿ ಕೀಟಗಳಿಗೆ ಮಾತ್ರ ಆಹಾರವಾಗುವ (ಅಲ್ಪ ಪರಿಮಾಣದ) ಈಗಿನ ಬೀಜಾಂಜಲಿಯು ಬೀಳುತ್ತಿದೆ" *ಎಂದು ಹೇಳು

---

* "ದಾರಿದ್ರ್ಯಂ ಖಲು ನಾಮ ಮನಸ್ವಿನಃ ಪುರುಷಸ್ಯ ಸೋಚ್ಛ್ವಾಸಂ ಮರಣಮ್ । ಕುತಃ;

ಯಾಸಾಂ ಬಲಿರ್ಭವತಿ ಮದ್ಗೃಹದೇಹಲೀನಾಂ

ವುದಕ್ಕಾಗಿ ನಾವು ಮರುಕಪಟ್ಟು ಮುಗ್ಧರಾಗುವಂತಾಗುವುದು. ಮನೆಯ ಅಂಗಳಗಳಲ್ಲಿ ಹೇರಳವಾಗಿ ಬಲಿದಾನದ ಧಾನ್ಯಗಳು ಬೀಳುತ್ತಿದ್ದು ಹಂಸ ಸಾರಸಗಳ ಗುಂಪುಗಳು ಬಂದು ಅವುಗಳನ್ನು ತಿನ್ನುತ್ತಿದ್ದುವೆಂಬುದರಿಂದ ಚಾರುದತ್ತನ ಮನೆಯು ಬಹು ದೊಡ್ಡದಾಗಿದ್ದಿತೆಂಬುದನ್ನು ನಾವು ಗ್ರಹಿಸಬಹುದು. ಪ್ರಾಸಾದದಂತಿದ್ದು ಹಲವು ಅಂಗಳಗಳಿಂದ ಕೂಡಿದ ಅವನ ಮನೆಯ ಉದ್ಯಾನದಲ್ಲಿದ್ದ ಸರೋವರಗಳಿಂದ ಅವು ಬಹುಶಃ ಬರುತ್ತಿದ್ದರೂ ಇರಬಹುದು. ಪ್ರಾಚೀನಕಾಲದಲ್ಲಿ ವರ್ತಕರು ಮುಂತಾದ ಧನಿಕರು ಕ್ರೀಡೋದ್ಯಾನಗಳಿಂದ ಕೂಡಿದ ಏಳು ಅಂತಸ್ತು ಒಂಬತ್ತು ಅಂತಸ್ತುಗಳ ಪ್ರಾಸಾದಗಳಲ್ಲಿ ವಾಸಮಾಡುತ್ತಿದ್ದುದು ಭರತಖಂಡದ ಇತಿಹಾಸದಲ್ಲಿ ಸುಪ್ರಸಿದ್ಧವಾಗಿದೆ. ರಾಜರ ಬಳಿಯಲ್ಲಿದ್ದಂತೆ ಚಾರುದತ್ತನ ಬಳಿಯಲ್ಲಿ ವಿದೂಷಕನಿದ್ದುದೇ ಅವನ ಸಂಪತ್ತು ಅತುಳವಾಗಿದ್ದುದ ಕ್ಕೊಂದು ನಿದರ್ಶನ. ತನ್ನ ಸಂಪತ್ತನ್ನೆಲ್ಲ ಆಸಮುದ್ರಪರ್ಯಂತ ವಾಗಿ ದಾನಮಾಡಿ ದರಿದ್ರನಾದ ಚಾರುದತ್ತನ ಬಡತನವೂ ಕೃಷ್ಣ ಪಕ್ಷದ ಚಂದ್ರಕಳೆಯಂತೆ ಶೋಭಿಸುತ್ತ ರಮಣೀಯವಾಗಿದ್ದುದಾಗಿ ತಿಳಿಸಿ ಮೈತ್ರೇಯನು ಸಮಾಧಾನ ಹೇಳುವನು. ಎಂತಹ ಆಹ್ಲಾದಕವಾದ ಉಪಮಾನ! ಚಾರುದತ್ತನ ದುಃಖಕ್ಕೆ ಮುಖ್ಯಕಾರಣವು—ಅವನೇ ಹೇಳು ವಂತೆ—ಅವನ ಸಂಪತ್ತು ಹೋಯಿತೆಂಬುದಲ್ಲ. ಗುಣರಸಜ್ಞನಾದ ತಾನು ಹಿಂದಿನಂತೆ ಔದಾರ್ಯವನ್ನು ತೋರಿಸುವುದಕ್ಕೆ ಶಕ್ಯವಿಲ್ಲದ ಅವಸ್ಥೆಯೇ ಅದಕ್ಕೆ ಮುಖ್ಯಕಾರಣ. ಚಾರುದತ್ತನು ಹೇಳುವ, "ಕಷ್ಟಗಳನ್ನನು ಭವಿಸಿದ ಮೇಲೆ ದೊರೆತ ಸುಖವು ಅಂಧಕಾರದಲ್ಲಿದ್ದು ದೀಪವನ್ನು ಕಂಡಂತೆ ಶೋಭಿಸುತ್ತದೆ. ಸುಖದಲ್ಲಿದ್ದು ಯಾವನು ದರಿದ್ರದಶೆಯನ್ನು ಹೊಂದುವನೋ ಅವನು ಶರೀರವನ್ನು ಹೊಂದಿದ್ದೂ ಮೃತನಾಗಿ (ಜೀವ ನ್ಮೃತನಾಗಿ) ಉಳಿದಿರುತ್ತಾನೆ" ಎಂದು ಹೇಳುವ ಮಾತುಗಳು

---

ಹಂಸೈಶ್ಚ ಸಾರಸಗಣೈಶ್ಚ ವಿಭಕ್ತ ಪುಷ್ಪಃ ।
ತಾಸ್ವೇವ ಪೂರ್ವ ಬಲಿರೂಢ ಯವಾಙ್ಕುರಾಸು
ದೀಣಾಂಜಲಿಃ ಪತತಿ ಕೀಟಮುಖಾವಲೀಢಃ ॥ *

ಕರುಳನ್ನೇ ಕೊರೆಯುತ್ತವೆ. ವಿದೂಷಕನು ಕೂಡ ಆ ಮಾತುಗಳಿಂದ ಮನನೊಂದು—ಬಹುಶಃ ಹಿಂದಿನ ಧನಸಂಪತ್ತಿಯನ್ನು ನೆನೆದು—"ಎಲೈ ಮಿತ್ರನೆ! ಸಮುದ್ರ ಪಟ್ಟಣ ಸಾರಭೂತವಾದ ಆ ಬಗೆಯ ಅರ್ಥ ಸಂಚಯವೆಲ್ಲ ಎಲ್ಲಿಹೋಯಿತು?" ಎಂದು ಕೇಳುವನು. ಆಗ ಚಾರುದತ್ತನು ಹೇಳುವ, "ಮಿತ್ರ! ನನ್ನ ಅದೃಷ್ಟವು ಹೋದಲ್ಲಿಗೆ" ಎಂಬ ಉತ್ತರವು ಅತಿಸರಳವಾಗಿದ್ದರೂ ಸಹೃದಯರ ಮನಸ್ಸಿಗೆ ಸಬಳದ ಮೊನೆಯಂತಿದೆ. ಚಾರುದತ್ತನು, "ನನ್ನ ಹಣವೆಲ್ಲ ಮಿತ್ರರ ಉಪಕಾರಗಳಿಗಾಗಿ ವ್ಯಯವಾಯಿತು. ಅರ್ಥಿಗಳಾಗಿ ಬಂದ ಇತರರಿಗೂ (ಇಲ್ಲವೆಂದು ಹೇಳಿ) ಅವಮಾನಪಡಿಸಿದುದು ನೆನಪೇ ಇಲ್ಲ. ಈಗಿನ ನನ್ನ ಧೈರ್ಯವಾದರೋ ಅಷ್ಟು ಹಣವನ್ನೂ ಮೂಲ್ಯವಾಗಿ ಕೊಟ್ಟು ಪಡೆದಂತಿದೆ. ಅದು ಕ್ಷೀಣವಾಗುವುದಿಲ್ಲ" ಎಂದೂ ಹೇಳುತ್ತಾನೆ. ವಿಪತ್ತಿನಲ್ಲಿ ಧೈರ್ಯವನ್ನವಲಂಬಿಸಿರುವುದು ಮಹಾತ್ಮರ ಲಕ್ಷಣ. ಅವನು ಆ ಬಳಿಕ ಏನನ್ನೋ ಯೋಚಿಸುತ್ತ ನಿಲ್ಲುವನು. ವಿದೂಷಕನು, "ಏನು, ನೀನು ಅರ್ಥವಿಭವವನ್ನು ಚಿಂತಿಸುತ್ತಿರುವೆಯಾ?" ಎಂದು ಕೇಳುವನು. ಆಗ ಚಾರುದತ್ತನು ಹೇಳುವ ಉತ್ತರವು ಮನೋಹರವಾಗಿದೆ; "ನನಗೆ ಹಣವು ಹೋಯಿತೆಂಬ ಚಿಂತೆಯು ನಿಜವಾಗಿಯೂ ಇಲ್ಲ. ಭಾಗ್ಯಕ್ರಮದಿಂದ ಮತ್ತೆ ಸಂಪತ್ತು ದೊರೆಯಬಹುದು. ಧನವಿಲ್ಲದಕಾರಣ ಸುಜನರಲ್ಲಿ ಸ್ನೇಹವು ಶಿಥಿಲವಾಗುವುದೆಂಬುದು ನನ್ನನ್ನು ಸಂತಾಪಗೊಳಿಸುತ್ತಿದೆ. ಅಲ್ಲದೆ, ದಾರಿದ್ರ್ಯದ ದೆಸೆಯಿಂದ ಪುರುಷನ ಮಾತನ್ನೇ ಬಂಧುಜನರು ಆದರಿಸುವುದಿಲ್ಲ. (ದರಿದ್ರನ) ಧೈರ್ಯವೂ ಹಾಸ್ಯಾಸ್ಪದವಾಗುತ್ತದೆ. ಅವನ ಶೀಲಶಶಿಯ ಕಾಂತಿಯೂ ಕ್ಷೀಣವಾಗುತ್ತದೆ. ವೈರವಿಲ್ಲದೆ ಇದ್ದೂ ಸ್ನೇಹಿತರು ವಿಮುಖರಾಗುತ್ತಾರೆ. ವಿಪತ್ತುಗಳು ಹೆಚ್ಚುತ್ತವೆ. ಇತರರು ಮಾಡಿದ ಪಾಪಕೃತ್ಯಗಳೂ ಅವನಿಗೇ (ದರಿದ್ರನಿಗೇ) ಕಟ್ಟುತ್ತವೆ" * ಎಂದು ಅವನು ಹೇಳುತ್ತಾನೆ.

---

* "ಸತ್ಯಂ ನ ಮೇ ಧನವಿನಾಶಗತಾ ವಿಚಿನ್ತಾ
ಭಾಗ್ಯಕ್ರಮೇಣ ಹಿ ಧನಾನಿ ಪುನರ್ಭವನ್ತಿ ।

ಇತರರು ಮಾಡಿದ ಪಾಪಕೃತ್ಯಗಳಿಗೂ ದರಿದ್ರನು ಹೊಣೆಯಾಗಬೇಕಾ ಗುತ್ತದೆಂಬ ವಾಕ್ಯವು ಲೋಕಾನುಭವಕ್ಕೂ ಸರಿಯಾಗಿರುವುದಲ್ಲದೆ, ಮುಂದೆ ಚಾರುದತ್ತನಿಗೆ ಒದಗುವ ವಿಪತ್ತನ್ನೂ ಸೂಚಿಸುತ್ತದೆ. ರೂಪ ಕವು ನಾಲ್ಕನೆಯ ಅಂಕದಿಂದಲೇ ಪೂರೈಸುವುದಿಲ್ಲವೆಂಬ ಸಂದೇಹಕ್ಕೆ ಇದರಿಂದಲೂ ಸ್ವಲ್ಪಮಟ್ಟಿಗೆ ಆಸ್ಪದವಿದೆ. ಚಾರುದತ್ತನು ಸಂತಾಪ ಪಡಕೂಡದೆಂದು ಸಮಾಧಾನ ಹೇಳಿದ ವಿದೂಷಕನನ್ನು, "ಮಿತ್ರ, ಏತಕ್ಕಾಗಿ ಸಂತಾಪಪಡಲಿ? ನನ್ನ ಸ್ಥಿತಿಯನ್ನು ನೋಡಿಕೊಂಡು ನಡೆ ಯುವ ಭಾರ್ಯೆ; ಸುಖದುಃಖಗಳಲ್ಲಿ ಸಮಭಾಗಿಯಾದ ಪ್ರಿಯಮಿತ್ರ ನಾಗಿರುವ ನೀನು; ಉಡುಗಿಹೋಗದಿರುವ ಧೈರ್ಯ; ದರಿದ್ರರಿಗೆ ದುರ್ಲಭವಾದುದಿಷ್ಟೂ ಇರುವಲ್ಲಿ ನಾನೇನು ದರಿದ್ರನೆ" § ಎಂದು ಕೇಳುತ್ತಾನೆ. ಚಾರುದತ್ತನು ಈ ರೀತಿ ಧೈರ್ಯಪ್ರದರ್ಶನ ಮಾಡಿ ದಾಗ್ಗೂ ನಮ್ಮ ಅನುತಾಪವೂ ಅನುಕಂಪವೂ ಕಡಮೆಯಾಗುವಂತಿಲ್ಲ.

ಅನಂತರ ಸಂಭ್ರಾಂತಳಾದ ವಸಂತಸೇನೆಯು ಓಡಿಬರುವಳು. ಶಕಾರನೂ, ವಿಟನೂ ಅವಳ ಹಿಂದೆ ಬರುವರು. ಅನುತಾಪದಿಂದ ಕುಗ್ಗಿದ ಮನಸ್ಸಿಗೆ, ದೃಶ್ಯದ ಈ ಮಾರ್ಪಾಟು ಬಹಳ ಹಿತವಾಗಿರುವುದು. ಆದಕಾರಣ, ಕವಿಯ ಚತುರತೆಯನ್ನು ನಾವು ಕೊಂಡಾಡಲೇ ಬೇಕು. ಶಕಾರನು ದಡ್ಡ. ಆದರೆ ರಾಜನ ಮೈದುನ; ಧನಾಢ್ಯ. ಅವನೂ

---

ಏತತ್ತು ಮಾಂ ದಹತಿ ನಷ್ಟಧನಾಶ್ರಿಯೋ ಮೇ
ಯತ್ಸೌಹೃದಾನಿ ಸುಜನೇ ಶಿಥಿಲೀ ಭವನ್ತಿ ॥

ಅಪಿ ಚ,

ದಾರಿದ್ರ್ಯಾತ್ಪುರುಷಸ್ಯ ಬಾಂಧವ ಜನೋ ವಾಕ್ಯೇ ನ ಸನ್ತಿಷ್ಠತೇ
ಸತ್ತ್ವಂ ಹಾಸ್ಯಮುಪೈತಿ ಶೀಲ ಶಶಿನಃ ಕಾನ್ತಿಃ ಪರಿಮ್ಲಾಯತೇ ।
ನಿರ್ವೈರಾ ವಿಮುಖೀ ಭವನ್ತಿ ಸುಹೃದಃ ಸ್ಫೀತಾ ಭವನ್ತ್ಯಾಪದಃ
ಪಾಪಂ ಕರ್ಮ ಚ ಯತ್ಪರೈರಪಿ ಕೃತಂ ತತ್ತಸ್ಯ ಸಮ್ಭಾವ್ಯತೇ ॥ "

§ "ವಿಭವಾನುವಶಾ ಭಾರ್ಯಾ ಸಮದುಃಖ ಸುಖೋ ಭವಾನ್ ।
ಸತ್ತ್ವಂ ಚ ನ ಪರಿಭ್ರಷ್ಟಂ ಯದ್ದಾರಿದ್ರ್ಯೇಷು ದುರ್ಲಭಮ್ ॥ "

ಅವನ ಅನುಯಾಯಿ ವಿಟನೂ ವಸಂತಸೇನೆಯನ್ನು ಅಟ್ಟಿಕೊಂಡು ಬರುವರು. ಶಕಾರನು ಆವಳನ್ನು ಓಡಿಸಿಕೊಂಡು ಬಂದು, "ಏಕೆ ಹೋಗುವೆ ? ಏಕೆ ಓಡುವೆ ? (ಭೀತೆಯಾಗಿ) ಅತ್ಯಂತ ವೇಗದಿಂದೇಕೆ ಓಡುವೆ ? ಒಳ್ಳೆಯದು. ನಿಲ್ಲು. ನಾವೇನೂ ನಿನ್ನನ್ನು ಕೊಲ್ಲುವುದಿಲ್ಲ. ಪ್ರಸನ್ನಳಾಗು. ಬೆಂಕಿಗೆ ಬಿದ್ದ ಚರ್ಮದ ತುಂಡಿನಂತೆ, ("ಚರ್ಮ ಖಂಡ" ದಂತೆ) ನನ್ನ ಶರೀರವು ಕಾಮದಿಂದ ಸುಡುತ್ತಿದೆ" ಎಂದು ಹೇಳುವನು. ಅಸಂಸ್ಕೃತನೂ, ದಡ್ಡನೂ, ಪಾಶವವೃತ್ತಿಯವನೂ ಆದ ಶಕಾರನಿಗೆ ತಕ್ಕ ಮಾತುಗಳು ! ಅವನಿಗೆ ತಕ್ಕ ಉಪಮಾನ! ವಿಟನು ಧನಾಢ್ಯನಾದ ಶಕಾರನಿಗೆ ಅಧೀನನಾಗಿದ್ದರೂ, ಸಂಸ್ಕೃತಿಯಲ್ಲಿ ಅವನಿಗಿಂತ ಶ್ರೇಷ್ಠನಾಗಿದ್ದಾನೆ. ಅವನು ಆಡುವ, "ನೃತ್ಯ ಕಲೆಯಲ್ಲಿ ಶಿಕ್ಷಿತವಾಗಿರುವ ನಿನ್ನ ಚರಣಗಳನ್ನು ಭಯದ ದೆಸೆಯಿಂದ ಸೌಕುಮಾರ್ಯ ವಿರುದ್ಧವಾದ ರೀತಿಯಲ್ಲಿಡುತ್ತ, ಹುಲಿಯು ಓಡಿಸಿಕೊಂಡು ಬಂದ ಹರಿಣಿಯಂತೆ, ಉದ್ವಿಗ್ನವಾಗಿಯೂ ಚಂಚಲವಾಗಿಯೂ ಇರುವ ಅಪಾಂಗ ದೃಷ್ಟಿಯನ್ನು ಬೀರುತ್ತ ಓಡಿ ಹೋಗುವೆಯೇಕೆ ?" ಎಂಬ ಮಾತುಗಳೇ ಸೂಚಿಸುವುವು. ಶಕಾರನು ಮತ್ತೆ, "ಎರಡು ನಾಯಿಗಳು ಓಡಿಸಿಕೊಂಡು ಬಂದ ಹೆಣ್ಣುನರಿಯಂತೆ ನಮ್ಮ ಮುಂದೆ ಓಡುತ್ತ ನೂಪುರ ಧ್ವನಿಯಿಂದಲೂ ಮೇಖಲಾ ನಾದದಿಂದಲೂ ಕೂಡಿ (ವಸಂತಸೇನೆಯು) ಸವೇಷ್ಟನವಾಗಿ * ನನ್ನ ಹೃದಯವನ್ನಪಹರಿಸಿದ್ದಾಳೆ"

---

* ಮೂಲದಲ್ಲಿರುವ, "ಸವೇಷ್ಟನಂ ಮೇ ಹೃದಯಂ ಹರನ್ತೀ" ಎಂಬ ಪದಗಳಿಗೆ "ಕರ್ಣಶಷ್ಕುಲಿ ಸಹಿತವಾಗಿ ನನ್ನ ಮನಸ್ಸನ್ನಪಹರಿಸಿರತಕ್ಕವಳು" ಎಂದು ಪಂಡಿತರೊಬ್ಬರು ಅರ್ಥಮಾಡಿದ್ದಾರೆ. ಅದಕ್ಕಿಂತ, "ಸವೇಷ್ಟನವಾಗಿ ನನ್ನ ಹೃದಯವನ್ನಪಹರಿಸಿದ್ದಾಳೆ" ಎಂದು ಅರ್ಥಮಾಡುವುದೇ ಯುಕ್ತವೆಂದು ತೋರುತ್ತದೆ. ಹೃದಯವನ್ನು ಮಾತ್ರವಲ್ಲದೆ-ಅದರ ಸುತ್ತಲೂ ಇರುವ ಮಾಂಸದ ಪೊರೆಯ ಸಮೇತವಾಗಿ—ಸವೇಷ್ಟನವಾಗಿ ತನ್ನ ಹೃದಯವನ್ನು ಅಪಹರಿಸಿದಳೆಂದು ಹೇಳಿಕೊಳ್ಳುವುದೇ ಶಕಾರನ ದಡ್ಡತನಕ್ಕೂ ಅರಸಿಕ ಸ್ವಭಾವಕ್ಕೂ ಸರಿಹೋಗುತ್ತದೆ. ಹೃತ್ಕೋಶವು ಸವೇಷ್ಟನವಾಗಿದ್ದ ("ಪರಿಕಾರ್ಡಿಯಂ" ಎಂಬ

ಎಂದು ಹೇಳುವನು. ತನ್ನನ್ನೂ ವಿಟನನ್ನೂ ಎರಡು ನಾಯಿಗಳಿಗೂ ವಸಂತಸೇನೆಯನ್ನು ಹೆಣ್ಣುನರಿಗೂ ಹೋಲಿಸುವ ಶಕಾರನಿಗೆ ಆತ್ಮಗೌರವವೂ ಇಲ್ಲ. ಉಪಮಾನವೋ ಭೀಭತ್ಸವಾಗಿ ಅವನಿಗೆ ತಕ್ಕಂತಿದೆ. ವಿಟನು ವೇಗವಾಗಿ ಓಡಿಬಂದು ವಸಂತಸೇನೆಯನ್ನು ಬಳಿಸಾರುವನು. ಅವಳು ನಿರುಪಾಯೆಯಾಗಿ, "ಪಲ್ಲವಕ, ಪಲ್ಲವಕ! ಪರಭೃತಿಕೇ, ಪರಭೃತಿಕೇ! ಮಧುಕರಕ, ಮಧುಕರಕ! ಶಾರಿಕೇ, ಶಾರಿಕೇ! ಅಯ್ಯೋ, ನನ್ನ ಪರಿಜನರೆಲ್ಲರೂ ದೂರ ಉಳಿದು ಹೋದರು. ಇನ್ನು ನಾನೇ ನನ್ನನ್ನು ರಕ್ಷಿಸಿಕೊಳ್ಳಬೇಕು" ಎನ್ನುವಳು. ಪರಿಜನರೆಲ್ಲರಿಗಿಂತ ಮುಂದೆ ಓಡಿಬಂದಿರುವುದರಿಂದ ಅವಳ ದೇಹದಾರ್ಢ್ಯವೆಷ್ಟೆಂಬುದನ್ನೂ, ಅವರು ಹಿಂದುಳಿದು ಹೋದುದೇ ಗೊತ್ತಿಲ್ಲದೆ ನಿಟ್ಟೋಟದಲ್ಲಿ ಓಡಿಬಂದಿರುವುದರಿಂದ ಅವಳ ಭಯವೆಷ್ಟೆಂಬುದನ್ನೂ, ಕವಿಯು ನಮ್ಮ ಊಹೆಗೆ ಬಿಟ್ಟಿದ್ದಾನೆ. ಅವಳ ಪರಿಜನರ ಹೆಸರುಗಳನ್ನು ನೋಡಿದರೇ ಅವಳ ರಸಿಕತೆಯೆಷ್ಟೆಂಬುದು ನಮಗೆ ಗೊತ್ತಾಗಬೇಕೆಂಬುದು ಕವಿಯ ಆಶಯ. ಶಕಾರನು ಅವಳ ಮಾತುಗಳಿಗೆ ಪ್ರತಿಯಾಗಿ, "ಕೂಗು, ಕೂಗು. ಪಲ್ಲವವನ್ನಾಗಲಿ, ಪರಭೃತಿಕೆಯನ್ನಾಗಲಿ, ಮಧುಕರವನ್ನಾಗಲಿ, ಶಾರಿಕೆಯನ್ನಾಗಲಿ, ಒಟ್ಟು ವಸಂತಮಾಸವನ್ನೇ ಆಗಲಿ ಕೂಗಿ ಕರೆ. ನಿನ್ನನ್ನಾರು ರಕ್ಷಿಸುವರು (ಬಿಡಿಸಿಕೊಳ್ಳುವರು)? ವಾಸುದೇವನೆ, ಯಮನೆ, ಕುಂತೀಪುತ್ರನೆ, ಅಥವಾ ಜನಮೇಜಯನೆ? ನಾನು ನಿನ್ನ ಮುಡಿಯನ್ನು ಹಿಡಿದು ದುಶ್ಯಾಸನನು ಸೀತೆಯನ್ನಪಹರಿಸಿಕೊಂಡು ಹೋದಂತೆ ಎಳೆದುಕೊಂಡು ಹೋಗುತ್ತೇನೆ" ಎಂದು ಹೇಳುವುದನ್ನು ನೋಡಿ, ಆ ಸನ್ನಿವೇಶದಲ್ಲಿ ಸಹ ನಮಗೆ ನಗು ಬರುವುದು. ಆದರೆ ಅದು ಅಸಹ್ಯದಿಂದ ತುಂಬಿದ ನಗು.

---

ದರಿಂದ ಕೂಡಿದ್ದ) ವಿಷಯವು ಶಸ್ತ್ರ ಚಿಕಿತ್ಸೆಗೆ ಪ್ರಸಿದ್ಧವಾಗಿದ್ದ ಆಗಿನ ಭಾರತೀಯರಿಗೂ ತಿಳಿದಿರಬೇಕು. ತನ್ನ ಭಾವನಾದ ರಾಜನ ಆಸ್ಥಾನದಲ್ಲಾಗಲಿ, ಅರಮನೆಯಲ್ಲಾಗಲಿ ತನ್ನ ಕಿವಿಗಳಿಗೆ ಬಹುಶಃ ಬಿದ್ದಿದ್ದ ಆ ಮಾತನ್ನು ಅವನು ಉಪಯೋಗಿಸಿರಬೇಕು.

ಶಕಾರನ ಅನುರಾಗ ಪ್ರದರ್ಶನದ ಅನುನಯವೂ ಅವನಂತೆಯೇ ವಿಲಕ್ಷಣವಾಗಿದೆ. ವಸಂತಸೇನೆಯು ಹೇಳುವಂತೆ ಆ ಅನುನಯವೂ ಭಯಪಡಿಸುವಂತಹದೇ. ಅವಳು ತಮ್ಮ ಆಶೆಯನ್ನು ಈಡೇರಿಸಿ ಯುವತಿ ವಧೆಯನ್ನು ತನ್ಮೂಲಕ ತಪ್ಪಿಸಿ ಆತ್ಮರಕ್ಷಣೆ ಮಾಡಿಕೊಳ್ಳಬೇಕೆಂದು ಖಡ್ಗಹಸ್ತನಾದ ವಿಟನು ಸ್ಪಷ್ಟವಾಗಿ ತಿಳಿಸುವನು. ಶಕಾರನು ವಿಟನ ವಾಣಿಗಳನ್ನಭಿನಂದಿಸಿ, ಹರಿತವಾದ ತನ್ನ ಖಡ್ಗದಿಂದ ಅವಳನ್ನು ಕೊಲ್ಲುವುದಾಗಿ ಹೇಳಿ ಬೆದರಿಸುವನು. ಆಗ ವಸಂತಸೇನೆಯು, "ಆರ್ಯನೆ, ಕುಲೀನರ ಸದ್ಗುಣಗಳಿಂದ ಸಂತೋಷಿಸಿ ಜೀವನ ಮಾಡುವ ಗಣಿಕೆಯು ನಾನು" ಎಂದು ಹೇಳುವಳು. ಎಂದರೆ "ನೀವು ಗುಣವಂತರಲ್ಲ" ಎಂಬುದೇ ಆ ಮಾತುಗಳ ಆಶಯ. ವಿಟನು ಅವಳ ಆಶಯವನ್ನರಿಯದೆ, "ಅದಕ್ಕಾಗಿಯೇ ನಾವು ನಿನ್ನನ್ನು ಪ್ರಾರ್ಥಿಸುವುದು!" ಎನ್ನುವನು. ಅವಳ ಹೃದಯವು ಆಗಲೇ ಚಾರುದತ್ತನಿಗೆ ಸೂರೆಹೋಗಿದೆ. ಅದನ್ನರಿಯದ ವಿಟನು ತಮ್ಮಲ್ಲಿ ಅವಳು ಪ್ರಸನ್ನಳಾದಳೆಂದು ಭಾವಿಸಿ ಆ ರೀತಿ ಹೇಳುವನು. ವಸಂತಸೇನೆಯು, "ಆರ್ಯ! ನನ್ನಿಂದ ಅಪೇಕ್ಷಿಸುವುದೇನನ್ನು, ಶರೀರವನ್ನೆ ಅಥವಾ ಒಡವೆಯನ್ನೆ?" ಎಂದು ಕೇಳುವಳು. ರಸಿಕನಾದ ವಿಟನು, "ಲತೆಯು ಪುಷ್ಪಗಳನ್ನು ಕಳೆದುಕೊಳ್ಳಲಾಗದು. ಒಡವೆಗಳ ಮಾತು ಬೇಡ" ಎನ್ನುವನು. ಅವಳು, "ನಾನು ಈಗ ಆತ್ಮಸಂತಾಪ ಮಾಡಿಕೊಳ್ಳೆನು" ಎಂದು ಹೇಳಿ ತನ್ನ ಆಶಯವನ್ನು ಸೂಚಿಸುವಳು. ಮೂರ್ಖ ಶಕಾರನು, "ವಸಂತಸೇನೆ! ನಾನು ರಾಜಬಂಧು. ಅನುರಾಗಯೋಗ್ಯನು" ಎನ್ನುವನು. ಅನುನಯವಿಹೀನವಾದ ಆ ಮಾತುಗಳನ್ನು ಕೇಳಿ ಸುಸಂಸ್ಕೃತಳಾದ ವಸಂತಸೇನೆಯು ರೋಷಪರವಶಳಾಗಿ "ಶಾನ್ತೋಽಸಿ" ಎಂದು ಶಪಿಸುವಳು. "ನೀನು ನಾಶವಾದೆ" ಎಂಬ ಆ ಬೈಗುಳವನ್ನು ಕೇಳಿ ಶಕಾರನು ಆಕೆಯು "ನೀನು ಬಳಲಿರುವೆ" ("ಶ್ರಾನ್ತೋಽಸಿ") ಎಂದು ಹೇಳಿದಂತೆ ತಪ್ಪಾಗಿ ಭಾವಿಸಿಕೊಂಡು ವಿಟನೊಡನೆ, "ಕೇಳು, ಭಾವ. ಕೇಳು. ಈ ವಸಂತಸೇನೆಯು ನಾನು ದಣಿದಿರುವೆನೆನ್ನುತ್ತಾಳೆ" ಎಂದು ಹೇಳಿಕೊಂಡು ಹಿಗ್ಗುವನು. ವಿಟನು ಹೊಟ್ಟೆಯ ಪಾಡಿಗಾಗಿ ಅವನಲ್ಲಿ ಸೇರಿರ

ಬೇಕೆಂದು ತೋರುವುದು. ಆದುದರಿಂದಲೇ ಅವನು ತನ್ನಲ್ಲಿ ತಾನು, "ಈ ಮೂರ್ಖನಿಗೆ ತಾನು ತಿರಸ್ಕೃತನಾದುದೂ ತಿಳಿಯದು. 'ಧ್ವಂಸವಾಗು' ಎಂದು ಶಪಿಸಿದುದಕ್ಕೆ, 'ಬಳಲಿರುವೆ' ಎಂದು ಹೇಳಿದಂತೆ ಭಾವಿಸಿಕೊಂಡಿದ್ದಾನೆ. ಇವನೋ ದೇಹವನ್ನೆಲ್ಲ ಕುಣಿಸಿಕೊಂಡು ಅಭಿನಯಮಾಡುತ್ತ ಅರ್ಥವಿಲ್ಲದೆ ಮಾತನಾಡುತ್ತಾನೆ. ಅಸಭ್ಯವರ್ತನೆಯುಳ್ಳವನಾಗಿ ತುಚ್ಛರೀತಿಯಲ್ಲಿ ಹರಟುತ್ತಾನೆ. (ಇವನು) ಮನುಷ್ಯ ರೂಪದ ಪಶುವಿನ ನವಾವತಾರ" ಎಂದು ಹೇಳಿ ತನ್ನ ಅಸಹ್ಯವನ್ನು ಸೂಚಿಸುವುದು. ಆದರೇನು? ಅವನು ಶಕಾರನ ಕುಣಿತಕ್ಕೆ ತಾಳ ಹಾಕಲೇಬೇಕು. ಆದುದರಿಂದ ಆ ಕೂಡಲೆ ವಸಂತಸೇನೆಯನ್ನು ಕುರಿತು ಅವನು, "ವಸಂತಸೇನೆ! ಇದೇನಿದು, ನನ್ನ ಸನ್ನಿಧಿಯಲ್ಲಿ ವೇಶ್ಯಾಜನವಿರುದ್ಧವಾದುದನ್ನು ಹೇಳಿದೆ? ನೋಡು, ವೇಶ್ಯಾಗೃಹವು ಯುವಕರೆಲ್ಲರಿಗೂ ಸಹಾಯಕವಾಗಿರಬೇಕೆಂದು ಭಾವಿಸು. ಅಲ್ಲದೆ, ಮಾರ್ಗದಲ್ಲಿ ಹುಟ್ಟಿರುವ ಲತೆಯಂತೆ ಸೂಳೆಯಾದ ನಿನ್ನ ಸ್ಥಿತಿಯೆಂದೆಣಿಸು. ಹಣಕೊಟ್ಟವರಿಗೆ ಒಲಿಯುವ ಪಣ್ಯಭೂತವಾದ ಶರೀರವು ನಿನ್ನದು. ಭದ್ರೆ! ಸುಪ್ರಿಯನನ್ನೂ, ಅಪ್ರಿಯನನ್ನೂ ಸಮಾನವಾಗಿ ಉಪಚರಿಸು" ಎಂದು ಹೇಳುವನು. ವಸಂತಸೇನೆಯು ತನ್ನ ಸಂಸ್ಕಾರಕ್ಕೆ ಅನುರೂಪವೆನಿಸುವ ನಯವಾದ ರೀತಿಯಲ್ಲಿ ತಾನು ತನ್ನ ಪೂರ್ವಜರಂತೆ ಕುಲೀನರನ್ನು ಸೇರತಕ್ಕವಳೇ ಹೊರತು ಗುಣಹೀನರನ್ನಲ್ಲವೆಂದು ಸೂಚಿಸುವಳು. ಸಂಪತ್ತಿಲ್ಲದೆ ರೂಪವು ಮಾತ್ರವೇ ಇರುವ ಚಾರುದತ್ತನೆಂಬ ಯುವಕನಲ್ಲಿ ಕಾಮದೇವನ ಉತ್ಸವದ ದಿನದಿಂದ ವಸಂತಸೇನೆಯು ಅನುರಕ್ತಳಾಗಿದ್ದಳೆಂದು ಶಕಾರನು ವಿಟನಿಗೆ ತಿಳಿಸಿ, "ಅವನ ಮನೆಯ ಪಾರ್ಶ್ವದ್ವಾರವು ಇದು ಎಂದು ಹೇಳುವನು. ವಸಂತಸೇನೆಯು ಅಂಧಕಾರಮಯವಾದ ಆ ರಾತ್ರಿ ಅವರ ಕೈಯಿಂದ ಪಾರಾಗಲು ತನ್ನ ಪ್ರಿಯನ ಮನೆಯೇ ಆಶ್ರಯವಾಗಿ ದೊರೆತುದಕ್ಕಾಗಿ ಹರ್ಷಿಸಿ, "ಇದು ಅವನ ಮನೆಯೆ! ಶತ್ರುಜನ ನಿರೋಧದಿಂದ ಪ್ರಿಯನ ಸಮೀಪಕ್ಕೆ ಒಯ್ಯಲ್ಪಟ್ಟಿದ್ದೇನೆ. ಆಗಲಿ, ಹೀಗೆ ಮಾಡುತ್ತೇನೆ" ಎಂದು ತನ್ನಲ್ಲಿ ತಾನು ಹೇಳಿಕೊಂಡು, ಚಾರುದತ್ತನ ಮನೆಯ ಪಾರ್ಶ್ವದ್ವಾರದ ಬಳಿಗೆ ಹೋಗಿ

ನಿಲ್ಲುವಳು. ಅವಳನ್ನು ಕಾಣದೆ ವಿಟನೂ ಶಕಾರನೂ ತಾವು ವಂಚಿತ ರಾದುದಾಗಿ ಹೇಳಿಕೊಳ್ಳುವರು.

ಅತ್ತ, ಚಾರುದತ್ತನು (ತನ್ನ ಮನೆಯಲ್ಲಿ) "ಮೈತ್ರೇಯ, ಹೋಗು. ಚೌಕದಲ್ಲಿ ಸಪ್ತಮಾತೃಕೆಯರಿಗೆ ಬಲಿಹರಣ ಮಾಡಿ ಬಾ" ಎಂದು ಹೇಳು ವನು. ವಿದೂಷಕನು ಒಂದೇ ಮಾತಿನಲ್ಲಿ, "ನನಗೆ ಶ್ರದ್ಧೆಯಿಲ್ಲ. ಮತ್ತಾರಾದರೂ ಹೋಗಲಿ" ಎಂದು ಹೇಳುವನು. ಈ ಸಂದರ್ಭದಲ್ಲಿ ಕವಿಯ ಸಂವಿಧಾನವು ನಮ್ಮನ್ನು ಮುಗ್ಧಗೊಳಿಸುವಂತಿದೆ. ಚಾರುದತ್ತ ನಂತಹ ಒಳ್ಳೆಯವನಿಗೆ ಬಡತನದ ಬವಣೆಯುಂಟಾದ ಬಗೆ ಹೇಗೆಂದು ಚಿಂತಿಸಿ ಚಿಂತಿಸಿ, ಮೈತ್ರೇಯನು ಬಹುವಾಗಿ ಸಂಕಟ ಪಟ್ಟಿದ್ದಾನೆ. ಅವನ ಮುಖದಲ್ಲಿ ನಗುವು ಮಿನುಗುತ್ತಿದ್ದರೂ ವಿಷಾದವು ಅವನ ಹೃದಯವನ್ನು ಹಿಂಡುತ್ತಿದೆ. ಅದರ ಪರಿಣಾಮವಾಗಿ ಅವನಿಗೆ ದೇವರಲ್ಲಿ ಕೂಡ ನಂಬಿಕೆಯು ತಪ್ಪಿಹೋಗಿದೆ. ಆದಕಾರಣ ಸಪ್ತಮಾತೃಕೆಯರಿಗೆ ಬಲಿ ಹರಣಮಾಡಿ ಫಲವೇನೆಂಬುದು ಅವನ ಶಂಕೆ. ಆದರೆ ಶ್ರದ್ಧಾವಿಹೀನ ನಾದ ತಾನು ಬಲಿಹರಣಮಾಡುವುದು ಕರ್ಮಶ್ರದ್ಧೆಯುಳ್ಳವನಾದ ಚಾರು ದತ್ತನ ಶ್ರೇಯಸ್ಸಿಗೆ ಬಾಧಕವೆಂಬ ಭಾವನೆಯೂ ಬಹುಶಃ ಅವನ ಮನ ಸ್ಸನ್ನು ಮಿಡಿಯುತ್ತಿದೆ. ಇವೆರಡು ಕಾರಣಗಳಿಂದ ಅವನು ಬಲಿಹರಣ ಮಾಡಲು ತಾನು ಹೋಗುವುದಿಲ್ಲವೆನ್ನುತ್ತಾನೆ. ನಮ್ಮ ಕವಿಯು ಎಂತಹ ಸೊಗಸಾದ ಚಿತ್ರವನ್ನು ನಮ್ಮೆದುರಿಗೆ ಹಿಡಿದಿದ್ದಾನೆ!

ಚಾರುದತ್ತನು ಮೈತ್ರೇಯನ ಮಾತುಗಳನ್ನು ಕೇಳಿ, "ಅದೇಕೆ?" ಎಂದು ಪ್ರಶ್ನೆ ಮಾಡುವನು. ಮೈತ್ರೇಯನು ತನಗೆ ಶ್ರದ್ಧೆಯಿಲ್ಲವೆಂದುದು ಅವನ ಆ ಪ್ರಶ್ನೆಗೆ ಕಾರಣವೋ ಅಥವಾ ಮತ್ತಾರಾದರೂ ಬಲಿಹರಣಕ್ಕೆ ಹೋಗಲೆಂದು ಮೈತ್ರೇಯನು ಹೇಳಿದುದರಿಂದ (ಬಡತನ ಬಂದಿರುವ ತನ್ನನ್ನು ಮೈತ್ರೇಯನೂ ಅಲಕ್ಷ್ಯಮಾಡುವ ಸ್ಥಿತಿಯೊದಗಿತೋ-ಎಂದು ಶಂಕಿಸಿ) ಚಾರುದತ್ತನು ಆ ರೀತಿ ಪ್ರಶ್ನೆ ಮಾಡಿದನೋ ಎಂಬ ಸಂದೇ ಹವು ಬರುತ್ತದೆ. ಆದರೆ ಪ್ರಶ್ನೆಯ ಸ್ವಭಾವವನ್ನು ನೋಡಿದರೆ, ಚಾರು ದತ್ತನು ಮೈತ್ರೇಯನಿಗೆ ಶ್ರದ್ಧೆಯಿಲ್ಲದೆ ಹೋಗಿರುವುದೇಕೆಂಬುದನ್ನರಿತು

ಕೊಳ್ಳುವುದಕ್ಕಾಗಿಯೇ ಪ್ರಶ್ನೆ ಹಾಕಿದಂತೆ ತೋರುತ್ತದೆ. ಮೈತ್ರೇಯನು ಅದಕ್ಕೆ ಉತ್ತರವಾಗಿ, "ಕನ್ನಡಿಯೊಳಗಿನ ನೆರಳಿನಂತೆ (ಪ್ರತಿಬಿಂಬದಂತೆ) ನನ್ನ ಬುದ್ಧಿಗೆ ಎಡಭಾಗವು ಬಲಭಾಗದಂತೆಯೂ ಬಲಭಾಗವು ಎಡಭಾಗದಂತೆಯೂ ಕಾಣುತ್ತದೆ" ಎನ್ನುತ್ತಾನೆ. ಅವನ ಉತ್ತರದ ಆಶಯವು ಎಷ್ಟು ವ್ಯಾಪ್ತಿಯುಳ್ಳುದೆಂಬುದನ್ನು ವಿವರಿಸಬೇಕಾದ ಆವಶ್ಯಕತೆಯೇ ಇಲ್ಲ. ಒಳ್ಳೆಯವರೂ ಕಷ್ಟವನ್ನನುಭವಿಸುವಂತೆ ಮಾಡಿರುವ ದೇವನಲ್ಲಿ ನ್ಯಾಯವುಂಟೆ, ನ್ಯಾಯವಿಲ್ಲದಮೇಲೆ ಸಪ್ತಮಾತೃಕೆಯರಿಗೆ ಬಲಿಹರಣ ಮುಂತಾದುವನ್ನು ನಡೆಯಿಸಲೇಕೆ—ಎಂಬುದು ಮೈತ್ರೇಯನ ಮನಸ್ಸಿನ ಪ್ರಶ್ನೆ. ಆದುದರಿಂದಲೇ ಅವನು ತನಗೆ ಶ್ರದ್ಧೆಯಿಲ್ಲವೆಂದು ಮೊದಲೇ ಹೇಳಿದ್ದಾನೆ. ಅವನು ತನ್ನ ಬುದ್ಧಿಯ ಸ್ಥಿತಿಗೆ ಕೊಟ್ಟಿರುವ ಕನ್ನಡಿಯ ಪ್ರತಿಬಿಂಬದ ಉಪಮಾನವು ಮುದ್ದಾಗಿದೆ. ಶ್ರದ್ಧಾಳುವಾದ ಚಾರುದತ್ತನಿಗೆ ಎಡವಾಗಿರುವುದು ತನ್ನ ಬುದ್ಧಿಗೆ ಬಲದಂತೆಯೂ, ಚಾರುದತ್ತನಿಗೆ ಬಲವಾಗಿರುವುದು ತನ್ನ ಬುದ್ಧಿಗೆ ಎಡದಂತೆಯೂ ಕಾಣುವುದೆಂದು ಮೈತ್ರೇಯನ ಆಶಯವೆಂದು ತೋರುವುದು. ಅವನು ಕನ್ನಡಿಯೊಳಗಿನ ಪ್ರತಿಬಿಂಬದ ಉಪಮಾನವನ್ನು ಕೊಟ್ಟಿರುವುದರಲ್ಲಿ ಮೈತ್ರೇಯನ ಮಾತುಗಳು ಕೇವಲ ಹಾಸ್ಯದ ವಾಣಿಗಳಲ್ಲ. ಅವುಗಳ ಭಾವವು ಗಭೀರವಾಗಿದೆ. ಚಾರುದತ್ತನು ಮೈತ್ರೇಯನ ಮಾತುಗಳ ಆಶಯವನ್ನು ಗ್ರಹಿಸುತ್ತಾನೆ; ಆದರೆ ಅದು ತನ್ನ ಮನಸ್ಸಿಗೆ ಸರಿಬೀಳದಾದ ಕಾರಣ ಅವನನ್ನು ಕುರಿತು, "ಮೂರ್ಖ! ಯಥಾವಿಭವವಾಗಿ ಅರ್ಚಿಸಲ್ಪಡಬೇಕು. ದೇವತೆಗಳು ಭಕ್ತಿಪ್ರಿಯರು. ಆದಕಾರಣ (ಬಲಿಹರಣಕ್ಕಾಗಿ) ಹೊರಡು" ಎಂದು ಹೇಳುವನು. ಮೇಲೆ ಸೂಚಿಸಿದ ಮಾತುಗಳನ್ನು ಮೈತ್ರೇಯನು ಕೇವಲ ಹಾಸ್ಯಕ್ಕಾಗಿ ಮಾತ್ರವೇ ಆಡಿದ್ದ ಪಕ್ಷಕ್ಕೆ ಚಾರುದತ್ತನ ಈ ಮಾತುಗಳು ಆಗ್ಗೆ ಅಸಂಬದ್ಧಪ್ರಲಾಪದಂತಿರುವುವು. ಚಾರುದತ್ತನು ಸತ್ಪುರುಷನೆಂಬುದು ನಿಜವಾದರೂ, ಅವನ ಈ ಮಾತುಗಳು ಮಾತ್ರ ಮೈತ್ರೇಯನನ್ನು ಮನಗಾಣಿಸುವಂತಹವಲ್ಲ. ಆದರೆ ಅವನು ತನ್ನ ಮಿತ್ರನ ಮಾತುಗಳನ್ನು ಮೀರಲಾರದೆ, "ನಾನೊಬ್ಬನೇ ಹೇಗೆ ಹೋಗಲಿ?" ಎನ್ನುವನು.

ಚಾರುದತ್ತನು, "ರದನಿಕೆ! ಈ ಪೂಜ್ಯನೊಡನೆ ಹೋಗು" ಎಂದು ಅಪ್ಪಣೆ ಮಾಡುವನು. ಅವಳೂ ಹೊರಡಲನುವಾಗುವಳು. ಆಗಲೂ ಮೈತ್ರೇಯನು ಬಲಿಹರಣದ ವಸ್ತುಗಳನ್ನು ತಾನು ತೆಗೆದುಕೊಂಡು ಹೋಗಲಿಚ್ಛಿಸದೆ (ಅವುಗಳನ್ನು ಅವಳೇ ತೆಗೆದುಕೊಂಡು ಬರಲೆಂದು ಸೂಚಿಸುವುದಕ್ಕಾಗಿ) "ಪೂಜ್ಯಳೆ, ನಾನು ದೀಪವನ್ನು ತರುತ್ತೇನೆ" ಎನ್ನುವನು. ಚಾರುದತ್ತನು ಆಡುವ, "ನಿನಗೆ ಹೇಗೆ ತೋರಿದರೆ ಹಾಗೆ ಮಾಡು" ಎಂಬ ಮಾತುಗಳೂ ಅದೇ ಅಂಶವನ್ನೇ ಪುಷ್ಟೀಕರಿಸುತ್ತವೆ. ಹಾಗಿಲ್ಲದ ಪಕ್ಷಕ್ಕೆ ಚಾರುದತ್ತನು ಆ ಮಾತುಗಳನ್ನಾಡಬೇಕಾದ ಆವಶ್ಯಕತೆಯೂ ಇರುತ್ತಿರಲಿಲ್ಲ; ಅವಕ್ಕೆ ಅಗ್ಗಿ ಅರ್ಥವೂ ಇರುತ್ತಿರಲಿಲ್ಲ.

ಮೈತ್ರೇಯನು (ವಿದೂಷಕನು) ದೀಪವನ್ನು ಹಿಡಿದುಕೊಂಡು, ರದನಿಕೆಯನ್ನು ಬಾಗಿಲು ತೆರೆಯುವಂತೆ ಕೇಳುವನು. ಅವಳು ಬಾಗಿಲನ್ನು ತೆರೆದೊಡನೆಯೆ (ಹೊರಗೆ ನಿಂತಿರುವ) ವಸಂತಸೇನೆಯು ತನ್ನ ಸೆರಗಿನಿಂದ ಬೀಸಿ ದೀಪವನ್ನಾರಿಸುವಳು. ಮೈತ್ರೇಯನು, "ಅಯ್ಯೋ, ಅಯ್ಯೋ" ಎಂದು ಕೂಗಿಕೊಳ್ಳುವನು. ಚಾರುದತ್ತನು, "ಮಿತ್ರನೆ, ಏನಾಯಿತು?" ಎಂದು ಕೇಳಿದಾಗ, ಮೈತ್ರೇಯನು ರಾಜಮಾರ್ಗದಿಂದ ಒಟ್ಟುಗೂಡಿ ನುಗ್ಗಿದ ಗಾಳಿಯಿಂದ ದೀಪವು ಆರಿಹೋಯಿತೆನ್ನುವನು. ಅವನು ಅನಂತರ, "ರದನಿಕೆ, ನೀನು ಚೌಕದ ಬಳಿಯಲ್ಲಿರು. ನಾನು ಒಳಕ್ಕೆ ಹೋಗಿ ದೀಪವನ್ನು ಹೊತ್ತಿಸಿಕೊಂಡು ಅಲ್ಲಿಗೆ ಬರುತ್ತೇನೆ" ಎಂದು ಹೇಳಿ, ಚಾರುದತ್ತನ ಮನೆಯೊಳಕ್ಕೆ ಹೋಗುವನು. ಅವರು ನಿಂತಿರುವುದು ಮನೆಗೂ, ಅದರ ಸುತ್ತಲಿನ ದೊಡ್ಡ ಪ್ರಾಕಾರದ ಗೋಡೆಗೂ ಮಧ್ಯದ ಪ್ರಶಸ್ತ ಪ್ರದೇಶದಲ್ಲೆಂದು ತೋರುವುದು. ರದನಿಕೆಯು ಪಾರ್ಶ್ವದ್ವಾರದಿಂದ ಹೋದಕೂಡಲೆ ವಸಂತಸೇನೆಯು, "ನಾನು ಒಳಕ್ಕೆ ಹೋಗುವುದಕ್ಕಾಗಿಯೇ ಬಾಗಿಲು ತೆರೆದಂತಾಯಿತು. ಚಾರಿತ್ರಭಯವು ಸಾಕು. ಮನೆಯೊಳಕ್ಕೆ ಪ್ರವೇಶಿಸುವೆನು" ಎಂದು ತನ್ನಲ್ಲಿ ತಾನು ಹೇಳಿಕೊಂಡು ಆ ರೀತಿ ಮಾಡುವಳು. ತಾನು ಪ್ರೀತಿಸುತ್ತಿರುವ ಚಾರು

ದತ್ತನ ಮನೆಗೆ ಹೋಗುವುದೆ ಅಥವಾ ಬಿಡುವುದೆ ಎಂದು ವಸಂತ ಸೇನೆಯು ಆಗಿನ ಸ್ಥಿತಿಯಲ್ಲಿ ಕೂಡ ಶಂಕಿಸುವುದರಿಂದಲೇ ಅವಳೆಷ್ಟು ವಿನಯಶೀಲೆಯೆಂಬುದು ವ್ಯಕ್ತವಾಗುವುದು.

ಅತ್ತ, ರದನಿಕೆಯು ಮನೆಯಿಂದ ಹೊರಗೆ ಬಂದಾಗ ವಿಟನು ಅವಳನ್ನು ದೃಷ್ಟಿಸಿ ನೋಡಿ ತನ್ನಲ್ಲಿ ತಾನು, "ಈ ಭವನದಿಂದ ಇವಳಾವಳೋ ಬರುತ್ತಿದ್ದಾಳೆ. ಆಗಲಿ, ಇವಳಿಂದಲೇ ಈ ಹತಾಶನನ್ನು ವಂಚಿಸುವೆನು" ಎಂದು ಹೇಳಿಕೊಳ್ಳುವನು. ದುರ್ಮಾರ್ಗಿಯಾದ ಶಕಾರನ ಸೇವೆಯು ವಿಟನಿಗೆಷ್ಟು ಅಸಹ್ಯವಾಗಿದೆಯೆಂಬುದು ಅವನ ಈ ಮಾತುಗಳಿಂದ ವ್ಯಕ್ತವಾಗುವುದು. ಅಲ್ಲದೆ ಚಾರುದತ್ತನ ಮನೆಯು ದೊಡ್ಡ ಭವನವೆಂಬುದೂ ಅವುಗಳಿಂದ ವ್ಯಕ್ತವಾಗುವುದು. ವಿಟನು ಶಕಾರನೊಡನೆ, "ಸುಗಂಧಪೂರಿತವಾದ ಸ್ನಾನಧೂಪದ ಹೊಗೆಯಿಂದ ತಲೆಗೂದಲನ್ನು ಒಣಗಿಸಿಕೊಂಡಿರುವ ಸುವಾಸನೆ" ಎಂದು ಹೇಳುವನು. ಚಾರುದತ್ತನ ಮನೆಯ ಚೇಟಿಯ ವಿಷಯವೂ ಬಡತನದಲ್ಲಿ ಹೀಗಿದ್ದ ಮೇಲೆ ಆತನ ಮನೆಯ ರಸಿಕ ಜೀವನವೆಷ್ಟು ಉಚ್ಚತರಗತಿಯದೆಂಬುದರ ವಿವರಗಳನ್ನು ನಮ್ಮ ಊಹೆಗೇ ಕವಿಯು ಬಿಟ್ಟಿದ್ದಾನೆ. ವಿಟನ ಮಾತುಗಳನ್ನು ಕೇಳಿ ಶಕಾರನು, "ಹೌದು, ಭಾವ. ನನ್ನೆರಡು ಕಿವಿಗಳಿಂದಲೂ ಆ ಸುಗಂಧವನ್ನು ಕೇಳುತ್ತಿದ್ದೇನೆ. ಅಂಧಕಾರದಿಂದ ತುಂಬಿದ ನಾಸಾಪುಟಗಳಿಂದ ಚೆನ್ನಾಗಿ ನೋಡಲಾರದವನಾಗಿದ್ದೇನೆ" ಎಂದು ಉತ್ತರ ಹೇಳುವನು. ಧನಿಕನಾದ ಆ ದಡ್ಡನ ವಿಡಂಬನ ಚಿತ್ರವನ್ನು ಕೊಡುವುದರಲ್ಲಿ ಕವಿಯು ಇಲ್ಲಿ ಮಿತಿಮೀರಿ ಪ್ರವರ್ತಿಸಿ ಆಭಾಸಮಾಡಿದ್ದಾನೆಂದು ವಿಷಾದದಿಂದ ಹೇಳಬೇಕಾಗಿದೆ; ಏಕೆಂದರೆ, ಎಷ್ಟೇ ದಡ್ಡರಾದರೂ ಇಷ್ಟುಮಟ್ಟಿನ ಅಸಂಬದ್ಧ ಪ್ರಲಾಪ ಮಾಡುವವರನ್ನು ನಾವೆಂದಿಗೂ ಜೀವನದಲ್ಲಿ ಕಾಣುವಂತಿಲ್ಲ. ವಿಟನು ರದನಿಕೆಯನ್ನು ಕುರಿತು, "ನಿಲ್ಲು, ನಿಲ್ಲು; ಎಲ್ಲಿಗೆ ಹೋಗುವೆ?" ಎಂದು ಹೇಳಿ ಅವಳನ್ನು ಹಿಡಿದುಕೊಳ್ಳುವನು. ಅವಳು ಭಯಪಟ್ಟು ಕೆಳಗೆ ಬೀಳುವಳು. ಶಕಾರನು ವಿಟನನ್ನು ಕುರಿತು, "ಹಿಡಿದುಕೊ, ಭಾವ, ಹಿಡಿದುಕೊ," ಎಂದು ಹೇಳಿ ಆ ಬಳಿಕ "ತೊತ್ತಿನ

ಮಗಳಾದ ಇವಳ ತಲೆಯನ್ನು ಮೊದಲು ಕಡಿದು ಹಾಕಿ, ಅನಂತರ ಇವಳನ್ನು ಕೊಲ್ಲುವೆನು" ಎಂದು ಮುಂತಾಗಿ ಅಸಂಬದ್ಧ ಪ್ರಲಾಪ ಮಾಡುವನು. ಅವಳು ಭ್ರಾಂತಳಾಗಿ, "ಆರ್ಯರೆ! ಇದೇನಿದು ನಿಮ್ಮ ಕೆಲಸ?" ಎಂದು ಕೇಳುವಳು. ಅವಳ ಕಂಠಸ್ವರದಿಂದ ಅವಳು ವಸಂತ ಸೇನೆಯಲ್ಲವೆಂದು ಗ್ರಹಿಸಿ ಶಕಾರನು ಆ ಅಂಶವನ್ನು ಸೂಚಿಸಿದಾಗ ವಿಟನು ಅವಳ ಮುಡಿಯನ್ನು ಹಿಡಿದೆಳೆಯುತ್ತಿರುವ ಶಕಾರನಿಗೆ, "ಬಿಡ ಬೇಡ. ಇವಳೇ ವಸಂತಸೇನೆ. ಇವಳು ರಂಗಸ್ಥಳದಲ್ಲಿ ಪಾತ್ರವಹಿಸಿ ದವಳು. ಕಲೆಗಳಲ್ಲಿ ಶಿಕ್ಷಿತಳು. ಆದಕಾರಣ, ಕಂಠಸ್ವರವನ್ನು ಮಾರ್ಪ ಡಿಸಿಕೊಳ್ಳಬಲ್ಲಳು. ಬಿಡಬೇಡ" ಎಂದು ಹೇಳುವನು.

ಅಷ್ಟರಲ್ಲಿ ಮೈತ್ರೇಯನು ದೀಪವನ್ನು ಹಿಡಿದು ಅಲ್ಲಿಗೆ ಬರುವನು. ಆಗ ನಿಜಸ್ಥಿತಿಯು ವ್ಯಕ್ತವಾಗುವುದು. ವಿಟನು ತನ್ನ ತಪ್ಪನ್ನು ಒಪ್ಪಿ ಕೊಂಡು ಮೈತ್ರೇಯನಿಗೆ ಕೈ ಮುಗಿದು, "ಎಲೈ ಮಹಾ ಬ್ರಾಹ್ಮಣ! ಇದೋ ಅನುನಯದಿಂದ ಬೇಡುವೆನು" ಎಂದಾಗ ಶಕಾರನು, "ಭಾವ, ನೀನು ಆ ದರಿದ್ರ ವರ್ತಕ ಚಾರುದತ್ತನಿಗೆ ಹೆದರುತ್ತಿರುವೆ!" ಎಂದು ಹಾಸ್ಯಮಾಡುವನು. ವಿಟನು, "ಹೌದು, ಹೆದರುತ್ತೇನೆ" ಎಂದು ಉತ್ತರ ಹೇಳಿದಾಗ ಅವನು, "ಭಾವ! ಏತಕ್ಕೆ, ಏತಕ್ಕೆ?" ಎಂದು ಕೇಳು ವನು. ವಿಟನು ಅದಕ್ಕೆ, "ಅವನ ಸದ್ಗುಣಗಳ ದೆಸೆಯಿಂದ. ಯೋಚಿಸಿ ನೋಡು. ಅವನು ನನ್ನಂತಹವರ ಸ್ನೇಹದಿಂದ ದರಿದ್ರನಾದ. ಅವ ನಿಂದ ಧನವನ್ನು ಪಡೆಯದವರೇ ಇಲ್ಲ. ಬೇಸಗೆಯಲ್ಲಿ ಒಣಗಿದ ದೊಡ್ಡ ಕೆರೆಯಂತೆ ಅವನ ಸ್ಥಿತಿ. ಜನರ ಬಾಯಾರಿಕೆಯನ್ನು ಹೋಗಲಾಡಿಸಿದ ಮೇಲೆ ಕೆರೆಯು ಒಣಗಿ ಹೋಗುತ್ತದೆ" * ಎಂದು ಉತ್ತರ ಹೇಳು

---

* "ತಸ್ಯಗುಣೇಭ್ಯಃ । ಪಶ್ಯತು ಭವಾನ್,
ಸ ಮದ್ವಿಧಾನಾಂ ಪ್ರಣಯೈಃ ಕೃಶೀಕೃತೋ
ನ ತಸ್ಯ ಕಶ್ಚಿದ್ವಿಭವೈರಮಂಡಿತಃ ।
ನಿದಾಘ ಸಂಶುಷ್ಕ ಇವ ಹ್ರದೋ ಮಹಾನ್
ನೃಣಾಂ ತು ತೃಷ್ಣಾಮುಪನೀಯ ಶುಷ್ಯತಿ ॥"

ವನು. ಅಲ್ಲದೆ ತಮ್ಮ ಹುಚ್ಚಾಟವೂ ಅಸಭ್ಯವರ್ತನೆಯೂ ಚಾರುದತ್ತನ ಕಿವಿಗೆಲ್ಲಿ ಬೀಳುವುವೋ ಎಂದು ಶಂಕಿಸಿ ಅವನು ಮೈತ್ರೇಯನೊಡನೆ, "ಮಹಾ ಬ್ರಾಹ್ಮಣ! ಇಲ್ಲಿ ನಡೆದುದನ್ನು ಆ ವರ್ತಕನಿಗೆ ತಿಳಿಸ ಬೇಡ" ಎಂದು ಹೇಳಿ ಹೊರಟುಹೋಗುವನು. ಚಾರುದತ್ತನ ಸದ್ಗುಣ ಗಳಿಗೂ ಘನತೆಗೂ ಮತ್ತಾವ ಹೆಚ್ಚಿನ ನಿದರ್ಶನವು ಬೇಕು?

ಅನಂತರ ಶಕಾರನು ಚಾರುದತ್ತನಿಗೆ ತನ್ನ ಕೆಲವು ಮಾತುಗ ಳನ್ನು ತಿಳಿಸಬೇಕೆಂದು ಮೈತ್ರೇಯನೊಡನೆ ಹೇಳುವನು. ವಸಂತಸೇನೆ ಯನ್ನು ಮಾರನೆಯ ದಿನ ಚಾರುದತ್ತನು ತನ್ನ ಮನೆಯಿಂದ ಕಳುಹಿ ಸದೆ ಹೋದರೆ, ಬಾಗಿಲು ಸಂದಿಗೆ ಸಿಕ್ಕಿದ ಬೇಲದಹಣ್ಣಿನಂತೆ ಚೂರು ಚೂರಾಗುವ ಹಾಗೆ ಅವನ ತಲೆಯನ್ನು ಒಡೆದು ಹಾಕುವುದಾಗಿ ಸಹ ತಿಳಿಸಬೇಕೆಂದು ಶಕಾರನು ಹೇಳುವನು. ಮೈತ್ರೇಯನು (ವಿದೂಷಕನು) "ಎಲೈ! ಹಾಗೆಯೇ ಆಗಲಿ" ಎಂದು ಹೇಳಿ ದೀಪವನ್ನು ಅವನ ಸಮೀ ಪಕ್ಕೆ ಹಿಡಿದು ಅವನನ್ನು ಹೆದರಿಸುವನು. ಖಡ್ಗವನ್ನು ಧರಿಸಿರುವ ಶಕಾರನು ಮೈತ್ರೇಯನ ದೀಪಕ್ಕೆ ಹೆದರುವ ದೃಶ್ಯವು ರಂಗಸ್ಥಳದ ಮೇಲೆ ವಿನೋದಕರವಾಗಿರುವುದೆನ್ನಲು ಅಡ್ಡಿಯಿಲ್ಲ. ಹರಟೆಯ ಮಲ್ಲ ನಾದ ಶಕಾರನು ಅಂಜುಕುಳಿ. ಅವನು, ಮೈತ್ರೇಯನು ದೀಪವನ್ನು ವಿಜೃಂಭಿಸಿದುದಕ್ಕೇ ಹೆದರಿ, ಸುತ್ತಲೂ ನೋಡಿ, "ಭಾವನೆಲ್ಲಿ? ಭಾವನು ಹೊರಟೇ ಹೋಗಿದ್ದಾನೆ. ಅಯ್ಯೋ! ಭಾವ!" ಎಂದುಕೊಂಡು ತಾನೂ ಹೋಗುವನು. ಅಲ್ಲಿ ನಡೆದುದನ್ನು ಮನೆಯಲ್ಲಾರಿಗೂ ತಿಳಿಸಕೂಡ ದೆಂದು ಮೈತ್ರೇಯನು ರದನಿಕೆಗೆ ಹೇಳುವನು. ಅವಳು, "ಆರ್ಯ! ನಾನು ರದನಿಕೆ" ಎಂದು ಹೇಳುವಳು. ಯಾವ ತರಗತಿಯವರ ಮಾತು ಹೇಗಿರಬೇಕೆಂಬುದನ್ನರಿತಿರುವ ಕವಿಯ ಪರಿಶೀಲನಾಸಾಮರ್ಥ್ಯವು ಇದ ರಿಂದ ಗೊತ್ತಾಗುವುದು. ಅವರೀರ್ವರೂ ಮನೆಯೊಳಕ್ಕೆ ಹೋಗುವರು. ಈ ಮಧ್ಯದಲ್ಲಿ ಮನೆಯೊಳಕ್ಕೆ ಬಂದ ವಸಂತಸೇನೆಯನ್ನು ಚಾರುದತ್ತನು ರದನಿಕೆಯೆಂದು ಭಾವಿಸಿ, "ಭದ್ರೆ! ದೇವಕಾರ್ಯವು ನೆರವೇರಿತೆ?" ಎಂದು ಕೇಳಿ, ತನಗೆ ಸೆಕೆಯೆಂದು ಹೇಳಿ ಉತ್ತರೀಯವನ್ನು ತೆಗೆದಿ

ಡಲು ಅವಳ ಕೈಗೆ ಕೊಡುವನು. ಅವಳು ಅದಕ್ಕಾಗಿ ಹರ್ಷಿಸಿ, ಅದರ ಸುಗಂಧವನ್ನು ಗಮನಿಸಿ, ಯುವಜನಸಹಜವಾದ ರಸಿಕತನವನ್ನು ಅವನು ಅಲಕ್ಷ್ಯಮಾಡಿಲ್ಲವೆಂದು ಹೇಳಿಕೊಳ್ಳುವಳು. ಅವಳು ಸುಮ್ಮನೆ ನಿಂತಿದ್ದುದನ್ನು ಕಂಡು ಅವನು, "ರದನಿಕೆ! ಒಳಕ್ಕೆ ಚತುಶ್ಶಾಲೆಗೆ ನಡೆ" ಎನ್ನುವನು. ವಸಂತಸೇನೆಯು ಸಂಕೋಚದಿಂದ ತನ್ನಲ್ಲಿ ತಾನು, "ಒಳಕ್ಕೆ ಪ್ರವೇಶಿಸಲು ನಾನು ಅಭಾಗಿನಿ" ಎಂದುಕೊಳ್ಳುವಳು. ಅವಳು ಸುಮ್ಮನಿದ್ದುದನ್ನು ಕಂಡು ಚಾರುದತ್ತನು ಕೊಂಚ ಗಟ್ಟಿಯಾಗಿ, "ರದನಿಕೆ! ಏತಕ್ಕಾಗಿ ವಿಳಂಬಮಾಡುವೆ?" ಎನ್ನುವನು. ರದನಿಕೆಯು ಆ ಮಾತುಗಳನ್ನು ಕೇಳಿ, "ಒಡೆಯನೆ, ಇದೋ ಬಂದೆ" ಎಂದುಕೊಂಡು ಪ್ರವೇಶಿಸುವಳು. ದೀಪವನ್ನು ಹಿಡಿದು ವಿದೂಷಕನೂ ಬರುವನು. ಚಾರುದತ್ತನು ಆಶ್ಚರ್ಯದಿಂದ, "ಇವಳಾರು? ತಿಳಿಯದೆ ನಾನು ಕೊಟ್ಟ ಉತ್ತರೀಯದಿಂದ ಶರತ್ಕಾಲದ ಮೋಡದಿಂದ ಆವೃತವಾದ ಚಂದ್ರಲೇಖೆಯಂತೆ ಶೋಭಿಸುತ್ತಿರುವವಳು?" ಎನ್ನುವನು. ವಸಂತಸೇನೆಯೂ ದೀಪದ ಬೆಳಕಿನಲ್ಲಿ ಅವನನ್ನು ನೋಡಿ, "ಉಸಿರಾಡುತ್ತ ಯಾವನಿಗಾಗಿ ಈ ದೇಹವನ್ನು ಧರಿಸಿರುವೆನೋ ಆತನು ಇವನೇ" ಎಂದುಕೊಳ್ಳುವಳು. ಅವಳ ಅನುರಾಗದ ಸ್ವಭಾವವೆಂತಹದೆಂಬುದು ಇದರಿಂದ ವ್ಯಕ್ತವಾಗುವುದು. ಶಕಾರನು ಹೇಳಿದ ಮಾತುಗಳಲ್ಲಿ ತಲೆಯೊಡೆಯುವ ಅಸಭ್ಯವಚನಗಳನ್ನು ಬಿಟ್ಟು, ವಸಂತಸೇನೆಯನ್ನು ಕಳುಹಿಸಬೇಕೆಂಬಷ್ಟನ್ನು ಮಾತ್ರ ಮೈತ್ರೇಯನು ಚಾರುದತ್ತನಿಗೆ ತಿಳಿಸುವನು. ಅವನ ಸಂಸ್ಕಾರಕ್ಕೆ ಇದೂ ಒಂದು ನಿದರ್ಶನ. ಅದೇ ತಾನು ಮಾತನಾಡಲು ತಕ್ಕ ಸಮಯವೆಂದು ಭಾವಿಸಿ, ವಸಂತಸೇನೆಯು, "ಆರ್ಯನೆ, ಶರಣಾಗತೆಯಾಗಿರುವೆನು" ಎಂದು ಹೇಳಿ ಚಾರುದತ್ತನಿಂದ ಅಭಯವನ್ನು ಪಡೆಯುವಳು. ಚಾರುದತ್ತನನ್ನು ಮನ್ಮಥೋತ್ಸವದ ದಿನ ನೋಡಿ ಅವಳು ಅವನಲ್ಲಿ ಅನುರಕ್ತೆಯಾಗಿರುವಂತೆ ಅದೇ ದಿನದಿಂದಲೇ ಅವನೂ ಅವಳಲ್ಲಿ ಅನುರಕ್ತನಾಗಿರುವನು ಅವಳ ರೂಪವನ್ನೂ ಕುರಿತು ಮೈತ್ರೇಯನೊಡನೆ ಅವನು ಆಗಾಗ ಪ್ರಸ್ತಾವಿಸಿರುವನು. ಮೈತ್ರೇಯನು ಅದನ್ನು ನೆನಪಿಗೆ ತಂದಾಗ ಚಾರುದತ್ತನು ಅವ

ನೊಡನೆ, ದಾರಿದ್ರ್ಯ ಬಂದಿರುವ ಕಾಲದಲ್ಲಿ ಹುಟ್ಟಿದ ತನ್ನ ಅನುರಾಗವು ಅಂಜುಕುಳಿಯ ರೋಷದಂತೆ ತನ್ನ ದೇಹದಲ್ಲೇ ಮುಕ್ತಾಯ ಹೊಂದ ಬೇಕಾಗಿದೆಯೆಂದು ಹೇಳುವನು.

ವಸಂತಸೇನೆಯು ತಾನು ಅನಾಹ್ವಾನಿತಳಾಗಿ ಮನೆಯೊಳಕ್ಕೆ ಪ್ರವೇಶಿಸಿದ ಅಪರಾಧಕ್ಕಾಗಿ ತನ್ನನ್ನು ಕ್ಷಮಿಸಬೇಕೆಂದು ಚಾರುದತ್ತನನ್ನು ಬೇಡುವಳು. ಚಾರುದತ್ತನೂ ತಾನು ತಿಳಿಯದೆ ಉತ್ತರೀಯವನ್ನು ಮನೆಯೊಳಕ್ಕೆ ತೆಗೆದುಕೊಂಡು ಹೋಗುವ ಕೆಲಸವನ್ನು ಅವಳಿಗೆ ವಹಿಸಿದುದಕ್ಕಾಗಿ ತನ್ನನ್ನು ಕ್ಷಮಿಸಬೇಕೆಂದು ಅವಳನ್ನು ಕೇಳುವನು. ಅವು ವಿನಯಶೀಲರಾದ ಅವರೀರ್ವರಿಗೂ ಒಪ್ಪತಕ್ಕ ಮಾತುಗಳು. ಆ ಸಂದರ್ಭದಲ್ಲಿ ಮೈತ್ರೇಯನು, "ಸರಿಯಾದ ಶಿಕ್ಷಣವಿಲ್ಲದ ದುರ್ವಿನೀತವಾದ ಎರಡು ಎತ್ತುಗಳು ಬಂಡಿಯನ್ನು ಬೇರೆ ಬೇರೆ ದಿಕ್ಕಿಗೆಳೆಯಲೆತ್ನಿಸಿದಂತೆ ಇವರೀರ್ವರೂ ಮಾತನಾಡುತ್ತಿದ್ದಾರೆ. ಈಗ ನಾನಾರ ಕ್ಷಮೆಯನ್ನು ಬೇಡಲಿ? ಆಗಲಿ, ರದನಿಕೆಯ ಕ್ಷಮೆಯನ್ನು ಬೇಡುತ್ತೇನೆ. ರದನಿಕೆ! ಪೂಜ್ಯಳಾದ ನೀನು ಕ್ಷಮಿಸಬೇಕು, ಕ್ಷಮಿಸಬೇಕು" ಎಂದು ಹೇಳುವನು. ಅವನ ಮಾತುಗಳು ವಿನೋದಾತ್ಮಕವಾಗಿದ್ದರೂ ಅವುಗಳ ಹಿಂದೊಂದು ಪರಿಹಾಸ್ಯ ಭಾವವಿರುವಂತೆ ತೋರುತ್ತದೆ. ವಸಂತಸೇನೆಯು ಮನೆಯೊಳಕ್ಕೆ ಬಂದುದು ಚಾರುದತ್ತನಿಗೂ, ಚಾರುದತ್ತನು ಉತ್ತರೀಯವನ್ನು ಕೊಟ್ಟುದು ವಸಂತಸೇನೆಗೂ, ಸಂತೋಷವನ್ನುಂಟುಮಾಡಿದ್ದೂ ಕೂಡ, ಪರಸ್ಪರವಾಗಿ ಅವರೀರ್ವರೂ ಕ್ಷಮಾಪಣೆ ಬೇಡುವುದನ್ನು ಕಂಡು ಅವರನ್ನು ಹಾಸ್ಯಮಾಡಲು ಮೈತ್ರೇಯನು ತಾನು ರದನಿಕೆಯ ಕ್ಷಮೆಯನ್ನು –ಅದೂ ಕಾರಣವೇ ಇಲ್ಲದೆ ಅವಳ ಕ್ಷಮೆಯನ್ನು—ಪ್ರಾರ್ಥಿಸುವ ಆಟವನ್ನು ಹೂಡುವನು. ಎಷ್ಟು ತಿಳಿಯಾದ ಹಾಸ್ಯ !

ಚಾರುದತ್ತನು ವಸಂತಸೇನೆಯನ್ನು ಕುರಿತು, "ಪೂಜ್ಯಳೆ! ಪರಾಧೀನನಾಗಿದ್ದೇನೆ. ನನ್ನ ಸ್ನೇಹದಿಂದ ಆಗಬೇಕಾದುದೇನು?" ಎಂದು ಕೇಳುವನು. "ನಿನ್ನ ಅಧೀನನಾಗಿದ್ದೇನೆ" ಎಂಬುದೇ ಇಲ್ಲಿ "ಪರಾಧೀನನಾಗಿದ್ದೇನೆ" ಎಂಬುದರ ಆಶಯ. ವಸಂತಸೇನೆಯು ಅವನಲ್ಲಿ

ಅನುರಕ್ತೆಯಾಗಿದ್ದರೂ ತನ್ನ ತೂಕಕ್ಕೆ ಕಡಿಮೆಯಾಗುವಂತೆ ನಡೆಯತಕ್ಕ ವಳಲ್ಲವೆಂಬುದು ಅವಳು ತನ್ನಲ್ಲಿ ತಾನು ಹೇಳಿಕೊಳ್ಳುವ, " ಇಲ್ಲಿರುವುದು ಪ್ರಿಯಕರನೇ ಆದರೂ, ಪ್ರಥಮಸಂದರ್ಶನ. ನಾನಾಗಿಯೇ ಬಂದವಳು. ಇಲ್ಲಿ ನಿಲ್ಲುವುದು ಉಚಿತವಲ್ಲ" ಎಂಬ ಮಾತುಗಳಿಂದ ವ್ಯಕ್ತವಾಗು ವುದು. ಒಡವೆಗಳ ಆಸೆಗಾಗಿ ಪಾಪಾತ್ಮರು ತನ್ನನ್ನು ಅನುಸರಿಸುವ ರೆಂದೂ, ಒಡವೆಗಳನ್ನು ನ್ಯಾಸವಾಗಿಟ್ಟುಕೊಂಡು ಉಪಕರಿಸಬೇಕೆಂದೂ ತನ್ನೊಡನೆ ಯಾರನ್ನಾದರೂ ಕಳುಹಿಸಬೇಕೆಂದೂ ಅವಳು ಪ್ರಾರ್ಥಿಸು ವಳು. ಒಡವೆಗಳು ನ್ಯಾಸವಾಗಿದ್ದಲ್ಲಿ ತಾನು ಮತ್ತೆ ಬರುವುದಕ್ಕಾಗಲಿ ಅಥವಾ ಚಾರುದತ್ತನನ್ನೇ ಬರಮಾಡಿಕೊಳ್ಳುವುದಕ್ಕಾಗಲಿ ಅವಕಾಶ ವುಂಟಾದೀತೆಂಬ ಭಾವನೆಯಿಂದ ಚತುರೆಯಾದ ವಸಂತಸೇನೆಯು ಹಾಗೆ ಪ್ರಾರ್ಥಿಸುವಳು.

ಚಾರುದತ್ತನು ಅದಕ್ಕೆ ಸಮ್ಮತಿಸಿ, "ಮೈತ್ರೇಯ, ತೆಗೆದುಕೊ" ಎನ್ನುವನು. ಮೈತ್ರೇಯನು, "ನನಗೆ ಶ್ರದ್ಧೆಯಿಲ್ಲ" ಎನ್ನುವನು. ಬಲಿಹರಣಕ್ಕೆ ಹೋಗೆಂದು ಚಾರುದತ್ತನು ಹೇಳಿದಾಗ ಇದೇ ಮಾತು ಗಳನ್ನಾಡಿ ಅವನಿಗೆ ಅಸಮಾಧಾನ ಪಡಿಸಿದ್ದ ಮೈತ್ರೇಯನು ಮತ್ತೆ ಅದೇ ಮಾತುಗಳನ್ನು ವಿನೋದಾರ್ಥವಾಗಿ ಆಡಿ ಅವನನ್ನು ಸಂತೋಷ ಪಡಿಸಬೇಕೆಂದು ಪ್ರಯತ್ನಿಸಿರಬೇಕೆಂದು ತೋರುವುದು. ಚಾರುದತ್ತನೂ, "ಮೂರ್ಖ, ತೆಗೆದುಕೊ" ಎಂದು ಹೇಳುವನು. ಆ ಮಾತುಗಳನ್ನಾಡು ವಾಗ್ಗೆ ಚಾರುದತ್ತನೂ ನಕ್ಕಿರಬೇಕು. ಮೈತ್ರೇಯನು ಅನಂತರ, "ನೀನು ಅಪ್ಪಣೆ ಮಾಡಿದಂತೆ. ಪೂಜ್ಯಳೆ, ತಾ" ಎಂದು ಹೇಳುವನು. ಆಬಳಿಕ ಅವನು ಅದನ್ನು ಸ್ವೀಕರಿಸುವನು. ಷಷ್ಠಿಯಾದ ಆ ದಿನವೂ, ಸಪ್ತಮಿಯ ದಿನವೂ ರದನಿಕೆಯು ಒಡವೆಗಳನ್ನು ನೋಡಿಕೊಳ್ಳಬೇಕೆಂದೂ ಅನಧ್ಯಯನ ದಿನವಾದ ಅಷ್ಟಮಿಯ ದಿನ ಮೈತ್ರೇಯನು ಒಡವೆ ಗಳನ್ನು ನೋಡಿಕೊಳ್ಳಬೇಕೆಂದೂ ಗೊತ್ತಾಗುವುದು. ವಸಂತಸೇನೆ ಯೊಡನೆ ಹೋಗಿ ಅವಳನ್ನು ಮನೆಗೆ ಸೇರಿಸಿ ಬರುವಂತೆ ಚಾರುದತ್ತನು ಮೈತ್ರೇಯನನ್ನು ಕಳುಹಿಸುವನು.

ಎರಡನೆಯ ಅಂಕದ ಕಥಾಭಾಗವು ನಡೆಯುವುದು ವಸಂತಸೇನೆಯ ಮನೆಯಲ್ಲಿ. ಚಾರುದತ್ತನಲ್ಲಿ ಅನುರಕ್ತೆಯಾಗಿರುವ ಆ ಕಲಾಪ್ರವೀಣೆಯು ತಾನೇನನ್ನು ಮಾಡುತ್ತಿರುವೆನೆಂಬುದರ ಸ್ಮೃತಿಯೇ ಇಲ್ಲದಷ್ಟು ಮೈ ಮರೆತಿದ್ದಾಳೆ. ವಿಚಿತ್ರಿತ್ತಕೆಯೆಂಬ ತನ್ನ ಚೇಟಿಯು ತನ್ನೊಡನೆ ಮಾತ ನಾಡದೆ ಇದ್ದೂ "ಆಮೇಲೆ, ಆಮೇಲೆ" ಎನ್ನುತ್ತಾಳೆ. ಅವಳ ಅವಸ್ಥೆ ಯನ್ನರಿತಿರುವ ಚೇಟಿಯು ಅವಳ ಪ್ರಿಯನಾರೆಂಬುದೆನ್ನು ತಿಳಿದುಕೊಳ್ಳ ಲಿಚ್ಛಿಸಿದಾಗ ಅವರೀರ್ವರಿಗೂ ನಡೆಯುವ ಸಂಭಾಷಣವು ಬಹಳ ಸ್ವಾರಸ್ಯ ವಾಗಿ ಮನೋಹರವಾಗಿದೆ. ತನ್ನ ಒಡತಿಯ ಮನಸ್ಸು ಚಾರುದತ್ತ ನನ್ನು ಸೇರಿದೆಯೆಂಬುದನ್ನು ಅವಳಿಂದ ತಿಳಿದುಕೊಂಡ ಚೇಟಿಯು, "ಅಯ್ಯೋ! ಅವನು ದರಿದ್ರನಲ್ಲವೆ?" ಎನ್ನುವಳು. ವಸಂತಸೇನೆಯು, "ಅದಕ್ಕಾಗಿಯೇ ನಾನು ಅವನನ್ನು ಕಾಮಿಸಿರುವುದು. ಅತ್ಯಂತ ದರಿದ್ರ ನಾದ ಪುರುಷನಲ್ಲಿ ಆಸಕ್ತಳಾದ ವೇಶ್ಯೆಯು (ಧನಾಕಾಂಕ್ಷೆಯುಳ್ಳವಳೆಂಬ) ಆಕ್ಷೇಪದಿಂದ ಪಾರಾಗುವಳು" ಎಂದು ಹೇಳುವಳು. ಅವರೀರ್ವರೂ ಮಾತನಾಡುತ್ತಿರುವಲ್ಲಿ ಸಂವಾಹಕನು ಬಂದು, "ಆರ್ಯಳೆ! ಶರಣಾ ಗತನಾಗಿರುವೆನು" ಎನ್ನುವನು. ವಸಂತಸೇನೆಯು, "ಇನ್ನು ಆವೇಗ ಪಡಬೇಕಾದುದಿಲ್ಲ" ಎಂದು ಹೇಳಿ ಅಭಯ ಕೊಡುವಳು. ಅವನಾ ರೆಂಬುದನ್ನೇ ಕೇಳದೆ ಅವಳು ಆ ರೀತಿ ಮಾಡಿದುದು ಸರಿಬೀಳದೆ ಚೇಟಿಯು, "ಹುಂ. ಇವನಾರು?" ಎಂದು ಕೇಳುವಳು. ಆಗ ವಸಂತ ಸೇನೆಯು, "ಹುಚ್ಚಿ, ಶರಣಾಗತನಾದವನನ್ನು ಅವನಾರೆಂದು ಕೇಳಬ ಹುದೆ!" ಎನ್ನುವಳು. ಅವಳ ಸ್ವಭಾವವು ಇದರಿಂದ ಗೊತ್ತಾಗುತ್ತದೆ. ಅವಳು ಸಂವಾಹಕನಿಗೆ ಧೈರ್ಯ ಹೇಳಿ ತಾನು ವೇಶ್ಯೆಯೆಂದು ತಿಳಿಸುವಳು. ಆಗ ಅವನು, "ಜನ್ಮದಿಂದ. ಶೀಲದಿಂದಲ್ಲ" ಎಂದು ಹೇಳಿ ಅವಳನ್ನು ಕೊಂಡಾಡುವನು. ಕವಿಯು ಎಷ್ಟು ಸಹೃದಯನಾಗಿ ಅನುಕಂಪದಿಂದ ಕೂಡಿ ಪಾತ್ರರಚನೆ ಮಾಡಿದ್ದಾನೆಂಬುದೂ, ಅವನ ಹೃದಯ ವೈಶಾಲ್ಯ ವೆಷ್ಟೆಂಬುದೂ ಇದರಿಂದ ವ್ಯಕ್ತವಾಗುತ್ತದೆ.

ಆ ಬಳಿಕ ಸಂವಾಹಕನ ಭಯಕ್ಕೇನುಕಾರಣವೆಂದು ವಸಂತ ಸೇನೆಯು ಚೇಟಿಯಿಂದ ಕೇಳಿಸುವಳು. ಅವನು, "ಧನಿಕನ ದೆಸೆ

ಯಿಂದ" ಎನ್ನುವನು. ಒಡನೆಯೆ ವಸಂತಸೇನೆಯು, "ಹಾಗಾದರೆ ಆರ್ಯನಿಗೆ ಆಸನವನ್ನು ಹಾಕು" ಎಂದು ಚೇಟಿಗೆ ಹೇಳುವಳು. ಧನಿಕನಾದ ಶಕಾರನಿಂದ ಪೀಡಿತಳಾಗಿ ಕಷ್ಟಪಟ್ಟಿರುವ ವಸಂತಸೇನೆಗೆ ಧನಿಕರೆಂದರೇ ಅಸಹ್ಯಭಾವನೆಯುಂಟಾಗಿದೆ. ಸಂವಾಹಕನು ಧನಿಕನ ದೆಸೆಯಿಂದ ಭೀತನಾಗಿದ್ದಾನೆಂಬುದನ್ನು ಕೇಳಿದೊಡನೆಯೇ ಅವನಿಗೆ ಮೊದಲಿಗಿಂತ ಹೆಚ್ಚಿನ ಗೌರವವನ್ನು ಅವಳು ತೋರಿಸುವಳು. ಅವನನ್ನು ಕುಳಿತುಕೊಳ್ಳುವಂತೆ ಹೇಳಿ, ಅವನ ಕಷ್ಟವೇನೆಂದು ಕೇಳಿಸುವಳು. ಅವನು, "ನನ್ನ ಜನ್ಮಭೂಮಿಯು ಪಾಟಲೀಪುತ್ರನಗರ. ನನ್ನದು ವರ್ತಕ ಮನೆತನ. ಭಾಗ್ಯವಳಿದ ಹೀನದಶೆಯ ದೆಸೆಯಿಂದ ನಾನು ಸಂವಾಹಕ *ವೃತ್ತಿಯನ್ನು ಅವಲಂಬಿಸಿ ಜೀವನ ಮಾಡುತ್ತಿದ್ದೇನೆ" ಎಂದು ತಿಳಿಸುವನು. ವಸಂತಸೇನೆಯು, "ಆರ್ಯನು ಸಂವಾಹಕನೆ! ಆರ್ಯನು ಸುಕುಮಾರವಾದ ಕಲೆಯನ್ನೇ ಕಲಿತಂತಾಯಿತು" ಎಂದು ಉತ್ತರ ಹೇಳುವಳು. ಅವಳು ಸಂಪತ್ತಿನ ರಾಶಿಯ ಮೇಲೆ ಕುಳಿತಿದ್ದೂ, ದರಿದ್ರನೂ ಅರ್ಥಿಯೂ ಆಗಿರುವ ಸಂವಾಹಕನನ್ನು ಆರ್ಯನೆಂದು ಸಂಬೋಧಿಸುವುದರಿಂದಲೇ ಅವಳ ಘನತೆಯು ವ್ಯಕ್ತವಾಗುವುದು. "ಸಂವಾಹಕ" ಕಲೆಯಲ್ಲಿ ಕೂಡ ಅವಳಿಗೆ ಅಭಿಮಾನ. ಸಂವಾಹಕನು, "ಕಲೆಯೆಂದು ಕಲಿತೆನು. ಆದರೆ ಅದನ್ನು ಜೀವನ ಸಾಧನವಾಗಿ ಮಾಡಿಕೊಳ್ಳುವ ಸ್ಥಿತಿಯು ಬಂದಿತು" ಎಂದು ಉತ್ತರ ಹೇಳುವನು. ಒಮ್ಮೆ ಧನಿಕನಾಗಿದ್ದು ಕಲೆಯೆಂದು ಕಲಿತುದನ್ನು ಹೊಟ್ಟೆಯಪಾಡಿಗಾಗಿ ಉಪಯೋಗಿಸುತ್ತಿರುವ ಸಂವಾಹಕನ ಸಂಕಟವನ್ನು ವಸಂತಸೇನೆಯು ಗ್ರಹಿಸಿ, "ಆರ್ಯನ ಮಾತುಗಳು ನಿರ್ವೇದಸೂಚಕಗಳಾಗಿವೆ. ಆಮೇಲಾಮೇಲೆ" ಎನ್ನುವಳು. ಸಂವಾಹಕನು ತಾನು ದರಿದ್ರನಾದ ಬಳಿಕ

---

* ಸಂವಾಹಕ ವೃತ್ತಿಯೆಂದರೆ ಮೈಕೈಗಳನ್ನು ಹಿತವಾಗುವಂತೆ ಹಿಸುಕುವ ವೃತ್ತಿಯೆಂದು ಅರ್ಥ. ಆದರೂ ಒಂದು ಕಲೆಯೆನ್ನಿಸುವ ಮಟ್ಟಿಗೆ ಪೂರ್ವಕಾಲದಲ್ಲಿ ಅದು ವೃದ್ಧಿಯಾಗಿದ್ದಿತು. ಅದರಿಂದ ಬಹಳ ಪ್ರಯೋಜನವುಂಟೆಂಬುದು ಈಗಿನ ಕಾಲದಲ್ಲಿ ಸಹ ಅಂಗೀಕೃತವಾಗಿದೆ.

ಉಜ್ಜಯನೀ ನಗರಕ್ಕೆ ಬಂದು ಒಬ್ಬ ವರ್ತಕನನ್ನು ಸೇರಿದುದಾಗಿ ತಿಳಿಸುವನು. ಅವನು ಎಂತಹವನೆಂದು ಕೇಳಿದ ವಸಂತಸೇನೆಗೆ ಅವನು, " ಒಳ್ಳೆಯ ಆಕಾರವುಳ್ಳವನು, ಯಥಾರ್ಥವನ್ನರಿತವನು, ಮರ್ಯಾದೆ ಮೀರದವನು, ವಿಲಾಸಿ, ನಿಗರ್ವಿ, ಚತುರ, ಸುಂದರ, ದಕ್ಷ, ದಾಕ್ಷಿಣ್ಯ ವಂತ, ಸರ್ವರಿಗೂ ಪ್ರಿಯನಾದವನು, ಗೂಢಗುಣವುಳ್ಳವನು, ತೃಪ್ತನು. ಅವನು ಆತ್ಮಪ್ರಶಂಶೆಮಾಡಿಕೊಳ್ಳುವುದಿಲ್ಲ. ಇತರರಿಂದ ಸ್ವಲ್ಪವೇ ಉಪಕಾರವಾಗಿದ್ದರೂ ಅದನ್ನು ಸ್ಮರಿಸುತ್ತಾನೆ. ತುಂಬ ಅಪಕಾರವಾಗಿದ್ದರೂ ಮರೆತುಬಿಡುತ್ತಾನೆ. ಹೆಚ್ಚು ಹೇಳಲೇಕೆ? ಗ್ರೀಷ್ಮರುತುವಿನ ದೀರ್ಘ ದಿನವೆಲ್ಲ ಹೇಳಿದರೂ ಅವನ ಗುಣಗಳಲ್ಲಿ ಕಾಲುಭಾಗದವುಗಳನ್ನು ವರ್ಣಿಸಲಳವಲ್ಲ. ಹೆಚ್ಚೇಕೆ? ಪರಕೀಯರ ಪ್ರಯೋಜನಾರ್ಥವಾಗಿ ಬದುಕಿದ್ದಂತೆ ಅವನು ದೇಹವನ್ನು ಧರಿಸಿದ್ದಾನೆ" ಎಂದು ಉತ್ತರ ಹೇಳುತ್ತಾನೆ. ಚಾರುದತ್ತನ ಗುಣಗಳನ್ನು ಹೋಲುವ ಗುಣಗಳುಳ್ಳ ಆತನಾರೆಂದು ವಸಂತಸೇನೆಯು ಆಶ್ಚರ್ಯಪಟ್ಟುಕೊಂಡು, "ಅವನು ದರಿದ್ರನೇ?" ಎಂದು ಕೇಳುವಳು. ಸಂವಾಹಕನೂ ಆಶ್ಚರ್ಯದಿಂದ, "(ನಾನು) ಹೇಳದೆಯೇ ಆರ್ಯಳಿಗೆ ತಿಳಿದ ಬಗೆ ಹೇಗೆ?" ಎಂದು ಕೇಳುವನು. ಅವಳು, " ಗುಣವೂ ಐಶ್ವರ್ಯವೂ ಒಂದೇಕಡೆ ಇರುವುದು ದುರ್ಲಭವಾದ ಕಾರಣ. ಆಮೇಲಾಮೇಲೆ?" ಎನ್ನುವಳು. ವಸಂತಸೇನೆಯು ಧನಿಕರು ಗುಣವಂತರಾಗಿರುವುದಿಲ್ಲವೆಂದು ಸಿದ್ಧಾಂತ ಮಾಡಿ ನಿರ್ಧರಿಸಿರುವಳು. ಆದರೆ, ಗುಣವತಿಯೂ ಧನವತಿಯೂ ಆದ ತಾನೇ ಅದಕ್ಕೆ ಅಪವಾದಸ್ವರೂಪಳೆನಿಸಿರುವುದು ಅವಳ ಮನಸ್ಸಿಗೆ ಬರುವುದೇ ಇಲ್ಲ. ಧನಿಕನಾದ ಶಕಾರನನ್ನೂ, ಅವನಂತೆಯೇ ಧೂರ್ತರಾಗಿದ್ದ ಇತರ ಹಲವು ಮಂದಿ ಧನಿಕರನ್ನೂ ನೋಡಿ ಅಸಹ್ಯಪಟ್ಟು, ಬಹುಶಃ ಅವರಿಂದ ಬಾಧೆಪಟ್ಟು, ಅವಳು ಆ ರೀತಿ ಸಿದ್ಧಾಂತಮಾಡಿರುವಳೆಂದು ತೋರುತ್ತದೆ. ಇತರ ಧನಿಕರಾರೂ ಒಂದು ವೇಳೆ ಅವಳನ್ನು ಕಾಡಿಲ್ಲದಿದ್ದರೂ, ಶಕಾರನು ಅವಳನ್ನು ಕಾಡಿ ಗೋಳಾಡಿಸಿದುದೇನೊ ಅವಳ ಮನಸ್ಸಿನಲ್ಲಿ ಶಿಲಾಕ್ಷರವಾಗಿದೆ. ಆದುದರಿಂದಲೇ ಸಂವಾಹಕನು ವರ್ಣಿಸಿದ ಗುಣವಂತನು ದರಿದ್ರನಾಗಿರಲೇಬೇಕೆಂದು ಅವಳು ಊಹಿಸುವುದು!

ಚೇಟಿಯು ಸಂವಾಹಕನನ್ನು ಕುರಿತು, "ಆ ಆರ್ಯನಾವನು?" ಕೇಳಿದುದಕ್ಕೆ ಅವನು, "ಆರ್ಯ, ಚಾರುದತ್ತನೆಂದು" ಎಂದು ಉತ್ತರ ಹೇಳುವನು. ವಸಂತಸೇನೆಗೆ ಮೈಯೆಲ್ಲ ಕಿವಿಗಳಾಗಿ, ಆ ಕಿವಿಗಳಿಂದೆಲ್ಲ ಸುಧೆಯನ್ನೀಂಟಿದಂತಾಗುವುದು. ಅವಳು, "ಯುಕ್ತವೇ. ಆಮೇಲಾ ಮೇಲೆ?" ಎನ್ನುವಳು. ಚಾರುದತ್ತನಿಗೆ ಬಡತನಬಂದು ಅವನು, "ಚಾರಿತ್ರಮಾತ್ರಾವಶೇಷ" ನಾದುದರಿಂದ ತಾನು ಅವನ ಅಪ್ಪಣೆ ಪಡೆದು ಹೊರಟುಹೋದುದನ್ನು ತಿಳಿಸಿ, "ಇಂತಹ ಮತ್ತೊಂದು ಮನುಷ್ಯ ರತ್ನವನ್ನು ಹೇಗೆ ಪಡೆದೇನು, ಅವನ 'ಕೋಮಲ ಲಲಿತ ಮಧುರ ಶರೀರ ಸ್ಪರ್ಶಕೃತಾರ್ಥ' ವಾಗಿರುವ ನನ್ನ ಹಸ್ತವನ್ನು ಸಾಧಾರಣ ಶರೀರ ಸಂಮರ್ದದಿಂದ ಶೋಚನೀಯಸ್ಥಿತಿಗೆ ಹೇಗೆ ತರಲಿ" ಎಂದು ಯೋಚಿಸಿ ಬೇಸರ ಪಟ್ಟುದನ್ನು ತಿಳಿಸುವನು; ಕೊನೆಗೆ, "ದಗ್ಧಶರೀರ ರಕ್ಷಣಾರ್ಥವಾಗಿ ದ್ಯೂತೋಪಜೀವಿಯಾದೆನು" ಎಂದು ಹೇಳುವನು. ಅವನು ದ್ಯೂತೋಪಜೀವಿಯಾದುದಕ್ಕಾಗಿ ನಾವು ಅವನನ್ನು ಹಳಿಯಬಹುದು. ಆದರೆ ಚಾರುದತ್ತನ ಸೇವೆಯನ್ನು ಬಿಡಬೇಕಾಗಿ ಬಂದ ಬಳಿಕ ಅವನು ತನ್ನ ಬಾಳಿನಲ್ಲಿ ಬೇಸರಹೊಂದಿ, ತಾನು ತನ್ನ ಸುಟ್ಟದೇಹದ ರಕ್ಷಣೆಗಾಗಿ ಜೂಟಾಟಕ್ಕೆ ಪ್ರಾರಂಭಮಾಡಿದುದಾಗಿ ಹೇಳಿಕೊಳ್ಳುವ ಅವನ ಸ್ವಾಮಿಭಕ್ತಿಯನ್ನು ಕೊಂಡಾಡಲೇಬೇಕು. ಅಲ್ಲದೆ ಚಾರುತ್ತನ, "ಕೋಮಲ ಲಲಿತ ಮಧುರ ಶರೀರ" ವನ್ನೊತ್ತುತ್ತ ಸೇವಿಸುತ್ತಿದವನಾದ ತಾನು ಇತರರಿಗೆ ಆ ಸೇವೆಯನ್ನು ಮಾಡಲಾರದೆ ಹೋದುದಾಗಿ ಅವನು ಹೇಳುವ ಮಾತುಗಳು ಚಾರುದತ್ತನ ದೇಹದ ಸೊಂಪು ಸೊಗಸುಗಳೆಷ್ಟೆಂಬುದನ್ನು ಬಹು ಚೆನ್ನಾಗಿ ಸೂಚಿಸುವುವು. ತನ್ನ ಪ್ರಿಯನ ದೇಹವನ್ನು ಗಂಡಸೇ ಹಾಗೆ ವರ್ಣಿಸಿದುದನ್ನು ಕೇಳಿ ವಸಂತಸೇನೆಯು ಹರ್ಷಿತಳಾಗಿ ಆನಂದ ಬಾಷ್ಪದಿಂದ ಕೂಡಿ ಚೇಟಿಯ ಮುಖವನ್ನು ನೋಡುವಳು. ಅನೇಕ ದಿನಗಳು ಜೂಜಿನಲ್ಲಿ ಹಣವನ್ನು ಸೋತು, ಹಣವನ್ನು ಕೊಡಲು ಮಾರ್ಗವಿಲ್ಲದೆ, ಗೆದ್ದವನು ತನ್ನನ್ನು ಓಡಿಸಿಕೊಂಡು ಬಂದಕಾರಣ, ಅವನ ಭಯದಿಂದ ತಾನು ಓಡಿಬಂದಿರುವ ಅಂಶವನ್ನು ಆ ಬಳಿಕ ಸಂವಾಹಕನು ವಸಂತಸೇನೆಗೆ ತಿಳಿಸುವನು.

ಅವಳು ಮರುಕದಿಂದ, "ಅಯ್ಯೋ, ಶೋಚನೀಯ! ಆಶ್ರಯವಾಗಿದ್ದ ಮರವಿಲ್ಲದಂತಾದಮೇಲೆ [ಪಕ್ಷಿಗಳೆಲ್ಲ ಚೆದುರಬೇಕಾಗುವುದು. ಹೀಗೆ (ಇಲ್ಲಿಗೆ ಬಂದ) ಆರ್ಯನು ಆತ್ಮೀಯನೇ ಆದಹಾಗಾಯಿತು" ಎಂದು ಹೇಳಿ, ಸಂವಾಹಕನನ್ನು ಓಡಿಸಿಕೊಂಡು ಬಂದು ಮನೆಯ ಹೊರಗಿರುವವನಿಗೆ, ಸಲ್ಲಬೇಕಾದ ಸುವರ್ಣ ನಾಣ್ಯಗಳನ್ನು ಕೊಟ್ಟು ಬರಲು ಚೇಟಿಯನ್ನು ಕಳುಹಿಸುವಳು. ಈ ಸಂದರ್ಭದಲ್ಲಿ ಅವಳ ಔದಾರ್ಯವನ್ನು ಹೆಚ್ಚಾಗಿ ಕೊಂಡಾಡಬೇಕೋ ಅಥವಾ ಚಾರುದತ್ತನನ್ನು ಸೇವಿಸಿದವನು ತನ್ನ ಆತ್ಮೀಯನೆಂಬ ಭಾವನೆಯಿಂದ ಕೂಡಿರುವಮಟ್ಟಿಗೂ ಚಾರುದತ್ತನಲ್ಲಿ ಅವಳಿಗಿರುವ ಅನುರಾಗವನ್ನು ಹೆಚ್ಚಾಗಿ ಕೊಂಡಾಡಬೇಕೋ ತಿಳಿಯದು. ಚೇಟಿಯಾದ ವಿಚ್ಛಿತ್ತಕೆಯು ಹೋದೊಡನೆಯೆ ವಸಂತಸೇನೆಯು ಸಂವಾಹಕನನ್ನು ಕುರಿತು, "ಆರ್ಯನು ಹಣದ ನಿಮಿತ್ತವಾಗಿ ಚಿಂತಿಸ ಕೆಲಸವಿಲ್ಲ. ಆರ್ಯ ಚಾರುದತ್ತನೇ ಕೊಡುತ್ತಿದ್ದಾನೆಂದು ಭಾವಿಸಬೇಕು" ಎಂದು ಹೇಳುವಳು. ಎಂತಹ ಮಾತುಗಳಿವು! ವೇಶ್ಯೆಯಾದ ತನ್ನಿಂದ ಉಪಕಾರವನ್ನು ಪಡೆಯಲು ಸಂವಾಹಕನ ಮನಸ್ಸಿಗೆಲ್ಲಿ ಸಂಕೋಚವಾದೀತೋ ಎಂಬುದು ದಾಕ್ಷಿಣ್ಯಪರಳಾದ ಅವಳ ಭಾವನೆ. ಆದುದರಿಂದ ಚಾರುದತ್ತನೇ ಕೊಟ್ಟಂತೆ ಭಾವಿಸಬೇಕೆಂದು ಅವಳು ತಿಳಿಸುವಳು. ಚಾರುದತ್ತನಿಗೆ ಆತ್ಮಸಮರ್ಪಣೆ ಮಾಡಿರುವುದರಿಂದ ತಾನು ಮಾಡಿದ ಒಳ್ಳೆಯ ಕೆಲಸಗಳೆಲ್ಲ ಅವನೇ ಮಾಡಿದವುಗಳೆಂಬ ಭಾವನೆಯ ಸುಮ್ಮಾನವೂ ಅವಳ ಮನಸ್ಸಿನಲ್ಲಿ ಸ್ವಲ್ಪಮಟ್ಟಿಗಿರಬಹುದು. ನವ ತರುಣಿಯಾದ ಅವಳಲ್ಲಿ ಅದು ಸಹಜವೂ ಸರಿ. ಶಕಾರನು ಅವಳನ್ನು, "ಹುಡುಗಿ" ("ವಾಸು") ಎಂದು ಕರೆದಿರುವುದರಿಂದ ಅವಳನ್ನೂ ನವೋಢೆಯಾದ ತರುಣಿಯೆಂದು ಹೇಳಿದರೂಹೇಳಬಹುದು. ಚೇಟಿಯು ನಾಣ್ಯಗಳನ್ನು ಕೊಟ್ಟು ಬಂದ ಬಳಿಕ ಸಂವಾಹಕನು ತನ್ನ ಕೃತಜ್ಞತೆಯನ್ನು ಸೂಚಿಸಿ ಹೊರಟುಹೋಗುವನು.

ಅನಂತರ, ಕರ್ಣಪೂರನೆಂಬ ಹೆಸರಿನ ಚೇಟನು ಚೇಟಿಯನ್ನು ಕೂಗುತ್ತ, "ವಿಚ್ಛಿತ್ತಕೆ, ವಿಚ್ಛಿತ್ತಕೆ, ಎಲ್ಲಿ ಎಲ್ಲಿ, ಒಡತಿಯೆಲ್ಲಿ?" ಎಂದು ಹೇಳಿಕೊಂಡು ಸಂಭ್ರಮದಿಂದ ಪ್ರವೇಶಿಸುವನು. ವಿಚಾರವೇನೆಂದು

ವಸಂತಸೇನೆಯು ಕೇಳಿದಾಗ, ಅವನು, "ಹಂ! ನಾನು ವಂಚಿತನಾದೆ; ಕೃತಾರ್ಥನಾಗಲಿಲ್ಲ. ಏಕೆಂದರೆ, ಕಿಟಕಿಯಿಂದ ಚಾಚಿದ ಮೇಲುವ್ಯೆಯುಳ್ಳವಳಾಗಿ ಸ್ತನಗಳು ಬಾಗಿದ ಸ್ಥಿತಿಯಲ್ಲಿ ನಿಂತು, ಒಡತಿಯು ಕರ್ಣಪೂರನ ಕಾರ್ಯವನ್ನು ನೋಡಲಿಲ್ಲ" ಎಂದು ಹೇಳುವನು. ವಸಂತಸೇನೆಯು ನಿಂತು ತನ್ನನ್ನು ನೋಡಬೇಕಾದ ಸ್ಥಿತಿಯನ್ನು ಕರ್ಣಪೂರನು ವರ್ಣಿಸಿರುವ ಪರಿಪಾಟಿಯನ್ನು ನೋಡಿದರೆ ಆಕೆಯ ಸೌಧವು ಹಲವು ಅಂತಸ್ತುಗಳುಳ್ಳದಾಗಿ ಬಹಳ ಎತ್ತರವಾಗಿದ್ದಿತೆಂಬುದು ವ್ಯಕ್ತವಾಗುವುದು. ಏಕೆಂದರೆ, ಮೇಲುವ್ಯೆಯನ್ನು ಕಿಟಕಿಯಿಂದ ಹೊರಕ್ಕೆ ಚಾಚಿ ಸ್ತನಗಳು ಕೂಡ ಬಾಗಿದ ಸ್ಥಿತಿಯಲ್ಲಿರುವಮಟ್ಟಿಗೆ ಮುಖವನ್ನು ಕೆಳಗೆ ಮಾಡಿ ಬೀದಿಯಲ್ಲಿ ನಡೆಯುವ ಕಾರ್ಯವನ್ನು ನೋಡಬೇಕಾದರೆ, ಸೌಧದ ಎತ್ತರವು ತುಂಬ ಹೆಚ್ಚಾಗಿರಬೇಕಲ್ಲವೆ?

ಉದ್ರೇಕಭರದಲ್ಲಿ ಕರ್ಣಪೂರನು ಹೆಚ್ಚು ಮಾತುಗಳನ್ನಾಡಿದನೆಂದು ವಸಂತಸೇನೆಗೆ ಕೊಂಚ ಅಸಮಾಧಾನವಾಗುವುದು. ಅವನು ಗರ್ವಿತನಾಗಿರುವುದು ಅವಳಿಗೆ ಸರಿಬೀಳದು. ಆದುದರಿಂದ ಅವಳು, "ಅಲ್ಪರಿಗೆ ವಿಸ್ಮಯವಾಗುವುದು ಸುಲಭ. ನಿನ್ನ ಗರ್ವಕ್ಕೆ ("ಉತ್ಸೇಕ"ಕ್ಕೆ) ಕಾರಣವೇನು?" ಎಂದು ಕೇಳುವಳು. ಜನಸಂಚಾರವು ಹೆಚ್ಚಾಗಿದ್ದ ರಾಜಮಾರ್ಗದಲ್ಲಿ ಮದಿಸಿದ ಒಂದು ಆನೆಯು ತುಂಬ ಕೆಂಪಾಗಿದ್ದ ಕಾವಿಯ ಬಟ್ಟೆಯ ಉತ್ತರೀಯವನ್ನು ಧರಿಸಿದ್ದ ಒಬ್ಬ ಸಂನ್ಯಾಸಿಯಮೇಲೆ ನುಗ್ಗಿದುದನ್ನೂ, ಅದರ ದಂತಗಳ ಮಧ್ಯದಲ್ಲಿ ಸಿಕ್ಕಿಕೊಂಡಿದ್ದ ಅವನ ಕಾಲನ್ನು ಸೊಂಡಿಲಿನಿಂದ ಅದು ಹಿಡಿಯುತ್ತಿರುವಲ್ಲಿ ಜನರು, "ಹಾ, ಹಾ, ಸೀಳಿಬಿಡುವುದು. ಹತನಾದ!" ಎಂದು ಕೂಗಿದುದನ್ನೂ, ತಾನು ಮುಂದೆ ನುಗ್ಗಿ ಆ ಆನೆಯನ್ನು ಗುದ್ದಿ, ಅದು ಓಡಿಹೋಗುವಹಾಗೆ ಮಾಡಿ ಸಂನ್ಯಾಸಿಯ ಜೀವವನ್ನುಳಿಸಿದುದನ್ನೂ ಅವನು ತಿಳಿಸುವನು. ಸುಸಂಸ್ಕೃತೆಯಾದ ವಸಂತಸೇನೆಯ ಅಸಮಾಧಾನವು ಕೇವಲ ಕ್ಷಣಿಕವಾದುದು. ಸಂನ್ಯಾಸಿಯ ಪ್ರಾಣರಕ್ಷಣೆ ಮಾಡುವುದರಲ್ಲಿ ತಾನೇ ಬಲಿಯಾಗುವ ಅಪಾಯದ ಸಂಭವವಿದ್ದೂ ಚೇಟನು ಹಾಗೆ ಧೈರ್ಯದಿಂದ

ವರ್ತಿಸಿದುದನ್ನು ಕೇಳಿ ಹರ್ಷಿಸಿ ಅವಳು, "ಪ್ರಿಯವಾದ ವಾರ್ತೆ, ಆಮೋಲಾಮೋಲೆ" ಎನ್ನುವಳು. ಚೇಟನು, "ಚೇಟನದು ಎಂತಹ ಸಾಹಸಕಾರ್ಯವೆಂದು ಜನರೆಲ್ಲರೂ ಹೊಗಳಿದರು. ಆದರೆ ಅವರಲ್ಲಾರೂ ಏನನ್ನೂ ಕೊಡಲಿಚ್ಛಿಸಲಿಲ್ಲ. ಅನಂತರ ಓ ಒಡತಿಯೇ! ಒಬ್ಬ ಕುಲೀನನು ಮಾತ್ರ ಆಭರಣ ಸ್ಥಾನಗಳನ್ನು ಬೆರಳುಗಳಿಂದ ಮುಟ್ಟಿ ನೋಡಿಕೊಂಡು, ಅಲ್ಲೇನೂ ಇಲ್ಲದಿದ್ದುದನ್ನು ಕಂಡು ದೊಡ್ಡದಾಗಿ ನಿಟ್ಟುಸಿರು ಬಿಟ್ಟು, 'ನನ್ನ ಸಂಪತ್ತು ಇದೊಂದೇ' ಎಂದು ಹೇಳಿ ಪರಿಜನರ ಕೈಯಲ್ಲಿ ಈ ಉತ್ತರೀಯವನ್ನು ಕಳುಹಿಸಿದನು" ಎಂದು ಹೇಳುವನು. ಚಾರುದತ್ತನಂತೆ ವರ್ತಿಸಿದ ಆತನಾರಿರಬಹುದೆಂದು ವಸಂತಸೇನೆಗೆ ತವಕ; ಮತ್ತಾವನಾದರೂ ಸತ್ಪುರುಷನು ಹಾಗೆ ಮಾಡಿರಬಹುದೆಂಬ ಶಂಕೆ; ಇವುಗಳಿಂದ ಕೂಡಿ ತೊಳಲಿ ಬಳಲಿದ ಆಕೆಯು, "ಒಬ್ಬನಲ್ಲಿ ಪಕ್ಷಪಾತವುಳ್ಳ ಮನಸ್ಸು ಇತರರಲ್ಲಿ ಗುಣವನ್ನೇ ಕಾಣಲಾರದು" ಎಂದು ಚೇಟಗೆ ಹೇಳಿ ನಸುನಾಚುವಳು. ಅವಳ ಅನುರಾಗವೆಷ್ಟು ಗಾಢವಾಗಿದೆಯೆಂಬುದನ್ನು ಕವಿಯು ಎಷ್ಟು ಚೆನ್ನಾಗಿ ನುಡಿಸಿದ್ದಾನೆ! ಆದರೆ ಕವಿಯ ಸಂವಿಧಾನದ ಸೊಬಗೇ ಸೊಬಗು: ಆ ಮನುಷ್ಯನ ಹೆಸರೇನೆಂದು ಚೇಟಿಯು ಕೇಳಿದರೆ ಚೇಟನು ತಿಳಿಯದೆನ್ನುವನು. ಅದನ್ನು ಕೇಳಿಬರದೆ ಅಸಾಧುಕಾರ್ಯ ಮಾಡಿದೆಯೆಂದು ವಸಂತಸೇನೆಯು ತಿಳಿಸುವಳು. ಅಲ್ಲದೆ, "ಹೋಗಿ ಅವನನ್ನು ನೋಡೋಣ ಬಾ" ಎಂದೂ ಅವಳು ಹೇಳುವಳು. ಅಷ್ಟರಲ್ಲಿ ಕಿಟಕಿಯಿಂದ ನೋಡಿದ ಚೇಟನು, "ನೋಡು ನೋಡು, ಸ್ವಾಮಿನಿ! ಅವನು ಹೋಗುತ್ತಿದ್ದಾನೆ" ಎನ್ನುವನು. ಪ್ರಾಸಾದದಿಂದ ಕೆಳಗೆ ನೋಡಿದರೆ ಚಾರುದತ್ತ! ವಸಂತಸೇನೆಯು ಅವನನ್ನು ಕಣ್ಣುತುಂಬ ನೋಡಿ, "ಆಹ! ಯಜ್ಞೋಪವೀತವೊಂದೇ ಉತ್ತರೀಯವಾಗಿರುವ ಆರ್ಯ ಚಾರುದತ್ತನು ಹೋಗುತ್ತಿದ್ದಾನೆ. ಅವನು ಕಣ್ಣಿಗೆ ಕಾಣುತ್ತಿರುವವರೆಗೂ ನೋಡಬೇಕು" ಎಂದು ಹೇಳಿಕೊಳ್ಳುವಳು. ಅಲ್ಲಿಗೆ ಎರಡನೆಯ ಅಂಕವು ಮುಗಿಯುವುದು.

ಮೂರನೆಯ ಅಂಕದಲ್ಲಿ ಚಾರುದತ್ತನೂ ವಿದೂಷಕನೂ ಸಂಗೀತಗೋಷ್ಠಿಗೆ ಹೋಗಿದ್ದು ನಮರಾತ್ರಿಯಲ್ಲಿ ಮನೆಗೆ ಬರುವರು. ಅಂದು

ಅಸ್ವಾಮಿಯಾದಕಾರಣ, ವಸಂತಸೇನೆಯ ಒಡವೆಗಳನ್ನು ಆ ರಾತ್ರಿ ನೋಡಿ ಕೊಳ್ಳುವುದು ಮೈತ್ರೇಯನ (ವಿದೂಷಕನ) ಸರದಿ. ಚೇಟಿಯು ಸುವರ್ಣ ಭಾಂಡವನ್ನು ತಂದು, ಅದೇತಾನೆ ಮಲಗಿದ್ದ ಮೈತ್ರೇಯನನ್ನು ಕುರಿತು, "ಆರ್ಯ ಮೈತ್ರೇಯ, ಏಳು, ಏಳು" ಎನ್ನುವಳು. ನಿದ್ರೆಗೆಟ್ಟು ಒಡ ವೆಗಳನ್ನು ನೋಡಿಕೊಳ್ಳಲು ಇಷ್ಟವಿಲ್ಲದೆ, ಅವನು, "ಈ ಒಡವೆಗಳನ್ನು ಒಳಗಿನ ಚತುಶ್ಶಾಲೆಗೇಕೆ ನೀನು ತೆಗೆದುಕೊಂಡು ಹೋಗುವುದಿಲ್ಲ?" ಎಂದು ಕೇಳುವನು. ಚಾರುದತ್ತನ ಹೆಂಡತಿಯೇ ಅವುಗಳನ್ನು ನೋಡಿ ಕೊಳ್ಳಲೆಂಬುದು ಅವನ ಮಾತುಗಳ ಧ್ವನಿ. ದಾಕ್ಷಿಣ್ಯಬದ್ಧನಾದ ಚಾರು ದತ್ತನು, "ಮೂರ್ಖ! ಹೊರಗಿನ ಹೆಂಗಸಿನ ಆಭರಣಗಳನ್ನು ಗೃಹಿಣಿಯು ನೋಡಲಾರಳು" ಎಂದು ಹೇಳುವನು. ಕೊನೆಗೆ ವಿದೂ ಷಕನು ನಿರ್ವಾಹವಿಲ್ಲದೆ, "ಇನ್ನೇನು ಗತಿ! ಕಳ್ಳರು ಕದ್ದುಕೊಂಡು ಹೋಗುವ ಆ ಆಭರಣಗಳನ್ನು, ತಾ, ತೆಗೆದುಕೊಳ್ಳುವೆನು" ಎಂದು ಹೇಳುವನು. ಅವನ ಶಂಕೆಯು ಫಲಿಸುವುದು.

ಒಡವೆಗಳ ರಕ್ಷಣೆಯ ಭಾರವನ್ನು ಹೊತ್ತಿರುವ ವಿದೂಷಕನಿಗೆ ನಿದ್ರೆಬಾರದು. ಅವನು ಮಲಗಿರುವ ಚಾರುದತ್ತನನ್ನು ಕುರಿತು, "ಎಲೈ, ನೀನು ಎಚ್ಚರವಾಗಿರುವಿಯೇನು?" ಎಂದು ಕೂಗುವನು. ಚಾರುದತ್ತನು ಏಕೆಂದು ಕೇಳಿದಾಗ ಅವನು, "ಹೆಂಗಸಿನೊಡನೆ ಸಂಕೇತ ಮಾಡಿಕೊಂಡಿರುವ ಬೌದ್ಧಭಿಕ್ಷುವಿನಂತೆ ನನಗೆ ನಿದ್ರೆಯೇ ಬಾರದು. ಕಳ್ಳನು ಕನ್ನವನ್ನು ಕೊರೆಯುವಂತೆ ತೋರುತ್ತಿದೆ ಹಣವಿದ್ದರೆ ಈ ಅವಸ್ಥೆಯಾದಲ್ಲಿ ಮುಂದಿನ ಜನ್ಮಕ್ಕೆ ದರಿದ್ರನಾಗಿಯೇ ಹುಟ್ಟುತ್ತೇನೆ" ಎನ್ನುವುದನ್ನು ನೋಡಿ ನಗದವರಾರು? ಚಾರುದತ್ತನೂ, "ಅಯ್ಯೋ ಮೂರ್ಖ! ಮುಂದಿನ ಜನ್ಮಕ್ಕೆ ದಾರಿದ್ರ್ಯವನ್ನಪೇಕ್ಷಿಸುವಿಯಾ?" ಎನ್ನು ವನು. ವಿದೂಷಕನು ವಿನೋದಕ್ಕಾಗಿ ಹೀಗೆ ಹೇಳುವನೇ ಹೊರತು ಬೌದ್ಧರ ವಿಷಯದಲ್ಲಿ ತಿರಸ್ಕಾರಬುದ್ಧಿಯಿಂದ ಹಾಗೆ ಮಾಡುವುದಿಲ್ಲ. ಆದರೂ ಡಾಕ್ಟರ್ ವಿಂಟರ್ನಿಟ್ಸ್ ಅವರು, ಈ ಸಂದರ್ಭವನ್ನು ಕುರಿತು ಪ್ರಸ್ತಾವಿಸಿ, "ಚಾರುದತ್ತ ರೂಪಕ ಕರ್ತೃವು ಪೂರ್ವಾಚಾರ ಪ್ರಿಯ

ರಾದ ಬ್ರಾಹ್ಮಣರ ಪಕ್ಷಪಾತಿ. ತನಗೆ ಅವಕಾಶ ದೊರೆತ ಸಂದರ್ಭ ಗಳಲ್ಲೆಲ್ಲ, ಬೌದ್ಧ ಭಿಕ್ಷುಗಳನ್ನು ಅಪಹಾಸ್ಯಮಾಡಲು ಪ್ರಯತ್ನಿಸುವನು"* ಎಂದು ಅಭಿಪ್ರಾಯ ಪಟ್ಟಿದ್ದಾರೆ. ಅವರ ಅಭಿಪ್ರಾಯವು ಸಾಧುವಾಗಿಲ್ಲ. ವಿದೂಷಕನ ಹಾಸ್ಯ ವಚನಗಳನ್ನು ಕವಿಯು ಬೋಧಿಸುವ ಪರಮಾರ್ಥ ವೆಂದು ಭಾವಿಸಿ ಅರ್ಥಮಾಡುವುದು ತಪ್ಪು. ವಾದಕ್ಕಾಗಿ ಆ ಅಭಿಪ್ರಾಯವು ನಿಜವೆಂದುಕೊಳ್ಳೋಣ. ಬೌದ್ಧರನ್ನು ಅಪಹಾಸ್ಯ ಮಾಡಿ ಬ್ರಾಹ್ಮಣ ಪಕ್ಷಪಾತವನ್ನು ತೋರಿಸುವ ಅದೇ ಕವಿಯೇ ಸಜ್ಜಲಕನಿಂದ, "ಇದು ಹಗಲು ಹೊತ್ತು ಜನಿವಾರ. ರಾತ್ರಿಯವೇಳೆ ಕರ್ಮಸೂತ್ರ" ಎಂದು ಹೇಳಿಸಿದ್ದಾನೆ. ಆದಮಾತ್ರವೇ ಕವಿಯು ಬ್ರಾಹ್ಮಣರನ್ನು ಅಪಹಾಸ್ಯ ಮಾಡಲು ಪ್ರಯತ್ನಿಸಿದ್ದಾನೆಂದು ಹೇಳಬಹುದೆ ? ಅವಿಮಾರಕವೆಂಬ ರೂಪಕದಲ್ಲಿ, ವಿದೂಷಕನಿಂದ, "ಜನಿವಾರವಿದ್ದರೆ ತೀರಿತು. ಬ್ರಾಹ್ಮಣ" ಎಂದೂ, "ಬಟ್ಟೆಯನ್ನು ತೆಗೆದರೆ (ಜೈನ) ಶ್ರಮಣನಾಗುತ್ತೇನೆ" ಎಂದೂ ಹೇಳಿಸಿದ್ದಾನೆ ಇದರಿಂದ ಬ್ರಾಹ್ಮಣರಲ್ಲೂ ಜೈನರಲ್ಲೂ ಕವಿಗೆ ದ್ವೇಷ ವೆನ್ನಬಹುದೆ ? ಬ್ರಾಹ್ಮಣರನ್ನೂ ಬೌದ್ಧರನ್ನೂ ಜೈನರನ್ನೂ ವಿದೂಷ ಕನಿಂದ ಅಪಹಾಸ್ಯ ಮಾಡಿಸುವವನನ್ನು ಬ್ರಾಹ್ಮಣ ಪಕ್ಷಪಾತಿಯೆಂದು ಕರೆಯುವ ಬಗೆಹೇಗೆ ? (ಅವಿಮಾರಕದ ವಿಮರ್ಶೆಯನ್ನೂ ನೋಡಿ)

ಸಜ್ಜಲಕನು ಕನ್ನವನ್ನು ಕೊರೆದು ಪ್ರವೇಶಿಸಿ ಮನೆಯಲ್ಲೆಲ್ಲಾ ಹುಡುಕಿ ಬೆಲೆಬಾಳತಕ್ಕುದೇನನ್ನೂ ಕಾಣದೆ ಮನೆಯು ದೊಡ್ಡದಾಗಿದ್ದು ದರಿಂದ ಲಾಭವಾದೀತೆಂದು ಬಗೆದು ಮೋಸಹೋದುದಾಗಿ ಹೇಳಿಕೊಳ್ಳು ವನು. ವಿದೂಷಕನು ಅರನಿದ್ರೆಯಲ್ಲಿ ಕನವರಿಸುತ್ತ, "ಎಲೈ! ಈ ಸುವರ್ಣಭಾಂಡವನ್ನು ತೆಗೆದುಕೊ" ಎನ್ನುವನು. ಸಜ್ಜಲಕನು ದೀಪ ವನ್ನಾರಿಸಲು ದುಂಬಿಯೊಂದನ್ನು ತನ್ನಲ್ಲಿದ್ದ ಭ್ರಮರ ಕರಂಡಕದಿಂದ ಬಿಡುವನು. ಅದು ದೀಪವನ್ನಾರಿಸುವುದು. ಮೈತ್ರೇಯನಿಗೆ ತಟಕ್ಕನೆ ಎಚ್ಚರವಾಗುವುದು. ಅವನು, "ಅಯ್ಯೋ, ಅಯ್ಯೋ, ದೀಪವು ಆರಿ

* "The author of the *Charudatta* is a champion of orthodox Brahmanism and tries to ridicule Buddhist monks whenever he finds an opportunity"—Dr. Winternitz.

ಹೋಗಿದೆ! ಕಳ್ಳತನಕ್ಕೆ ಗುರಿಯಾಗುತ್ತೇನೆ. ಎಲೈ ಚಾರುದತ್ತ, ಈ ಸುವರ್ಣಾಭರಣಗಳನ್ನು ತೆಗೆದುಕೊ. ಸುರಕ್ಷಿತ ಮಾರ್ಗದಿಂದ ದೂರ ಸಾಗಿದ ವರ್ತಕನಂತಿರುವ ನನಗಾದರೋ ಭಯದಿಂದ ನಿದ್ರೆಬಾರದು. ನೀನು ಇದನ್ನು ತೆಗೆದುಕೊಳ್ಳದೆಹೋದರೆ ನನ್ನ ಬ್ರಾಹ್ಮಣ್ಯದಿಂದ ಶಪಿಸುತ್ತೇನೆ" ಎಂದು ಕೂಗಿಕೊಳ್ಳುವನು. ಸಜ್ಜಲಕನು ಸದ್ದಿಲ್ಲದೆ ಅದನ್ನು ಸ್ವೀಕರಿಸುವನು. ವಿದೂಷಕನು, "ತನ್ನ ವಸ್ತುಗಳನ್ನು ಮಾರಾಟ ಮಾಡಿದ ವರ್ತಕನಂತೆ ಇನ್ನು ಸುಖವಾಗಿ ನಿದ್ರಿಸುವೆನು" ಎಂದುಕೊಂಡು ನಿದ್ರಿಸುವನು. ಸಜ್ಜಲಕನು ಒಡವೆಗಳೊಡನೆ ಹೊರಟು ಹೋಗುವನು.

ಬೆಳಗಾದ ಬಳಿಕ ರದನಿಕೆಯು ಮೈತ್ರೇಯನನ್ನು ಕೂಗಿ, "ಕನ್ನವನ್ನು ಕೊರೆದು ಕಳ್ಳನ ಪ್ರವೇಶ" ಎಂದು ಹೇಳಿ ಎಬ್ಬಿಸುವಳು. ವಿದೂಷಕನು ಎದ್ದು, "ನೀನು ಹೇಳಿದುದೇನು?" ಎಂದು ಕೇಳುವನು. ಅವಳು ಮತ್ತೆ, "ಕನ್ನವನ್ನು ಕೊರೆದು ಕಳ್ಳನ ಪ್ರವೇಶ" ಎಂದರೆ, ಅವನು, "ಕಳ್ಳನನ್ನು ಕೊರೆದು ಕನ್ನನ ಪ್ರವೇಶ," ಎನ್ನುವನು. ಅವಳು, "ಹತಾಶನೆ! ಕನ್ನವನ್ನು ಕೊರೆದು ಕಳ್ಳನ ಪ್ರವೇಶ" ಎನ್ನುವಳು. ವಿದೂಷಕನು, "ಅದನ್ನು ತೋರಿಸು, ಬಾ" ಎಂದು ಅವಳೊಡನೆ ಹೋಗಿ ನೋಡಿ, "ದಾಸೀಪುತ್ರನಾದ ಆ ನಾಯಿ ಇಲ್ಲಿಂದ ಒಳಕ್ಕೆ ಬಂದಿದ್ದನಲ್ಲವೆ? ಪೂಜ್ಯಳೆ, ಬಾ. ಚಾರುದತ್ತನಿಗೆ ಪ್ರಿಯವನ್ನರುಹುವೆನು" ಎನ್ನುವನು. ಒಡವೆಗಳನ್ನು ಚಾರುದತ್ತನ ವಶಕ್ಕೆ ತಾನು ಒಪ್ಪಿಸಿದ್ದುದಾಗಿಯೇ ಅವನ ನಂಬಿಕೆ. ಕನ್ನವನ್ನು ಕೊರೆದು ಪ್ರವೇಶಿಸಿದ ಕಳ್ಳನಿಗೆ ಅದು ದೊರೆಯದೆ ಚಾರುದತ್ತನ ಬಳಿಯಲ್ಲಿದ್ದಿತೆಂದೇ ಅವನಿಗೆ ಸಂತೋಷ. ತಾನು ಅದನ್ನು ತನ್ನ ಮಿತ್ರನ ವಶಕ್ಕೊಪ್ಪಿಸಿದ ತನ್ನ ಮೇಧಾಶಕ್ತಿಯನ್ನು ಕಂಡು ಅವನಿಗೆ ಹೆಮ್ಮೆ. ಆದುದರಿಂದಲೇ ಅವನು ಚೇಟಿಯಾದ ರದನಿಕೆಯೊಡನೆ ಚಾರುದತ್ತನು ನಿದ್ರಿಸುತ್ತಿದ್ದ ಬಳಿಗೆ ಬಂದು, "ಎಲೈ ಚಾರುದತ್ತ! ನಿನಗೆ ಪ್ರಿಯವನ್ನರುಹುವೆನು" ಎಂದು ಅಟ್ಟಹಾಸದಿಂದ ಕೂಗಿ ಹೇಳುವನು. ಚಾರುದತ್ತನ ಮನಸ್ಸು

ವಸಂತಸೇನೆಯಲ್ಲಿ ನೆಲಸಿರುವುದು. ಅವನು ನಿದ್ರೆಯಿಂದೆಚ್ಚೆತ್ತು, "ಏನು, ನನಗೆ ಪ್ರಿಯವಾದುದನ್ನೆ? ವಸಂತಸೇನೆಯು ಬಂದಿದ್ದಾಳೆಯೆ?" ಎಂದು ಕೇಳುವನು. ಮೈತ್ರೇಯನು, "ವಸಂತಸೇನೆಯಲ್ಲ. ವಸಂತಸೇನನು ಬಂದಿದ್ದಾನೆ" ಎನ್ನುವನು. ರೂಪಕವನ್ನೋದುವಾಗಲೇ ಆ ಮಾತುಗಳಿಂದ ನಗು ಬರುವುದು. ಇನ್ನು ರಂಗಸ್ಥಳದಲ್ಲಿ ರೂಪಕವನ್ನು ಪ್ರದರ್ಶಿಸಿದಾಗ ಕೇಳಬೇಕಾದುದೇನು?

ಚಾರುದತ್ತನಿಗೆ ಮೈತ್ರೇಯನ ಮಾತುಗಳು ಅರ್ಥವಾಗುವ ಹಾಗಿಲ್ಲ. ಅವನು ರದನಿಕೆಯನ್ನು ಅದೇನೆಂದು ಕೇಳಿದಾಗ ಅವಳು ವೃಕ್ಷವಾಟಿಕೆಯ ಪಾರ್ಶ್ವದ್ವಾರದ ಬಳಿಯಲ್ಲಿ ಕನ್ನವನ್ನು ಕೊರೆದು ಕಳ್ಳನು ಪ್ರವೇಶಿಸಿದನೆಂದು ಹೇಳುವಳು. ಚಾರುದತ್ತನು, "ಏನು, ಕಳ್ಳನು ಬಂದಿದ್ದನೆ?" ಎಂದು ಕೇಳುವನು. ಆಗ ಮೈತ್ರೇಯನು ಪ್ರೌಢಿಮೆಯ ಅಟ್ಟಹಾಸದಿಂದ, "ಎಲೈ ಮಿತ್ರನೆ! 'ಮೈತ್ರೇಯನು ಮೂರ್ಖ, ಮೈತ್ರೇಯನು ದಡ್ಡ' ಎಂದು ನೀನು ಹೇಳುತ್ತಲೇ ಇರುತ್ತೀಯೆ. ನಾನು ಆ ಸುವರ್ಣಭಾಂಡವನ್ನು ನಿನ್ನ ಕೈಯಲ್ಲಿ ಕೊಟ್ಟು ಉತ್ತಮವಾದ ಕಾರ್ಯವನ್ನು ಮಾಡಲಿಲ್ಲವೆ?" ಎಂದು ಕೇಳುವನು. ಆ ಬಳಿಕ ಅವರೀರ್ವರಿಗೂ ಪ್ರಶ್ನೋತ್ತರಗಳು ನಡೆದು ನಿಜಸ್ಥಿತಿಯು ಹೊರಬೀಳುವುದು. ಆಭರಣಗಳು ಕಳವಾದುವೆಂಬ ನಿಜವಾದ ಸಂಗತಿಯನ್ನೇ ಹೇಳಿದರೂ ದರಿದ್ರನಾದ ತನ್ನನ್ನು ನಂಬದೆ ಜನರು ದೋಷವೆಣಿಸುವರೆಂದು ಚಾರುದತ್ತನು ಸಂಕಟಪಡುವನು. ಅಷ್ಟರಲ್ಲಿ ಚಾರುದತ್ತನ ಹೆಂಡತಿಯು ಕಳ್ಳತನದ ವೃತ್ತಾಂತವನ್ನು ತಿಳಿದು ರದನಿಕೆಯನ್ನು ಕುರಿತು, "ಆರ್ಯಪುತ್ರನೂ ಮೈತ್ರೇಯನೂ ಗಾಯಹೊಂದದೆ ಕ್ಷೇಮವಾಗಿದ್ದಾರೆಯೆ?" ಎಂದು ಕೇಳುವಳು. ಅವರೀರ್ವರೂ ಕ್ಷೇಮವಾಗಿದ್ದಾರೆಂದೂ, ಆದರೆ ವಸಂತಸೇನೆಯ ಒಡವೆಗಳು ಹೋದುವೆಂದೂ ರದನಿಕೆಯು ತಿಳಿಸುವಳು. ರತ್ನಹಾರಗಳನ್ನು ತೆಗೆದು ಕೊಟ್ಟು ಕೊಟ್ಟು ಬ್ರಾಹ್ಮಣಿಗೆ ಅಭ್ಯಾಸ. ಹಿಂದಿನ ಆ ಅಭ್ಯಾಸದ ಪ್ರಭಾವದಿಂದ, "ಆಗಲಿ, ಇದನ್ನು ಕೊಡುವೆನು" ಎಂದುಕೊಂಡು ಕೊರಳಿನಿಂದ ತೆಗೆಯಹೋಗಿ ತನ್ನ ಮಾಂಗಲ್ಯವನ್ನು

ಕಟ್ಟಿರುವ ಸರವನ್ನು ಹಿಡಿದುಕೊಳ್ಳುವಳು. ಅದೊಂದೇ ಕೊರಳಿನಲ್ಲಿರುವುದನ್ನು ಕಂಡು, "ಅಯ್ಯೋ! ಹಿಂದಿನ ಅಭ್ಯಾಸ, ಈಗಿನ ವಿಡಂಬಕ್ಕೆ ಕಾರಣ. ಈಗ ಏನನ್ನು ತಾನೆ ಮಾಡಲಿ" ಎಂದುಕೊಳ್ಳುವಳು. ಕಲಾದೃಷ್ಟಿಯಿಂದ ಇದು ಮನೋಹರವಾಗಿದೆ. ಕರ್ಣಪೂರನು ಸಾಹಸದಿಂದ ಸಂನ್ಯಾಸಿಯನ್ನುಳಿಸಿದಾಗ ಚಾರುದತ್ತನು ತಟಕ್ಕನೆ ಆಭರಣಸ್ಥಾನವನ್ನು ಮುಟ್ಟಿಕೊಂಡುದೂ ಇದೇ ರೀತಿ ಕಲಾದೃಷ್ಟಿಯಿಂದ ರಮ್ಯವಾಗಿದೆ. ಬಹುಕಾಲದ ಅಭ್ಯಾಸ ಬಲದಿಂದ ಹೀಗೆ ನಡೆಯುವುದು ಅಸಂಭವವೇನೂ ಅಲ್ಲ. ಸಾಧ್ವಿಯಾದ ಬ್ರಾಹ್ಮಣಿಯು ಕೊನೆಗೆ ಯೋಚಿಸಿ, ತನ್ನ ತಂದೆಯ ಮನೆಯವರು ಕೊಟ್ಟಿದ್ದ ಮುತ್ತಿನ ಹಾರವನ್ನು ತನ್ನ ಪತಿಯ ಮಾನವನ್ನುಳಿಸುವುದಕ್ಕಾಗಿ ಕೊಡಲು ನಿಶ್ಚಯಿಸುವಳು. ಚಾರುದತ್ತನ ಕೈಗೆ ತಾನು ಒಡವೆಗಳನ್ನು ಕೊಟ್ಟಿದ್ದರೂ ಅವನು ವಿನೋದಾರ್ಥವಾಗಿ ಇಲ್ಲವೆಂದು ಹೇಳುತ್ತಿರುವನೆಂದೇ ಭಾವಿಸಿ ಮೈತ್ರೇಯನು ಅವುಗಳನ್ನು ತನಗೆ ಕೊಡುವಂತೆ ಕೇಳುವನು. ಬೇಸರಹೊಂದಿದ ಚಾರುದತ್ತನು, "ನೀನೇಕೆ ನನ್ನನ್ನೀಗ ಬಾಧಿಸುವೆ? ನನ್ನ ಸ್ವಭಾವವನ್ನು ಅನುದಿನವೂ ಅರಿತಿರುವ ನೀನೇ ನನ್ನನ್ನು ನಂಬುವುದಿಲ್ಲ. ಇನ್ನು ವಂಚನೆಯಲ್ಲಿ ಪಾಂಡಿತ್ಯವುಳ್ಳ ಕಲಾಜೀವಿಯಾದ ಆಕೆಯು ನನ್ನನ್ನು ನಂಬುವಳೆ?" * ಎನ್ನುವನು. ಮೈತ್ರೇಯನು ತಾನು ಒಡವೆಗಳನ್ನು ಕಳ್ಳನ ಕೈಗೆ ಕೊಟ್ಟಿರಬೇಕೆಂದು ಆಗ ನಂಬಿ ಸಂಕಟಪಡುವನು.

ಅವಳು ವಿದೂಷಕನನ್ನು ಕರೆಯಿಸಿ ಷಷ್ಠಿಯ ಉಪವಾಸಕ್ಕಾಗಿ ಮುತ್ತಿನ ಹಾರವನ್ನು ದಾನ ಮಾಡುವುದಾಗಿ ಹೇಳುವಳು. ಷಷ್ಠಿಯ ದಿನವೇ ಕೊಡುವುದು ಮರೆತುಹೋಯಿತೆಂದು ಹೇಳುವಳು. ಆದರೂ ಮೈತ್ರೇಯನ ಮನಸ್ಸಿನ ಅಚ್ಚರಿಯು ಮರೆಯಾಗದು. ದಾನದ ನಿಜ

---

* "ಕಿಂ ಭವಾನಿದಾನೀಂ ಮಾಂ ಬಾಧಸೇ ।
ಭವಾಂಸ್ತಾವದವಿಶ್ವಾಸೀ ಶೀಲಜ್ಞೋ ಮಮ ನಿತ್ಯಶಃ ।
ಕಿಂ ಪುನಸ್ಸಕಲಾಜೀವೀ ವಂಚನಾಪಂಡಿತೋ ಜನಃ ॥"

ವಾದ ಕಾರಣವನ್ನು ರದನಿಕೆಯು ಅವನ ಕಿವಿಯಲ್ಲಿ ಉಸಿರುವಳು. ಬ್ರಾಹ್ಮಣಿಯು ಮುತ್ತಿನ ಹಾರವನ್ನು ಅವನ ಕೈಗೆ ಕೊಟ್ಟಮೇಲೆ ಕಂಬನಿ ಬಿಡುವಳು. ಕವಿಯ ಸಂವಿಧಾನ ಕೌಶಲಕ್ಕೆ ಈ ಸನ್ನಿವೇಶವೂ ಉತ್ತಮ ನಿದರ್ಶನ. ಚಾರುದತ್ತನು ವಸಂತಸೇನೆಯಲ್ಲಿ ಅನುರಕ್ತ ನಾಗಿರುವನೆಂಬ ಸಂಶಯವು ಹೃದಯವನ್ನು ಹಿಂಡುತ್ತಿರುವುದೊಂದು, ತವರುಮನೆಯವರು ಪ್ರೀತಿಯಿಂದ ಕೊಟ್ಟಿದ್ದ ಅನರ್ಘ್ಯವಾದ ಮುತ್ತಿನ ಹಾರವನ್ನು ಒಪ್ಪಿಸಬೇಕಾಗಿರುವುದೊಂದು, ಬಡತನದ ವಿಪನ್ನಾವಸ್ಥೆಯು ಮನಸ್ಸನ್ನು ಕೊರೆಯುತ್ತಿರುವುದೊಂದು—ಈ ಮೂರು ಕಾರಣಗಳಿಂದ ಅವಳು ಕಂಬನಿದುಂಬಿರಬೇಕು. ಹೃದಯವನ್ನೇ ಕಾಣಿಕೆಯಾಗಿ ಸಮರ್ಪಿಸಿರುವ ಸಹಧರ್ಮಿಣಿಯಾದ ಪ್ರಾಣಕಾಂತೆಯು ಮನೆಯಲ್ಲಿದ್ದೂ ವೇಶ್ಯೆಯಲ್ಲಿ ಅನುರಕ್ತರಾಗುವ ಪುರುಷರ ಅಪರಾಧವನ್ನು ನೂರಾರು ಮಾತುಗಳಲ್ಲಿ ವರ್ಣಿಸಿದರೂ ಸಾಧ್ಯವಾಗದಷ್ಟನ್ನು ಬ್ರಾಹ್ಮಣಿಯು ಕಂಬನಿ ದುಂಬಿದಳೆಂಬ ಅಂಶವೊಂದರಿಂದ ಕವಿಯು ಸೂಚಿಸಿದ್ದಾನೆಂದು ತೋರು ವುದು. ಮೈತ್ರೇಯನು, "ಅದೆಲ್ಲಾ ಹಾಗಿರಲಿ, ನಿನ್ನ ಕಣ್ಣುಗಳನ್ನು ನೋಡಿದರೆ ಅಳುತ್ತಿರುವಂತಿದೆ" ಎಂದಾಗ ಬ್ರಾಹ್ಮಣಿಯು, "ದೇವಾ ಲಯದ ಹೊಗೆಯಿಂದ ನನ್ನ ಕಣ್ಣುಗಳಲ್ಲಿ ನೀರು ತುಂಬಿದೆ" ಎಂದು ಉತ್ತರ ಹೇಳುವಳು. ತನ್ನ ಸಂಕಟವನ್ನು ಇತರರಲ್ಲಿ ಹೇಳಿಕೊಳ್ಳ ಲಾರದಷ್ಟು ಆತ್ಮಗೌರವದಿಂದ ಕೂಡಿರುವ ಅವಳ ಮೂಕ ಸಂಕಟದ ಮನದಳಲನ್ನು ಕಂಡು ಮರುಗದಿರಲಾರಿಗೆ ಸಾಧ್ಯ? ತನ್ನ ಪತ್ನಿಯು ತನ್ನಲ್ಲಿ ಅನುಕಂಪದಿಂದ ಮುತ್ತಿನ ಹಾರವನ್ನು ಕೊಟ್ಟುದನ್ನು ಕೇಳಿ ಚಾರುದತ್ತನು ಬಹಳ ಸಂಕಟಪಡುವನು. ಕೊನೆಗೆ ಅದನ್ನು ವಸಂತ ಸೇನೆಗೆ ಕೊಟ್ಟುಬರುವಂತೆ ವಿದೂಷಕನೊಡನೆ ಹೇಳುವನು. ಸ್ವಲ್ಪ ಬೆಲೆಬಾಳುವ ಆಭರಣಗಳಿಗೆ ಪ್ರತಿಯಾಗಿ ಒಂದು ಲಕ್ಷ ಸುವರ್ಣ ನಾಣ್ಯ ಗಳು ಬೆಲೆಬಾಳುವ ಆ ಮುತ್ತಿನ ಹಾರವನ್ನು ಕೊಡುವುದು ಹೇಗೆಂ ಬುದು ವಿದೂಷಕನ ಪ್ರಶ್ನೆ. ಅದಕ್ಕೆ ಚಾರುದತ್ತನು ಹೇಳುವ, "ಮಿತ್ರ! ಹಾಗೆನ್ನಬೇಡ. ಯಾವ ನಂಬಿಕೆಯಿಂದ ಕೂಡಿ ಅವಳು ನಮ್ಮಲ್ಲಿ ನ್ಯಾಸವನ್ನಿಟ್ಟಳೋ ಆ ನಂಬಿಕೆಯ ಹೆಚ್ಚಿನ ಮೂಲ್ಯವಾಗಿ ಇದನ್ನು

ಕೊಡು ” * ಎಂಬ ಉತ್ತರವು ಅವನೆಷ್ಟು ಸಂಸ್ಕೃತನೆಂಬುದನ್ನು ಹೃದಯಂಗಮವಾಗಿ ಸೂಚಿಸುತ್ತದೆ.

ನಾಲ್ಕನೆಯ ಅಂಕದಲ್ಲಿ ಚಾರುದತ್ತನ ಅನುರಾಗದಿಂದ ಉತ್ಕಂಠೆಯಾದ ವಸಂತಸೇನೆಯು ಅವನ ಚಿತ್ರವನ್ನು ಬರೆಯುತ್ತ ತನ್ನ ಮನೆಯಲ್ಲಿರುವಳು. ಮದನಿಕೆಯೆಂಬ ಚೇಟಿಯು ಅವಳ ಬಳಿಯಲ್ಲಿರುವಳು. ಮದನಿಕೆಯು ಅವಳ ದಾಸಿಯಾದರೂ, ಅವಳು ಪ್ರಿಯ ಸಖಿಯಂತೆ ಆದರಿಸಿ, ಪ್ರೀತಿಸಿ ಸರಸವಾಗಿ ಮಾತನಾಡುವಳು. ಅಷ್ಟರಲ್ಲಿ ಮತ್ತೊಬ್ಬ ಚೇಟಿಯು ಆಭರಣಗಳೊಡನೆ ಬಂದು ವಸಂತಸೇನೆಯ ತಾಯಿಯು, “ ಬಂಡಿಯು ಬಂದು ನಿಂತಿದೆ. ಬೇಗ ಈ ಆಭರಣಗಳಿಂದ ಅಲಂಕೃತೆಯಾಗಿ ಅವಗುಂಠನವನ್ನು ಧರಿಸಿ ಬರಬೇಕು ” ಎಂದು ಹೇಳಿಕಳುಹಿಸಿದಳೆಂದು ತಿಳಿಸುವಳು. ವಸಂತಸೇನೆಯು, “ ಏನು, ಆರ್ಯ ಚಾರುದತ್ತನು ಇಲ್ಲಿಗೆ ಬರುವನೆ ? ” ಎಂದು ಕೇಳುವಳು. ಅವಳು ಚಾರುದತ್ತಮಯ ಜೀವಿತೆಯಾಗಿರುವಳೆಂಬುದು ಇದರಿಂದ ಗೊತ್ತಾಗುವುದು. “ ರಾಜಶ್ಯಾಲ ” ನಾದ ಶಕಾರನು ಒಡವೆಗಳನ್ನೂ ಬಂಡಿಯನ್ನೂ ಕಳುಹಿಸಿರುವನೆಂದು ಕೇಳಿ ಅವಳು ಕೋಪದಿಂದ ಕಿಡಿಕಿಡಿಯಾಗುವಳು. ಚೇಟಿಯನ್ನು ಕುರಿತು, “ ತೊಲಗು, ಅವನೀತೆ ” ಎಂದು ಗರ್ಜಿಸುವಳು.

ಚೇಟಿಯು ನಡುಗಿ, “ ಒಡತಿಯು ಪ್ರಸನ್ನೆಯಾಗಬೇಕು, ಪ್ರಸನ್ನೆಯಾಗಬೇಕು. ನಾನು ಸಂದೇಶವನ್ನು ಮಾತ್ರ ತಿಳಿಸಿದೆ ” ಎಂದು ಹೇಳಿ ವಸಂತಸೇನೆಯ ಕಾಲುಗಳಿಗೆರಗುವಳು. ಉತ್ತಮರ ಕೋಪವು ಕ್ಷಣಕಾಲಮಾತ್ರವೇ. ವಸಂತಸೇನೆಯು, “ ಮೇಲಕ್ಕೇಳು, ಮೇಲಕ್ಕೇಳು. ಕೆಟ್ಟಸಂದೇಶದಿಂದ ಅಸಮಾಧಾನವಾಯಿತು. ನಿನ್ನ ಮೇಲಲ್ಲ ” ಎಂದು ಹೇಳುವುದು ಮನೋಹರವಾಗಿದೆ. ಚಾರುದತ್ತನು ಬಂದರೆ ತಾನು

---

* “ ವಯಸ್ಯ ! ಮಾ ಮೈವಮ್ ।
ಯಂ ಸಮಾಲಕ್ಷ್ಯ ವಿಶ್ವಾಸಂ ನ್ಯಾಸೋऽಸ್ಮಾಸು ಕೃತಸ್ತಯಾ ।
ತಸ್ಯೈತನ್ಮಹತೋ ಮೂಲ್ಯಂ ಪ್ರತ್ಯಯಸ್ಯ ಪ್ರದೀಯತಾಮ್ ॥ ”

ಅಲಂಕಾರ ಮಾಡಿಕೊಳ್ಳುವುದಾಗಿ ತನ್ನ ತಾಯಿಗೆ ತಿಳಿಸಬೇಕೆಂದು ಹೇಳಿ ಅವಳನ್ನು ಕಳುಹಿಸಿ, ಅವಳು ಚಿತ್ರಲೇಖನದಲ್ಲಿ ಮಗ್ನಳಾಗುವಳು.

ಅಷ್ಟರಲ್ಲಿ ತನ್ನ ಪ್ರಿಯನಾದ ಸಜ್ಜಲಕನು ಬಂದುದನ್ನು ಕಂಡು ಮದನಿಕೆಯು ಅವನ ಬಳಿಗೆ ಹೋಗುವಳು. ದಾಸಿಯಾದ ಮದನಿಕೆಯ ಬಿಡುಗಡೆಯ ಮೂಲ್ಯವಾಗಿ ವಸಂತಸೇನೆಗೆ ಕೊಡುವುದಕ್ಕಾಗಿ ಅವನು ಆಭರಣಗಳನ್ನು ಕದ್ದು ತಂದಿರುವನು. ಅವರೀರ್ವರೂ ಮಾತನಾಡು ತ್ತಿದ್ದುದನ್ನು ಕಂಡ ವಸಂತಸೇನೆಯು ಮೊದಲು ಹೊಂಚುಕೇಳದೆ ಹೊರಟುಹೋಗಲು ನಿರ್ಧರಿಸುವಳು. ಆದರೆ ಅಷ್ಟರಲ್ಲಿ ಅವರು ತನ್ನ ವಿಷಯವನ್ನು ಮಾತನಾಡುತ್ತಿದ್ದುದನ್ನು ಕಂಡು ಮರೆಯಲ್ಲಿ ನಿಲ್ಲುವಳು. ಸಜ್ಜಲಕನು ತಂದಿದ್ದ ಆಭರಣಗಳು ತನ್ನ ಒಡತಿಯವುಗಳೆಂಬುದನ್ನು ಕಂಡು ಸಂಶಯಪಟ್ಟು ಮದನಿಕೆಯು ಅವನಿಂದ ನಿಜವನ್ನು ಹೊರಡಿಸಿ, ಅವನ ಘಾತಕಕೃತ್ಯಕ್ಕಾಗಿ ಕಂಪಿಸುವಳು. ಅವನು ಚಾರುದತ್ತನನ್ನಾಗಲಿ ಮತ್ತಾರನ್ನಾಗಲಿ ಹಿಂಸೆಪಡಿಸಿಲ್ಲವೆಂಬುದನ್ನು ತಿಳಿದು ಕೊಂಚ ಸಮಾಧಾನ ಪಟ್ಟುಕೊಳ್ಳುವಳು. ಅದರಿಂದ ವಸಂತಸೇನೆಗೂ ಹರ್ಷವಾಗುವುದು. ಆಭರಣಗಳನ್ನು ಚಾರುದತ್ತನಿಗೆ ಕೊಡಬೇಕೆಂದು ಮದನಿಕೆಯು ತಿಳಿಸು ವಳು ತಾನು ಕಳ್ಳನೆಂದು ಅವನು ರಾಜನ ಕಡೆಯ ರಕ್ಷಿ ಪುರುಷರಿಗೆ ಹಿಡಿದು ಕೊಟ್ಟರೆ ಗತಿಯೇನೆಂದು ಸಜ್ಜಲಕನು ಕೇಳುವನು. ಹೆದರಕೆಲಸವಿಲ್ಲ ವೆಂದೂ, ನಿಜವನ್ನುಹೇಳಿದರೆ ಕುಲೀನನಾದ ಚಾರುದತ್ತನು ಗುಣವನ್ನಭಿ ನಂದಿಸುವನೆಂದೂ ಅವಳು ಉತ್ತರ ಹೇಳುವಳು. ಅದನ್ನುಕೇಳಿ ಸಹೃದಯ ಳಾದ ವಸಂತಸೇನೆಯು ಆನಂದಿಸುವಳು. ಕೊನೆಗೆ ಚಾರುದತ್ತನೇ ನ್ಯಾಸ ರಕ್ಷಣೆ ಮಾಡಲಾರದೆ ಆಭರಣಗಳನ್ನು ಕಳುಹಿಸಿದನೆಂದು ಸೂಚಿಸಿ ಅವುಗ ಳನ್ನು ವಸಂತಸೇನೆಗೆ ಅವನು ಒಪ್ಪಿಸಬೇಕೆಂದು ಸಜ್ಜಲಕನಿಗೆ ಮದ ನಿಕೆಯು ತಿಳಿಸುವಳು.

ವಿದೂಷಕನು (ಮೈತ್ರೇಯನು) ಪ್ರವೇಶಿಸಿ ವಸಂತಸೇನೆಯ ಭವನ ವನ್ನು ವರ್ಣಿಸಿ, ಅವಳ ಸ್ವಾಗತವನ್ನು ಸ್ವೀಕರಿಸಿ, ಅವಳ ಒಡವೆಗಳ ಬೆಲೆಯೆಷ್ಟೆಂದು ಕೇಳಿ, ಚಾರುದತ್ತನು ತನ್ನಲ್ಲಿ ನ್ಯಾಸವಾಗಿದ್ದ ಆಭರಣ

ಗಳನ್ನು ದ್ಯೂತದಲ್ಲಿ ಸೋತು ಅವಕ್ಕೆ ಪ್ರತಿಯಾಗಿ ಮುತ್ತಿನಹಾರವನ್ನು ಕಳುಹಿಸಿದ್ದುದಾಗಿ ತಿಳಿಸುವನು. ಅವಳು ತನ್ನ ಆಭರಣಗಳಿಗಿಂತ ಅದು ಅತ್ಯಂತ ಹೆಚ್ಚಾಗಿ ಬೆಲೆಬಾಳುತ್ತಿದ್ದುದನ್ನು ಕಂಡು ತನ್ನಲ್ಲಿ ತಾನು, "ಸೂಳೆಯ ಬಾಳು ಹಾಳಾಗಲಿ. ನಾನು ದುರಾಸೆಯಿಂದ ಕೂಡಿದ ಲುಬ್ಧಳೆಂದು ಭಾವಿಸಿದ್ದಾನೆ. ಸ್ವೀಕರಿಸದಿರುವುದೂ ದೋಷವೆ" ಎಂದು ಹೇಳಿಕೊಂಡು ಅನಂತರ ಮೈತ್ರೇಯನೊಡನೆ, "ಆರ್ಯ, ಇಲ್ಲಿ, ತಾ" ಎಂದು ಹೇಳಿ ಅದನ್ನು ಸ್ವೀಕರಿಸುವಳು. ಉಪಚಾರಕ್ಕಾದರೂ ಅವಳು ಅದನ್ನು ಬೇಡವೆನ್ನಲಿಲ್ಲವೆಂದು ತನ್ನಲ್ಲಿ ತಾನು ಹೇಳಿಕೊಂಡು ಮೈತ್ರೇಯನು ಹೊರಟುಹೋಗುವನು. ಅವಳು, "ಸಾಧು ಚಾರುದತ್ತ, ಸಾಧು; ಬಡತನದ ಅವಸ್ಥೆಯಲ್ಲಿ ಸಹ ಮಾನವನ್ನುಳಿಸಿಕೊಂಡೆ" ಎಂದು ಕೊಂಡಾಡುವಳು. ಅನಂತರ ಸಜ್ಜಲಕನು ಬಂದು, ಚಾರುದತ್ತನು ಆಭರಣಗಳನ್ನು ಕಳುಹಿಸಿದನೆಂದು ಹೇಳಿದಾಗ ವಸಂತಸೇನೆಯು ಅವನ ಕಳುವಿನ ವಿಚಾರವನ್ನು ತಿಳಿಸಿ ಅವನು ಭೀತನಾಗುವಂತೆ ಮಾಡುವಳು. ಒಡನೆಯೆ, ಅದೇ ಆಭರಣಗಳಿಂದ ಮದನಿಕೆಯನ್ನಲಂಕರಿಸಿ, ಬಂಡಿಯನ್ನು ತರಿಸಿ ಅವರೀರ್ವರನ್ನೂ ಕಳುಹಿಸುವಳು. ಅವಳ ಔದಾರ್ಯವನ್ನು ಹೊಗಳಲು ಹತ್ತು ಬಾಯಿಗಳಾದರೂ ಸಾಲದು. ಮದನಿಕೆಯು ತನ್ನ ಪ್ರಿಯನೊಡನೆ ಹೊರಟುಹೋದ ಮೇಲೆ ಚತುರಿಕೆಯೆಂಬ ಚೇಟಿಯನ್ನು ಕರೆದು, "ನೋಡು, ಜಾಗ್ರತ್ತಿನಲ್ಲೇ ನಾನು ಸ್ವಪ್ನವನ್ನು ಕಂಡೆ. ಹೀಗೆ" ಎನ್ನುವಳು. ಅವಳೂ ಸಂಸ್ಕಾರ ಹೊಂದಿದವಳು; "ಇದು ನನಗೆ ಪ್ರಿಯವು. ಅಮೃತಾಂಕ ನಾಟಕವು ನಡೆಯಿತು" ಎಂದು ಅವಳು ಉತ್ತರ ಹೇಳುವಳು. ಮಳೆಬರುವಂತಿದ್ದರೂ ವಸಂತಸೇನೆಯು ಆ ಮುತ್ತಿನ ಹಾರವನ್ನು ತೆಗೆದುಕೊಂಡು ಚಾರುದತ್ತನನ್ನು ಕಾಣಲು ಚತುರಿಕೆಯೊಡನೆ ಹೋಗುವಳು. ಅಲ್ಲಿಗೆ ನಾಲ್ಕನೆಯ ಅಂಕವು ಪೂರೈಸುವುದು.

**ಮೃಚ್ಛಕಟಿಕಕ್ಕೂ ಚಾರುದತ್ತ ರೂಪಕಕ್ಕೂ ಸಂಬಂಧ:—** ಈ ವಿಚಾರವಾಗಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಒಟ್ಟಿನಮೇಲೆ

ಮೃಚ್ಛಕಟಿಕದ ನಾಲ್ಕು ಅಂಕಗಳೂ ಚಾರುದತ್ತ ರೂಪಕದ ನಾಲ್ಕು ಅಂಕಗಳನ್ನೇ ಹೋಲುತ್ತವೆ. ಕೆಲವು ವಾಕ್ಯಗಳೂ ಕೆಲವು ಶ್ಲೋಕಗಳೂ ತೀರ ಸ್ನಿಗ್ಧವಾದ ಹೋಲಿಕೆಯಿಂದ ಕೂಡಿವೆ. ಮೃಚ್ಛಕಟಿಕವು ಚಾರುದತ್ತರೂಪಕದ ಆಧಾರದ ಮೇಲೆ ಹುಟ್ಟಿರಬೇಕೆಂದೂ, ಮೃಚ್ಛಕಟಿಕವನ್ನು ಬರೆದ ಶೂದ್ರಕನು ಚಾರುದತ್ತದಲ್ಲಿಲ್ಲದ ರಾಜ್ಯವಿಪ್ಲವವುಂತಾದ ಅಂಶಗಳನ್ನು ಸೇರಿಸಿ ಗ್ರಂಥರಚನೆ ಮಾಡಿದನೆಂದೂ ಕೆಲವರು ವಿದ್ವಾಂಸರ ಅಭಿಪ್ರಾಯ. ಮತ್ತೆ ಕೆಲವರು ವಿದ್ವಾಂಸರ ಅಭಿಪ್ರಾಯವು ಇದಕ್ಕೆ ವಿರುದ್ಧವಾಗಿದೆ. ಮೃಚ್ಛಕಟಿಕದ ಆಧಾರದ ಮೇಲೆ ಅದರ ಸಂಕ್ಷಿಪ್ತರೂಪದ ರಂಗಪಾಠವಾಗಿ ಚಾರುದತ್ತ ರೂಪಕವು ರಚಿತವಾಯಿತೆಂದು ಅವರು ಸೂಚಿಸಿರುವರು. ಒಟ್ಟಿನಲ್ಲಿ ನೋಡಿದರೆ ಈ ಅಭಿಪ್ರಾಯವು ಸಾಧುವಲ್ಲವೆಂದು ತೋರುತ್ತದೆ. ಏಕೆಂದರೆ, ಚಾರುದತ್ತ ರೂಪಕಕ್ಕಿಂತ ಮೃಚ್ಛಕಟಿಕವು ಹಲವು ಭಾಗಗಳಲ್ಲಿ ಉತ್ತಮವಾಗಿದೆ. ಅವುಗಳನ್ನೆಲ್ಲ ಬಿಟ್ಟು ಅದರ ಆಧಾರದಮೇಲೆ ಚಾರುದತ್ತ ರೂಪಕವನ್ನೆಂದಿಗೂ ಕವಿಯು ಬರೆಯುತ್ತಿರಲಿಲ್ಲ. ಹಾಗೆ ಬರೆದರೆ ಪಂಡಿತ ಜನರ ಅಭಿಪ್ರಾಯವು ಪ್ರಸನ್ನವಾಗಿರುವುದಿಲ್ಲವೆಂಬ ಶಂಕೆಯಿಂದಲಾದರೂ ಅವನು ಆ ಕೆಲಸವನ್ನು ಕೈ ಬಿಡುತ್ತಿದ್ದನು. ಮೃಚ್ಛಕಟಿಕದಲ್ಲಿರುವ ಪ್ರಾಕೃತಕ್ಕಿಂತ ಪ್ರಾಚೀನವಾದ ಪ್ರಾಕೃತವು ಚಾರುದತ್ತ ರೂಪಕದಲ್ಲಿರುವುದರಿಂದಲೂ, ಚಾರುದತ್ತವೇ ಮೊದಲು ಹುಟ್ಟಿರಬೇಕೆಂಬ ಅನುಮಾನವೇ ದೃಢಪಡುತ್ತದೆ. ಮೃಚ್ಛಕಟಿಕದಲ್ಲಿ ಕವಿಯ ಹೆಸರಿರುವಂತೆ ಚಾರುದತ್ತರೂಪಕದಲ್ಲಿಲ್ಲ. ತನ್ನ ಹೆಸರಿಲ್ಲದಂತೆ ಸ್ಥಾಪನೆಯನ್ನು ಬರೆಯುತ್ತಿದ್ದುದು ಹಿಂದಿನ ಪದ್ಧತಿಯೇ ಹೊರತು ಈಚಿನದಲ್ಲ. ಚಾರುದತ್ತನ ಪತ್ನಿಯಾದ ಬ್ರಾಹ್ಮಣಿಯು ಉಪವಾಸ ಮಾಡುವ ದಿನವು, ರತ್ನಷಷ್ಠಿಯೆಂದು ಮೃಚ್ಛಕಟಿಕದಲ್ಲಿ ಹೇಳಿದೆ. ರತ್ನಷಷ್ಠಿಯ ದಿನ ರತ್ನಹಾರವನ್ನು ದಾನ ಮಾಡುವುದರಲ್ಲಿ ಔಚಿತ್ಯವೂ ಉಂಟು. ಚಾರುದತ್ತದಲ್ಲಿ ಕೇವಲ ಬರಿಯ ಷಷ್ಠಿಯೆಂದೇ ಇದೆ. ಇವೆಲ್ಲ ಕಾರಣಗಳನ್ನೂ ಚೆನ್ನಾಗಿ ತೂಗಿ ನೋಡಿದರೆ ಮೃಚ್ಛಕಟಿಕವೇ ಚಾರುದತ್ತ ರೂಪಕದ ಆಧಾರದ ಮೇಲೆ ಹುಟ್ಟಿರಬೇಕೆಂದೇ ಹೇಳಬೇಕಾಗುತ್ತದೆ.

ಪಾತ್ರರಚನೆ.—ಈ ರೂಪಕದಲ್ಲಿ ಪಾತ್ರರಚನೆಯು ಮನೋಹರವಾಗಿದೆ. ಕವಿಯು ಅದನ್ನು ಸ್ವತಂತ್ರವಾಗಿ ರಚಿಸಿರುವ ಕಾರಣ, ತನ್ನ ಕಾಲದ ಸಮಾಜದಿಂದಲೇ ನಾನಾ ಘಟನೆಗಳನ್ನೂ, ಪಾತ್ರಗಳನ್ನೂ ಆರಿಸಿಕೊಂಡಿರಬಹುದೆಂಬ ಸಂದೇಹವೂ ಬರುತ್ತದೆ. ಮುಖ್ಯ ಪಾತ್ರಗಳಲ್ಲಿ ಪ್ರತಿಯೊಂದಕ್ಕೂ ಒಂದೊಂದು ವೈಶಿಷ್ಟ್ಯವಿರುವುದು, ಹೃದಯಂಗಮವಾದ ಅಂಶ. ಮುಖ್ಯಪಾತ್ರಗಳ ವಿಚಾರವಾಗಿ ಕೆಲವು ಅಂಶಗಳನ್ನು ಸೂಚಿಸುವುದು ಮಾತ್ರವೇ ಇಲ್ಲಿ ಸಾಧ್ಯ.

**ಚಾರುದತ್ತ**

ಚಾರುದತ್ತನೇ ಕಥಾನಾಯಕ. ಅವನು ತನ್ನ ಸರ್ವಸ್ವವನ್ನೂ ಅರ್ಥಿಗಳಿಗೂ, ಬಂಧುಮಿತ್ರರಿಗೂ ಕೊಟ್ಟು ದರಿದ್ರನಾದ ಅನರ್ಘಶೀಲನು; ತನ್ನ ಸರ್ವಸ್ವವನ್ನೂ ವಿಶ್ವಜಿತ್ ಎಂಬ ಯಜ್ಞದಲ್ಲಿ ದಾನಮಾಡಿ ಮಣ್ಣಿನ ಪಾತ್ರೆಗಳನ್ನು ಬಳಸುತ್ತಿದ್ದ ರಘುಮಹಾರಾಜನನ್ನು ನೆನಪಿಗೆ ತರತಕ್ಕವನು. ಚಾರುದತ್ತನು ತಾನು ಕಳೆದುಕೊಂಡ ಸಂಪತ್ತಿಗಾಗಿ ದುಃಖಿಸುವುದಿಲ್ಲ. ಉದಾರಿಯಾದ ಆತನು ಎಂದಿನಂತೆ ತಾನು ಪರೋಪಕಾರ ಮಾಡಲು ಹಣವಿಲ್ಲದಂತಾಯಿತಲ್ಲಾ ಎಂದು ವಿಷಾದ ಪಡುತ್ತಾನೆ. ಆನೆಯು ಸೀಳುವುದರಲ್ಲಿದ್ದ ಸಂನ್ಯಾಸಿಯ ಜೀವವನ್ನುಳಿಸಿದ ಚೇಟನಿಗೆ ಪಾರಿತೋಷಿಕವನ್ನು ಕೊಡುವುದಕ್ಕಾಗಿ ಅವನು ಅಭ್ಯಾಸಬಲದಿಂದ ಆಭರಣಸ್ಥಾನವನ್ನು ಮುಟ್ಟಿ ನೋಡಿಕೊಂಡು ಹತಾಶನಾಗಿ ಸಂಕೋಚಪಡುತ್ತ, "ನನ್ನ ಸಂಪತ್ತು ಇದೊಂದೇ" ಎಂದು ಹೇಳಿ ಆ ಅಪರಿಚಿತನಿಗೆ ಉತ್ತರೀಯವನ್ನು ಪಾರಿತೋಷಿಕವಾಗಿ ಕಳುಹಿಸುವುದರಿಂದಲೇ ಅವನ ಔದಾರ್ಯವು ವ್ಯಕ್ತವಾಗುತ್ತದೆ.

ಚಾರುದತ್ತನಲ್ಲಿರುವ ಚಿತ್ತಾಕರ್ಷಕವಾದೊಂದು ಗುಣವು ಅವನ ಸಂಗೀತಪ್ರೇಮ. ಮಧ್ಯರಾತ್ರಿಯ ವೇಳೆ ಸಂಗೀತಗೋಷ್ಠಿಯಿಂದ ವಿದೂಷಕನೊಡನೆ ಹಿಂತಿರುಗಿ ಬರುತ್ತಿರುವ ಚಾರುದತ್ತನನ್ನು ಮೂರನೆಯ ಅಂಕದ ಪ್ರಾರಂಭದಲ್ಲಿ ನಾವು ನೋಡುವೆವು. ಆಗ ಅವನು ಹೇಳುವ,

"ಮಿತ್ರ! ವೀಣೆಯೆಂಬುದು ಸಮುದ್ರೋತ್ಥಿತವಾದ ರತ್ನ. ಏಕೆಂದರೆ ಸಂಗೀತವನ್ನು ಕೇಳಿಯೇನೇ ಎಂದು ತವಕಪಡುವ ಉತ್ಕಂಠಿತನಿಗೆ ಹೃದಯಾನುಗತೆಯಾದ ಸಖಿಯಂತೆ ವೀಣೆಯು ಸಂತೋಷವನ್ನುಂಟು ಮಾಡುತ್ತದೆ. ಸುಖಾನುಭವ ವಸ್ತುಗಳಲ್ಲಿ ವೀಣೆಯು ತೀರ ಶುದ್ಧ ವಾದ ಸ್ವರಗಳನ್ನು ನುಡಿಯುತ್ತ ಸಂಕೀರ್ಣ ದೋಷರಹಿತವಾದ ಗೋಷ್ಠಿ ಯೆನಿಸಲು ಕಾರಣವಾಗುತ್ತದೆ. ರತಿಕ್ರೀಡಾನುಭವದಲ್ಲಿ ಕಾಂತೆಯಂತೆ (ವೀಣೆಯು ರಾಗವೃದ್ಧಿಕಾರಿಣಿ). ಸ್ತ್ರೀಯರಿಗಾದರೋ ತಮ್ಮಲ್ಲಿ ಪತಿಯ ಆಸಕ್ತಿಯನ್ನು ತಪ್ಪಿಸುವ ವಿಘ್ನಕಾರಿಣಿಯಾದ ಸವತಿ" * ಎಂಬ ಮಾತು ಗಳು ಮನೋಹರವಾಗಿವೆ. ವೀಣೆಯು ಪ್ರಾಣಕಾಂತೆಯ ಮೇಲಣ ಆಸಕ್ತಿಯನ್ನು ಕೂಡ ತಪ್ಪಿಸುವ (ರತಿವಿಘ್ನಕರಿಯಾದ) ಸವತಿಯೆಂದು ಹೇಳಿರುವುದರಿಂದ ಚಾರುದತ್ತನ ಸಂಗೀತ ಪ್ರೇಮವೆಷ್ಟು ಗಾಢವಾದು ದೆಂಬುದು ವ್ಯಕ್ತವಾಗುತ್ತದೆ. ವೀಣೆಯನ್ನು ನುಡಿಸುತ್ತ ಅಂದು ಹಾಡಿದ ಗಾಯಕನ ಸಾಮರ್ಥ್ಯವನ್ನೂ, ಶಾರೀರ ಸಂಪತ್ತನ್ನೂ ವರ್ಣಿಸಿ ಚಾರು ದತ್ತನು ಹೇಳುವ, "ಗಾಯನವು ಸರ್ವಥಾ ಸುವ್ಯಕ್ತವಾಗಿದ್ದಿತು. ಏಕೆಂದರೆ, ರಾಗಯುಕ್ತವಾಗಿದ್ದಿತು; ಎತ್ತರದ ತಾರಸ್ಥಾಯಿಯಲ್ಲಿದ್ದರೂ ಮಧುರವಾಗಿದ್ದಿತು. ವೈಷಮ್ಯರಹಿತವಾಗಿಯೂ ಇದ್ದಿತು. ಅಲ್ಲದೆ, ಅಭಿ ನಯದ ಸಹಾಯವಿಲ್ಲದಿದ್ದೂ ಭಾವಪುಷ್ಟಿಯುಳ್ಳುದಾಗಿದ್ದಿತು. ಬಗೆ ಬಗೆಯಾಗಿ ಹೊಗಳಿ ಹೆಚ್ಚು ಹೇಳಲೇಕೆ? (ಅವನೇನಾದರೂ) ಗೋಡೆಯ ಹಿಂದೆ (ಮರೆಯಲ್ಲಿದ್ದು) ಹಾಡಿದ್ದರೆ ಹೆಂಗಸೆಂದೇ ನಾನು ಭಾವಿಸುತ್ತಿದ್ದೆ" †

---

* "ವಯಸ್ಯ! ವೀಣಾನಾಮಾಸಮುದ್ರೋತ್ಥಿತಂ ರತ್ನಮ್ । ಕುತಃ,
ಉತ್ಕಂಠಿತಸ್ಯ ಹೃದಯಾನುಗತಾ ಸಖೀವ
ಸಙ್ಕೀರ್ಣದೋಷ ರಹಿತಾ ವಿಷಯೇಷು ಗೋಷ್ಠೀ ।
ಕ್ರೀಡಾರಸೇಷು ಮದನ ವ್ಯಸನೇಷು ಕಾನ್ತಾ
ಸ್ತ್ರೀಣಾಂ ತು ಕಾಂತರತಿ ವಿಘ್ನಕರೀ ಸಪತ್ನೀ ॥"

† "ಸರ್ವಥಾ ಸುವ್ಯಕ್ತಂ ಗೀತಮ್ । ಕುತಃ,
ರಕ್ತಂ ಚ ತಾರ ಮಧುರಂ ಚ ಸಮಂ ಸ್ಫುಟಂ ಚ
ಭಾವಾರ್ಪಿತಂ ಚ ನ ಚ ಸಾಭಿನಯ ಪ್ರಯೋಗಮ್ ।
ಕಿಂ ವಾ ಪ್ರಶಸ್ಯ ವಿವಿಧೈರ್ಬಹು ತತ್ತದುಕ್ತ್ವಾ
ಭಿತ್ತ್ಯನ್ತರಂ ಯದಿ ಭವೇದ್ಯುವತೀತಿ ವಿದ್ಯಾಮ್ ॥"

ಎಂಬ ಮಾತುಗಳಿಂದ ಆವಸಂತಹ ಕಲಾಭಿಜ್ಞನಾದ ಸಹೃದಯನೆಂಬುದು ವ್ಯಕ್ತವಾಗುತ್ತದೆ.

ಚಾರುದತ್ತನು ಗುಣಶಾಲಿ. ಆದುದರಿಂದಲೇ ವಸಂತಸೇನೆಯು ಅವನಲ್ಲಿ ಅನುರಕ್ತೆಯಾಗುವುದು. ಹಲವು ಪಾತ್ರಗಳು ಅವನ ಗುಣ ಗಾನ ಮಾಡುವಂತೆ ಚಿತ್ರಿತವಾಗಿದೆ. ವಿಟನು ಕೂಡ ಚಾರುದತ್ತನ ಗುಣಗಳಿಗೆ ತಾನು ಹೆದರುವುದಾಗಿ ಹೇಳುವನು. ತಾನೂ ಶಕಾರನೂ ನಡೆಯಿಸಿದ ಅಕಾರ್ಯವನ್ನು ಅವನಿಗೆ ತಿಳಿಸಕೂಡದೆಂದು ವಿದೂಷಕ ನಿಗೆ ಬಿನ್ನವಿಸುವನು. ಅಲ್ಲದೆ, ಬೇಸಗೆಯಲ್ಲಿ ಜನರ ಬಾಯಾರಿಕೆಯನ್ನು ಹೋಗಲಾಡಿಸಲು ನೀರನ್ನು ಕೊಟ್ಟು ಒಣಗಿಹೋದ ಕೆರೆಯನ್ನು ಅವನು ಹೋಲುತ್ತಿದ್ದುದಾಗಿ ವಿಟನು ವರ್ಣಿಸುವನು. ಸಂವಾಹಕನು ಚಾರು ದತ್ತನನ್ನು ವರ್ಣಿಸುವುದಂತು, ಹೃದಯಂಗಮವಾಗಿದೆ. (ಅದನ್ನು ಹಿಂದೆಯೇ ತಿಳಿಸಿದ್ದೇವೆ). ಆಶ್ರಿತರಿಗೆ ಸಹಾಯಮಾಡಲು ಚಾರುದತ್ತ ನಿಗೆ ಬಹಳ ಆಸೆ. ದಾರಿದ್ರ್ಯಬರುವುದಕ್ಕೆ ಮುಂಚೆ ವಿದೂಷಕನಿಗೆ ಅವನ ಮನೆಯಲ್ಲಿ ನಡೆಯುತ್ತಿದ್ದ ಉಪಚಾರಗಳೇ ಇದಕ್ಕೆ ನಿದರ್ಶನ. ಚಾರುದತ್ತನ ಮನೆಯು ವಿದೂಷಕನಿಗೆ (ಮೈತ್ರೇಯನಿಗೆ) ಸ್ವಂತ ಮನೆ ಗಿಂತ ಹೆಚ್ಚಾಗಿದ್ದ ಬಗೆಯನ್ನು ಅವನೇ ವರ್ಣಿಸಿದ್ದಾನೆ. ಅವನು ವಸಂತಸೇನೆಗೆ ಅಭಯವನ್ನು ಕೊಟ್ಟುದೂ, ಅವಳು ರದನಿಕೆಯೆಂಬ ಭಾವನೆಯಿಂದ ಕೂಡಿ ತನ್ನ ಉತ್ತರೀಯವನ್ನು ಮನೆಯೊಳಕ್ಕೆ ತೆಗೆದು ಕೊಂಡು ಹೋಗಬೇಕೆಂದು ಅವಳಿಗೆ ತಿಳಿಸಿದ ಅವಿನಯಕ್ಕಾಗಿ ತನ್ನನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿದುದೂ, ಅವನ ವಿನಯಶೀಲತೆಯನ್ನು ತೋರಿಸುವುವು. ಅವನ ಸಹನಗುಣವು ಅದ್ಭುತವಾದುದು. ವಿದೂಷ ಕನು (ಮೈತ್ರೇಯನು) ಅಜಾಗರೂಕತೆಯಿಂದ ಕಳ್ಳನ ಕೈಗೆ ಒಡವೆ ಯನ್ನು ಕೊಟ್ಟು ಹಾಳುಮಾಡಿದಾಗಲೂ, ಅವನು ತನ್ನ ಮಿತ್ರನ ಮೇಲೆ ಕೋಪಿಸಿಕೊಳ್ಳುವುದಿಲ್ಲ.

ವಸಂತಸೇನೆಯು ಜಾತಿಯಲ್ಲಿ ವೇಶ್ಯೆಯಾದರೂ, ಶೀಲದಲ್ಲಿ ಸತೀ ಮಣಿ. ಸಂವಾಹಕನು ಅದಕ್ಕಾಗಿಯೇ "ಜಾತಿಯಲ್ಲಿ, ಶೀಲದಲ್ಲಲ್ಲ" ("ಆಭಿಜನೇನ, ನ ಶೀಲೇನ") ಎಂದು ಹೇಳುವನು.

**ವಸಂತಸೇನೆ** ಶಕಾರನು ಅವಳನ್ನು ಹುಡುಗಿಯೆಂದು ವರ್ಣಿಸಿರುವುದರಿಂದ, ಅವಳು ಇನ್ನೂ ಚಿಕ್ಕವಯಸ್ಸಿನವಳೆಂದು ಹೇಳಬೇಕಾಗುತ್ತದೆ. ಅವಳು ರೂಪವತಿಯೆಂಬುದನ್ನಂತು ತಿಳಿಸಬೇಕಾದುದೇ ಇಲ್ಲ. ಅವಳು ಗುಣಪಕ್ಷಪಾತವುಳ್ಳವಳು. ನಾವು ಹಿಂದೆಯೇ ಸೂಚಿಸಿರುವಂತೆ ಗುಣವಂತನಾದ ದರಿದ್ರ ಚಾರುದತ್ತನಲ್ಲಿ ಅವಳಿಗೆ ಅನುರಾಗ ಹುಟ್ಟುವುದೂ, ಗುಣಹೀನನಾದ ಧನಿಕ ಶಕಾರನಲ್ಲಿ ಅವಳಿಗೆ ಅಸಹ್ಯಭಾವನೆಯುಂಟಾಗುವುದೂ ಆದರಿಂದಲೇ. ದ್ಯೂತದಲ್ಲಿ ಹಣವನ್ನು ಸೋತು ವಿಪನ್ನಾವಸ್ಥೆಗೆ ಗುರಿಯಾಗಿರುವ ಸಂವಾಹಕನಿಗೂ ಅವಳು ಅನುತಾಪದಿಂದ ಹಣವನ್ನು ಕೊಡುವಳು. ಅವಳು ಕೊಡಗೈಯವಳೆಂಬುದನ್ನು ಇದು ತೋರಿಸುವುದು. ಅವಳ ಔದಾರ್ಯವು ಅಷ್ಟಕ್ಕೆ ನಿಲ್ಲದು. ಸಜ್ಜಲಕನೂ, ಮದನಿಕೆಯೂ, ದಂಪತಿಗಳಾಗಲಿಚ್ಛಿಸಿದುದನ್ನು ಕಂಡು ಸಂತೋಷಿಸಿ ತನ್ನ ಒಂದು ತೊಡಿಗೆ ಒಡವೆಗಳಿಂದ ಮದನಿಕೆಯನ್ನು ತಾನೇ ಅಲಂಕರಿಸಿ ಆನಂದದಿಂದ ಬೀಳ್ಕೊಳ್ಳುವಳು. ಇಂತಹ ವರ್ತನೆಯು ಸಾಮಾನ್ಯರಿಗೆ ಸಾಧ್ಯವೆ? ವೇಶ್ಯೆಯ ಕುಲದಲ್ಲಿ ಹುಟ್ಟಿದ್ದರೂ ವಸಂತಸೇನೆಯು ಮಾನಿನೀಯಳಾದ—ಧನಮದದಿಂದ ಮತ್ತರಾಗಿರುವವರಿಗೆ ಆದರ್ಶಪ್ರಾಯಳಾದ—ಕನ್ಯಾರತ್ನವಲ್ಲವೆ? ಶೀಲವು ಮುಖ್ಯವೇ ಹೊರತು ಕುಲವು ಮುಖ್ಯವಲ್ಲ. ತನ್ನಲ್ಲಿ ಚೇಟಿಯಾಗಿದ್ದವಳಿಗೆ ತಾನೇ ತನ್ನ ಕೈಯಿಂದಲೇ ಅಲಂಕಾರಮಾಡಿ, ಅವಳನ್ನು ಅವಳ ಪ್ರಿಯನಿಗೊಪ್ಪಿಸುವುದೆಂದರೆ ಸಾಮಾನ್ಯವೆ? ಅವಳ ಔದಾರ್ಯವು ಅಲ್ಲಿಗೂ ಮುಗಿಯದು. ಬಂಡಿಯನ್ನು ತರುವಂತೆ ಆಜ್ಞಾಪಿಸಿ ಅದರಲ್ಲಿ ಮದನಿಕೆಯನ್ನೂ ಸಜ್ಜಲಕನನ್ನೂ ಕೂರಿಸಿ, ದಂಪತಿಗಳಾಗುವ ಆ ಈರ್ವರನ್ನೂ ನೋಡಿ ಆನಂದಿಸಿ, ಅವರನ್ನು ಬೀಳ್ಕೊಳ್ಳುವಳು. ಅವಳ **ಸಂಪತ್ತು** ಅಪರಿಮಿತವಾದುದು. ಅದಕ್ಕೆ ತಕ್ಕ ವಿನಯವೂ ಅವಳಲ್ಲಿರುವುದು ಮತ್ತೂ ವಿಶೇಷ. ಸಂವಾಹಕನಿಗೆ ಹಣವನ್ನು ಕೊಟ್ಟಾಗಿನ

ಅವಳ ವರ್ತನೆಯಿಂದ ಅದು ವ್ಯಕ್ತವಾಗುತ್ತದೆ. ತನ್ನ ಪ್ರಿಯನಾದ ಚಾರುದತ್ತನಲ್ಲಿ ಅವಳಿಗೆ ಬಹಳ ಪ್ರೀತಿ-ಗೌರವಗಳುಂಟು. ಅವಳು ಅಲಂಕಾರ ಮಾಡಿಕೊಳ್ಳಬೇಕೆಂದು ಅವಳ ತಾಯಿಯು ಹೇಳಿ ಕಳುಹಿಸಿದಾಗ, ಚಾರುದತ್ತನೆದುರಿಗೆ ಮುಂದೆ ತಾನು ಅಲಂಕಾರಮಾಡಿಕೊಳ್ಳುವುದಾಗಿ ಅವಳು ತಿಳಿಸುವಳು. ಚಾರುದತ್ತನೆಂಬ ಹೆಸರೇ ಅವಳ ಮನಸ್ಸಿನಲ್ಲಿ ತುಂಬಿ ಹೋಗಿದೆ. ಅವನ ಗುಣಗಳೇ ಅವಳಿಗೆ ಆದರ್ಶಗುಣಗಳು. ಸಂನ್ಯಾಸಿಯು ಆನೆಗೆ ಸಿಕ್ಕಿಹೋಗುತ್ತಿದ್ದುದನ್ನು ತಪ್ಪಿಸಿದ ತನಗೆ, ಅಲ್ಲಿದ್ದವನೊಬ್ಬನು ಪಾರಿತೋಷಿಕವನ್ನು ಕೊಡಲು ಆಭರಣಸ್ಥಾನವನ್ನು ಮುಟ್ಟಿ ನೋಡಿಕೊಂಡು, ಅಲ್ಲಿ ಆಭರಣವಿಲ್ಲದುದಕ್ಕಾಗಿ ನಿಟ್ಟುಸಿರನ್ನು ಬಿಟ್ಟ ನೆಂಬುದನ್ನು ಚೇಟನಿಂದ ಕೇಳಿದಾಗ, ವಸಂತಸೇನೆಯು, "ಆರ್ಯ ಚಾರುದತ್ತನ ಗುಣಗಳನ್ನನುಕರಿಸುವ ಈತನಾರಿರಬಹುದು!" ಎಂದು ಉತ್ತರ ಹೇಳುವುದನ್ನು ಇದಕ್ಕೆ ನಿದರ್ಶನವಾಗಿ ತಿಳಿಸಬಹುದಾಗಿದೆ. ಹಾಗೆ ಆಭರಣಸ್ಥಾನವನ್ನು ಮುಟ್ಟಿ ನೋಡಿಕೊಂಡ ಮನುಷ್ಯನು ಯಾರಿರಬಹುದೆಂದು ವಸಂತಸೇನೆಯು ಕೇಳುವಳು. ಅವನು ಚಾರುದತ್ತನೇ ಆಗಿರಬಾರದೇ—ಎಂಬುದಾಗಿ ಅವಳಿಗೆ ಆತಂಕ. ಒಳ್ಳೆಯ ಗುಣಗಳಿಲ್ಲಕ್ಕೂ ಚಾರುದತ್ತನೊಬ್ಬನೇ ಆದರ್ಶವೆಂಬುದು ಅವಳ ನಂಬಿಕೆ. ಎಲ್ಲ ಹೂಗಳೂ ತನ್ನ ಹಾರಕ್ಕೇ ಸೇರಿರಬೇಕೆಂದು ಅವಳ ಹಾರೈಕೆ. ಚೇಟಿಯು ಅವಳ ಪ್ರಶ್ನೆಗೆ ಅವನು ಯಾವನೋ ಸಾಧುಪುರುಷನಿರಬಹುದೆಂದು ಉತ್ತರ ಹೇಳುವಳು. ಚೇಟಿಯು ತನ್ನ ಮನಸ್ಸಿನಲ್ಲಿದ್ದುದಕ್ಕೆ ವಿರುದ್ಧವಾಗಿ ನುಡಿದಳೆಂದು ವಸಂತಸೇನೆಯು ಕೋಪಿಸಿಕೊಳ್ಳದೆ, ತನ್ನ ಮನಸ್ಸನ್ನು ತಾನೇ ಅಳೆದು ನೋಡಿಕೊಂಡು ಒಬ್ಬ ಮನುಷ್ಯನ ಮೇಲಣ ಸ್ನೇಹವು ಇತರರಿಗೂ ಅವನಂತೆ ಸದ್ಗುಣಗಳಿರಬಹುದೆಂಬುದನ್ನು ಕೂಡ ಒಪ್ಪದೆ ಹೋಗಲು ಕಾರಣವಾಗುವುದೆಂದು ತಿಳಿಸುವಳು. ಅವಳು ಚಾರುದತ್ತನ ಚಿತ್ರಪಟವನ್ನು ಬರೆದು ಆನಂದಿಸುವಳು. ಅವಳು ಲಲಿತಕಲೆಗಳಲ್ಲಿ ಪಾರಂಗತೆ. ಒಟ್ಟಿನಲ್ಲಿ ಅವಳು ವೇಶ್ಯಾಕುಲದಲ್ಲಿ ಹುಟ್ಟಿದ್ದರೂ ಶೀಲವತಿಯಾದ ಸಾಧ್ವಿ.

ಅವನ ಹೆಸರು ಮೈತ್ರೇಯ. ಚಾರುದತ್ತದ ವಿದೂಷಕನು ಸುಶಿಕ್ಷಿತ. ವಸಂತಸೇನೆಯು ಚಾರುದತ್ತನಿಗೆ ಒಪ್ಪಿಸಿದ್ದ ಒಡವೆಗಳನ್ನು ರದನಿಕೆಯೂ ಮೈ ತ್ರೇ ಯ ನೂ, ನೋಡಿಕೊಳ್ಳಬೇಕಾಗುವುದು.

**ವಿದೂಷಕ** ಅದನ್ನು ತಾನು ಅನಧ್ಯಯನ ದಿನದಲ್ಲಿ ನೋಡಿಕೊಳ್ಳುವುದಾಗಿ ಮೈತ್ರೇಯನು ತಿಳಿಸುವನು. ಉಳಿದ ಕಾಲದಲ್ಲಿ ತನಗೆ ಅಧ್ಯಯನದ ಹೊರೆಯು ಬೇರೆ ಇರುವಕಾರಣ, ತನಗೆ ಅವಕಾಶವಿರುವುದಿಲ್ಲವೆಂಬುದನ್ನು ಸೂಚಿಸಲು ಅವನು ಹೀಗೆ ಹೇಳಿರುವಂತೆ ತೋರುತ್ತದೆ. ಅವನು ವೇದಾಧ್ಯಯನ ಸಂಪನ್ನನಾಗಿದ್ದನೆಂದರೂ ತಪ್ಪಲ್ಲ. ಏಕೆಂದರೆ, ಅವನು ಚಾರಿತ್ರಧನನಾದ ಚಾರುದತ್ತನಿಗೆ ಪ್ರಾಣಸ್ನೇಹಿತ. ರದನಿಕೆಯು, "ಶಾಸ್ತ್ರಾಧ್ಯಯನ ನಿರತನಾದ ಸಂಪನ್ನನಿಗೆ ಆಗ ಮಾತ್ರವೇ ಅವಕಾಶ" ಎಂದು ಅವನನ್ನು ಹಾಸ್ಯಮಾಡುವುದೇನೊ ನಿಜ. ಆದರೂ ಅವನು ಅಧ್ಯಯನ ಮಾಡುತ್ತಿರಲಿಲ್ಲವೆಂದೂ, ಅವನು ನಿರಕ್ಷರ ಕುಕ್ಷಿಯೆಂದೂ, ಇದಕ್ಕೆ ಅರ್ಥವಲ್ಲ. ಇಲ್ಲಿ ನಾವು ಮತ್ತೊಂದು ವಿಷಯವನ್ನೂ ಗ್ರಹಿಸಬೇಕು. ವಿದೂಷಕನು ಕ್ರಮವಾಗಿ ಅಧ್ಯಯನಕ್ಕೆ ಮನಸ್ಸು ಕೊಡದೆ, ಒಳ್ಳೆಯ ಊಟ ದೊರೆಯುವ ಸಂಭವವಿದ್ದ ದಿನಗಳಲ್ಲಿ ಅದರ ಗೊಡವೆಗೇ ಹೋಗದೆ ತಪ್ಪಿಸಿಕೊಂಡಿದ್ದರೂ ಇರಬಹುದು. ಆದುದರಿಂದ ಅವಳು ಹಾಸ್ಯಮಾಡಿರಬಹುದು. ಮೈತ್ರೇಯನಿಗೆ ಕಾವ್ಯಜ್ಞಾನವೂ ಇದ್ದಿತೆಂಬ ಅಂಶವೂ ಗೊತ್ತಾಗುತ್ತದೆ. ಅವನು ಶ್ಲೇಷಾರ್ಥವನ್ನಿಟ್ಟು ವಾಕ್ಯಪ್ರಯೋಗ ಮಾಡುವಷ್ಟು ಮೇಧಾವಿ; ಅಲಂಕಾರ ಶಾಸ್ತ್ರಜ್ಞರು ತಲೆದೂಗುವಂತೆ ಮಾತನಾಡಬಲ್ಲವನು. ಇಲ್ಲದೆ ಹೋಗಿದ್ದರೆ, "ದೀಪವು ವೇಶ್ಯೆಯಂತೆ ನಿಸ್ಸ್ನೇಹವಾಯಿತು" ಎಂದು ಹೇಳುವುದು ಸಾಧ್ಯವಾಗುತ್ತಲೇ ಇರಲಿಲ್ಲ. ಸ್ನೇಹವೆಂಬ ಪದಕ್ಕೆ ಗೆಳೆತನವೆಂಬ ಅರ್ಥವೂ, ಎಣ್ಣೆ ಮುಂತಾದ ಜಿಡ್ಡಿನ ಪದಾರ್ಥವೆಂಬ ಅರ್ಥವೂ, ಇರುವುದನ್ನು ಗ್ರಹಿಸಿ ಇಷ್ಟು ಬುದ್ಧಿವಂತಿಕೆಯಿಂದ ಮಾತನಾಡುವುದೆಂದರೆ ಕಾವ್ಯವ್ಯಾಸಂಗದ ಪರಿಶ್ರಮವೇ ಇಲ್ಲದವನಿಂದ ಸಾಧ್ಯವೆ? ಆದರೆ, ಒಂದು ಆಕ್ಷೇಪವು ಬರಬಹುದು. ಕನ್ನವನ್ನು ಕೊರೆದು ಕಳ್ಳನು ಪ್ರವೇಶಿಸಿದ್ದುದನ್ನು ಚೇಟಿಯು ಪ್ರಸ್ತಾವಿಸಿದಾಗ ಮೈತ್ರೇಯನು, "ಕಳ್ಳನನ್ನು

ಕೊರೆದು ಕನ್ನದ ಪ್ರವೇಶ” ಎಂದು ಹೇಳುವನು. ಹೀಗೆ ಮಾತ ನಾಡುವ ದಡ್ಡ ಬ್ರಾಹ್ಮಣನಿಗೆ ಕಾವ್ಯಜ್ಞಾನವಿದ್ದಿತೆಂದು ಹೇಳುವುದು ಹೇಗೆಂದು ಆಕ್ಷೇಪಣೆಯು ಹುಟ್ಟಬಹುದು. ಇದಕ್ಕೆ ನಾವು ಮೂರು ವಿಧಗಳಲ್ಲಿ ಸಮಾಧಾನವನ್ನು ಹೇಳುವುದು ಸಾಧ್ಯ. ಮೊದಲನೆಯದು; ಮೈತ್ರೇಯನು ಹಾಸ್ಯಗಾರನಾದುದರಿಂದ ವಿನೋದಾರ್ಥವಾಗಿ ಹೀಗೆ ಹೇಳಿರಬಹುದು. ಆದರೆ, ಆಗಿನ ಸಂದರ್ಭದಲ್ಲಿ ವಿನೋದಕ್ಕೆ ಸಮಯ ವಲ್ಲ. ಆದುದರಿಂದ, ಇದು ಸಮಂಜಸವಾಗಿ ತೋರುವುದಿಲ್ಲ. ಎರಡ ನೆಯದು; ಅವನು ಮಂದಬುದ್ಧಿಯವನಾಗಿರುವುದರಿಂದ ಹಾಗೆ ಹೇಳಿ ರಬಹುದೆಂದು ತೋರಬಹುದು. ಮೈತ್ರೇಯನು ವಿಶೇಷ ಮೇಧಾವಿಯಲ್ಲ ವಾದರೂ, ಎತ್ತಿನ ಕೊರಳಿಗೆ ಕಟ್ಟಬೇಕಾದ ಹಗ್ಗವನ್ನು ಆದರ ಬಾಲಕ್ಕೇ ಬಿಗಿಯುವಷ್ಟು ದಡ್ಡನಲ್ಲ. ಮೂರನೆಯದು; ಮೈತ್ರೇಯನು ಅಂಜು ಕುಳಿಯಾದುದರಿಂದ ಹೀಗೆ ತಬ್ಬಿಬ್ಬಾಗಿ ತಲೆಕೆಳಕಿನ ಮಾತುಗಳನ್ನಾಡಿರ ಬಹುದು. ಇದೇ ಸರಿಯಾದ ಕಾರಣವೆಂದು ತೋರುತ್ತದೆ. ಅವನಿಗೆ ಕತ್ತಲೆಯಲ್ಲಿ ಮನೆಯಿಂದ ಈಚೆಗೆ ಬರುವುದಕ್ಕೂ ಕೊಂಚ ಭಯ; ಕತ್ತಲೆಯಲ್ಲ ಮನೆಯಿಂದ ಹೊರಗೆ ಹೋಗಬೇಕಾದಾಗ ತನ್ನ ಜೊತೆ ಯಲ್ಲಿ ಯಾರಾದರೂ ಬರಬೇಕೆಂದು ಅವನು ಬಯಸಿದ್ದುದರಿಂದ ಅದು ಗೊತ್ತಾಗುವುದು. ಅಂತಹವನು ಕಳ್ಳನ ಸುದ್ದಿಯನ್ನು ಕೇಳಿ ಭಯದ ದೆಸೆಯಿಂದ ಹಾಗೆ ಹೇಳಿರುವುದರಲ್ಲ ಸಂಶಯವಿಲ್ಲ. ಮೈತ್ರೇಯನು ಮನೋಹರವಾಗಿ ಉಪಮಾನವನ್ನು ಕೊಡಬಲ್ಲವನೆಂಬುದಕ್ಕೆ ಮತ್ತೊಂದು ನಿದರ್ಶನವೂ ಇದೆ. ಅವನು ತನ್ನಲ್ಲಿದ್ದ ನ್ಯಾಸವನ್ನು ಪ್ರಮಾದ ವಶ ದಿಂದ ಸಜ್ಜಲಕನಿಗೆ ಕೊಟ್ಟಬಳಿಕ, “ನಾನು ಸರಕುಗಳೆಲ್ಲವನ್ನೂ ಮಾರಿ ಬಿಟ್ಟ ವರ್ತಕನಂತೆ ಇನ್ನು ಸುಖವಾಗಿ ನಿದ್ರೆಮಾಡುತ್ತೇನೆ” ಎಂದು ಹೇಳುತ್ತಾನೆ.

ಮೈತ್ರೇಯನು ಉತ್ತಮ ತರಗತಿಯ ಹಾಸ್ಯಗಾರ. ಅವನ ಹಾಸ್ಯವು ಶುದ್ಧವಾದ ತಿಳಿಯಾದ ಹಾಸ್ಯ. ಕಲುಷಿತ ಸ್ವಭಾವದ ಅಸಹ್ಯಕರವಾದ ಒರಟುಮಾತಿನ ಹಾಸ್ಯಕ್ಕೂ ವಿದೂಷಕನಿಗೂ ಬಲು ದೂರ. ಸಂಗೀತ

ಗೋಷ್ಠಿಯಿಂದ ಬರುತ್ತಿರುವಾಗ ಮೈತ್ರೇಯನು ಸಂಗೀತದಲ್ಲಿ ಎಷ್ಟು ಹೊತ್ತು ಕಳೆದುಹೋಯಿತೆಂದು ಲೆಕ್ಕ ಹಾಕುವನು. ಅಷ್ಟು ಹೊತ್ತು ನಿದ್ರಿಸುವುದು ತಪ್ಪಿಹೋಯಿತಲ್ಲಾ—ಎಂಬುದೇ ಅವನಿಗೊಂದು ಮನೋವ್ಯಥೆ. ರಾಜಮಾರ್ಗಗಳಲ್ಲಿ ಜನಸಂಚಾರವು ನಿಂತುಹೋಗಿದ್ದುದೊಂದು; ನಾಯಿಗಳು ಕೂಡ ನಿದ್ರಿಸುತ್ತಿದ್ದುದೊಂದು; ಇವೆರಡೂ ಅವನಿಗೆ ಸಂತಾಪಕರವಾದ ಸಂಗತಿಗಳು. ಅವನಿಗೆ ಮತ್ತೊಂದು ಆಶ್ಚರ್ಯವೂ ಉಂಟು. ವೀಣಾವಾದನ ಕೌಶಲಕ್ಕೆ ಬೆರಗಾಗಿ ಸಭಿಕರೆಲ್ಲರೂ ತಲೆದೂಗುತ್ತಿದ್ದುದನ್ನು ಅವನು ನೋಡಿಕೊಂಡು ಬಂದಿದ್ದಾನೆ. ಆದರೆ ಆ ಹಾಳು ವೀಣೆಯು ಅವನಿಗೆ ಆನಂದವನ್ನೇ ಉಂಟುಮಾಡಲಿಲ್ಲ. ಅದು ಅವನಿಗೇ ಆಶ್ಚರ್ಯ. ಈ ಎಲ್ಲ ಅಂಶಗಳನ್ನೂ ಸೂಚಿಸಿ, ಅವನು ಆಡುವ ಮಾತುಗಳನ್ನು ಕೇಳಿ, ಯಾರುತಾನೆ ನಗುವನ್ನು ತಡೆಯಬಲ್ಲರು? ವಿದೂಷಕನು ತನ್ನ ತಲೆಗೆ ನಾದವೂ, ಸಂಗೀತವೂ, ಹತ್ತದೆ ಹೋದುದಕ್ಕಾಗಿ ಶಾಪವನ್ನು ಜೇರಿ ಕೊಡುವನು. ಅವನ ಶಾಪವನ್ನು ಕೇಳಿದರೆ ಗಹಗಹಿಸಿ ನಗುವಂತಾಗುತ್ತದೆ. ಒಳ್ಳೆಯ ಕಡೆಯಲ್ಲಿ ತಂತಿಯು ಕಿತ್ತುಹೋಗಲೆಂಬುದೇ ನಮ್ಮ ಮಹಾಬ್ರಾಹ್ಮಣನ ಶಾಪ. ಚಾರುದತ್ತನು ಸಂಗೀತದ ಮಾಧುರ್ಯವನ್ನು ಹೊಗಳುವನು. ಆದರೂ, ಮೈತ್ರೇಯನ ಅಭಿಪ್ರಾಯವು ಬದಲಾಯಿಸುವ ಹಾಗಿಲ್ಲ. ಅಲ್ಲದೆ, ಅವನು ರಸಿಕರಾಜನಂತೆ ತನ್ನ ಸಿದ್ಧಾಂತವನ್ನು ಹೇಳಿಯೇ ಬಿಡುವನು. ಗಂಡಸು ಹಾಡುವುದೂ, ಹೆಂಗಸು ಹಾಡದೆ ಬರಡು ಕಗ್ಗವನ್ನು ಓದುವುದೂ ಅವನ ಮನಸ್ಸಿಗೆ ಸರಿಹೋಗುವಹಾಗಿಲ್ಲ. ಅವರಲ್ಲಿ ಅವನಿಗೆ ಆದರವಿಲ್ಲವಂತೆ. ಹಾಡುವ ಗಂಡಸು ಕೆಂಪುಬಣ್ಣದ ಹೂಗಳ ಮಾಲಿಕೆಯನ್ನು ಹಾಕಿಕೊಂಡಿರುವ ಪುರೋಹಿತನ ಹಾಗೆ ಇರುವನಂತೆ. ಸಂಗೀತ ಸಂಪರ್ಕವಿಲ್ಲದೆ ಬರಡು ಕಗ್ಗವನ್ನು ಓದುವ ಹೆಂಗಸು, ಮೂಗು ಹರಿದ ಹಸುವಿನಂತೆ ವಿರೂಪಳಾಗಿ ಕಾಣುವಳಂತೆ. ಇದು ವಿದೂಷಕನ ಸಿದ್ಧಾಂತ. ಇದನ್ನು ಕೇಳಿ ನಗದವರುಂಟೆ? ವಿದೂಷಕನಿಗೆ ತನ್ನನ್ನು ಚಾರುದತ್ತನ ಸೇವಕರು ಗೌರವಿಸಬೇಕೆಂಬ ಆಶೆಯೂ ಇದೆ. ಅವರೀರ್ವರೂ ಮನೆಯ ಬಾಗಿಲಿಗೆ ಬಂದು ಸೇವಕನನ್ನು ಕೂಗಿ ಬಾಗಿಲನ್ನು ತೆಗೆಯಿಸಿದಾಗಿನ

ಒಂದು ನಿದರ್ಶನವನ್ನು ಈ ಸಂಬಂಧದಲ್ಲಿ ಸೂಚಿಸಬಹುದಾಗಿದೆ. ಚೇಟನು ಚಾರುದತ್ತನಿಗೆ ವಂದನೆಗಳನ್ನು ಸಮರ್ಪಿಸಿ, ಅವನ ಕಾಲುಗಳನ್ನು ತೊಳೆಯುವನು. (ಕಾಲುಗಳನ್ನು ತೊಳೆಯದೆ ಮನೆಯೊಳಕ್ಕೆ ಹೋಗುವುದು ಶಿಷ್ಟಸಂಪ್ರದಾಯವಲ್ಲ.) ವಿದೂಷಕನು ತನ್ನ ಮಿತ್ರನ ಸೇವಕನು, ತನ್ನನ್ನೂ ತನ್ನ ಮಿತ್ರನಂತೆ ಉಪಚರಿಸಬೇಕೆಂಬ ಆಶೆಯಿಂದ ಕೂಡಿ, ತನ್ನ ಕಾಲುಗಳನ್ನೂ ತೊಳೆಯಬೇಕೆಂದು ಅಟ್ಟಹಾಸದಿಂದ ಅವನಿಗೆ ಆಜ್ಞೆ ಮಾಡುವನು. ಚೇಟನು ಅವನ ಕಾಲುಗಳನ್ನು ತೊಳೆದು, ಅವನ ಮುಖಕ್ಕೆ ನೀರನ್ನೆರಚುವನು. ವಿದೂಷಕನು ಅವನನ್ನು ಬಯ್ಯುವುದನ್ನು ನೋಡಿ, ನಮಗೆ ನಗು ಬರುವುದು.

ಮೈತ್ರೇಯನಲ್ಲಿ ಅಮೋಘವಾದೊಂದು ಸದ್ಗುಣವುಂಟು. ಅವನು "ಸಮ ದುಃಖಸುಖ" ನಾದ ಸನ್ಮಿತ್ರ. ವಿಭವವು ಅಳಿದಮೇಲೂ ಚಾರುದತ್ತನನ್ನು ವಿದೂಷಕನು ಬಿಟ್ಟುಹೋಗುವ ಸಂಭವವಿಲ್ಲ. ಚಾರುದತ್ತನು ಅದಕ್ಕಾಗಿಯೇ ಅವನನ್ನು, "ಸಮ ದುಃಖ ಸುಖ" ನೆಂದು ವರ್ಣಿಸಿರುವುದು. ವೈಭವಕಾಲವು ಕಳೆದುಹೋಗಿ ದಾರಿದ್ರ್ಯವು ಒದಗಿದ್ದಾಗ್ಗೂ, ಚಾರುದತ್ತನಿಗೆ ವಿಭವಾನುವಶಳಾದ ಪತ್ನಿಯೂ, ಸಮ ದುಃಖ ಸುಖನಾದ ಸನ್ಮಿತ್ರನೂ, ಕಳೆಗುಂದದ ಧೈರ್ಯವೂ ಇರುವುದು ವಿಶೇಷವೇ ಸರಿ. ಈ ಮೂರು ಭಾಗ್ಯಗಳೂ ದರಿದ್ರರಿಗೆ ದುರ್ಲಭವೆಂಬುದೇ ಚಾರುದತ್ತನ ಆಶಯ. ಮೈತ್ರೇಯನ ಸ್ನೇಹವು ಶುದ್ಧವಾದುದು. ಚಾರುದತ್ತನಿಗೆ ಬಡತನವು ಬಂದಿದೆಯೆಂದು ಮೈತ್ರೇಯನು ಅವನನ್ನು ಕಡೆಗಾಣನು. ರೂಪಕದ ಪ್ರಾರಂಭದಲ್ಲಿಯೇ ಮೈತ್ರೇಯನು ತನ್ನ ಹಿಂದಿನ ಭೋಜನದ ವೈಭವವನ್ನು ಹೇಳಿಕೊಳ್ಳುತ್ತಾನೆ. ಚಾರುದತ್ತನ ಮನೆಯಲ್ಲಿ ತಾನು ಹಾಲು ತುಪ್ಪಗಳಲ್ಲಿ ಕೈ ತೊಳೆಯುತ್ತ ಭಕ್ಷ್ಯಭೋಜ್ಯಗಳನ್ನು ಕವಳಿಸುತ್ತ, ಮೆಲುಕುಹಾಕುವ ವೃಷಭದಂತೆ ಮೋದಕಗಳನ್ನು ಮೆದ್ದು ಬಾಯಾಡುತ್ತ, ದಿವಾರಾತ್ರಿಯಲ್ಲಿಯೂ ಕಂಠಪೂರ್ತಿಯಾಗಿ ಭೋಜನಮಾಡುತ್ತಿದ್ದ ಬಗೆಯನ್ನು ಸ್ಮರಿಸಿಕೊಳ್ಳುತ್ತಾನೆ. ಚಾರುದತ್ತನಿಗೆ ಬಡತನವು ಬಂದಮೇಲೆ ತನಗೆ ಒದಗಿದ ದುರವಸ್ಥೆಯನ್ನು

ನೆನೆದು ಪೇಚಾಡಿಕೊಳ್ಳುತ್ತಾನೆ. ಭ್ರೂಕ್ಷೇಪ ಮಾತ್ರದಿಂದ ಇದ್ದ ಕಡೆ ಯಲ್ಲಿ ತನಗೆ ರಾಜೋಪಚಾರವು ನಡೆಯುತ್ತಿದ್ದುದು ತಪ್ಪಿಹೋಯಿತು. ಅವನು ಊಟವನ್ನು ಹುಡುಕಿಕೊಂಡು ಅಲೆದು, ಊಟವನ್ನು ಸಂಪಾ ದಿಸಿಕೊಂಡ ಬಳಿಕ, ಸಾಕಿದ ಪಾರಿವಾಳಗಳು ಮನೆಗೆ ಬರುವಂತೆ, ಚಾರುದತ್ತನ ನಿವಾಸಕ್ಕೇ ಹೋಗುವುದಾಗಿ ಹೇಳಿಕೊಳ್ಳುವನು. ಪಾಪ! ಮೈತ್ರೇಯನು, “ಮತ್ತೊಂದು ಆಶ್ಚರ್ಯ! ನನ್ನ ಹೊಟ್ಟೆಗೆ ಅವಸ್ಥಾ ವಿಶೇಷವು ಗೊತ್ತುಂಟು. ಸ್ವಲ್ಪ ಆಹಾರದಿಂದಲೇ ಅದು ತೃಪ್ತಿಯಾಗು ವುದು. ಸಿಕ್ಕಿದರೆ ಹೆಚ್ಚು ಅನ್ನದಭಾರವನ್ನೂ ತಡೆಯುವುದು. ದೊರೆ ಯದೆ ಹೋದರೆ ಕೇಳುವುದಿಲ್ಲ. ದೊರೆತರೆ ಬೇಡವೆನ್ನುವುದಿಲ್ಲ” ಎಂದು ಹೇಳಿಕೊಳ್ಳುವುದನ್ನು ನೋಡಿ ನಮಗೆ ವ್ಯಥೆಯಾಗುವುದು. ಒಂದು ವೇಳೆ, ನಗುವಂತಾದರೂ, ಅದು ಮೇಲಣ ನಗು. ಮೈತ್ರೇಯನು ತಾನು ಇಷ್ಟು ಕಷ್ಟಕ್ಕೆ ಸಿಕ್ಕಿದ್ದೂ ಕೂಡ, ಚಾರುದತ್ತನಲ್ಲಿ ಎಂದಿನಂತೆಯೇ ಪ್ರೀತಿಗೌರವಗಳನ್ನಿಟ್ಟುಕೊಂಡು (ನಾವು ಹಿಂದೆಯೇ ಸೂಚಿಸಿರುವಂತೆ) ಚಾರುದತ್ತನ ಗೌರವಕ್ಕೆ ಹಾನಿ ಬರದಂತೆ ವರ್ತಿಸಲಿಚ್ಛಿಸುತ್ತಿರುವು ದನ್ನು ನೋಡಿ, ಅಚ್ಚರಿಯಿಂದ ತಲೆದೂಗುವಂತಾಗುವುದು. ಚಾರು ದತ್ತನು ತನ್ನ ದಾರಿದ್ರ್ಯವನ್ನು ಕುರಿತು ಹಂಬಲಿಸುವುದನ್ನು ಕಂಡು ವಿದೂ ಷಕನು ಮೃದುಮಧುರವಾದ ಮಾತುಗಳಿಂದ ಅವನನ್ನು ಸಮಾಧಾನಪಡಿ ಸುವನು. ಆಸಮುದ್ರಪರ್ಯಂತವಾಗಿ ಪರೋಪಕಾರಕ್ಕಾಗಿ ಸಂಪತ್ತನ್ನು ದಾನಮಾಡಿದ ತನ್ನ ಮಿತ್ರನ ಔದಾರ್ಯವನ್ನು ಕೊಂಡಾಡಿ, ಅವನ ದಾರಿ ದ್ರ್ಯವು ಬಹುಳ ಪಕ್ಷದ ಚಂದ್ರನ ಜ್ಯೋತ್ಸ್ನಾಪರಿಕ್ಷಯದಂತೆ ರಮಣೀ ಯವೆಂದು ಮೈತ್ರೇಯನು ಸಮಾಧಾನ ಹೇಳುವನು. ಈ ಉಪಮಾನ ವನ್ನು ನೋಡಿದರೂ, ಮೈತ್ರೇಯನು ಸಂಸ್ಕಾರಸಹಿತನಾದ ಮತ್ತು ಸಾಹಿತ್ಯ ಪರಿಶ್ರಮವುಳ್ಳ ಮೇಧಾವಿಯೆಂದು ತೋರುವುದು. ಇಂತಹ ಪಾತ್ರವನ್ನು ರಚಿಸಿದ ಕವಿಯನ್ನು ಎಷ್ಟು ಹೊಗಳಿದರೂ ಸಾಲದು.

ಇತರ ಪಾತ್ರಗಳಲ್ಲಿ, ನಾವು ಗಮನಿಸಬೇಕಾದುದು ಬ್ರಾಹ್ಮಣಿ, ಸಂವಾಹಕ, ಸಜ್ಜಲಕ ಮತ್ತು ಮದನಿಕೆ ಇವರುಗಳ ವಿಚಾರವನ್ನು ಮಾತ್ರವೇ. ಚಾರುದತ್ತನ ಹೆಂಡತಿಯಾದ ಬ್ರಾಹ್ಮಣಿಯು ಪತಿಪ್ರಾಣೆ

ಯಾದ ಸಾಧ್ವಿ ; ಚಾರುದತ್ತನೇ ತಿಳಿಸುವಂತೆ ಅವಳು, ವಿಭವಾನುವಶೆ
ಯಾದ ಸಹಧರ್ಮಿಣಿ ಗಂಡನಿಗೆ ದಾರಿದ್ರ್ಯವು ಬಂದಿ
**ಇತರ** ದ್ದರೂ ಸಂತೋಷದಿಂದ ಕಷ್ಟಗಳನ್ನನುಭವಿಸುವಳು.
**ಪಾತ್ರಗಳು** ಅವಳ ಔದಾರ್ಯಕ್ಕೂ, ದಾಕ್ಷಿಣ್ಯಪರತೆಗೂ, ಆತ್ಮ
ಗೌರವಕ್ಕೂ ನಿದರ್ಶನಗಳಿವೆ. ಅವುಗಳನ್ನು ಹಿಂದೆಯೇ
ಸೂಚಿಸಿದ್ದೇವೆ. ಸಂವಾಹಕನು ಅನಿವಾರ್ಯವಾಗಿ ಜೂಜಿನಿಂದ ಹೊಟ್ಟೆ ಹೊರೆಯುವ ಸ್ಥಿತಿಗಿಳಿದಿದ್ದಾನೆ. ಕೈಯಲ್ಲಿ ಹಣವಿಲ್ಲದೆಯೇ ಅವನು ಜೂಜಿನಲ್ಲಿ ಉದ್ಯುಕ್ತನಾದುದು ತಪ್ಪೆಂದು ಹೇಳಿಯಲೇ ಬೇಕು ; ಆದರೂ ನಾವು ಮೊದಲೇ ಸೂಚಿಸಿರುವಂತೆ ಅವನ ಸದ್ಗುಣಗಳನ್ನು ಅಭಿನಂದಿಸಬೇಕು. ಸಜ್ಜಲಕನು ಮದನಿಕೆಯು ತನಗೆ ದೊರೆಯುವಂತೆ ಮಾಡಿಕೊಳ್ಳಲು ಕೊಡಬೇಕಾದ ಮೂಲ್ಯಕ್ಕಾಗಿ ಕಳ್ಳತನ ಮಾಡಿದರೂ, ತನ್ನ ಹೀನ ಕಾರ್ಯವನ್ನು ಕುರಿತು ತನ್ನನ್ನು ಹಳಿದುಕೊಳ್ಳುತ್ತಾನೆ. ಮದನಿಕೆಯು ತನ್ನ ಪ್ರಿಯನು ಅಕಾರ್ಯ ಮಾಡಿದುದಕ್ಕಾಗಿ ಆಕ್ಷೇಪಿಸಿ, ನಿಜವನ್ನು ತಿಳಿಸಿ ರುಜುತೆಯಿಂದಿರಬೇಕೆಂದು ಅವನನ್ನು ಪ್ರೇರಿಸುವುದು ಮನೋಜ್ಞವಾಗಿದೆ.

**ಗಮನಾರ್ಹವಾದ ಕೆಲವು ಮುಖ್ಯಾಂಶಗಳು :—** ಈ ರೂಪಕದಲ್ಲಿ ನಾವು ಗಮನಿಸಬೇಕಾದ ಕೆಲವು ಮುಖ್ಯಾಂಶಗಳಿವೆ. **ಮೊದಲನೆಯದು,** ದರಿದ್ರನಾದ ಚಾರುದತ್ತನನ್ನು ಕಥಾನಾಯಕನಾಗಿಟ್ಟು, ವೇಶ್ಯೆಯಾದ ವಸಂತಸೇನೆಯನ್ನು ಗುಣಪಕ್ಷಪಾತಿನಿಯಾದ ಶೀಲವತಿಯನ್ನಾಗಿ ಚಿತ್ರಿಸಿ ಕವಿಯು ತೋರಿಸಿರುವ ಹೃದಯನ್ವೈಶಾಲ್ಯ. **ಎರಡನೆಯದು,** ಕವಿಯು ಒದಗಿಸಿರುವ ಸಾಮಾಜಿಕ ಚಿತ್ರ. **ಮೂರನೆಯದು,** ದಾಸ್ಯಕ್ಕೆ ಗುರಿಯಾದವರ ವಿಷಯದಲ್ಲಿ ಯಜಮಾನರು ತೋರಿಸುತ್ತಿದ್ದ ಪ್ರೀತಿಮಮತೆಗಳು. ಸಜ್ಜಲಕನು ತನ್ನ ಪ್ರಿಯೆಯಾದ ಮದನಿಕೆಗಾಗಿ ಮೂಲ್ಯವನ್ನು ಕೊಟ್ಟು ವಸಂತಸೇನೆಯಿಂದ ಬಿಡಿಸಿಕೊಂಡು ಹೋಗಬೇಕಾಗಿದ್ದ ಅಂಶವು ರೂಪಕದಿಂದ ವ್ಯಕ್ತವಾಗುತ್ತದೆ. ಭಾಸನ ಕಾಲದಲ್ಲಿ ದಾಸ್ಯವಿದ್ದಿತೆಂದು, (“ಗುಲಾಮರ” ವ್ಯಾಪಾರವಿದ್ದಿತೆಂದು) ಇದರಿಂದ ತೋರಬಹುದು. ಹಾಗೆ ನಿರ್ಧರಿಸುವವರು, ದಾಸ್ಯಕ್ಕೆ ಗುರಿಯಾದವರ ವಿಷಯದಲ್ಲಿ ಯಜಮಾನರು ತೋರಿಸುತ್ತಿದ್ದಂತೆ ಇದೇ

ರೂಪಕದಿಂದಲೇ ವ್ಯಕ್ತವಾಗುವ ಪ್ರೀತಿಮಮತೆಗಳನ್ನೂ ಮರೆಯಬಾರದು. ವಸಂತಸೇನೆಯು ಮದನಿಕೆಯನ್ನು ತನ್ನ ತಂಗಿಯಂತೆಯೂ ತನ್ನ ಪ್ರಿಯ ಸಖಿಯಂತೆಯೂ ಕಾಣುವುದೇ ಇದಕ್ಕೆ ನಿದರ್ಶನ; ದಾಸ್ಯವು (Slaverv) ನೆಲಸಿದ್ದ ಇತರ ದೇಶಗಳಲ್ಲಿ ಅದಕ್ಕೆ ಗುರಿಯಾದ ಸ್ತ್ರೀಪುರುಷರ ವಿಷಯದಲ್ಲಿ ಯಜಮಾನರು ತೋರಿಸುತ್ತಿದ್ದ ಕ್ರೌರ್ಯವನ್ನು ಪರಿಗಣಿಸಿದರೆ ಭರತಖಂಡದಲ್ಲಿ ಬಹುಶಃ ಆಚರಣೆಯಲ್ಲಿದ್ದ ದಾಸ್ಯವು ಕೂಡ ನಾವು ಹೆಮ್ಮೆಪಡುವಂತಿದೆ. ಇದೇನೂ ಅತಿಶಯೋಕ್ತಿಯಲ್ಲ. ದಾಸ್ಯವಿಲ್ಲವೆಂದು ಹೇಳಿಕೊಳ್ಳುವ ಈ ಕಾಲದಲ್ಲಿ ಹುಲಿ ಕರಡಿಗಳಿಗಿಂತ ಹೆಚ್ಚಾಗಿ ಸಿದ್ದಿಯರ (ನೀಗ್ರೋಗಳ) ವಿಷಯದಲ್ಲಿ ಅಮೆರಿಕಾಖಂಡದವರೇ ಮುಂತಾದವರು ಕ್ರೌರ್ಯವನ್ನು ತೋರಿಸುವ ಸಂದರ್ಭಗಳನ್ನು ಗಮನಿಸಿದ ಮಾತ್ರಕ್ಕೇ ಅದು ನಿಜವೆಂಬುದು ಗೊತ್ತಾಗುತ್ತದೆ. **ನಾಲ್ಕನೆಯದು,** "ಚಾರುದತ್ತ" ಎಂಬ ಹೆಸರೇ, "ಮೃಚ್ಛಕಟಿಕ" ಎಂಬ ಹೆಸರಿಗಿಂತ ಯುಕ್ತವೆನಿಸಿರುವ ವಿಚಾರ. ಮಣ್ಣಿನ ಬಂಡಿಯು ವಿಷಯವು ಅಷ್ಟೇನೂ ಮುಖ್ಯವಾಗಿಲ್ಲದಿದ್ದೂ, ಅದು ಕಥಾನಾಯಕನಾದ ಚಾರುದತ್ತನಿಗೆ ಪ್ರತ್ಯಕ್ಷವಾಗಿ ಸಂಬಂಧಪಟ್ಟಿಲ್ಲದಿದ್ದೂ ರೂಪಕಕ್ಕೆ ಮೃಚ್ಛಕಟಿಕವೆಂದು ಶೂದ್ರಕನು ಹೆಸರನ್ನಿಟ್ಟಿದ್ದಾನೆ. ಅದಕ್ಕಿಂತ ಚಾರುದತ್ತವೆಂದು ತನ್ನ ರೂಪಕಕ್ಕೆ ನಮ್ಮ ಕವಿಯು ಹೆಸರಿಟ್ಟಿರುವುದೇ ಯುಕ್ತವಾಗಿದೆ. **ಐದನೆಯದು,** ಒಟ್ಟಿನಲ್ಲಿ ರೂಪಕದ ಶ್ರೇಷ್ಠತೆಯ ವಿಚಾರ. ಚಾರುದತ್ತ ರೂಪಕವು ಎಷ್ಟು ಉತ್ತಮವಾದುದೆಂಬ ಅಂಶವು ಈಗ ಉಪಲಬ್ಧವಾಗಿರುವ ನಾಲ್ಕು ಅಂಕಗಳಿಂದಲೇ ವ್ಯಕ್ತವಾಗುತ್ತದೆ. ಸುಪ್ರಸಿದ್ಧ ವಿದ್ವಾಂಸರಾದ ಶ್ರೀಮಾನ್ ಎಂ. ಹಿರಿಯಣ್ಣನವರು ಹೇಳಿರುವಂತೆ ಪ್ರಾಚೀನಕಾಲದ ಅಥವಾ ಈಗಿನ ಕಾಲದ ಯಾವ ಸಾಮಾಜಿಕ ರೂಪಕಕ್ಕೇ ಹೋಲಿಸಿದರೂ ಚಾರುದತ್ತ ರೂಪಕದ ಶ್ರೇಷ್ಠತೆಗೆ ಏನೇನೂ ಬಾಧಕ ಬರುವಂತಿಲ್ಲ. *

---

* "As a social drama, *Charudatta* will easily hold its own against any drama, ancient or modern."

—Professor M. Hiriyanna, M.A.

# ಅವಿಮಾರಕ

## ಅವತರಣಿಕೆ

ಈ ರೂಪಕವು ಪ್ರಾರಂಭವಾಗುವ ವೇಳೆಗೆ ನಡೆದಿರುವ ಕೆಲವು ಸಂಗತಿಗಳನ್ನು ಕವಿಯು ಕೊನೆಯ ಅಂಕದಲ್ಲಿ ನಾರದರಿಂದ ಹೇಳಿಸುತ್ತಾನೆ. ಅವುಗಳನ್ನು ಮುಂಚಿತವಾಗಿಯೇ ತಿಳಿದುಕೊಳ್ಳುವುದೇ ಅನುಕೂಲ. ಸೌವೀರ ರಾಜ್ಯದ ರಾಜನ ಹೆಂಡತಿ ಸುಚೇತನಾದೇವಿಯೂ, ಕಾಶಿ ರಾಜನ ಹೆಂಡತಿ ಸುದರ್ಶನಾದೇವಿಯೂ ಸಹೋದರಿಯರು. ವೈರಂತ್ಯ ನಗರವನ್ನು ರಾಜಧಾನಿಯಾಗಿಟ್ಟುಕೊಂಡು ಪ್ರಭುತ್ವ ಮಾಡುತ್ತಿದ್ದ ಕುಂತಿಭೋಜನು ಅವರೀರ್ವರ ಸಹೋದರ ಅವನ ಹೆಂಡತಿಯು ಸೌವೀರರಾಜನ ತಂಗಿ. ಸುದರ್ಶನಾದೇವಿಯು ಅಗ್ನಿಯಿಂದ ಗರ್ಭಧಾರಣೆ ಮಾಡಿ ಹೆತ್ತ ಮಗುವನ್ನು ತನ್ನ ಸಹೋದರಿ ಸುಚೇತನಾದೇವಿಯ ಮಗುವು ಸತ್ತುಹೋದ ಕಾರಣ ಅದಕ್ಕೆ ಪ್ರತಿಯಾಗಿ ಅವಳಿಗೆ ಕೊಡುವಳು. ಸುಚೇತನಾದೇವಿಯೂ ಅವಳ ಪತಿಯಾದ ಸೌವೀರ ರಾಜನೂ ಅದನ್ನು ತಮ್ಮ ಮಗುವೆಂದು ಭಾವಿಸಿ ಸಾಕುವರು. ಆ ಬಾಲಕನ ಹೆಸರು ವಿಷ್ಣುಸೇನ. ವಿಷ್ಣುಸೇನನು ಪ್ರಾಪ್ತವಯಸ್ಕನಾದಾಗ ಬಹಳ ಪರಾಕ್ರಮಿಯಾಗುವನು. ಅಲ್ಲದೆ ಅವನು ತಮ್ಮ ರಾಜ್ಯದ ಪ್ರಜೆಗಳನ್ನು ಕಾಡುತ್ತಿದ್ದ ಒಬ್ಬ ರಾಕ್ಷಸನನ್ನು ಕೊಲ್ಲುವನು. ಮೇಕೆಯ ರೂಪವನ್ನು ಧರಿಸಿ ತನ್ನೊಡನೆ ಕಾದಿದ ಆ ರಾಕ್ಷಸನನ್ನು ಕೊಂದಕಾರಣ, ವಿಷ್ಣುಸೇನನಿಗೆ ಅವಿಮಾರಕನೆಂಬ ಅಡ್ಡಹೆಸರು ಬರುವುದು. "ಅವಿ" ಎಂದರೆ ಮೇಕೆ. ಅದನ್ನು (ಎಂದರೆ ಮೇಕೆಯ ರೂಪವನ್ನು ಧರಿಸಿದ್ದ ರಾಕ್ಷಸನನ್ನು) ಕೊಂದ ಕಾರಣ ಆ ಹೆಸರು.

ಕುಂತಿಭೋಜನಿಗೆ ಕುರಂಗಿ ಮತ್ತು ಸುಮತಿ ಎಂಬಿಬ್ಬರು ಪುತ್ರಿಯರೂ, ಸುದರ್ಶನಾ ದೇವಿಗೆ ಜಯವರ್ಮನೆಂಬ ಪುತ್ರನೂ ಇರುವರು. ಕುಂತಿ ಭೋಜನ ಹೆಂಡತಿಯು ತನ್ನ ಮಗಳಾದ ಕುರಂಗಿಯನ್ನು

ತನ್ನ ಅಣ್ಣ ಸೌವೀರರಾಜನ ಮಗನಾದ ವಿಷ್ಣುಸೇನನಿಗೆ ಕೊಟ್ಟು ವಿವಾಹಮಾಡಲಿಚ್ಛಿಸುವಳು.

ಆ ಮಧ್ಯದಲ್ಲಿ, ಸೌವೀರ ರಾಜನೊಂದು ದಿನ ಬೇಟೆಗೆ ಹೊರಟು ಕಾಡಿಗೆ ಹೋಗುವನು. ಹುಲಿಯು ತನ್ನ ಶಿಷ್ಯನನ್ನು ಕೊಂದುದಕ್ಕಾಗಿ ಸಂಕಟಪಡುತ್ತಿರುವ ಅತಿಕೋಪಿಷ್ಠನಾದ ಚಂಡಭಾರ್ಗವನೆಂಬ ಋಷಿಯನ್ನು ಅವನು ನೋಡುವನು ರಾಜನು ಸರಿಯಾದ ರಕ್ಷಣೆಯ ಏರ್ಪಾಡನ್ನು ಮಾಡದೆ ಹೋದುದೇ ತನ್ನ ಶಿಷ್ಯನ ಮರಣಕ್ಕೆ ಕಾರಣವೆಂಬ ಭಾವನೆಯಿಂದಲೋ ಏನೋ ಋಷಿಯು ನಿಷ್ಕಾರಣವಾಗಿ ಸೌವೀರರಾಜನ ಮೇಲೆ ರೇಗಿ ಬಗೆಬಗೆಯಾಗಿ ನಿಂದಿಸತೊಡಗುವನು. ಋಷಿಯು ನಿರಪರಾಧಿಯಾದ ತನ್ನನ್ನು ನಿಂದಿಸಿದುದಕ್ಕಾಗಿ ಕೆರಳಿದ ರಾಜನು ಅಕಾರಣವಾಗಿ ರೋಷಪರವಶನಾದ ಆ ಋಷಿಯು ಬ್ರಹ್ಮರ್ಷಿರೂಪದ ಚಂಡಾಲನೆಂದು ಹೇಳುವನು. ಚಂಡಭಾರ್ಗವನು ಮತ್ತಷ್ಟು ರೇಗಿ ಚಂಡಾಲನಾಗೆಂದು ಸೌವೀರರಾಜನಿಗೆ ಶಾಪವನ್ನು ಕೊಡುವನು. ರಾಜನು ಬೇಡಿದ ಮೇಲೆ ಒಂದು ವರ್ಷಕಾಲ ಪ್ರಚ್ಛನ್ನ ರೂಪದಲ್ಲಿದ್ದ ಬಳಿಕ ಶಾಪ ಪರಿಹಾರವಾಗುವುದೆಂದು ಋಷಿಯು ಅನುಗ್ರಹ ಮಾಡುವನು. ಸೌವೀರ ರಾಜನು ರಾಜ್ಯಭಾರವನ್ನು ಮಂತ್ರಿಗಳಿಗೊಪ್ಪಿಸಿ ಪತ್ನೀ ಪುತ್ರರಿಂದೊಡಗೂಡಿ ರಹಸ್ಯವಾಗಿ ಕುಂತಿ ಭೋಜನ ರಾಜಧಾನಿಗೆ ಬಂದು ಚಂಡಾಲರ ಕೇರಿಯಲ್ಲಿ ವಾಸವಾಗಿರುವನು. ಒಂದು ದಿನ ಕುರಂಗಿಯು ವನವಿಹಾರಕ್ಕೆ ಹೋಗಿದ್ದು ಬರುತ್ತಿರುವಾಗ ಮದಿಸಿದ ಆನೆಯೊಂದು ಮಾವಟಿಗನನ್ನು ಕೊಂದು ಇತರ ಭಟರನ್ನೆಲ್ಲ ಕೆಡುಹಿ ಅವಳ ಬಂಡಿಯ ಬಳಿಗೆ ಓಡಿಬರುವುದು. ಹೆಂಗಸರೆಲ್ಲ ಹಾಹಾಕಾರಮಾಡುವರು. ಇತರರು ಕೂಗಿಕೊಳ್ಳುವರು. ಅವಿಮಾರಕನು ಅತ್ಯಂತ ಸಾಹಸದಿಂದ ಅದನ್ನೆದುರಿಸಿ ಕುರಂಗಿಯ ಜೀವವನ್ನುಳಿಸುವನು. ಅವರೀರ್ವರಿಗೂ ಪ್ರಥಮ ಸಂದರ್ಶನದಲ್ಲೇ ಪರಸ್ಪರವಾಗಿ ಅನುರಾಗವು ಹುಟ್ಟುವುದು. ಅಷ್ಟರಲ್ಲಿ ಅಲ್ಲಿಗೆ ಬಂದ ಕೌಂಜಾಯನ ಭೂತಿಕರೆಂಬ ಸಚಿವರು ಕುರಂಗಿಯನ್ನು ಬಂಡಿಯಲ್ಲಿ ಕುಳ್ಳಿರಿಸಿ ಅಂತಃಪುರಕ್ಕೆ ಕಳುಹಿಸುವರು. ಅನಂತರ ಭೌತಿಕನು ನಡೆದ

ಸಂಗತಿಗಳನ್ನು ರಾಜನಾದ ಕುಂತಿ ಭೋಜನಿಗೆ ಅರಿಕೆ ಮಾಡಲು ಕೌಂಜಾ ಯನನನ್ನು ಕಳುಹಿಸಿ, ಕುರಂಗಿಯನ್ನುಳಿಸಿದ ತರುಣನ ವಿಚಾರವನ್ನು ತಾನು ತಿಳಿದುಕೊಂಡು ಬರಲು ಹೋಗುವನು.

## ೧. ಕಥಾಸಾರಾಂಶ

**ಮೊದಲನೆಯ ಅಂಕದಲ್ಲಿ,** ಕುಂತಿ ಭೋಜನೂ ಅವನ ಪತ್ನಿಯೂ ಕುರಂಗಿಯ ವಿವಾಹ ವಿಚಾರವನ್ನು ಕುರಿತು ಮಾತನಾಡುತ್ತಿರುವಾಗ ಕೌಂಜಾಯನನು ಬಂದು ಆನೆಯ ವೃತ್ತಾಂತವನ್ನು ತಿಳಿಸಿ, ಕುರಂಗಿ ಯನ್ನುಳಿಸಿದವನು ತಾನು ಚಂಡಾಲನೆಂದು ಸೂಚಿಸಿದನೆಂದು ಅವನಿಗೆಬಿನ್ನ ವಿಸುವನು. ಅಷ್ಟರಲ್ಲಿ ಭೂತಿಕನೂ ಬಂದು ತಾನು ವಿಚಾರ ಮಾಡಿದುದರಲ್ಲಿ ಸಹ ಅದೇ ರೀತಿ ತಿಳಿಯಬಂದರೂ ತಾನು ಅದನ್ನು ನಂಬುವುದಕ್ಕೆ ಮಾತ್ರ ಸಾಧ್ಯವಿರಲಿಲ್ಲನೆಂದು ಹೇಳುವನು. ಸೌವೀರ ರಾಜನು ತನ್ನ ಮಗ ನಿಗೆ ಕುರಂಗಿಯನ್ನು ಕೊಟ್ಟು ವಿವಾಹ ಮಾಡಬೇಕೆಂದು ರಾಯಭಾರಿ ಯನ್ನು ಕಳುಹಿಸಿದ್ದಾಗ ಕುರಂಗಿಯು ಇನ್ನೂ ಬಾಲಕಿಯೆಂದು ಕುಂತಿ ಭೋಜನು ಹೇಳಿಕಳುಹಿಸಿದ ಮೇಲೆ ಅನೇಕ ವರ್ಷಗಳಾಗಿದ್ದೂ ಮತ್ತೆ ಆ ಸುದ್ದಿಯೇ ಇಲ್ಲದೆ ಸುಮ್ಮನಾದುದನ್ನು ಕಂಡು ಕುಂತಿಭೋಜನು ಅವನ ರಾಜ್ಯಕ್ಕೆ ಕಳುಹಿಸಿದ್ದವರು ಹಿಂತಿರುಗಿ ಬಂದು, ಆತನೂ ಅವನ ಮಗ ಅವಿಮಾರಕನೂ ಎಲ್ಲಿಯೋ ಮಾಯವಾಗಿದ್ದರೆಂದು ತಿಳಿಸುವರು. ಸುದರ್ಶನಾದೇವಿಯ ಗಂಡನಾದ ಕಾಶಿರಾಜನು ತನ್ನ ಮಗ ಜಯ ವರ್ಮನಿಗೆ ಕುರಂಗಿಯನ್ನು ಕೊಟ್ಟು ವಿವಾಹ ಮಾಡಬೇಕೆಂದು ರಾಯ ಭಾರಿಯನ್ನು ಕಳುಹಿಸಿರುವನು. **ಎರಡನೆಯ ಅಂಕದ** ಪ್ರವೇಶಕದಲ್ಲಿ ಅವಿಮಾರಕನ ಮಿತ್ರನಾದ ವಿದೂಷಕನು ಚೇಟಿಯಿಂದ ವಂಚಿತನಾಗು ವನು. ಅವನು ಅವಳ ಮೇಲೆ ಚಾಡಿಹೇಳಲು ಅವಿಮಾರಕನಲ್ಲಿಗೆ ಹೋಗುವನು. **ಎರಡನೆಯ ಅಂಕದಲ್ಲಿ,** ಕಾಮಪೀಡಿತನಾಗಿರುವ ಅವಿ ಮಾರಕನನ್ನು ಕಾಣಲು ವಿರಹಕಾತರೆಯಾದ ಕುರಂಗಿಯ ಧಾತ್ರಿಯು ನಲಿನಿಕೆಯೊಡನೆ ಬರುವಳು. ಅವಳು ಹೇಳಿದ ಸಂಕೇತದಂತೆ ಆ ದಿನ ಅರ್ಧರಾತ್ರಿಯ ವೇಳೆಗೆ ಅರಮನೆಯ ಮೇಲಕ್ಕೆ ಹತ್ತಿ ಅವಿಮಾರಕನು

ಕುರಂಗಿಯ ಅಂತಃಪುರಕ್ಕೆ ಹೋಗಬೇಕೆಂದು ಗೊತ್ತಾಗುವುದು. **ಮೂರ ನೆಯ ಅಂಕದಲ್ಲಿ,** ಅವಿಮಾರಕನು ಕುರಂಗಿಯ ಅಂತಃಪುರಕ್ಕೆ ಹೋಗಿ ಅಲ್ಲಿರುವನು. **ನಾಲ್ಕನೆಯ ಅಂಕದ** ಪ್ರವೇಶಕದಲ್ಲಿ, ಅವಿಮಾರಕನು ಒಂದು ವರ್ಷಕಾಲ ಕುರಂಗಿಯ ಅಂತಃಪುರದಲ್ಲಿ ರಹಸ್ಯವಾಗಿದ್ದುದು ರಾಜ ನಿಗೆ ತಿಳಿದುದರ ಪರಿಣಾಮವಾಗಿ ಅವನು ಓಡಿಹೋದ ಅಂಶವೂ, ಕುರಂ ಗಿಯು ವ್ಯಥೆಪಡುತ್ತಿರುವ ಅಂಶವೂ ವಿಶದಪಡುವುವು. **ನಾಲ್ಕನೆಯ ಅಂಕದಲ್ಲಿ,** ಆತ್ಮಹತ್ಯ ಮಾಡಿಕೊಳ್ಳುವ ಪ್ರಯತ್ನ ಮಾಡುತ್ತಿರುವ ಅವಿಮಾರಕನು ವಿದ್ಯಾಧರನು ಕೊಟ್ಟ ಉಂಗುರದ ಸಹಾಯದಿಂದ ಇತ ರರಿಗೆ ಅದೃಶ್ಯನಾಗಿ ಅರಮನೆಗೆ ಹೋಗುವನು. **ಐದನೆಯ ಅಂಕದಲ್ಲಿ,** ಅವಿಮಾರಕನು ಆತ್ಮಹತ್ಯದ ಪ್ರಯತ್ನದಲ್ಲಿ ಉದ್ಯುಕ್ತೆಯಾಗಿದ್ದ ಕುರಂಗಿ ಯನ್ನು ರಕ್ಷಿಸಿ ಸಂತೋಷಪಡಿಸುವನು. **ಆರನೆಯ ಅಂಕದಲ್ಲಿ,** ಕುರಂಗಿ ಯನ್ನು ಜಯವರ್ಮನಿಗೆ ಕೊಟ್ಟು ವಿವಾಹಮಾಡಲು ಏರ್ಪಾಡು ನಡೆಯು ತ್ತಿರುವುದು. ಆ ವೇಳೆಗೆ ಶಾಪದ ಅವಧಿಯು ತೀರಿಹೋದ ಕಾರಣ, ಸೌವೀರರಾಜನು ಕುಂತಿಭೋಜನಲ್ಲಿಗೆ ಬರುವನು. ಅವನು ತನ್ನ ಪುತ್ರ ನೆಲ್ಲಿಹೋದನೋ ಎಂದು ಕಳವಳಪಡುತ್ತಿರುವನು. ನಾರದ ಮಹರ್ಷಿ ಗಳು ಬಂದು ಎಲ್ಲ ಸಂಗತಿಗಳನ್ನೂ ತಿಳಿಸುವರು. ಕುರಂಗಿಯನ್ನು ಅವಿ ಮಾರಕನಿಗೂ, ಸುಮತಿಯನ್ನು ಜಯವರ್ಮನಿಗೂ ಕೊಟ್ಟು ವಿವಾಹವು ನಡೆಯುವಂತೆ ನಿಷ್ಕರ್ಷೆಯಾಗುವುದು.

## ೨. ವಿಮರ್ಶೆ

**ಸಂವಿಧಾನ ಕೌಶಲ:**-ಈ ರೂಪಕವು ಕವಿಯ ಆರಂಭ ಪ್ರಯತ್ನದ ಫಲವೆಂದೇ ಹೇಳಬೇಕಾಗುತ್ತದೆ. ಸ್ವಪ್ನವಾಸವದತ್ತ, ಪ್ರತಿಮಾ ನಾಟಕ, ಊರುಭಂಗ, ಚಾರುದತ್ತ, ಮುಂತಾದ ರೂಪಕಗಳಲ್ಲಿರುವಂತೆ ಈ ರೂಪಕದಲ್ಲ ಸಂವಿಧಾನ ಕೌಶಲದ ಪಾಕವು ಸರಿಯಾಗಿ ಇಳಿದಿಲ್ಲ. ಆದರೂ ಕೆಲಕೆಲವು ಭಾಗಗಳಲ್ಲಿ ಮಾತ್ರ ಮುಂದಿನ ಬೆಳೆಯ ಸಿರಿಯು ಈ ಮೊಳಕೆಯಿಂದ ಸೂಚಿತವಾಗುತ್ತಿದೆ. ಉಳಿದ ರೂಪಕಗಳಲ್ಲಿರುವ ಸೂರ್ಯ ಪ್ರಭೆಯು ಇಲ್ಲಿ ಬೆಳಗುತ್ತಿಲ್ಲ. ಆದರೆ ಹಲವು ನಕ್ಷತ್ರಗಳು ಮಿನುಗುತ್ತಿರುವುದನ್ನೇನೊ ಇಲ್ಲವೆನ್ನುವಂತಿಲ್ಲ.

ಅವಿಮಾರಕದ ಮತ್ತು ಚಾರುದತ್ತದ ಕಥಾವಸ್ತುವು ಕವಿಯಿಂದಲೇ ಸ್ವತಂತ್ರವಾಗಿ ಕಲ್ಪಿತವಾದುದು. ಕುಂತಿಭೋಜನು ದುರ್ಯೋಧನನ ಮಗನೆಂದು † ಎರಡುಸಾರಿ ಹೇಳಿರುವುದರಿಂದ ಅವನು ಮಹಾಭಾರತದ ದುರ್ಯೋಧನನ ಮಗನಿರಬಹುದೆ ಎಂಬ ಭ್ರಮೆಯುಂಟಾಗಬಹುದು. ಮಹಾಭಾರತದ ದುರ್ಯೋಧನನಿಗೂ ಈ ದುರ್ಯೋಧನನಿಗೂ ಸಂಬಂಧ ವಿಲ್ಲ. ಇವನು ಕಲ್ಪಿತ ವ್ಯಕ್ತಿಯು ಮಾತ್ರ. ಕಥಾಸಾಹಿತ್ಯದ ಆಧಾರದ ಮೇಲೆ ಕವಿಯು ಇದರ ಕಥೆಯನ್ನು ಕಲ್ಪಿಸಿರುವನೆಂದು ಕೆಲವರು ಪಾಶ್ಚಿಮಾತ್ಯ ವಿದ್ವಾಂಸರು ಹೇಳಿದ್ದಾರೆ. ಇದು ಸರಿಯಲ್ಲವೆಂದು ತೋರುತ್ತದೆ. ಸುಪ್ರಸಿದ್ಧ ವಿದ್ವಾಂಸರಾದ ಶ್ರೀಮಾನ್ ಎಂ. ಹಿರಿಯಣ್ಣನವರ ಅಭಿಪ್ರಾಯವೂ ಇದಕ್ಕೇ ಸಾಧಕವಾಗಿದೆ. ಅವರು, "ಭಾಸನು ದಂತ ಕಥೆಗಳ ಅಥವಾ ಪೌರಾಣಿಕ ಕಥೆಗಳ ಆಧಾರದ ಮೇಲೆ ರೂಪಕವನ್ನು ಬರೆಯದೆ ಇವೆರಡರ ಕಥಾವಸ್ತುವನ್ನೂ ಸ್ವತಂತ್ರವಾಗಿ ಕಲ್ಪಿಸಿದ್ದಾನೆ. ಅದರ ಫಲಿತಾಂಶವಾಗಿ ಇವೆರಡೂ ಅವನ ಕಾಲದ ಸಾಮಾಜಿಕ, ರಾಜಕೀಯ, ನೈತಿಕ ಮತ್ತು ಮೇಧಾವಿತನದ ಸ್ಥಿತಿಗತಿಗಳ ವಿಷಯವನ್ನು ಸ್ವಲ್ಪಮಟ್ಟಿಗೆ ಸೂಚಿಸಿ ಸ್ಪಷ್ಟಪಡಿಸತಕ್ಕವಾಗಿ ಎಲ್ಲರಿಗೂ ಅಸಾಮಾನ್ಯ ರೀತಿಯಲ್ಲಿ ಆಕರ್ಷಕವಾಗಿವೆ" * ಎಂದು ಅಭಿಪ್ರಾಯಪಟ್ಟಿದ್ದಾರೆ.

---

† ಒಂದೆಡೆ "ಭೋಃ! ಕುನ್ತಿಭೋಜಸ್ಯ ಪಿತ್ರಾ ದುರ್ಯೋಧನೇನ ವಯಂ ಸುಚಿರಮಾರಾಧಿತಾಃ।" ಎಂದೂ ಮತ್ತೊಂದೆಡೆ "ದುರ್ಯೋಧನಸ್ಯ ತನಯಃ ಕುನ್ತಿಭೋಜೋ ಭವಾನ್ನನು॥" ಎಂದೂ ರೂಪಕದಲ್ಲಿ ಹೇಳಿದೆ.

* "Instead of going for legendary or mythological stories, Bhasa invented his plot in both these cases and, in consequence, these plays must possess a peculiar interest to all, as throwing light on the social, political, moral and intellectual conditions of his time."—Prof. M. Hiriyanna, M.A.

"ಸ್ಥಾಪನೆ"ಯು ಬಹು ಚಿಕ್ಕದಾಗಿ ಸ್ವಾರಸ್ಯವಾಗಿದೆ. ಸೂತ್ರಧಾರನು ನಾರಾಯಣನ ಸ್ತುತಿಯ ಶ್ಲೋಕವನ್ನು ಹಾಡಿದ ನಂತರ ನಟಿಯನ್ನು ಕರೆಯುತ್ತಾನೆ. ಏನನ್ನೋ ಹೇಳಲಿಚ್ಛಿಸುತ್ತಿರುವಂತೆ ಮುಖಭಾವವನ್ನು ವ್ಯಕ್ತಪಡಿಸುತ್ತ, ಹೇಳಲು ಅನುಮಾನಿಸುತ್ತ, ಆ ಕಾರಣದಿಂದ ಮುಗುಳುನಗೆಯನ್ನು ಸೂಚಿಸುತ್ತ, ಅವಳು ಬಂದು ನಿಲ್ಲುವುದು ಮನೋಹರವಾಗಿದೆ. ಸೂತ್ರಧಾರನು ಅವಳ ಸ್ಥಿತಿಯನ್ನು ಬಣ್ಣಿಸಿ, "ನೀನು ನನಗೆ ಏನನ್ನೋ ಹೇಳಲಿಚ್ಛಿಸುವಂತಿದೆ" ಎನ್ನುತ್ತಾನೆ. ರಂಗಸ್ಥಳದ ಅಭಿನಯದ ದೃಷ್ಟಿಯಿಂದ ಇದಕ್ಕೂ, ನಟಿಯು, "ಆರ್ಯನೆ, ಇದೋ ಬಂದೆನು" ಎಂದುಕೊಂಡು ಯಂತ್ರದ ಬೊಂಬೆಯಂತೆ ಬಂದು ನಿಲ್ಲುವುದಕ್ಕೂ ಬಹಳ ವ್ಯತ್ಯಾಸವಿದೆ. ಸೂತ್ರಧಾರನ ಮಾತುಗಳನ್ನು ಕೇಳಿ ನಟಿಯು, "ಆರ್ಯನು ಭಾವಜ್ಞನೆಂಬುದರಲ್ಲಿ ಆಶ್ಚರ್ಯವೇನು?" ಎಂದು ತಿಳಿಸಿ, ತನ್ನ ಕೋರಿಕೆಯನ್ನು ತಿಳಿಸಬಹುದೆಂದು ಅವನು ಉತ್ತರ ಹೇಳಿದ ಮೇಲೆ, "ಆರ್ಯನೊಡನೆ ಉದ್ಯಾನಕ್ಕೆ ಹೋಗಲಿಚ್ಛಿಸುವೆನು. ಅಲ್ಲಿ ಸ್ತ್ರೀಕರಣೀಯವಾದ ನಿಯಮ ಕಾರ್ಯವನ್ನು ನಾನು ನೆರವೇರಿಸಬೇಕಾಗಿದೆ" ಎಂದು ಹೇಳುತ್ತಾಳೆ. ಇಲ್ಲಿ ವನವಿಹಾರವು ಅವಳ ಆಶಯವೋ ಅಥವಾ ಸ್ತ್ರೀಯರ ಶ್ರೇಯಸ್ಸಿಗಾಗಿ ವ್ರತಾಚರಣೆಯೇನಾದರೂ ಅವಳ ಆಶಯವೋ, ಅಥವಾ ತನ್ನ ಸಖಿಯರಿಂದೊಡಗೂಡಿ ಸ್ತ್ರೀಗೋಷ್ಠಿಯನ್ನು ನಡೆಯಿಸಬೇಕಾದ ನಿಯಮ ಪಾಲನವು ಅವಳ ಆಶಯವೋ ತಿಳಿಯದು. ಅವಳ ಆಶಯವು ಏನೇ ಆಗಿರಲಿ, ಸ್ತ್ರೀ ಪಕ್ಷಪಾತಿಯಾಗಿ ಸ್ತ್ರೀತ್ವದಲ್ಲಿ ಗೌರವವುಳ್ಳವನಾಗಿರುವ ಭಾಸನ ಹೃದಯಕ್ಕೆ ತಕ್ಕ ಕಲ್ಪನೆಯು ಇದೆನ್ನಬಹುದಾಗಿದೆ. ಅಷ್ಟರಲ್ಲಿ ನೇಪಥ್ಯದಿಂದ, "ಭೂತಿಕ! ಕುರಂಗಿಯ ರಕ್ಷಣಾರ್ಥವಾಗಿ ನೀನೂ ಉದ್ಯಾನಕ್ಕೆ ನಡೆ. ಅಂಜನಗಿರಿಗೆ ಮದವೇರಿದೆ" ಎಂಬ ಮಾತುಗಳು ಕೇಳಿ ಬರುವುವು. "ಅಂಜನಗಿರಿ" ಎಂದು ಆನೆಗೆ ಹೆಸರಿಟ್ಟಿರುವುದೆಷ್ಟು ಅನುರೂಪವಾಗಿದೆ! ಸೂತ್ರಧಾರನು ಆ ಮಾತುಗಳನ್ನಾಲಿಸಿ, "ಆರ್ಯೆ, ರಾಜಪುತ್ರಿಯು ಉದ್ಯಾನವನಕ್ಕೆ ಹೋದಳೆಂಬುದನ್ನು ನೀನು ಕೇಳಿದೆಯಲ್ಲವೆ? ಆ ಕಾರಣದಿಂದ ಉದ್ಯಾನಗಳಲ್ಲಿ ಎಲ್ಲೆಡೆಗಳಲ್ಲಿಯೂ ಈಗ

ರಾಜಭಟರು ಕಾವಲಿರುತ್ತಾರೆ. ರಾಜಪುತ್ರಿಯು ಉದ್ಯಾನದಿಂದ ಹಿಂತಿರುಗಿದ ಮೇಲೆ ಸಂತೋಷವಾಗಿ ಹೋಗಿ ಬರೋಣ" ಎಂದು ತಿಳಿಸುವಲ್ಲಿಗೆ ಸ್ಥಾಪನೆಯು ಮುಗಿಯುವುದು. ಚಾರುದತ್ತ ರೂಪಕದ ಸ್ಥಾಪನೆಯಂತೆ ಇದೂ ಚಿತ್ತಾಕರ್ಷಕವಾಗಿದೆ.

ರಾಜನಾದ ಕುಂತಿ ಭೋಜನು, "ಯಜ್ಞಗಳೆಲ್ಲ ಸಾಂಗವಾಗಿ ನೆರವೇರಿದುವು. ಬ್ರಾಹ್ಮಣ ಶ್ರೇಷ್ಠರೆಲ್ಲರೂ ನನ್ನಲ್ಲಿ ಪ್ರಸನ್ನರಾಗಿದ್ದಾರೆ. ಶತ್ರುರಾಜರಿಗೆಲ್ಲ ದಿಗಿಲು ಹುಟ್ಟಿಸಿ ಅವರನ್ನು ನನ್ನ ವಶವರ್ತಿಗಳನ್ನಾಗಿ ಮಾಡಿಕೊಂಡುದೂ ಆಯಿತು. ಹೀಗಿದ್ದೂ ನನ್ನ ಮನಸ್ಸಿಗೆ ಹರ್ಷವಿಲ್ಲ. ಕನ್ಯಾಪಿತೃತ್ವವು ಸಂತತವೂ ಬಹಳ ಚಿಂತೆಗೆ ಆಕರವಾದುದು"* ಎಂದು ಹೇಳುವ ಮಾತುಗಳಿಂದ **ಮೊದಲನೆಯ ಅಂಕವು** ಆರಂಭವಾಗುತ್ತದೆ. ಕುರಂಗಿಯ ವಿವಾಹ ವಿಚಾರವನ್ನು ಕುರಿತು ಮಾತನಾಡಲು ಅವನು ರಾಣಿಯನ್ನು ಕರೆಯಿಸುವನು. ಅವಳು ತನ್ನ ಪರಿವಾರದೊಡನೆ ಬಂದಾಗ ಅವನು ಅವಳನ್ನು ಕುರಿತು, "ದೇವಿ! ಸಂತತವೂ ಪ್ರಸನ್ನವಾಗಿರುವ ನಿನ್ನ ಮುಖವು ಇಂದು ಅತಿ ಪ್ರಸನ್ನವಾಗಿದೆ. ಈ ಸಂತೋಷಾತಿಶಯಕ್ಕೆ ಕಾರಣವೇನು?" ಎಂದು ಕೇಳುವನು. ಅದಕ್ಕೆ ಅವಳು, "ಕುರಂಗಿಯನ್ನು ವಿವಾಹ ಮಾಡಿಕೊಳ್ಳಲಿಚ್ಛಿಸುವ ರಾಜರುಗಳ ಪ್ರತಿನಿಧಿಗಳು ಬಂದಿದ್ದಾರೆಂದು ಮಹಾರಾಜನೇ ಹೇಳಲಿಲ್ಲವೆ? ಶೀಘ್ರವಾಗಿ ಅಳಿಯನನ್ನು ಕಾಣುವೆನೆಂದು ಸಂತೋಷ" ಎಂದು ಉತ್ತರ ಕೊಡುವಳು. ಈ ದೃಶ್ಯಕ್ಕೂ, ಪ್ರತಿಜ್ಞಾಯೌಗಂಧರಾಯಣದಲ್ಲಿ ಬರುವ ಇದೇ ಬಗೆಯ ದೃಶ್ಯಕ್ಕೂ ಅಜಗಜಾಂತರ ವ್ಯತ್ಯಾಸವಿರುವುದನ್ನು ಹೇಳಬೇಕಾದುದೇ ಇಲ್ಲ. ಈ ಸಂದರ್ಭದಲ್ಲಿ ರಾಣಿಯು ನಗುತ್ತಿರುವಂತೆ ಕವಿಯು ಚಿತ್ರಿಸಿರುವುದು, ಕೃತಿಯು ಅವನ ಆರಂಭ

---

* "ಇಷ್ಟಾ ಮಖಾ ದ್ವಿಜವರಾಶ್ಚ ಮಯಿ ಪ್ರಸನ್ನಾಃ
ಪ್ರಜ್ಞಾಪಿತಾ ಭಯರಸಂ ಸಮದಾ ನರೇನ್ದ್ರಾಃ।
ಏವಂ ವಿಧಸ್ಯ ಚ ನ ಮೇಽಸ್ತಿ ಮನಃಪ್ರಹರ್ಷಃ
ಕನ್ಯಾಪಿತುರ್ಹಿ ಸತತಂ ಬಹು ಚಿಂತನೀಯಮ್ ॥"

ಪ್ರಯತ್ನವಾಗಿರುವುದರಿಂದಲೇ. ರಾಜನು, "ದೇವಿ, ವಿವಾಹಗಳೆಂದರೆ ಬಹಳವಾಗಿ ಪರೀಕ್ಷಿಸಿ ನೆರವೇರಿಸಬೇಕಾದುವು. ಏಕೆಂದರೆ, ಅಳಿಯನ ಸಂಪತ್ತಿಯೆಷ್ಟೆಂಬುದನ್ನಾಲೋಚಿಸದೆ (ಸಾಮಾನ್ಯನಿಗೆ) ಕನ್ಯಾಪಿತನು ತನ್ನ ಮನಸ್ಸಿನ ಇಷ್ಟವನ್ನನುಸರಿಸಿ ಕೊಟ್ಟ ಹೆಂಗಸು, ಕ್ಷುಬ್ಧಜಲವುಳ್ಳ ನದಿಯು ದಡಗಳೆರಡೂ ಕುಸಿದು ಬೀಳುವಂತೆ ಮಾಡುವ ಹಾಗೆ ಕುಲಗಳೆರಡನ್ನೂ ತನ್ನ ದುರಹಂಕಾರದಿಂದ ಹಾಳು ಮಾಡುತ್ತಾಳೆ" † ಎಂದು ಹೇಳುವುದು ಬಹು ಚೆನ್ನಾಗಿದೆ.

ಕೌಂಜಾಯನನು ಆನೆಯ ಹಾವಳಿಯನ್ನು ಕುರಿತು ವಿವರಿಸಲು ಪಕ್ರಮಿಸಿದಾಗ ಕುಂತಿಭೋಜನು, "ಆ ವಿವರವು ಹಾಗಿರಲಿ. ಕುರಂಗಿಯು ಕ್ಷೇಮವಾಗಿದ್ದಾಳೆ ತಾನೆ?" ಎಂದು ಕೇಳುವುದು ಸ್ವಭಾವ ಮಧುರವಾಗಿದೆ. ಅವಳು ಕ್ಷೇಮವಾಗಿರುವಳೆಂದು ಕೇಳಿದ ಬಳಿಕ, ಕೌಂಜಾಯನನು ತನಗೆ ಮನ ಬಂದಂತೆ ಇನ್ನು ಸಂಗತಿಗಳನ್ನು ತಿಳಿಸಬಹುದೆಂದು ರಾಜನು ಹೇಳುತ್ತಾನೆ. ತಂದೆಯ ಹೃದಯಗತಿಯನ್ನೇ ಹಿಡಿದು ಕವಿಯು ಬರೆಯುತ್ತಿದ್ದಾನೆಂಬುದಕ್ಕೆ ಇದು ಉತ್ತಮವಾದ ನಿದರ್ಶನ. ಕೌಂಜಾಯನನು ನಡೆದ ಸಂಗತಿಗಳನ್ನೆಲ್ಲ ಬಿನ್ನವಿಸುವ ವೇಳೆಗೆ ಭೂತಿಕನು ಬರುವನು. ರಾಜನು ಕುರಂಗಿಯನ್ನು ಸಂತೈಸಲು ರಾಣಿಯು ಅಂತಃಪುರಕ್ಕೆ ಹೋಗಬೇಕೆಂದೂ, ತಾನೂ ಅಷ್ಟರಲ್ಲಿ ಅಲ್ಲಿಗೆ ಬರುವುದಾಗಿಯೂ ತಿಳಿಸಿ ಅವಳನ್ನು ಬೀಳ್ಕೊಡುವನು. ಅವಿಮಾರಕನ ತೇಜಸ್ಸನ್ನು ನೋಡಿದರೆ ಅವನು ಕಾರಣಾಂತರದಿಂದ ತಾನಾರೆಂಬುದನ್ನು ಮರೆಮಾಚುವುದಕ್ಕಾಗಿ ಅಂತ್ಯಜನೆಂದುಕೊಳ್ಳುತ್ತಿರುವನೇ ಹೊರತು ಅವನೆಂದಿಗೂ ಅಂತ್ಯಜನಲ್ಲವೆಂಬುದು ಭೂತಿಕನ ಸಂದೇಹ. ಸೂರ್ಯನನ್ನು ಅಂಗೈಯಿಂದ ಮುಚ್ಚಲಾರಿಗೆ ಸಾಧ್ಯವೆಂಬುದು ಅವನ ತರ್ಕ. ಅವಿಮಾರ

---

† "ದೇವಿ! ವಿವಾಹಾ ನಾಮ ಬಹುಶಃ ಪರೀಕ್ಷ್ಯ ಕರ್ತವ್ಯಾ ಭವನ್ತಿ। ಕುತಃ,
ಜಾಮಾತೃ ಸಮ್ಪತ್ತಿಮಚಿಂತಯಿತ್ವಾ
ಪಿತ್ರಾ ತು ದತ್ತಾ ಸ್ವಮನೋಭಿಲಾಷಾತ್ ।
ಕುಲದ್ವಯಂ ಹನ್ತಿ ಮದೇನ ನಾರೀ
ಕೂಲದ್ವಯಂ ಕ್ಷುಬ್ಧಜಲಾ ನದೀವ ॥"

ಕನು ಸ್ಫುರದ್ರೂಪಿಯೆಂದೂ, ಬ್ರಾಹ್ಮಣನಂತೆ ಸಂಸ್ಕೃತವಾದ ವಾಣಿಯುಳ್ಳವನೆಂದೂ, ಕ್ಷತ್ರಿಯನಂತೆ ತೇಜಸ್ವಿಯಾಗಿ ಸೌಕುಮಾರ್ಯ ಬಲಯುತನೆಂದೂ ಭೂತಿಕನು ರಾಜನಿಗೆ ತಿಳಿಸುವನು ತನ್ನ ಸಂದೇಹವನ್ನೂ ಸೂಚಿಸುವನು. ರಾಜನು ಅವನ ತಂದೆಯನ್ನೇಕೆ ಪರೀಕ್ಷಿಸಿ ಬರಲಿಲ್ಲವೆಂದಾಗ ಭೂತಿಕನು, ತಾನು ಆ ಸತ್ಪುತ್ರ ಸಂಪನ್ನನನ್ನೂ ನೋಡಿದಂತೆಯೂ, ಅಂತ್ಯಜನ ವೇಷದಲ್ಲಿ ಕ್ಷಾತ್ರತೇಜದಿಂದೊಡಗೂಡಿದ ಆತನು ಮೇಘಾಂತರ್ಗತನಾದ ಸೂರ್ಯನಂತಿದ್ದಂತೆಯೂ ವಿವರಿಸಿ ತಿಳಿಸುವನು. ಅನಂತರ, ಕಾಶಿರಾಜನ ಕಡೆಯಿಂದ ಬಂದಿರುವ ರಾಯಭಾರಿಯ ವಿಷಯವನ್ನೆತ್ತಿ ಕುಂತಿಭೋಜನು ತಾನೇನನ್ನು ಮಾಡಬೇಕೆಂದು ಕೇಳುವನು. ಭೂತಿಕನು, "ಪ್ರಭುವೆ! ನೂರಾರು ಜನ ರಾಯಭಾರಿಗಳು ಬಂದೂ ಆಯಿತು, ಇನ್ನೂ ನೂರಾರು ಮಂದಿ ಬಂದೂ ಬರುತ್ತಾರೆ. ಹೀಗಿರುವಲ್ಲಿ ಅವರ ವಿಚಾರದಲ್ಲಿ ಮಾಡಬೇಕಾದುದು ಹೆಚ್ಚೇನಿದೆ? ಕನ್ಯಾಪಿತೃತ್ವವು ಬಹಳ ಮಾನ್ಯವಾದುದು. ಮಲ್ಲಯುದ್ಧ ಮಾಡುವವರು ವಿಜಯ ಪತಾಕೆಯನ್ನು ಅಪೇಕ್ಷಿಸುವಂತೆ ನರೇಂದ್ರರೆಲ್ಲ ನರೇಂದ್ರಕನ್ಯೆಯನ್ನು ಬಯಸುತ್ತಾರೆ" * ಎಂದು ಹೇಳುವನು. ಸಚಿವರಾದ ಭೂತಿಕ ಕೌಂಜಾಯನರಿಬ್ಬರೊಡನೆಯೂ ರಾಜನು ಕಾಶಿರಾಜನ ರಾಯಭಾರಿಯ ವಿಚಾರವನ್ನು ಚರ್ಚಿಸುವನು. ಸುದರ್ಶನಾದೇವಿಯ ಗಂಡನಾದ ಕಾಶಿರಾಜನೂ, ಸುಚೇತನಾದೇವಿಯ ಗಂಡನಾದ ಸೌವೀರರಾಜನೂ ಕುಂತಿಭೋಜನಿಗೆ ಸಮಾನ ಪ್ರೀತಿಪಾತ್ರರಾಗಿದ್ದರೂ, ಸೌವೀರರಾಜನು ರಾಣಿಯ ಸಹೋದರನೂ ಆಗಿರುವುದರಿಂದ ಆತನೇ ಒಂದು ತೂಕ ಹೆಚ್ಚೆಂದು ಭೂತಿಕನು ಸೂಚಿಸುವನು. ಅದು ರಾಜನಿಗೆ ಬಹಳ ಸಂತೋ

---

* "ಸ್ವಾಮಿನ್! ದೂತಶತಾನ್ಯಾಗತಾನ್ಯಾಗಮಿಷ್ಯನ್ತಿ ಚ ।
ನ ತತ್ರ ಕರ್ತವ್ಯಮಿಹಾಸ್ತಿ ಲೋಕೇ
ಕನ್ಯಾ ಪಿತೃತ್ವಂ ಬಹು ವನ್ದನೀಯಮ್ ।
ಸರ್ವೇ ನರೇನ್ದ್ರಾ ಹಿ ನರೇನ್ದ್ರ ಕನ್ಯಾಮ್
ಮಲ್ಲಾಃ ಪತಾಕಾಮಿವ ತರ್ಕಯನ್ತಿ ॥"

ಷವನ್ನುಂಟುಮಾಡುವುದು ಮನುಷ್ಯ ಸ್ವಭಾವವನ್ನು ಬಹುಚೆನ್ನಾಗಿ ಅರಿತಿರುವ ಕವಿಯ ಸಂವಿಧಾನ ಕೌಶಲಕ್ಕೆ ಇದೂ ಒಂದು ನಿದರ್ಶನ. ಆದರೆ ಸೌವೀರ ರಾಜ್ಯಕ್ಕೆ ಕಳುಹಿಸಿದ್ದ ಚಾರರಿಂದ ಅಲ್ಲಿ ರಾಜನೂ ರಾಜಕುಮಾರನೂ ಇಲ್ಲವೆಂದೂ ಅದಕ್ಕೆ ಕಾರಣವೇ ತಿಳಿಯಲಿಲ್ಲವೆಂದೂ ಅರಮನೆಗೆ ಹೊರಗಿನವರಾರನ್ನೂ ಬಿಡುತ್ತಿರಲಿಲ್ಲವೆಂದೂ ವಾರ್ತೆ ಬಂದಿದ್ದಿತೆಂದು ಭೂತಿಕನು ತಿಳಿಸುವನು. ಅದನ್ನು ಕೇಳಿ ಕುಂತಿಭೋಜನಿಗೆ ಕಳವಳವಾಗುವುದು. ಅಷ್ಟರಲ್ಲಿ ಸ್ನಾನವೇಳೆಯು ಸಮಿಾಪಿಸುವುದು. ಭೂತಿಕನು, "ಪ್ರಭುವೆ, ಉಳಿದ ವಿಚಾರಗಳನ್ನೆಲ್ಲ ಒಳಗೆ ಆಲೋಚಿಸೋಣ. ಸ್ನಾನವೇಳೆಯು ಅತಿಕ್ರಮಿಸುತ್ತಿದೆ. ರಾಜಕುಮಾರಿಯನ್ನು ಸಂತೈಸಬೇಕಾಗಿದೆ. ಮಹಾರಾಣಿಯೂ ಹೆಚ್ಚುಕಾಲದಿಂದ ಸ್ವಾಮಿಯ ಆಗಮನವನ್ನು ನಿರೀಕ್ಷಿಸುತ್ತಿದ್ದಾಳೆ. ವಿಪತ್ತಿನಿಂದ ಪಾರಾದ ಈ ಸಮಯದಲ್ಲಿ ಮಹಾಜನರೂ ಸಹ ಸ್ವಾಮಿದರ್ಶನವನ್ನಪೇಕ್ಷಿಸುತ್ತಾರೆ" ಎಂದು ಹೇಳುವನು. ಮಹಾಜನರು ಪ್ರಭುವನ್ನು ನೋಡಲಿಚ್ಛಿಸುತ್ತಿದ್ದುದಾಗಿ ಭೂತಿಕನು ತಿಳಿಸುವ ಮಾತುಗಳು ಗಮನಾರ್ಹವಾಗಿವೆ. ಕುಂತಿಭೋಜನು ಪ್ರಜಾರಂಜಕನೆಂಬ ಅಂಶವೂ, ಪ್ರಜೆಗಳಿಗೆ ರಾಜನನ್ನು ನೋಡಲು ಸ್ವಾತಂತ್ರ್ಯವಿದ್ದಿತೆಂಬ ಅಂಶವೂ, ಇವುಗಳಿಂದ ವ್ಯಕ್ತವಾಗುತ್ತದೆ. ಆಗ ಕುಂತಿಭೋಜನು ಆಡುವ, "ರಾಜ್ಯಾಡಳಿತವೆಂಬುದು ಮಹದ್ಭಾರ. ಏಕೆಂದರೆ, ವೊದಲು ಧರ್ಮರಕ್ಷಣೆಯನ್ನು ಕುರಿತು ಚಿಂತಿಸಬೇಕು. ಮಂತ್ರಿಗಳು ಹೇಗೆ ಪ್ರವರ್ತಿಸುತ್ತಿರುವರೆಂಬುದನ್ನು ಸ್ವಬುದ್ಧಿಯಿಂದ ನೋಡಿಕೊಳ್ಳಬೇಕು. ರಾಗರೋಷಗಳೆರಡನ್ನೂ ಮರೆಮಾಚಿ ವರ್ತಿಸಬೇಕು. ಸನ್ನಿವೇಶ ಸ್ವಭಾವವನ್ನು ನೋಡಿಕೊಂಡು ಮೃದುತ್ವವನ್ನೂ ಕಾಠಿಣ್ಯವನ್ನೂ ಆ ಆ ಕಾಲಕ್ಕೆ ತಕ್ಕಂತೆ ಪ್ರದರ್ಶಿಸಬೇಕು. ಪ್ರಜೆಗಳ ನಡೆವಳಿಕೆಯನ್ನು ಪರಿಶೀಲಿಸಿ ತಿಳಿದುಕೊಳ್ಳಬೇಕು. ಗೂಢಚಾರರಿಂದ ರಾಜಮಂಡಲದ ವಾರ್ತೆಗಳನ್ನು ತರಿಸಿಕೊಳ್ಳಬೇಕು. ಪ್ರಯತ್ನಪೂರ್ವಕವಾಗಿ ದೇಹರಕ್ಷಣೆಮಾಡಿಕೊಳ್ಳಬೇಕು. ಆದರೆ ರಣಮುಖದಲ್ಲಿ ಮಾತ್ರ ಆ ದೇಹರಕ್ಷಣೆಯನ್ನೂ ಗಮನಿಸದೆ ವರ್ತಿಸಬೇಕು" * ಎಂಬ

* "ಅಹೋ, ಮಹದ್ಭಾರೋ ರಾಜ್ಯಂ ನಾಮ। ಕುತಃ,

ಮಾತುಗಳು ಕಾಲದೇಶ ಭೇದವಿಲ್ಲದೆ ಒಟ್ಟು ಮನುಷ್ಯತ್ವಕ್ಕೇ ರಾಜ ನೀತಿಯನ್ನೂ ರಾಜಧರ್ಮವನ್ನೂ ಉಪದೇಶಿಸುತ್ತವೆ. ಈ ಮಾತು ಗಳನ್ನು ಕೇಳಿ, ಮೈ ಪುಳಕಿತವಾಗಿ ಹೃದಯಗತಿಯೇ ಮಾರ್ಪಡುತ್ತದೆ.

ಎರಡನೆಯ ಅಂಕದ ಪ್ರವೇಶಕದಲ್ಲಿ, ಚಂಡಾಲ ಕೇರಿಯಲ್ಲಿ ವಾಸ ವಾಗಿರುವ ಅವಿಮಾರಕನ ಗೆಳೆಯನಾದ ವಿದೂಷಕನು ಪ್ರವೇಶಿಸುವನು. ಅವನ ಹೆಸರು ಸಂತುಷ್ಟನೆಂದು. ಅವನು ಹೊರಟಿರುವುದು ಅವಿಮಾ ರಕನನ್ನು ನೋಡುವುದಕ್ಕಾಗಿ. ಆದರೆ ಚಂಡಾಲಕೇರಿಯಲ್ಲಿರುವ ಮತ್ತು ಶಾಪಗ್ರಸ್ತನಾಗಿ ಚಂಡಾಲನಾಗಿರುವ ಅವಿಮಾರಕನನ್ನು ನೋಡುವುದಕ್ಕಾಗಿ ಅಲ್ಲಿಗೆ ಹೋದರೆ ಬ್ರಾಹ್ಮಣರು ಆಕ್ಷೇಪಿಸುವರೆಂಬ ಭಯವು ಅವನನ್ನು ಬಾಧಿಸುತ್ತಿರುವುದು. ಆದಕಾರಣ, ಬ್ರಾಹ್ಮಣ ಕೇರಿಯಲ್ಲಿ ಸ್ವಲ್ಪಕಾಲ ಸುತ್ತಾಡುತ್ತಿದ್ದು ಅನಂತರ ತನ್ನ ಮಿತ್ರನ ಬಳಿಗೆ ಹೋಗುವುದಾಗಿ ಅವನು ನಿರ್ಧರಿಸುವನು. ಆದರೆ ಆ ಮೊದಲೇ ಅವನು ಹಲವು ಸಾರಿ ಅವಿ ಮಾರಕನಲ್ಲಿಗೆ ಹೋಗಿರುವನು. ಆದುದರಿಂದಲೇ, ಕುರಂಗಿಯಲ್ಲಿ ಅನು ರಕ್ತನಾಗಿ ಅನ್ಯಮನಸ್ಕನಾಗಿರುವ ಅವಿಮಾರಕನ ವಿಷಯವನ್ನು ತನ್ನಲ್ಲಿ ತಾನು ಮಾತನಾಡಿಕೊಂಡು ಆ ಬಳಿಕ ಅವನು, "ಹ್ಹಿಹ್ಹಿ! ಹೆಚ್ಚು ಹೇಳಿ ಏನು ಪ್ರಯೋಜನ! ಅವನು ಸರ್ವದಾ ಚಿಂತಾಮಗ್ನನಾಗಿರಲು ಅಪೇಕ್ಷಿ ಸುವನು. ನನ್ನ ಸಹವಾಸವೂ ಅವನಿಗೆ ಬೇಡವಾಗಿದೆ" ಎಂದುಕೊಳ್ಳು ವನು. ಕುರಂಗಿಯನ್ನು ಕುರಿತು ಚಿಂತಿಸುವುದಕ್ಕಿಂತ ತನ್ನೊಡನೆ ಮಾತ ನಾಡಿಕೊಂಡಿರುವುದೇ ಉತ್ತಮವೆಂಬುದು ಅವನ ಭಾವನೆ.

ಕೆಲಸಮಾಡಿ ಬೇಸತ್ತು ನಗರಶೋಭೆಯನ್ನು ನೋಡಲು ಹೊರ ಟಿರುವ ಸೌವೀರ ರಾಜನ ಕಡೆಯ ಚೇಟಿ ಚಂದ್ರಿಕೆಯು ವಿದೂಷಕನು

---

ಧರ್ಮಃ ಪ್ರಾಗೇವ ರಕ್ಷ್ಯೋ ಸಚಿವ ಮತಿಗತಿಃ ಪ್ರೇಕ್ಷಿತವ್ಯಾ ಸ್ವಬುದ್ಧ್ಯಾ
ಪ್ರಚ್ಛಾದ್ಯೌ ರಾಗರೋಷೌ ಮೃದುಪರುಷಗುಣೌ ಕಾಲಯೋಗೇನ ಕಾರ್ಯೌ ।
ಜ್ಞೇಯಂ ಲೋಕಾನುವೃತ್ತಂ ಪರಚರ ನಯನೈರ್ಮಣ್ಡಲಂ ಪ್ರೇಕ್ಷಿತವ್ಯಂ
ರಕ್ಷ್ಯೋ ಯತ್ನಾದಿಹಾತ್ಮಾ ರಣಶಿರಸಿ ಪುನಸ್ಸೋಽಪಿ ನಾವೇಕ್ಷಿತವ್ಯಃ ॥ "

ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ, ಅವನೊಡನೆ ವಿನೋದ ವಾಡಿ ಬೇಸರವನ್ನು ಪರಿಹರಿಸಿಕೊಳ್ಳಲಿಚ್ಛಿಸುವಳು. ಕೂಡಲೆ ಅವಳು ಮೇಲೆ ನೋಡುತ್ತ, "ಕೌಮುದಿಕೇ, ಬ್ರಾಹ್ಮಣ ಸಿಕ್ಕಿದನೇನು? ಏನೆಂದೆ? ಸಿಕ್ಕಲಿಲ್ಲವೆಂದೇ?" ಎನ್ನುವಳು. ವಿದೂಷಕನ ಕಿವಿ ನೆಟ್ಟಗಾಗುವುದು. ಅನಂತರ ಅವರೀರ್ವರಿಗೂ ನಡೆಯುವ ಸಂಭಾಷಣವು, ಶುಚಿಯಾದ ತಿಳಿಹಾಸ್ಯಕ್ಕೆ ಉತ್ತಮವಾದ ನಿದರ್ಶನವಾಗಿದೆ :—

**ವಿದೂಷಕ**:— ಚಂದ್ರಿಕೆ! ಇದೇನು?

**ಚಂದ್ರಿಕೆ**:—ಆರ್ಯ! ಯಾವನಾದರೂ ಒಬ್ಬ ಬ್ರಾಹ್ಮಣನನ್ನು ಹುಡುಕುತ್ತಿದ್ದೇನೆ

**ವಿದೂಷಕ**:— ಬ್ರಾಹ್ಮಣನಿಂದೇನಾಗಬೇಕು ?

**ಚಂದ್ರಿಕೆ**:— ಇನ್ನೇನಾಗಬೇಕು! ಊಟಕ್ಕೆ ಕರೆಯುವುದಕ್ಕಾಗಿ (ಹುಡುಕುತ್ತಿದ್ದೇನೆ)

**ವಿದೂಷಕ**:— ಪೂಜ್ಯಳೆ! ನಾನು ಯಾರು? ಶ್ರಮಣಕನೇನು?

**ಚಂದ್ರಿಕೆ**:— ನೀನು ಅವೈದಿಕ.

**ವಿದೂಷಕ**:— ನಾನು ಅವೈದಿಕನೆಂಬುದು ಹೇಗೆ? ಹಾಗಾದಲ್ಲಿ ಕೇಳು; ರಾಮಾಯಣವೆಂಬ ನಾಟ್ಯಶಾಸ್ತ್ರವಿದೆ. ಅವುಗಳಲ್ಲಿ ಐದು ಶ್ಲೋಕಗಳನ್ನು ಒಂದೇ ವರ್ಷವು ಪೂರೈಸುವುದರೊಳಗಾಗಿ ನಾನು ಕಂಠಪಾಠವಾಡಿದೆನು.

**ಚಂದ್ರಿಕೆ**:— ಬಲ್ಲೆ, ಬಲ್ಲೆ. ಆರ್ಯನ ಕುಲೋಚಿತವಾದ ಧೀ ಶಕ್ತಿ ಭಾವವು ಇಂತಹದೆಂಬುದು ನನಗೆ ಗೊತ್ತುಂಟು.

**ವಿದೂಷಕ**:— ಶ್ಲೋಕಗಳು ಮಾತ್ರವೇ ಅಲ್ಲ. ಅವುಗಳ ಅರ್ಥವನ್ನೂ ಬಲ್ಲೆ. ಇನ್ನೊಂದು ವಿಚಾರ. ಮತ್ತೊಂದು ವಿಶೇಷ. ಅಕ್ಷರಜ್ಞನೂ ಅರ್ಥಜ್ಞನೂ ಆದ ಬ್ರಾಹ್ಮಣನು ದೊರೆಯುವುದು ದುರ್ಲಭ.

**ಚಂದ್ರಿಕೆ**:— (ಅಕ್ಷರವನ್ನು ಕೆತ್ತಿರುವ ತನ್ನ ಬೆರಳಿನ ಮುದ್ರೆಯುಂಗುರವನ್ನು ಅವನಿಗೆ ತೋರಿಸಿ) ಹಾಗಾದರೆ ಹೇಳು, ಇದಾವ ಅಕ್ಷರ ?

**ವಿದೂಷಕ**:— (ಸ್ವಗತ) ತಿಳಿಯಲಾರದವನಾದ ನಾನು ಏನೆಂದು ಉತ್ತರ ಹೇಳಲಿ? ಹೀಗೆ ಹೇಳುವೆನು (ಪ್ರಕಾಶವಾಗಿ) ಪೂಜ್ಯಳೆ? ಈ ಅಕ್ಷರವು ನನ್ನ ಪುಸ್ತಕದಲ್ಲಿಲ್ಲ.

**ಚಂದ್ರಿಕೆ**:— ಆ ಅಕ್ಷರವು ತಿಳಿಯದಿದ್ದರೆ, ದಕ್ಷಿಣೆಯಿಲ್ಲದೆ ಊಟಮಾಡಬೇಕು.

ವಿದೂಷಕ:— ಆಗಲಿ, ಆಗಲಿ.

ಚಂದ್ರಿಕೆ:— ಆರ್ಯನ ಬೆರಳಿನಲ್ಲಿರುವ ಉಂಗುರವನ್ನು ನೋಡಬೇಕು.

ವಿದೂಷಕ:— ನೋಡು, ನೋಡು, ಸುಂದರವಾದ ನನ್ನ ಉಂಗುರವನ್ನು. (ತೆಗೆದುಕೊಡುವನು)

ಚಂದ್ರಿಕೆ:— (ಉಂಗುರವನ್ನು ತೆಗೆದುಕೊಂಡು) ಅದೋ! ಯಜಮಾನನು (ಅವಿಮಾರಕನು) ಈ ಕಡೆಗೇ ಬರುತ್ತಿರುವನು.

ವಿದೂಷಕ:— (ಹಿಂತಿರುಗಿ ನೋಡಿ) ಎಲ್ಲಿ, ಎಲ್ಲಿ, ಆ ಪೂಜ್ಯನು?

ಚಂದ್ರಿಕೆ:— ಈ ಮುಗ್ಧ ಬ್ರಾಹ್ಮಣನನ್ನು ಮೋಸಪಡಿಸಿದೆನು. ಈ ಜನಗಳ ಗುಂಪಿನಲ್ಲಿ ಸೇರಿ ಚತುಷ್ಪಥ ಮಾರ್ಗವನ್ನು ಸೇರಿ ಇವನನ್ನು ವಂಚಿಸುವೆನು. (ಹೊರಟುಹೋಗುವಳು)

ಅವಿಮಾರಕನು ಬರುತ್ತಿರುವನೆಂದು ಭ್ರಮಿಸಿ ವಿದೂಷಕನು ನೋಡುತ್ತಿದ್ದಾಗ ಚಂದ್ರಿಕೆ ಓಡಿಹೋಗುವಳು. ಅವನು ಅವಿಮಾರಕನನ್ನು ಕಾಣದೆ ಆ ಬಳಿಕ ಸುತ್ತಲೂ ನೋಡಿದರೂ ಚಂದ್ರಿಕೆಯನ್ನು ಕಾಣದೆ, "ಚಂದ್ರಿಕೇ, ಚಂದ್ರಿಕೇ! ಎಲ್ಲಿ, ಎಲ್ಲಿ, ಚಂದ್ರಿಕೆ?" ಎಂದು ಕೂಗುವನು. ಕೊನೆಗೆ ಅವನು ಚಂದ್ರಿಕೆಯ ಮೋಸವನ್ನು ಅರಿತುಕೊಂಡು, ಊಟದ ನೆವದಿಂದ ಉಂಗುರವನ್ನು ಕಸಿದುಕೊಂಡು ಹೋದ ಅವಳ ವಂಚನೆಯನ್ನು ಅವಿಮಾರಕನಿಗೆ ತಿಳಿಸುವುದಾಗಿ ಹೇಳಿಕೊಂಡು ಹೋಗುವನು. ಕವಿಯು ವಿದೂಷಕನ ದಡ್ಡತನವನ್ನು ವ್ಯಕ್ತಗೊಳಿಸಿ ಅಪಹಾಸ್ಯಮಾಡಲು ಉತ್ತಮವಾದ ಸನ್ನಿವೇಶವನ್ನು ಕಲ್ಪಿಸಿ, ಹಾಸ್ಯರಸದ ಚಿಲಿಮೆಯನ್ನು ಉಕ್ಕಿಸಿದ್ದಾನೆ.

ಕುರಂಗಿಯು ವಿರಹಬಾಧೆಯಿಂದ ಕಳವಳಪಡುತ್ತ, ನಿದ್ರಾಹಾರಗಳನ್ನು ತೊರೆದು ಅಲಂಕಾರ ವಿಹೀನೆಯಾಗಿ, ಜೊತೆಗಾತಿಯರ ಸಹವಾಸವನ್ನೇ ಅಪೇಕ್ಷಿಸದೆ, ನಿಟ್ಟುಸಿರುಬಿಡುತ್ತ, ಅಸಂಬದ್ಧವಾಗಿ ಮಾತನಾಡುತ್ತ, ಹೇಳಿದುದನ್ನು ತಿಳಿದುಕೊಳ್ಳಲಾರದೆ ಪರಿತಪಿಸುತ್ತಿರುವುದನ್ನು ಧಾತ್ರಿಯು ನಲಿನಿಕೆಯೆಂಬ ಚೇಟಿಗೆ ಹೇಳುವಳು ಕುರಂಗಿಯು ತನ್ನಷ್ಟಕ್ಕೆ ತಾನೆ ನಗುವುದನ್ನೂ, ಅಳುವುದನ್ನೂ, ರೋಗವೆಂದುಕೊಳ್ಳುವುದನ್ನೂ

ಬಡವಾಗಿರುವುದನ್ನೂ ಸೂಚಿಸಿ, ಅವಳು ಅಂತಹ ಅವಸ್ಥೆಯಲ್ಲಿ ಸಹ ಲಜ್ಜೆಯಿಂದಲೂ, ಭಯದಿಂದಲೂ, ಕುಲಮಾನದಿಂದಲೂ, ಬಾಲಭಾವ ದಿಂದಲೂ ಯಾರಿಗೂ ತನ್ನ ಅನುರಾಗ ವಿಚಾರವನ್ನೇ ತಿಳಿಸಲಿಲ್ಲವೆನ್ನು ವಳು. ನಲಿನಿಕೆಯು, "ತಿಳಿಸದೆ ಏನು! ನನ್ನೊಡನೆ ಸರ್ವವನ್ನೂ ತಿಳಿಸುವಳು" ಎನ್ನುವಳು. ಕುರಂಗಿಯ ಅವಸ್ಥೆಯನ್ನು ನೋಡಲಾರದೆ ಅವಳ ಪ್ರಿಯನನ್ನು ಕರೆದೊಯ್ದರೆ ರಾಜಕುಲವು ಕಲಂಕಿತವಾಗುವುದ ಕ್ಕಾಗಿ ವ್ಯಥೆಪಡುತ್ತ, ಆ ಕೆಲಸಮಾಡಲು ಅವರು ಬಂದಿರುವರು. ಅವಿಮಾರಕನು ಅಂತ್ಯಜನಾಗಿರಬಹುದೇ ಎಂದು ಶಂಕಿಸುತ್ತಿರುವಲ್ಲಿ ಮುಂದೆ ಎಲ್ಲವೂ ಸರಿಹೋಗುವುದಾಗಿ ಅಶರೀರವಾಣಿಯಾಗುವುದಂತು, ತೀರ ಅಸಮರ್ಪಕವಾದ ಸಂವಿಧಾನ. ಅವಿಮಾರಕನು ಕುರಂಗಿಯನ್ನು ಕುರಿತು ಹಂಬಲಿಸುತ್ತ ಅವರೀರ್ವರೂ ತನ್ನ ಬಳಿಗೆ ಬಂದುದರ ಬಾಹ್ಯಪರಿಜ್ಞಾನವೇ ಇಲ್ಲದೆ, ಅವಳನ್ನು ವರ್ಣಿಸಿ ಗಟ್ಟಿಯಾಗಿ ಮಾತ ನಾಡಿಕೊಳ್ಳುತ್ತ, "ಆಹ! ಅವಳ ರೂಪಸಂಪತ್ತಿ!" ಎನ್ನುವನು. ಅವರೀರ್ವರೂ ಅದನ್ನು ಕಂಡು ಅಚ್ಚರಿಪಡುವರು. ಅವಿಮಾರಕನು ಉನ್ಮತ್ತನಂತೆ ಪ್ರಲಪಿಸುತ್ತ ಕುರಂಗಿಯನ್ನು ವರ್ಣಿಸುವನು. ಅದನ್ನು ಕೇಳಿ ಧಾತ್ರಿಯು ತಮ್ಮ ಕಾರ್ಯವು ಸುಲಭವಾಯಿತೆಂದುಕೊಳ್ಳುವಳು. ಧಾತ್ರಿಯು, "ಆರ್ಯನಿಗೆ ಸೌಖ್ಯವೆ?" ಎಂದು ಮಾತನಾಡಿಸಿದಾಗ ಅವಿಮಾರಕನು ನಾಚಿ, ಅವಳಿಗೂ ನಲಿನಿಕೆಗೂ ಸ್ವಾಗತವನ್ನು ಬಯ ಸುವನು. ಅವಳು ಅವನನ್ನು ಕುರಿತು, "ಆರ್ಯ, ನೀನು ಒಬ್ಬನೇ ಚಿಂತನೆ ಮಾಡುತ್ತಿದ್ದುದೇನು?" ಎಂದು ಕೇಳುವಳು. ಆಗ ಅವನು "ಶಾಸ್ತ್ರ ಚಿಂತನೆ", ಎಂದು ಉತ್ತರ ಹೇಳಿ, ರಮಣೀಯವಾದ ಆ ಶಾಸ್ತ್ರವಾವುದೆಂದು ಅವಳು ಪ್ರಶ್ನೆಮಾಡಿದುದಕ್ಕೆ, "ಪೂಜ್ಯಳೆ, ಯೋಗ ಶಾಸ್ತ್ರವನ್ನು ಚಿಂತನೆ ಮಾಡುತ್ತಿದ್ದೆ" ಎಂದು ಹೇಳುವುದು ಚೆನ್ನಾಗಿದೆ. ಧಾತ್ರಿಯೂ ಅನುಭವಶಾಲಿಯಾದ ರಸಿಕಳು. ಯೋಗವೆಂಬುದಕ್ಕೆ ಸಂಬಂಧವೆಂಬ ಅರ್ಥಮಾಡಿ, "ಮಂಗಳ ವಚನವು ದೊರೆಯಿತು. ಯೋಗಶಾಸ್ತ್ರವೇ ಆಗಲಿ" ಎಂದು ಉತ್ತರ ಹೇಳುವಳು. ಅವರ ಆಶಯವನ್ನು ತಿಳಿಸಬೇಕೆಂದು ಅವಿಮಾರಕನು ಕೇಳಿದುದಕ್ಕೆ ಧಾತ್ರಿಯು

"ನಾವೂ ಯೋಗವನ್ನು ಬಯಸಿಯೇ ಬಂದಿದ್ದೇವೆ. ಆರ್ಯನು ಯೋಗಾಭ್ಯಾಸಕ್ಕೆ ಅನುಮತಿಸಿರುವುದರಿಂದ ನಾವು ಬಂದ ಕಾರ್ಯವು ಆದಂತೆಯೇ. ಅರಮನೆಯ ಏಕಾಂತಾವಾಸದಲ್ಲಿ ಮತ್ತೊಬ್ಬರು ಯೋಗವನ್ನೇ ಕುರಿತು ಬಹಳವಾಗಿ ಚಿಂತಿಸುತ್ತಿದ್ದಾರೆ. ಅವರೊಡನೆ ಆರ್ಯನು ಯೋಗವಿಧಾನವನ್ನು ಕುರಿತು ಚೆನ್ನಾಗಿ ಯೋಚಿಸಬೇಕೆಂಬುದು ನಮ್ಮ ಆಶಯ" ಎಂದು ಉತ್ತರ ಹೇಳುವಳು. ಮಾತುಗಳನ್ನು ಮನೋಹರವಾಗಿ ಜೋಡಿಸುವುದರಲ್ಲಿ ನಮ್ಮ ಕವಿಯು ಸರಸ್ವತಿಯ ಅನುಗ್ರಹದಿಂದ ಪಡೆದಿದ್ದ ಸಾಮರ್ಥ್ಯವೆಷ್ಟು ಹೆಚ್ಚಿನದೆಂಬುದು ಇದರಿಂದ ಚೆನ್ನಾಗಿ ವ್ಯಕ್ತವಾಗುವುದು.

ಸಮರಾತ್ರಿಯ ವೇಳೆಗೆ ಕುರಂಗಿಯ ಅಂತಃಪುರಕ್ಕೆ ಬರುವಂತೆ ಅವಿಮಾರಕನನ್ನು ಒಪ್ಪಿಸಿ, ಅರಮನೆಯ ಮಹಡಿಯ ಮೇಲಿನ ಆ ಅಂತಃಪುರದ ಬಾಗಿಲುಗಳನ್ನೆಲ್ಲ ತೆರೆದಿಟ್ಟಿರಲು ಒಪ್ಪಿ ಧಾತ್ರಿಯೂ ನಲಿನಿಕೆಯೂ ಹೊರಟು ಹೋಗುವರು. ಆ ವೇಳೆಗೆ ಸರಿಯಾಗಿ ನಗರಶೋಭೆಯನ್ನು ಕೊಂಡಾಡುತ್ತ, ಅಸ್ತಮಿಸುತ್ತಿರುವ ಭಗವಾನ್ ಸೂರ್ಯದೇವನ ರಶ್ಮಿಗಳು ನಗರದ ಪಣ್ಯಶಾಲೆಯ (Market) ಸೌಧ ಮುಂತಾದ ಬೆಳ್ಳಗಿರುವ ಪ್ರಾಸಾದಗಳ ಮೇಲೆ ಬಿದ್ದಿರುವುದು, ಮೊಸರಿನ ಗರಣೆಯ ಮೇಲೆ ಕಾಕಂಬಿಯನ್ನು ಹರಡಿದಂತಿದೆಯೆಂದು ಮುಂತಾಗಿ ಹೇಳುತ್ತ, ವಿದೂಷಕನು ಅವಿಮಾರಕನ ಬಳಿಗೆ ಬರುವನು. ಅವಿಮಾರಕನು ಅರಮನೆಗೆ ಹೋಗುವುದಾಗಿ ತಾನು ನಿರ್ಧರಿಸಿರುವ ಅಂಶವನ್ನು ಅವನಿಗೆ ತಿಳಿಸಿ, ಅವನ ಪೂರ್ವಪಕ್ಷಕ್ಕೆಲ್ಲ ಸಮಾಧಾನ ಹೇಳುವನು.

**ಮೂರನೆಯ ಅಂಕದಲ್ಲಿ**, ವಿರಹಕಾತರೆಯಾದ ಕುರಂಗಿಯು ಸಖಿಯರೊಡನೆ ಅಂತಃಪುರದಲ್ಲಿರುವಳು. ಅವಳಿಗೆ ನಿದ್ರೆಬಂದಿದೆಯೆಂದು ಭಾವಿಸಿ ಸಖಿಯರು, ಅವಳನ್ನು ಜಯವರ್ಮನಿಗೆ ಕೊಟ್ಟು ವಿವಾಹ ಮಾಡುವುದಾಗಿ ಮಹಾರಾಜನು ನಿರ್ಧರಿಸಿದನೆಂದು ಮುಂತಾಗಿ ಮಾತನಾಡಿಕೊಳ್ಳುವರು. ಆಗ ಕುರಂಗಿಯು ತಾನು ಆ ವಿವಾಹಕ್ಕೆ ಒಪ್ಪುವುದಿಲ್ಲವೆಂದು ತನ್ನಲ್ಲಿ ತಾನು ಹೇಳಿಕೊಳ್ಳುವಳು. ಅಷ್ಟರಲ್ಲಿ ಕುರಂಗಿಯು

ತನ್ನ ಮೈಯನ್ನು ಹಿಸುಕುವಂತೆ ನಲಿನಿಕೆಗೆ ಹೇಳುವಳು. ಸಖಿಯ ರೆಲ್ಲರೂ ಅವಳ ವಿವಾಹ ಸಂಬಂಧವಾದ ಮಾತುಗಳನ್ನಾಡುತ್ತ ಸಂಭ್ರಮ ಪಡುವರು. ಅಂತಃಪುರದ ಸುಖಜೀವನದ ಈ ಚಿತ್ರವು ರಮಣೀಯ ವಾಗಿದೆ. ಆ ದೃಶ್ಯವು ಮುಗಿದ ಬಳಿಕ, ಕಳ್ಳನ ವೇಷದಿಂದ ಅವಿಮಾರ ಕನು ಪ್ರವೇಶಿಸುವ ದೃಶ್ಯವು ಬರುವುದು. ಅವನು ಯುವಕರ ಸಾಹಸ ಬುದ್ಧಿಯನ್ನು ಪ್ರಶಂಸಿಸಿ, ರಾತ್ರಿಯ ಅಂಧಕಾರವನ್ನೂ ನಾಗರಿಕರ ಜೀವನ ಸನ್ನಿವೇಶಗಳನ್ನೂ ಬಣ್ಣಿಸಿ, ಸ್ವಗತ ಭಾಷಣಮಾಡುವಲ್ಲಿ ಹದಿನಾರು ಶ್ಲೋಕಗಳನ್ನು ಹೇಳುತ್ತಾನೆ. ಒಟ್ಟು ಆರು ಪುಟಗಳಿರುವ ದೊಡ್ಡ ಭಾಷ ಣವು ನಡೆಯುತ್ತದೆ. ವರ್ಣನೆಯ ವೈಖರಿಯು ರಮಣೀಯವಾಗಿದ್ದರೂ ಔಚಿತ್ಯ ಜ್ಞಾನವೇ ಇಲ್ಲದೆ ಕವಿಯು ಇಷ್ಟು ದೊಡ್ಡ ಭಾಷಣವನ್ನು ಅವನಿಂದ ಮಾಡಿಸಿರುವುದು ಕಲಾದೃಷ್ಟಿಯಿಂದ ಸರ್ವಥಾ ಯುಕ್ತ ವಲ್ಲ. ಅವಿಮಾರಕನು ಕಪಿಶೀರ್ಷಿಕೆಗೆ (ಮಹಡಿಯಿಂದ ನೀರು ಕೆಳಕ್ಕೆ ಬೀಳುವಲ್ಲಿ ಕಪಿಯ ಮುಖದಿಂದ ಬೀಳುವಂತೆ ಮಾಡಿರುವ ಕಪಿ ಮುಸು ಡಿಯ ಕೊಳವೆಗೆ) ಹಗ್ಗದ ಕುಣಿಕೆಯನ್ನೆಸೆದು ಜೀರಿ, ಆ ಹಗ್ಗದ ಸಹಾಯದಿಂದ ಅರಮನೆಯ ಮಹಡಿಯನ್ನೇರುವನು. ಅನಂತರ ಹಗ್ಗ ವನ್ನು ಮುಚ್ಚಿಟ್ಟು, ಕಳ್ಳನ ವೇಷವನ್ನು ತೆಗೆದುಹಾಕಿ ಅಂತಃಪುರಕ್ಕೆ ಹೋಗುವನು. ನಲಿನಿಕೆಯು ಸ್ವಾಗತವನ್ನೀಯುವಳು. ಅವನು ನಿದ್ರಿ ಸುತ್ತಿರುವ ಕುರಂಗಿಯನ್ನು ನೋಡಿ ನೋಡಿ ಆನಂದಿಸಿ, ತನ್ನ ಶ್ರಮವು ಅಂದಿಗೆ ಸಾರ್ಥಕವಾಯಿತೆಂದುಕೊಳ್ಳುವನು.

ಅಷ್ಟರಲ್ಲಿ ಕುರಂಗಿಯು ಎಚ್ಚೆತ್ತು ತನ್ನ ಪ್ರಿಯನು ತನ್ನ ಬಳಿ ಯಲ್ಲಿರುವುದನ್ನರಿಯದೆ, "ನಿರ್ದಯನು ಏನೆಂದು ಹೇಳಿದನು?" ಎಂದು ಕೇಳುವಳು. ಅನಂತರ ಅಸಂಬದ್ಧವಾಗಿ ಕೆಲವು ಮಾತುಗಳನ್ನಾಡಿ, ಕೊನೆಗೆ ವೇಳೆಯೆಷ್ಟೆಂದು ಅವಳು ಕೇಳುವಳು. ಅರ್ಧರಾತ್ರಿಯೆಂದು ನಲಿನಿಕೆಯು ಹೇಳಿದುದನ್ನು ಕೇಳಿ, "ಹಾಗಾದರೆ, ದಣಿದಿರುವೆ, ಬಾ, ನನ್ನನ್ನು ಆಲಿಂಗಿಸು" ಎಂದು ಹೇಳುವಳು. ನಲಿನಿಕೆಯು ಅವಿಮಾ ರಕನ ಕಿವಿಯಲ್ಲಿ, "ನಾನು ಇವಳ ಮೈಯನ್ನು ಹಿಸುಕುತ್ತಿರುವೆನು.

ನೀನು ಅವಳನ್ನು ಆಲಿಂಗಿಸು" ಎಂದು ಹೇಳುವಳು. ಸಖಿಯು ತನ್ನನ್ನು ಆಲಿಂಗಿಸದೆ ವೈಯನ್ನು ಹಿಸುಕುತ್ತಿರುವುದನ್ನು ಕಂಡು ಕುರಂಗಿಯು "ಅತಿ ಪ್ರೀತಿಯು ಸಾಕು. ಬಾ, ಆಲಿಂಗಿಸು" ಎಂದಾಗ ನಲಿನಿಕೆಯು, "ರಾಜಕುಮಾರಿ, ಇದೋ ಬಂದೆ" ಎನ್ನುವಳು. ಕುರಂಗಿಯು ಬಹುಶಃ ಇನ್ನೂ ಕಣ್ಣು ಮುಚ್ಚಿಕೊಂಡೇ ಇದ್ದು ಸಖಿಯೆಂಬ ಭಾವನೆಯಿಂದ ಅವಿಮಾರಕನನ್ನು ಬರಸೆಳೆದು ಆಲಿಂಗಿಸುವಳು. ಅಲ್ಲದೆ, "ಇದಾರು, ಇನ್ನೂ ಹಿಸುಕುತ್ತಿರುವವರು?" ಎನ್ನುವಳು. ಆಗ ನಲಿನಿಕೆಯು ಅವಳ ಕಿವಿಯಲ್ಲಿ ನಿಜವಾದ ಸಂಗತಿಯನ್ನರುಹುವಳು. ಕುರಂಗಿಯು ಕಳವಳ ಪಡುತ್ತ ಪ್ರಮಾದವಾಯಿತೆಂದು ಬಗೆದು, "ಹಾ, ಹೀನಚರಿತೆಯಾದೆನು. ಭಯವಾಗುತ್ತದೆ" ಎನ್ನುವಳು. ಈ ಸನ್ನಿವೇಶವೂ ಸರಿಯಾಗಿ ಚಿತ್ರಿತ ವಾಗಿಲ್ಲ. ಕಲೆಗಿಂತ ಹೆಚ್ಚಾಗಿ ಕವಿಯ ಯುಕ್ತಿಯೇ ಇಲ್ಲಿ ವಿಜೃಂಭಿಸು ತ್ತದೆ. ಆಗ ಅವಿಮಾರಕನು, "ಪ್ರಿಯೆ, ನಮ್ಮ ಮನಸ್ಸುಗಳು ಒಟ್ಟು ಗೂಡಿರುವುದರಿಂದ ನೀನು ನನಗೆ ಹೊಸಬಳಲ್ಲ. ಗಾಳಿಯ ವೇಗದಿಂದ ಆಹತವಾದ ಲತೆಯಂತೆ ಕಂಪಿಸುವಿಯೇಕೆ? ಭದ್ರೆ, ಭಯವನ್ನು ಬಿಡು. ನನ್ನಲ್ಲಿ ಅನುಗ್ರಹಮಾಡು. ಹೆಚ್ಚು ಮಾತನಾಡಿ ಫಲವೇನು? ನಾನು ನಿನಗೆ ಶರಣಾಗತನಾಗಿದ್ದೇನೆ"† ಎಂದು ಹೇಳಿ ಕಾಲಿಗೆರಗುವನು. ಅವನ ವರ್ಣನೆಯು ನೈಸರ್ಗಿಕ ಶೋಭೆಯಿಂದ ಕೂಡಿದೆ. ಕುರಂಗಿಯು ಲಜ್ಜಿತೆಯಾಗಿ ನಲಿನಿಕೆಯ ಮುಖವನ್ನು ನೋಡುವಳು. ಅವಳು, "ರಾಜಕುಮಾರ! ಏಳು, ಏಳು. ರಾಜಕುಮಾರಿಯು ಹೇಳುತ್ತಾಳೆ, ಏಳು" ಎಂದು ಹೇಳಿದ ಮೇಲೆ ಅವನು ಏಳುವನು. ಅಂದು ರಾತ್ರಿಯಿಂದ ಅವಿಮಾರಕನು ರಹಸ್ಯವಾಗಿ ಕುರಂಗಿಯ ಅಂತಃಪುರದಲ್ಲಿರುವನು.

---

† "ನ ತ್ವಂ ಪ್ರಿಯೇ! ಮಮ ನವಾಸಿ ಮನೋಭಿಯೋಗಾತ್
ಕಿಂ ಕಮ್ಪಸೇ ಪವನವೇಗ ಹತಾ ಲತೇವ!
ಭದ್ರೇ ಭಯಂ ತ್ಯಜ ಕುರುಷ್ವ ಮಯಿ ಪ್ರಸಾದಂ
ಕಿಂ ವಾ ಪ್ರಲಪ್ಯ ಬಹುಧಾ ಶರಣಾಗತೋಽಸ್ಮಿ॥"

ನಾಲ್ಕನೆಯ ಅಂಕದ ಪ್ರವೇಶಕದಲ್ಲಿ, ಅವಿಮಾರಕನೂ ಕುರಂಗಿಯೂ ಅಂತಃಪುರದಲ್ಲಿದ್ದುದು ಕುಂತಿಭೋಜನಿಗೆ ತಿಳಿದು ಬಂದ ಕಾರಣ ಅವನು ತಲೆತಪ್ಪಿಸಿಕೊಂಡು ಓಡಿಹೋದುದೂ, ಕುರಂಗಿಯು ದುಃಖಾಕ್ರಾಂತೆಯಾಗಿರುವುದೂ ಸೂಚಿತವಾಗುವುವು. ವಿರಹಪೀಡಿತನಾದ ಅವಿಮಾರಕನು ಕುರಂಗಿಗಾಗಿ ಹಂಬಲಿಸುತ್ತ ಜೀವನದಲ್ಲೇ ಬೇಸರಹೊಂದಿ ಕಾಡುಗಿಚ್ಚಿಗೆ ತನುವನ್ನೊಡ್ಡಿ ಆತ್ಮಹತ್ಯ ಮಾಡಿಕೊಳ್ಳಲು ಪ್ರಯತ್ನಿಸುವನು. ಅಗ್ನಿಯು ಅವನ ತಂದೆಯಾದಕಾರಣ, ಕಾಡುಗಿಚ್ಚೂ ಅವನಿಗೆ ಶೀತಳವಾಗಿರುವುದು. ಅತಿಮಾನುಷ ವ್ಯಾಪಾರಕ್ಕೆ ಈ ಸನ್ನಿವೇಶವೇ ಸರಿಯಾದುದಲ್ಲ. ಆದಕಾರಣ, ಈ ಸಂವಿಧಾನವು ಸ್ವಲ್ಪವೂ ಚೆನ್ನಾಗಿಲ್ಲ. ಅನಂತರ ಅವಿಮಾರಕನು ಬೆಟ್ಟದಿಂದ ಬಿದ್ದು ಪ್ರಾಣತ್ಯಾಗ ಮಾಡುವ ಪ್ರಯತ್ನದಲ್ಲಿ ಉದ್ಯುಕ್ತನಾಗುವನು. ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಮೇಘನಾದನೆಂಬ ವಿದ್ಯಾಧರನೂ ಅವನ ಪತ್ನಿ ಸೌದಾಮಿನಿಯೂ ಬಂದುದರಿಂದ ಅದು ತಪ್ಪುವುದು. ಮೇಘನಾದನು ವಿದ್ಯಾಧರರಿಂದ ಮಲಯ ಪರ್ವತದಲ್ಲಿ ನಡೆಯುವ ಅಗಸ್ತ್ಯಪೂಜೆಗೆ ಹೊರಟಿರುವನು. ಅವನು ತನ್ನನ್ನು ಮಾತನಾಡಿಸಿದ ಅವಿಮಾರಕನಿಗೆ ತನ್ನ ಸಮಾಚಾರವನ್ನು ತಿಳಿಸಿ, ತನ್ನ ಯೋಗವಿದ್ಯಾ ಬಲದಿಂದ ಅವಿಮಾರಕನ ವಿಚಾರವನ್ನು ತಿಳಿದುಕೊಂಡು ಅವನಲ್ಲಿ ಮರುಕದಿಂದ ಅವನಿಗೊಂದು ಉಂಗುರವನ್ನು ಕೊಡುವನು. ಅದನ್ನು ಬಲಗೈ ಬೆರಳಿಗೆ ಇಟ್ಟುಕೊಂಡರೆ ಇತರರಿಗೆ ಅದೃಶ್ಯನಾಗಿ ಎಡಗೈ ಬೆರಳಿಗೆ ಇಟ್ಟುಕೊಂಡರೆ ಕಣ್ಣಿಗೆ ಕಾಣಿಸುವಂತಾಗುವ ಕಾರಣ, ಅದರ ಸಹಾಯದಿಂದ ಕುರಂಗಿಯ ಅಂತಃಪುರಕ್ಕೆ ಹೋಗಲು ಸಾಧಕವಾಗುವುದೆಂದು ತಿಳಿಸಿ, ಮೇಘನಾದನು ತನ್ನ ಪತ್ನಿಯೊಡನೆ ಹೊರಟುಹೋಗುವನು.

ಅತ್ತ, ಒಂದು ವರ್ಷಕಾಲದಿಂದ ಅವಿಮಾರಕನನ್ನು ಕಾಣದ ವಿದೂಷಕನು ಅವನನ್ನು ಹುಡುಕಿಕೊಂಡು ಅಲೆಯುವುದಾಗಿಯೂ, ಕುಮಾರನನ್ನಾಗಲಿ, ಕುಮಾರನ ದೇಹವನ್ನಾಗಲಿ ಕಾಣದೆ ಹೋದಲ್ಲಿ ತಾನೂ ದೇಹತ್ಯಾಗಮಾಡಿ ಪರಲೋಕದಲ್ಲಿ ಅವನನ್ನು ಕಾಣುವುದಾಗಿಯೂ

ನಿಶ್ಚೈಸುವನು. ಅಲ್ಲದೆ ಸುತ್ತಿ ಸುತ್ತಿ ದಣಿದಿರುವುದರಿಂದ ಕೊಂಚ ಕಾಲ ಮರದ ನೆರಳಿನಲ್ಲಿ ನಿದ್ರಿಸುತ್ತಿರುವನು. ಅದೇ ಸಮಯದಲ್ಲಿ ಅವಿಮಾರಕನೂ ತನ್ನ ಮಿತ್ರನಾದ ವಿದೂಷಕನನ್ನು ಸ್ಮರಿಸಿಕೊಳ್ಳುವುದು ಉದಾರಕಲ್ಪ. ಮಿತ್ರರಿಬ್ಬರೂ ಆ ಬಳಿಕ ಸಂಧಿಸಿ ಆಲಿಂಗನ ಮಾಡಿ ಕೊಳ್ಳುವುದಂತು ಮನೋಜ್ಞವಾಗಿದೆ. ಅವಿಮಾರಕನು ತನಗೆ ದೊರೆ ತಿರುವ ಉಂಗುರದ ಪ್ರಭಾವವನ್ನು ವಿದೂಷಕನಿಗೆ ತೋರಿಸಿ ಆಚ್ಚರಿ ಪಡಿಸಿ, ಅನಂತರ ಕುರಂಗಿಯ ಅಂತಃಪುರಕ್ಕೆ ಹೋಗಲು ತ್ವರೆಗೊಳಿ ಸುವನು. ಅವನು ಆತುರಪಟ್ಟಷ್ಟೂ ವಿದೂಷಕನು ಆಲಸ್ಯವನ್ನು ತೋರಿಸಿ ವಿಶ್ರಮಿಸಿಕೊಂಡು ಹೋಗೋಣವೆಂದು ಹೇಳುವುದು ವಿನೋ ದಾತ್ಮಕವಾಗಿದೆ. ಕೊನೆಗೆ ನಿರ್ವಾಹವಿಲ್ಲದೆ ಅವಿಮಾರಕನು, "ಮಿತ್ರ, ನಿನ್ನನ್ನು ಬೇಡಿಕೊಳ್ಳುವೆನು. ಬೇಗ ಹೋಗೋಣ ನಡೆ" ಎನ್ನು ವನು. ಆಗ ವಿದೂಷಕನು, ಕುರಂಗಿಯನ್ನು ನೋಡಲು ಆತುರಪಡು ತ್ತಿರುವುದಕ್ಕಾಗಿ ಅವನನ್ನು ಹಾಸ್ಯಮಾಡಿ, "ನೀನೇಕೆ ಸಮಾವರ್ತ ನವು ಮುಗಿದಿರುವ ವಟುವಿನಂತೆ ಆತುರ ಪಡುವೆ?" ಎಂದು ಕೇಳು ವುದು ರಮಣೀಯವಾಗಿದೆ. ವಿದ್ಯಾಭ್ಯಾಸವು ಮುಗಿದ ಮೇಲೆ ಊರಿಗೆ ಹೊರಡುವ ವಟುವಿನ ಆತುರಕ್ಕೆ ಪ್ರಿಯಾಸಮಾಗಮದ ಕಾತುರತೆಯನ್ನು ಹೋಲಿಸಿರುವುದೂ, "ಸಮಾವರ್ತನ" ಎಂಬ ಪದದಿಂದ ವ್ಯಂಗ್ಯ ವಾಗಿ ಸೂಚಿತವಾಗುವ ವಿದ್ಯಾಭ್ಯಾಸ ಮುಗಿದಿರುವ ಅಂಶವೂ, ಮನೋಹರ ವಾಗಿವೆ. ಷೇಕ್ಸ್‌ಪಿಯರ್ ಮಹಾಕವಿಯು ರೋಮಿಯೊ ಎಂಬಾತನಿಂದ ಹೇಳಿ ಸಿರುವ, "ಪ್ರಿಯನು ಪ್ರಿಯೆಯ ಬಳಿಗೆ ವಿದ್ಯಾರ್ಥಿಗಳು ಪಾಠಶಾಲೆಯಿಂದ ಮನೆಗೆ ಹೋಗುವಂತೆ (ಆನಂದದಿಂದ) ತೆರಳುತ್ತಾನೆ. ಪ್ರಿಯನು ಪ್ರಿಯೆಯ ಬಳಿಯಿಂದ ವಿದ್ಯಾರ್ಥಿಗಳು (ಪಾಠಶಾಲೆಗೆ) ಹೋಗುವಂತೆ ಸಂಕಟದಿಂದ ತೆರಳುತ್ತಾನೆ" * ಎಂಬ ಮಾತುಗಳು ಈ ಸಂದರ್ಭದಲ್ಲಿ ತಟಕ್ಕನೆ ನೆನಪಿಗೆ ಬರುತ್ತವೆ. ಒಬ್ಬಳೇ ಸರಸ್ವತೀದೇವಿಯು, ಬೇರೆ ಬೇರೆ ಕಾಲಗಳ ಬೇರೆಬೇರೆ

---

*"Love goes toward love, as school boys from their books,
But love from love, toward school with heavy looks"
W. Shakespeare,

ದೇಶಗಳ ಕವಿಗಳ ಹೃದಯವೀಣೆಗಳನ್ನು ಮಿಡಿದು ಒಂದೇ ಮಧುರ ತಾನವನ್ನು ನುಡಿಸುವ ಸೊಬಗನ್ನು ಸೂಚಿಸಲು ಇದೂ ಒಂದು ಉತ್ತಮ ನಿದರ್ಶನ. ತಾನು ಬೇಡಿದರೂ ಸಗ್ಗದೆ ಆಲಸ್ಯಮಾಡಿ ಹಾಗೆ ನುಡಿದ ವಿದೂಷಕನಲ್ಲಿ ಖತಿಗೊಂಡು ಅವಿಮಾರಕನು, "ಮೂರ್ಖ, ಹೀಗೆ, ಬಾ" ಎಂದು ಗದರಿಸಿ ಕೈಹಿಡಿದೆಳೆದು ಜಗ್ಗಿಸುವುದೂ, ವಿದೂಷಕನು, "ಬೇಡ, ಎಳೆಯಬೇಡ. ಇದೋ ಓಡಿಬರುತ್ತಿದ್ದೇನೆ" ಎಂದು ಹೇಳಿ ಓಡುವುದೂ, ಕವಿಯು ಪಾತ್ರಗಳ ಹೃದಯಗತಿಯನ್ನೇ ಹಿಡಿದು ಬರೆಯುತ್ತಿರುವುದಕ್ಕೆ ನಿದರ್ಶನವಾಗಿವೆ.

**ಐದನೆಯ ಅಂಕದಲ್ಲಿ**, ವಿರಹಕಾತರೆಯೂ, ದುಃಖಿನಿಯೂ, ಹತಾಶಳೂ ಆದ ಕುರಂಗಿಯನ್ನು ನಾವು ಕಾಣುತ್ತೇವೆ. ನಲಿನಿಕೆಯು ಅವಳಿಗೆ ಸಮಾಧಾನ ಹೇಳುವಳು. ತನ್ನ ಸ್ಥಿತಿಯನ್ನರಿಯದೆ ಪರಿಜನರು ತನಗೆ ಸಂತೋಷವಾಗಲೆಂದು ಬಗೆಬಗೆಯ ಹೂಗಳನ್ನು ತಂದುಕೊಟ್ಟು ತನ್ನ ಹೃದಯವೇದನೆಯನ್ನು ಹೆಚ್ಚಿಸುತ್ತಿದ್ದುದೇ ಮುಂತಾದ ಅಂಶಗಳನ್ನು ಅವಳು ತನ್ನ ಸಖಿಯೊಡನೆ ಹೇಳಿಕೊಳ್ಳುವಳು. ಆಗ ವರ್ಷಾಕಾಲ. ನವಿಲುಗಳ ನರ್ತನವು ಅವಳಿಗೆ ಸೊಗಸದು. ಶುಕಶಾರಿಕೆಗಳ ಸವಿಮಾತುಗಳು ಅವಳಿಗೆ ರುಚಿಸವು. ಪದೇ ಪದೇ, "ರೋಗಾವಸ್ಥೆ"ಯನ್ನು ಕುರಿತು ಪ್ರಶ್ನೆಮಾಡುವ ಪರಿಜನರ ಮಾತುಗಳಿಂದಲೂ ಅವಳಿಗೆ ಬೇಸರ. ಅವಳು ಪ್ರಾಸಾದದ ಮೇಲುಗಡೆಗೆ ಹೋಗಲಿಚ್ಛಿಸುವಳು. ಕವಿಯು ಅವಳ ವಿರಹಾವಸ್ಥೆಯನ್ನು ಮನೋಹರವಾಗಿ ವರ್ಣಿಸಿದ್ದಾನೆ. ಅವರೀರ್ವರೂ ಹತ್ತಿಹೋಗುವರು. ವಿದ್ಯಾಧರನು ಕೊಟ್ಟ ಉಂಗುರವನ್ನು ಧರಿಸಿ ಅದೃಶ್ಯನಾಗಿರುವ ಅವಿಮಾರಕನೂ, ಅವನನ್ನು ಹಿಡಿದುಕೊಂಡಿರುವ ಕಾರಣದಿಂದ ಅದೃಶ್ಯನಾಗಿರುವ ವಿದೂಷಕನೂ ಆ ವೇಳೆಗೆ ಸರಿಯಾಗಿ ಅಲ್ಲಿಗೆ ಬರುವರು. ಅವಿಮಾರಕನು ಅವಳನ್ನು ವರ್ಣಿಸಿದ ತರುವಾಯ, ವಿದೂಷಕನು ಅವನನ್ನು ಕುರಿತು, "ಎಲೈ ಮಿತ್ರ! ನನಗೆ ಹರ್ಷವುಂಟಾಗಿದೆ. ನೀನೇ ಲೋಕದಲ್ಲೆಲ್ಲ ಅತ್ಯಂತ ಸುಂದರನೆಂದು ನೀನು ಭಾವಿಸಿಕೊಂಡಿದ್ದೆ. ಸ್ವಭಾವ ರಮ

ಣೀಯವಾದ ಈ ಪೂಜ್ಯಳ ರೂಪದಿಂದ ನೀನು ಈಗ ಪರಾಜಿತನಾದೆ. ನಿನ್ನ ವಿಯೋಗದಿಂದ ಅವಳು ಕೃಶಳಾಗಿದ್ದಾಳೆಂದು ತೋರುತ್ತದೆ. ಹೀಗೆ ಕೃಶಳಾಗಿದ್ದೂ ಬಾಲಚಂದ್ರಲೇಖೆಯಂತೆ ಕಣ್ಣಿಗೆ ಆಹ್ಲಾದವನ್ನುಂಟುಮಾಡುತ್ತಿದ್ದಾಳೆ" ಎನ್ನುವನು. ಓದುಬರೆಹಗಳು ಬಾರದಿದ್ದರೂ ವಿದೂಷಕನೆಷ್ಟು ಸಂಸ್ಕೃತನಾಗಿದ್ದಾನೆಂಬುದು ಈ ಉಪಮಾನದಿಂದ ವ್ಯಕ್ತವಾಗುವುದು ಆದರೆ ಅವನ ಮಾತುಗಳನ್ನು ಅಭಿನಂದಿಸುವ ಸ್ಥಿತಿಯಲ್ಲಿಲ್ಲದ ಅವಿಮಾರಕನು, "ಮಿತ್ರ, ಅತಿ ಪಾಂಡಿತ್ಯ. ಇದೇನಿದು ?" ಎನ್ನುವನು. ಅದಕ್ಕೆ ಉತ್ತರವಾಗಿ ವಿದೂಷಕನು, "ಎಲೈ ಮಿತ್ರ ! ನಿತ್ಯಪರಿಚಯದಿಂದ ನೀನು ನನ್ನನ್ನು ಪರಿಹಾಸ್ಯಮಾಡುತ್ತಿರುವೆ. ನನ್ನನ್ನು ನೋಡಿಲ್ಲದ ಮತ್ತು ನನ್ನ ಬುದ್ಧಿಯನ್ನರಿಯದ ಅಪರಿಚಿತರು, ನಾನು ಮೇಧಾವಿಯೆಂದು ಬಹಳವಾಗಿ ಹೊಗಳುತ್ತಾರೆ. ಅದನ್ನು ಚೆನ್ನಾಗಿ ಅರಿತಿರುವ ನಾನು ಈ ನಗರದಲ್ಲಿ ಯಾರೊಡನೆಯೂ ಆಪ್ತತೆಯನ್ನು ಬಳೆಯಿಸಿಲ್ಲ" ಎಂದು ಹೇಳುವ ಮಾತುಗಳು ವಿನೋದಾತ್ಮಕವಾಗಿಯೂ ಇವೆ; ಲೋಕಾನುಭವವನ್ನು ಸೂಚಿಸತಕ್ಕವಾಗಿಯೂ ಇವೆ; ವಿದೂಷಕನಿಗಿರುವ ಆತ್ಮಗೌರವವೂ ಅವುಗಳಿಂದ ವ್ಯಕ್ತವಾಗುತ್ತವೆ. ಇತರರಲ್ಲಿ ತಾನು ಆಪ್ತನಾದರೆ ಅವರೆಲ್ಲಿ ನಿತ್ಯಪರಿಚಯದಿಂದ ತನ್ನ ಬುದ್ಧಿ ಪ್ರೌಢಿಮೆಗಳನ್ನು ಮೆಚ್ಚುವುದು ತಪ್ಪಿಹೋಗುವುದೋ ಎಂಬುದು ಅವನ ಆಶಯ. ಅವಿಮಾರಕನು, "ಹಾಗೆ ಉದಾಸೀನ ಮಾಡಬೇಡ. ಪರಿವಾರದವರು ಬಹು ಜನಗಳಿದ್ದುದರಿಂದ ನಾನು ನನ್ನ ಕಾಂತೆಗೆ ಕಾಣಿಸಿಕೊಳ್ಳಲಾಗಲಿಲ್ಲ. ಪ್ರಾಸಾದದ ಮೇಲಕ್ಕೆ ಹೋಗಿರುವ ಆಕೆಯನ್ನು ಅಲ್ಲೇ ನೋಡೋಣ ನಡೆ" ಎನ್ನುವನು. ಅಲ್ಲದೆ, ಆ ಅರಮನೆಯನ್ನು ನೋಡುವ ಕುತೂಹಲದಿಂದ ಕೂಡಿ, ಅದಕ್ಕೆ ಸಂತೋಷದಿಂದ ಒಪ್ಪಿದ ವಿದೂಷಕನೊಡನೆ ಅವಿಮಾರಕನು, "ಪ್ರಾಸಾದದ ಮೆಟ್ಟಲುಗಳನ್ನು ಹತ್ತುವಾಗ ಸ್ವಲ್ಪವೂ ಶಬ್ದವಾಗದಂತೆ ಹತ್ತಬೇಕು" ಎಂದು ಹೇಳಿದುದಕ್ಕೆ ಅವನು, "ಮಿತ್ರ, ಇದು ಶಕ್ಯವಿಲ್ಲ. ಎಂಜಲು ಮಾಡದೆ ಊಟ ಮಾಡುವುದಾರಿಗೆ ಸಾಧ್ಯ ? ನಾನು ಇಲ್ಲೇ ಇರುತ್ತೇನೆ. ನೀನೇ ಹತ್ತಿ ಹೋಗು" ಎಂದು ಉತ್ತರ ಕೊಡುವುದನ್ನು ಕಂಡು ನಗದವರಾರು ?

ಅವಿಮಾರಕನು, "ನೀನು ನನ್ನ ಕೈಯನ್ನು ಬಿಟ್ಟರೆ ಇತರರು ನಿನ್ನನ್ನು ನೋಡುವರು" ಎಂದುದನ್ನು ಕೇಳಿ ಭಯಪಟ್ಟು ವಿದೂಷಕನು, "ಎಲೈ ಮಿತ್ರ! ನಾನು ಅದನ್ನು ಮರೆತೇ ಬಿಟ್ಟಿದ್ದೆ. ಮತ್ತೆ ಮತ್ತೆ ನೀನು ಅದನ್ನು ಹೇಳುತ್ತಿರು" ಎಂದು ಉತ್ತರಕೊಟ್ಟು ಅವನೊಡನೆ ಹೋಗುವನು.

ಪ್ರಾಸಾದದ ಮೇಲೆ ಕಂಬನಿದುಂಬಿರುವ ಕುರಂಗಿಗೆ ಅದೃಶ್ಯನಾಗಿ ಅವಿಮಾರಕನು ಅವಳನ್ನು ವರ್ಣಿಸಿ ವಿದೂಷಕನೊಡನೆ ಮಾತನಾಡುತ್ತಿರುವನು. ತನ್ನ ಜೀವನದಲ್ಲಿ ಬೇಸರಗೊಂಡಿರುವ ಕುರಂಗಿಯು ತನ್ನ ಸಖಿಯರನ್ನೆಲ್ಲ ಒಬ್ಬೊಬ್ಬರಿಗೆ ಒಂದೊಂದು ಕೆಲಸ ಹೇಳಿ ಕಳುಹಿಸಿ, ತನ್ನ ಉತ್ತರೀಯವನ್ನು ಕೊರಳಿಗೆ ಬಿಗಿದುಕೊಂಡು ಮೃತಪಡುವ ಪ್ರಯತ್ನ ಮಾಡುವ ವೇಳೆಗೆ, ಮಳೆಯ ಮೇಘವು ಗುಡುಗಿದುದನ್ನು ಕೇಳಿ ಭ್ರಾಂತೆಯಾಗಿ, "ನನ್ನನ್ನು ರಕ್ಷಿಸು, ರಕ್ಷಿಸು" ಎಂದು ಕೂಗಿಕೊಳ್ಳುವಳು. ಒಡನೆಯೆ, ಅವಿಮಾರಕನು ಉಂಗುರವನ್ನು ಎಡಗೈ ಬೆರಳಿಗಿಟ್ಟುಕೊಂಡು ಅವಳಿಗೆ ಕಾಣಿಸಿಕೊಂಡು ಅವಳನ್ನು ಹಿಡಿದುಕೊಳ್ಳುವನು. ಇದೆಲ್ಲ ಕೃತಕವಾಗಿರುವಂತೆ ಕಾಣುವುದೇ ಹೊರತು, ಇದರಲ್ಲಿ ನೈಸರ್ಗಿಕ ರಮಣೀಯತೆಯೇ ಇಲ್ಲ.

ಅವಿಮಾರಕನನ್ನು ನೋಡಿದುದು ನಿಜವೇ ಎಂದು ಆಶ್ಚರ್ಯಪಡುತ್ತ ಕಂಬನಿ ಸುರಿಸುತ್ತಿರುವ ತನ್ನ ಇನಿಯುಗಳಿಗೆ ಸಮಾಧಾನ ಹೇಳಿ ಅವನು ಆಲಿಂಗಿಸುವನು. ಅವಳು, "ಆಶ್ಚರ್ಯ! ಒಂದೇ ಕ್ಷಣದಲ್ಲಿ ನನ್ನ ಶರೀರ ದಾಹವೆಲ್ಲ ಶಮನವಾಯಿತು" ಎನ್ನುವಳು. ವಿದೂಷಕನೆದುರಿಗೆ ಅವರೀರ್ವರ ಆ ವರ್ತನೆಯು ಅಷ್ಟೇನೂ ಉಚಿತವಾಗಿಲ್ಲ. ಅವಿಮಾರಕನು, "ಚಿರಪರಿಚಿತವಾಗಿರುವ ಇವಳ ಆಲಿಂಗನವು, ನಮ್ಮ ಮನಸ್ಸು ಒಟ್ಟು ಗೂಡಿರುವುದರಿಂದ, ಈಗ ಪ್ರಥಮ ಸಮಾಗಮಕ್ಕಿಂತ ಹೆಚ್ಚು ಸುಖಕರವಾಗಿದೆ. ರಾಜನು ರಣಮುಖದಲ್ಲಿ ಸಾಹಸದಿಂದ ಗಳಿಸಿದ ವಿಜಯದಂತೆ ನಾನು ಈ ಆಲಿಂಗನ ಸೌಖ್ಯವನ್ನು ಅನುಭವಿಸುತ್ತಿ

ದ್ದೇನೆ" * ಎಂದು ಹೇಳಿ ಆನಂದ ಬಾಷ್ಪವನ್ನು ಸೂಸುವನು. ಇಲ್ಲಿಯ ಉಪಮಾನವು ಅವಿಮಾರಕನಂತಹ ಶೂರನಿಗೆ ತಕ್ಕ ಉಪಮಾನ; ಅದು ಅಪ್ರತಿಮ ಮನೋಹರವಾಗಿದೆ. ಅವರೀರ್ವರ ಕಂಬನಿಯನ್ನು ಕಂಡು ವಿದೂಷಕನು, "ಇದೇಕೆ ಅಳಲಾರಂಭಿಸಿದರು! ಇಷ್ಟೊಂದು ದುಃಖಪಡಬಾರದು. ಅಥವಾ ನಾನೂ ಅಳಲಿ? ಆದರೆ ಒಂದು ಮಾತ್ರ ದುರ್ಲಭ. ನನ್ನ ಕಣ್ಣುಗಳಿಂದ ಬಾಷ್ಪವು ಹೊರಡುವಹಾಗಿಲ್ಲ. ನನ್ನ ತಂದೆಯು ಮೃತಪಟ್ಟಾಗ ಬಹಳ ಪ್ರಯತ್ನದಿಂದ ಅಳಬೇಕೆಂದು ಉಪಕ್ರಮಿಸಿದೆ. ಆದರೆ ಕಣ್ಣುಗಳಿಂದ ಬಾಷ್ಪವೇ ಹೊರಡಲಿಲ್ಲ. ಹೀಗಿರುವಲ್ಲಿ ಅನ್ಯರ ದುಃಖಕ್ಕಾಗಿ (ಅಳಬೇಕಾದರೆ) ಹೇಳುವುದೇನು? ಆದರೂ ಅನುತ್ಸುಕನಾಗಿ ಅಳುತ್ತೇನೆ" ಎಂದು ಹೇಳುವುದನ್ನು ಕಂಡು ಗಹಗಹಿಸಿ ನಗದಿರುವುದು ತೀರ ಅಸಾಧ್ಯ. ಆ ಮಾತುಗಳನ್ನು ಕೇಳಿ ಅವಿಮಾರಕನು, "ನಿನ್ನ ಅಪಹಾಸ್ಯವು ಸಾಕು" ಎಂದು ಮುಂತಾಗಿ ಹೇಳುವುದನ್ನು ನೋಡಿದರೆ, ಅವು ಕೇವಲ ದಡ್ಡತನದಿಂದ ಮಾತ್ರವೇ ಹೊರಟಮಾತುಗಳಲ್ಲವೆಂದೂ ತೋರುತ್ತದೆ.

ಆ ವೇಳೆಗೆ ಅಲ್ಲಿಗೆ ಬಂದ ನಲಿನಿಕೆಯು ಹೊಸಬನಾದ ವಿದೂಷಕನನ್ನು ಕಂಡು, "ಹುಂ! ಈ ಪುರುಷನಾರು?" ಎನ್ನುವಳು. ವಿದೂಷಕನು, "ನೀನು ಬಹು ಚೆನ್ನಾಗಿ ಗ್ರಹಿಸಿದ ಹಾಗಾಯಿತು! ಅಯ್ಯೋ, ಅರಮನೆಯವರ ಬುದ್ಧಿಯೆ! ಅವರು ಹೊರತು ಮತ್ತಾರು ತಾನೆ ನನ್ನನ್ನು ನೋಡಿ ಪುರುಷನೆಂದು ಹೇಳುವರು? ನಾನು ಹೆಂಗಸು" ಎನ್ನುವ ಹಾಸ್ಯದ ಮಾತುಗಳು ವಿನೋದಕರವಾಗಿವೆ. ಅಷ್ಟರಲ್ಲಿ ನಲಿನಿಕೆಯು ಅವಿಮಾರಕನನ್ನು ನೋಡಿ, "ಇದೋ ರಾಜಕುಮಾರ! ರಾಜ

---

* "ಅಯಂ ಖಲ್ವಸ್ಯಾಃ ಪರಿಷ್ವಙ್ಗಃ,
ಸತತ ಪರಿಚಿತೋ ಮನೋಭಿಯೋಗಾ
ದಧಿಕರಸಃ ಪ್ರಥಮಾತ್ ಸಮಾಗಮಾತ್ ।
ರಣಶಿರಸಿ ನೃಪೇಣ ಸಾಹಸಾದ್ಯೋ
ವಿಜಯ ಇವಾದ್ಯ ಮಯಾನುಭೂಯತೇ ॥"

ಕುಮಾರ, ವಂದಿಸುವೆನು. ರಾಜಕುಮಾರ, ಈತನಾರು?" ಎಂದು ಕೇಳು ವಳು. ಅವಳ ಸಂಭ್ರಮವನ್ನು ಕಂಡು ವಿನೋದವಾಡುತ್ತ, ಬಹುಶಃ ಅವಳ ಮಾತಿನ ಬಗೆಯನ್ನೂ ಅವಳ ಕಂಠಧ್ವನಿಯನ್ನೂ ಅನುಕರಿಸುತ್ತ ವಿದೂಷಕನು, "ನಾನು ಪುಷ್ಕರಿಣಿಯೆಂಬ ಹೆಸರಿನ ಚೇಟಿ" ಎಂದು ಉತ್ತರಕೊಡುವನು. ಆಗ ಅವಿಮಾರಕನು, "ಸಂತುಷ್ಟನೆಂಬೊಬ್ಬನ ವಿಚಾರವನ್ನು ನಾನು ಪದೇ ಪದೇ ಹೇಳುತ್ತಿರಲಿಲ್ಲವೆ? ಆ ಬ್ರಾಹ್ಮಣನು ಈತನೇ" ಎಂದು ನಲಿನಿಕೆಗೆ ತಿಳಿಸುವನು. ನಲಿನಿಕೆಯು "ಆಹ! ಈ ನಗರದ ಪಣ್ಯಶಾಲಾ ಪ್ರಾಸಾದದ ಬಳಿಯಲ್ಲಿ ಹಿಂದೆ ಈ ಬ್ರಾಹ್ಮಣನನ್ನು ನಾನು ನೋಡಿದ್ದೆ" ಎಂದು ಹೇಳುವಳು. ವಿದೂಷಕನು ಆಗಲೂ ವಿನೋದವಾಗಿ ಮಾತನಾಡುತ್ತ, "ಹೌದು, ಪೂಜ್ಯಳೆ! ಯಜ್ಞೋಪವೀತದಿಂದ ಬ್ರಾಹ್ಮಣ. ಚೀವರದಿಂದ ಕೆಂಪುಬಟ್ಟೆಯ ಸಂನ್ಯಾಸಿ. ನಾನು ಬಟ್ಟೆಯನ್ನು ತೆಗೆದು ಹಾಕಿದರೆ ಜೈನ ಶ್ರಮಣಕನಾಗುತ್ತೇನೆ" ಎಂದು ಹೇಳಿ ನಲಿನಿಕೆಯ ಕೈಯಲಿದ್ದ ಸಾಮಾನುಗಳನ್ನು ತೋರಿಸಿ, "ಪೂಜ್ಯಳೆ, ಇದೇನು?" ಎಂದು ಕೇಳುವನು. ಅವಳು, "ರಾಜಕುಮಾರಿಯ ಸ್ನಾನಪರಿಕರಗಳು" ಎಂದು ಉತ್ತರ ಹೇಳುವಳು. ಆಗ ಅವನು, "ಹಸಿವಿನಿಂದ ಅಳುತ್ತಿರುವ ಆ ಪೂಜ್ಯಳಿಗೆ ಸ್ನಾನ ಪರಿಕರಗಳಿಂದೇನು? ಬೇಗಹೋಗಿ ಊಟವನ್ನು ತೆಗೆದುಕೊಂಡು ಬಾ. ನಾನು ಅಗ್ರಾಸನದಲ್ಲಿ ಕುಂಡಿಸುತ್ತೇನೆ" ಎಂದು ತಿಳಿಸುವುದನ್ನು ಕೇಳಿ ಕುರಂಗಿಯೂ ನಕ್ಕಿರಬೇಕು. ನಲಿನಿಕೆಯು, "ದುರ್ಬ್ರಾಹ್ಮಣ! ಸರ್ವದಾ ಊಟದ ಯೋಚನೆ! ಅದೆಲ್ಲ ಹಾಗಿರಲಿ. ಅನೇಕರು ತುಂಬಿರುವ ರಾಜಮಾರ್ಗದಲ್ಲಿ ಈ ಹಗಲಿನ ವೇಳೆ ರಾಜಕುಮಾರನು ಇಲ್ಲಿಯವರೆಗೆ ಬಂದ ಬಗೆಹೇಗೆ?" ಎಂದು ಕೇಳುವಳು. ಅವಿಮಾರಕನಿಗೆ ಕುರಂಗಿಯೊಡನೆ ಮಾತನಾಡಲು ಆಶೆ. ಇದೊಂದೂ ಅವನ ಮನಸ್ಸಿಗೆ ಬೇಡ. ಆದರೂ ಅವಿನೀತನಾಗಲು ಇಷ್ಟವಿಲ್ಲ. ಆದಕಾರಣ, ಅವನು, "ಸಂತುಷ್ಟನು ಅದನ್ನೆಲ್ಲ ನಿನಗೆ ತಿಳಿಸುವನು" ಎಂದು ಉತ್ತರಕೊಡುವನು. ಸೂಕ್ಷ್ಮಮತಿಯಾದ ನಲಿನಿಕೆಯು ಅವನ ಆಶಯವನ್ನು ಗ್ರಹಿಸಿ, ತನ್ನಲ್ಲಿತಾನು, "ಗೌರವ ವಚನಗಳಿಂದಲೇ ಹೋಗೆಂದು ಸೂಚಿಸಿದನು. ಇರಲಿ. ಇವ

ನೊಡನೆ ಚತುಶ್ಶಾಲೆಗೆ ಹೋಗಿ ನನ್ನ ಗೆಳತಿಯರೊಡನೆ ವೃತ್ತಾಂತ ವಿವರಗಳನ್ನೆಲ್ಲ ಕೇಳುವೆನು'' ಎಂದುಕೊಂಡು, "ಬಾ ಬ್ರಾಹ್ಮಣ!" ಎಂದು ವಿದೂಷಕನನ್ನು ಕರೆದು ಹೊರಡಲನುವಾಗುವಳು. ಅಲ್ಲದೆ, ವಿನೋದಾರ್ಥವಾಗಿ ಅವಳು ಅವನ ಕೈಹಿಡಿದು ಎಳೆಯುವಳು. "ಅಬ್ರಹ್ಮಣ್ಯಂ, ಅಬ್ರಹ್ಮಣ್ಯಂ" ("ಮಾಡಕೂಡದ ಕೆಲಸ, ನೀತಿ ವಿರುದ್ಧವಾದ ಮಾಡಕೂಡದ ಕೆಲಸ'') ಎಂದು ವಿದೂಷಕನು ಕೂಗಿ ಕೊಳ್ಳುವನು. ಈತನು ಹಾಸ್ಯಗಾರ ಬ್ರಾಹ್ಮಣನೆಂದು ಕುರಂಗಿಯು ನುಡಿಯುವಳು. ಕುರಂಗಿಯ ಕಲರವವನ್ನು ಕೇಳಿ ಸುಮ್ಮಾನದಿಂದ ಉಬ್ಬಿದ ಅವಿಮಾರಕನು, "ಮಿತ್ರ! ನೀನು ಹಾಸ್ಯಗಾರನಂತೆ'' ಎನ್ನುವನು. ಆಗ ವಿದೂಷಕನು, "ನನ್ನ ವಿಷಯವಾಗಿ ನಂಬಲಾರದ ಮಾತುಗಳನ್ನಾರು ಹೇಳುವವರು? ನಾನಲ್ಲ ಹಾಸ್ಯಗಾರ. ಈ ಪೂಜ್ಯಳೇ ಹಾಸ್ಯಗಾತಿ. ತನ್ನ ದುರವಸ್ಥೆಯನ್ನರಿತು ಏನನ್ನೋ ಮಾಡಲು ಪ್ರಯತ್ನಿಸಿ ಗುಡುಗಿದ ಧ್ವನಿಯನ್ನು ಕೇಳಿ ಅದೆಲ್ಲವನ್ನೂ ಮರೆತು ಕೆಳಗೆ ಬಿದ್ದ ಆ ಪೂಜ್ಯಳೇ ಹಾಸ್ಯಗಾತಿ'' ಎನ್ನುವನು. ಕುರಂಗಿಯು, ಹೃದಯದಿಂದ ಸಂತೋಷವು ಉಕ್ಕುತ್ತಿದ್ದರೂ ನಸುನಾಚಿ, "ನೀವಿಬ್ಬರೂ ಅದನ್ನೂ ನೋಡಿದಿರೇನು?'' ಎಂದು ಕೇಳುವಳು. ನಲಿನಿಕೆಯೂ ರಸಿಕಳು. ಕೂಡಲೆ ಅವಳು, "ಬೇಡಿಕೊಳ್ಳುವೆನು. ನನ್ನೊಡನೆ ಬಾ ಬ್ರಾಹ್ಮಣ" ಎಂದು ಕೇಳುವಳು. ಅವನು, "ನೀನು ಊಟಕ್ಕೆ ಬಡಿಸುವುದಾದರೆ, ಬರುತ್ತೇನೆ. ಆಗಂತುಕನಿಗೆ ಭೋಜನದಾನಮಾಡಿದರೆ ಆನಂದ'' ಎನ್ನುವನು. ನಲಿನಿಕೆಯು, "ನನ್ನ ಆಭರಣಗಳನ್ನೆಲ್ಲಾ ಕೊಡುವೆನು ಬಾ'' ಎಂದು ಕರೆಯುವಳು. ವಿದೂಷಕನು, "ತುಪ್ಪವೆಂಬ ಮಾತನ್ನು ಹೇಳಿದೊಡನೆಯೇ ಪಿತ್ತವು ಹೋಗುವುದಿಲ್ಲ. ನಿನ್ನ ಆಭರಣಗಳನ್ನು ನನ್ನ ಕೈಗೆ ಕೊಡು'' ಎಂದು ಹೇಳುವನು. ಅವಳು ವಿನೋದಪ್ರಿಯಳು. ಆಭರಣಗಳನ್ನು ತೆಗೆದುಕೊಡುವಳು. ವಿದೂಷಕನು ಏನನ್ನೋ ಹೇಳಲಿಚ್ಛಿಸುವನು. "ಚತುಶ್ಶಾಲೆಗೆ ಹೋಗಿ ಎಲ್ಲರೊಡನೆ ಕೇಳುತ್ತೇನೆ, ಬಾ" ಎಂದು ನಲಿನಿಕೆಯು ಕರೆಯುವಳು. ಬಳಿಕ, ತಾನು ಪೂಜ್ಯಳಾದ ಕುರಂಗಿಯ ಅಪ್ಪಣೆಯನ್ನು ಪಡೆದು ಬರುವುದಾಗಿ ವಿದೂಷಕನು

ಉತ್ತರ ಹೇಳುವನು. ನಳಿನಿಕೆಯು ಹುಸಿಮುನಿಸನ್ನು ತಾಳಿ, "ಯಾವನೋ ನೀನು! ನನ್ನ ಸರ್ವಾಭರಣಗಳನ್ನೂ ಕಸಿದುಕೊಂಡುದೂ ಅಲ್ಲದೆ ಈಗ ನನಗೇ ಒಡೆಯನಾಗಿ ಮಾತನಾಡುವೆ! ಬಾ, ಬಾ" ಎಂದು ಕೈಹಿಡಿದು ಎಳೆಯುವಳು. ವಿದೂಷಕನು, "ಪೂಜ್ಯಳೆ, ಬೇಡ, ಬೇಡ, ಹಾಗೆ ಎಳೆಯಬೇಡ. ನಾನು ಅತಿ ಸುಕುಮಾರ" ಎಂದು ಹೇಳಿಕೊಳ್ಳುವನು. ಅದಕ್ಕೆ ನಳಿನಿಕೆಯು, "ಗೊತ್ತಿದೆ, ಗೊತ್ತಿದೆ, ನಿನ್ನ ಸುಕುಮಾರತನ. ಸುಕುಮಾರನಾದರೆ, ಶೀಘ್ರ್ರವಾಗಿ ಬಾ" ಎಂದು ಉತ್ತರ ಕೊಡುವಳು. ವಿದೂಷಕನು ಎಳೆಸಿಕೊಳ್ಳುವುದು ತಪ್ಪಿತೆಂದು ಅವಳೊಡನೆ ಹೊರಟುಹೋಗುವನು. ಇಷ್ಟು ಪರಿಶುದ್ಧವಾಗಿ ಇಷ್ಟು ಸೊಗಸಾಗಿ ಹಾಸ್ಯರಸವನ್ನು ಚಿತ್ರಿಸುವುದು ಸಾಮಾನ್ಯ ಲೇಖಕನ ಕೈಯಿಂದ ಸಾಧ್ಯವಿಲ್ಲದ ಕೆಲಸ. ಭಾಸನು ವಿದೂಷಕ ಪಾತ್ರವನ್ನು ಮನೋಹರವಾಗಿ ಚಿತ್ರಿಸಿದ್ದಾನೆ. ಅವಿಮಾರಕನು ಮಳೆಯ ಮೇಘವನ್ನು ಮನೋಹರವಾಗಿ ವರ್ಣಿಸುವನು. ಕುರಂಗಿಯು ಪ್ರಾಸಾದದ ಮೇಲಕ್ಕೆ ಬಂದಾಗ ಅದೇ ಮೋಡವನ್ನು ನೋಡಿ ಅದಕ್ಕೆ ಮುಂಚೆ ಸಂತಾಪಪಟ್ಟಿದ್ದ ಕುರಂಗಿಯು, "ಆರ್ಯಪುತ್ರ! ಈಗ ಇದು ಸುಂದರವಾಗಿದೆ" ಎನ್ನುವಳು. ಜಗತ್ಪ್ರಸಿದ್ಧನಾದ ಮಿಲ್ಟನ್ ಮಹಾಕವಿಯು, "ಪ್ಯಾರಡೈಸ್ ಲಾಸ್ಟ್" ಎಂಬ ಗ್ರಂಥದಲ್ಲಿ ಆಡಮನು ತನ್ನ ಪ್ರಾಣಕಾಂತೆಯಾದ ಈವ್ ಎಂಬಾಕೆಯು ತನ್ನೊಡನೆ ಇದ್ದುದರಿಂದ, ಅದಕ್ಕೆ ಮೊದಲು ಶೋಭಾವಿಹೀನವಾಗಿದ್ದ ಸೂರ್ಯೋದಯ ಮುಂತಾದವುಗಳೆಲ್ಲ ಆಗ ಶೋಭಾವಿಭವದಿಂದ ರಾಜಿಸುತ್ತಿದ್ದಂತೆ ಆಕೆಗೆ ತಿಳಿಸುವ ಪ್ರೇಮಾಲಾಪದ ಪ್ರಖ್ಯಾತವಾಣಿಗಳು ಕುರಂಗಿಯ ಮಾತುಗಳಿಂದ ತಟಕ್ಕನೆ ನೆನಪಿಗೆ ಬರುವುವು. ಸರಸ್ವತಿಯ ಪ್ರಿಯಪುತ್ರರಿಗೆ ಕಾಲದೇಶ ಭೇದವುಂಟೆ? ಅಷ್ಟರಲ್ಲಿ ಮಳೆಯು ಬೀಳಲುಪಕ್ರಮಿಸುವುದು. ಅವಿಮಾರಕನೂ ಕುರಂಗಿಯೂ ಆನಂದದಿಂದ ಅಂತಃಪುರಕ್ಕೆ ಹೋಗುವರು.

**ಆರನೆಯ ಅಂಕದಲ್ಲಿ,** ಕಾಶಿರಾಜನು ಯಜ್ಞಮಾಡುತ್ತಿದ್ದ ಕಾರಣ, ಅವನ ಪತ್ನಿ ಸುದರ್ಶನಾದೇವಿಯೇ ತನ್ನ ಪುತ್ರನಾದ ಜಯವರ್ಮನೊ

ಡನೆ ಅವನ ವಿವಾಹಕ್ಕಾಗಿ ಕುಂತಿಭೋಜನ ಅರಮನೆಗೆ ಬಂದಿರುವ ಅಂಶವೂ, ಕುಂತಿಭೋಜನ ಪತ್ನಿಯು ತನ್ನ ಅಣ್ಣನ ಮಗನಾದ ಅವಿಮಾರಕನ ವಾರ್ತೆಯು ತಿಳಿಯುವವರೆಗೂ ಆ ವಿವಾಹಕ್ಕೆ ಸಮ್ಮತಿಸುವವಳಲ್ಲವೆಂಬ ಅಂಶವೂ, ತನ್ನ ರಾಜಧಾನಿಗೇ ಸೌವೀರರಾಜನು ಬಂದು ನೆಲಸಿದ್ದನೆಂದು ಕೇಳಿ ಕುಂತಿಭೋಜನು ಅಮಾತ್ಯರೊಡನೆ ತಾನೇ ಅವನನ್ನು ಹುಡುಕಲು ಹೊರಟನೆಂಬ ಅಂಶವೂ, ಪ್ರವೇಶಕದಿಂದ ನಮಗೆ ತಿಳಿಯುವುವು. ಅನಂತರ ಕುಂತಿಭೋಜನೂ, ಸೌವೀರರಾಜನೂ, ಭೂತಿಕ ಮುಂತಾದವರೂ ಪ್ರವೇಶಿಸುವರು. ಸೌವೀರರಾಜನು ತನ್ನ ಮಗನ ಪ್ರತಾಪವನ್ನೂ, ಅವನು ರಾಕ್ಷಸನನ್ನು ಕೊಂದುದನ್ನೂ, ತನಗೆ ಶಾಪ ಬಂದುದೇ ಮುಂತಾದ ಸಂಗತಿಗಳನ್ನೂ, ಆ ದಿನ ತನಗೆ ಶಾಪ ಪರಿಹಾರವಾಗಿದ್ದರೂ ತನ್ನ ಪುತ್ರನ ನೆಲೆಯು ತಿಳಿಯದೆ ತಾನು ಶೋಕಗ್ರಸ್ತನಾಗಿದ್ದ ಅಂಶವನ್ನೂ, ತಿಳಿಸುವನು. ಎಲ್ಲೆಲ್ಲಿ ಹುಡುಕಿದರೂ ಅವಿಮಾರಕನು ಸಿಕ್ಕಲಿಲ್ಲವೆಂದು ಭೂತಿಕನೂ ಹೇಳುವನು. ಆ ವೇಳೆಗೆ ನಾರದರು ಅಲ್ಲಿಗೆ ಬಂದು, ಆರಂಭದಿಂದ ಅದುವರೆಗೆ ನಡೆದಿರುವ ಸಂಗತಿಗಳನ್ನೆಲ್ಲ ತಿಳಿಸುವರು. ಅಲ್ಲದೆ, ಗಾಂಧರ್ವ ವಿವಾಹದಿಂದ ದಂಪತಿಗಳಾಗಿರುವ ಅವಿಮಾರಕ ಕುರಂಗಿಯರಿಗೆ ಸ್ವಜನ ಪರಿತೋಷಾರ್ಥವಾಗಿ ಮತ್ತೊಮ್ಮೆ ವಿವಾಹಮಂಗಲವಿಧಿಯನ್ನು ಪುರೋಹಿತರಿಂದ ಆಗಮಾಡಿಸಿ ಭಾರ್ಯೆಯೊಡನೆ ಕುಮಾರನನ್ನು ಕರೆದುತರುವಂತೆಯೂ ನಾರದರು ಭೂತಿಕನಿಗೆ ಅಪ್ಪಣೆ ಮಾಡುವರು. ಅವನು ಹೊರಟುಹೋದ ಬಳಿಕ, ನಾರದರು, ಅವಿಮಾರಕನು ಅಗ್ನಿಯಿಂದ ಹುಟ್ಟಿದ ಸುದರ್ಶನಾಪುತ್ರನೆಂಬುದನ್ನು ಸೂಚಿಸುವರು. ಅತ್ತಿಗೆಯಾದ ಕುರಂಗಿಯನ್ನು ಜಯವರ್ಮನಿಗೆ ಕೊಟ್ಟು ವಿವಾಹ ಮಾಡುವಂತಿಲ್ಲವಾದಕಾರಣ, ಅವಳ ತಂಗಿ ಸುಮಿತ್ರೆಯೊಡನೆ ಅವನ ವಿವಾಹವು ನೆರವೇರಲೆಂದೂ ಅವರು ಸುದರ್ಶನಾದೇವಿಗೆ ಬೆಸಸುವರು. ಅನಂತರ ವರವೇಷದಲ್ಲಿ ಅವಿಮಾರಕನು, ಕುರಂಗಿಯೊಡನೆಯೂ ಭೂತಿಕನೊಡನೆಯೂ ಪ್ರವೇಶಿಸಿ ಹಿರಿಯರೆಲ್ಲರಿಗೂ ನಮಸ್ಕಾರ ಮಾಡಿ ಅವರ ಆಶೀರ್ವಾದವನ್ನು ಪಡೆಯುವನು. ಆರನೆಯ ಅಂಕವೆಲ್ಲ ನೀರಸವಾಗಿದೆ. ನಾರದರು ಬಂದು ಮಧ್ಯಸ್ಥ ಮಾಡು

ವುದಂತು, ಈ ಸನ್ನಿವೇಶದಲ್ಲಿ ಸರ್ವಥಾ ಸಮರ್ಪಕವಾಗಿಲ್ಲ. ನಾರದ ರಂತಹ ದೊಡ್ಡವರು ಪ್ರವೇಶಿಸಲು ಕವಿಯು ತಕ್ಕ ಸನ್ನಿವೇಶವನ್ನೇ ಕಲ್ಪಿಸಿಲ್ಲ. ಕವಿಯೇ ಕಲ್ಪಿಸಿಕೊಂಡ ಕಥಾವಸ್ತುವಿನಲ್ಲಿ ಕೂಡ, ಅವಿಮಾರಕನು ಸುದರ್ಶನಾದೇವಿಯಲ್ಲಿ ಅಗ್ನಿಯಿಂದ ಜನಿಸಿದನೆಂದೇಕೆ ಸಂವಿಧಾನವನ್ನು ಅವನು ಕಲ್ಪಿಸಿದನೋ ತಿಳಿಯದು.

**ಪಾತ್ರರಚನೆ:**— ಈ ರೂಪಕದಲ್ಲಿ ಅತ್ಯಂತ ಸೊಗಸಾಗಿರುವದು ವಿದೂಷಕ ಪಾತ್ರ. ಉಳಿದ ಪಾತ್ರಗಳನ್ನು ಚಿತ್ರಿಸುವಲ್ಲಿ ಕವಿಯು ತನ್ನ ಇತರ ರೂಪಕದಲ್ಲಿ ಪ್ರದರ್ಶಿಸಿರುವಂತಹ ಕೌಶಲವನ್ನು ತೋರಿಸಿಲ್ಲ.

**ಅವಿಮಾರಕ**

ಅವಿಮಾರಕನೇ ರೂಪಕದ ಕಥಾನಾಯಕ. ಅವನು ತೇಜಸ್ವಿಯಾದ ಸ್ಫುರದ್ರೂಪಿ. ವಿದ್ಯಾಧರನು ಕೂಡ ಅವನ ರೂಪದಿಂದ ವಿಸ್ಮಿತನಾಗುವುದೂ, ಅವನನ್ನು ವರಿಸಿದ ಕುರಂಗಿಯು ಸೂರ್ಯನ ಬಳಿಯ ಪದ್ಮಿನಿಯಂತಿದ್ದಳೆಂದು ಅವಳ ಸಖಿಯರು ಮಾತನಾಡಿಕೊಳ್ಳುವುದೂ, ಅದಕ್ಕೆ ಉತ್ತಮ ನಿದರ್ಶನಗಳು. ಅವನು ಶೂರ; ಸಾಹಸಿ. ಯುವಜನೋಚಿತವಾದ ಧೈರ್ಯೋತ್ಸಾಹಗಳು ಅವನಲ್ಲಿವೆ; ಇಲ್ಲದೆ ಹೋದಲ್ಲಿ ಸಮರಾತ್ರಿಯಲ್ಲಿ ಅರಮನೆಯ ಮೇಲಕ್ಕೆ ಹತ್ತಿ ಹೋಗುವುದಾಗಲಿ, ಆನೆಯೊಡನೆ ಹೋರಾಡುವುದಾಗಲಿ ಅವನಿಂದ ಸಾಧ್ಯವಾಗುತ್ತಿರಲಿಲ್ಲ. ಆನೆಯ ದಾಂಧಲೆಗೆ ತುತ್ತಾಗುವುದರಲ್ಲಿದ್ದ ಕುರಂಗಿಯ ಪ್ರಾಣವನ್ನುಳಿಸುವ ಪ್ರಯತ್ನದಲ್ಲಿ- ಅಪರಿಚಿತೆಯಾದವಳೊಬ್ಬಳ ಜೀವವನ್ನುಳಿಸುವ ಪ್ರಯತ್ನದಲ್ಲಿ— ಅವನು ತನ್ನ ಪ್ರಾಣವನ್ನೇ ನೀಗುವುದಕ್ಕೂ ಸಿದ್ಧವಾಗಿದ್ದವನು. ಅವನ ಸುಸ್ವಭಾವವೂ ಪರೋಪಕಾರ ಬುದ್ಧಿಯೂ ಅದರಿಂದ ಗೋಚರವಾಗುತ್ತವೆ. ಅವನು ಬಾಹ್ಯವ್ಯಾಪಾರಗಳನ್ನೇ ಮರೆಯುವಷ್ಟು ಮಟ್ಟಿಗೆ ಭಾವಮಗ್ನನಾಗತಕ್ಕವನು: ಕುರಂಗಿಯ ಧಾತ್ರಿಯೂ ನಲಿನಿಕೆಯೂ ತನ್ನ ಬಳಿಗೆ ಬಂದಿದ್ದೂ, ಅದರ ಸುಳಿವನ್ನೇ ಅರಿಯದೆ ಅವನು ಗಟ್ಟಿಯಾಗಿ ಮಾತನಾಡಿಕೊಂಡುದರಿಂದ ಇದು ವ್ಯಕ್ತವಾಗುತ್ತದೆ. ಅವನು ಸ್ನೇಹಪರ;

ದಾಕ್ಷಿಣ್ಯಶೀಲ. ಅಪರಿಚಿತನಾದ ವಿದ್ಯಾಧರನನ್ನು ತಾನೇ ಮಾತನಾಡಿಸಿ ತನ್ನ ಮಧುರ ವಚನಗಳಿಂದ ಅವನ ಮನಸ್ಸನ್ನಾಕರ್ಷಿಸುತ್ತಾನೆ.

ಕುರಂಗಿಯು ಅನುಪಮ ಲಾವಣ್ಯವತಿ. ಸ್ಫುರದ್ರೂಪಿಯಾದ ಅವಿಮಾರಕನಿಗಿಂತಲೂ ಅವಳು ಸುಂದರಿ. ವಿದೂಷಕನು ಹೇಳುವಂತೆ, ವಿರಹಕಾತರೆಯಾಗಿ ಕೃಶಳಾಗಿರುವಾಗ ಕೂಡ, ಅವಳು ಸೌಂದರ್ಯದಲ್ಲಿ ಅವಿಮಾರಕನನ್ನು ಮೀರಿಸಿದ್ದಾಳೆ.

**ಕುರಂಗಿ**

ತಂದೆಯು ಗೊತ್ತುಮಾಡಿದ ಜಯವರ್ಮನನ್ನು ವರಿಸದೆ ತನಗೆ ಬೇಕಾದವನನ್ನೇ (ಅವಿಮಾರಕನನ್ನೇ) ವರಿಸುವುದಾಗಿ ಹೇಳಿಕೊಂಡು ಸ್ಥಿರಸಂಕಲ್ಪ ಮಾಡುವಷ್ಟು ದಿಟ್ಟತನವು ಅವಳಲ್ಲಿದೆ. ತಾನು ರಾಜಕುಮಾರಿಯಾಗಿದ್ದೂ ಅವಳು ತನ್ನ ಚೇಟಿಯರನ್ನು ಸಖಿಯರಂತೆ ಕಾಣುವುದು ಶ್ಲಾಘ್ಯವಾಗಿದೆ. ತಾನು ಆತ್ಮಹತ್ಯೆ ಮಾಡಿಕೊಳ್ಳುವ ಪ್ರಯತ್ನದಲ್ಲಿರುವಾಗ ಕೂಡ, ಅವಳು ನಲಿನಿಕೆಯನ್ನಾಲಿಂಗಿಸಲಿಚ್ಛಿಸುವಳು; ಅವಳನ್ನು ಕುರಿತು, "ನಿನ್ನ ಮೈ ಶೀತಲವಾಗಿದೆಯೆ?" ಎಂದು ಕೇಳುವಳು. ನಲಿನಿಕೆಯು. "ರಾಜಕುಮಾರಿ! ನಾನರಿಯೆ" ಎಂದು ಉತ್ತರ ಹೇಳಿದಾಗ ಕುರಂಗಿಯು, "ಎಲ್ಲಿ, ಬಾ. ನನ್ನನ್ನು ಆಲಿಂಗಿಸು" ಎನ್ನುವಳು. ನಲಿನಿಕೆಯು ಬಂದು ತನ್ನನ್ನಾಲಿಂಗಿಸಿದಾಗ ಕುರಂಗಿಯು, "ನಿನ್ನ ಶರೀರವು ಅತಿ ಶೀತಲವಾಗಿಯೂ, ಮನೋಹರವಾಗಿಯೂ ಇದೆ" ಎಂದು ಅವಳೊಡನೆ ಹೇಳುವಳು. ಅವಳ ಚಾತುರ್ಯವೂ, ಸಖೀಪ್ರೇಮವೂ, ಇದರಿಂದ ವ್ಯಕ್ತವಾಗುವುವು. ಅವಳು ಅದೇ ತನ್ನ ಕೊನೆಯ ಆಲಿಂಗನವೆಂದು ತನ್ನಲ್ಲಿ ತಾನು ಹೇಳಿಕೊಂಡು ಸಂತಾಪಪಡುವುದರಿಂದಲೂ ಅವಳೆಷ್ಟು ಸ್ನೇಹಮಯಿಯೆಂಬುದು ಗೊತ್ತಾಗುವುದು.

ವಿದೂಷಕ ಸಂತುಷ್ಟನ ಪಾತ್ರವು ಅತ್ಯಂತ ಚಿತ್ತಾಕರ್ಷಕವಾಗಿದೆ. ಭಾಸಕೃತವೆಂಬ ರೂಪಕಗಳಲ್ಲಿ ಚಿತ್ರಿತವಾಗಿರುವಷ್ಟು ಮಟ್ಟಿಗೆ ಮನಮೋಹಕವಾಗಿ ವಿದೂಷಕ ಪಾತ್ರವು ಮತ್ತಾವ ರೂಪಕಗಳಲ್ಲೂ ಚಿತ್ರಿತವಾಗಿಲ್ಲವೆನ್ನಬಹುದಾಗಿದೆ.

**ಸಂತುಷ್ಟ**

ಸಂತುಷ್ಟನು ಉತ್ತಮ ಜಾತಿಯ ಹಾಸ್ಯಗಾರನಾಗಿದ್ದಾನೆ. ಅವನು ಬ್ರಾಹ್ಮಣರನ್ನೂ, ಶ್ರಮಣರನ್ನೂ, ಸಂನ್ಯಾಸಿಗಳನ್ನೂ

ಸಹ ಹಾಸ್ಯಮಾಡುವನು. ಅವಿಮಾರಕನಲ್ಲಿ ಅವನಿಗೆ ಪೂರ್ಣಸ್ನೇಹ. ಅವನನ್ನಾಗಲಿ, ಅವನ ದೇಹವನ್ನಾಗಲಿ, ತಾನು ಕಾಣದೆ ಹೋದಲ್ಲಿ ತಾನೂ ಪ್ರಾಣತ್ಯಾಗಮಾಡಿ ಪರಲೋಕದಲ್ಲಿ ಅವನನ್ನು ಕಾಣುವುದಾಗಿ ನುಡಿಯುವ ವಿದೂಷಕನ ಮಾತುಗಳೇ ಅವನ ಸ್ನೇಹಪರತೆಯ ಸೊಗಸನ್ನೂ, ಆಳವನ್ನೂ ತೋರಿಸುತ್ತವೆ. ವಿದ್ಯಾಧರ ದಂಪತಿಗಳು ಹೊರಟುಹೋದಮೇಲೆ ಅವಿಮಾರಕನು, "ಸಂತುಷ್ಟನ ಅವಸ್ಥೆಯು ಏನಾಗಿದೆಯೊ! ನಾನು ಹೊರಟು ಬಂದಿರುವುದನ್ನು ಅವನು ಕೇಳಿದ್ದರಂತು ಸರಿ. ಅದನ್ನು ಕೇಳಿಲ್ಲದಿದ್ದರೆ, ಆ ಬ್ರಾಹ್ಮಣನು ಮೃತಪಡುತ್ತಾನೆ. ಅವನಿಲ್ಲದೆ ನನ್ನ ಯಾವ ಕಾರ್ಯಗಳಿಂದ ತಾನೆ ಏನು ಫಲ? ಅವನು ಗೋಷ್ಠಿಯಲ್ಲಿ ಹಾಸ್ಯಗಾರ. ಸಮರದಲ್ಲಿ ಯೋಧ. ದುಃಖದಲ್ಲಿ ಉಪದೇಶಕನಾದ ಗುರು. ಪರೋಕ್ಷದಲ್ಲಿ ಸಾಹಸಿ. ಅವನಿರುವುದು ನನ್ನ ಹೃದಯಕ್ಕೇ ಮಹೋತ್ಸವ. ಹೆಚ್ಚಾಗಿ ಹೇಳಲೇಕೆ? ನನ್ನ ಶರೀರವೇ ಎರಡು ಭಾಗಗಳಾಗಿ (ಅವುಗಳಲ್ಲಿ ಅವನು ಒಂದಾಗಿ) ಇರುವಂತಿದೆ" ಎಂದು ತನ್ನಲ್ಲಿ ತಾನು ಆಡಿಕೊಳ್ಳುವ ಮಾತುಗಳಿಂದಲೇ ಸಂತುಷ್ಟನ ಸ್ವಭಾವವು ವ್ಯಕ್ತವಾಗುತ್ತದೆ. ಬ್ರಾಹ್ಮಣನಾದ ಅವನು ಯೋಧನಾಗಿದ್ದನೆಂಬ ಮಾತನ್ನು ಕೇಳಿ ಈಗಿನವರಾದ ನಮಗೆ ನಗು ಬರಬಹುದು. ಆದರೆ, ಕೇವಲ ಈಚಿನ ಕಾಲದವರೆಗೆ ಕೂಡ ಬ್ರಾಹ್ಮಣರಲ್ಲಿ ಅನೇಕಾನೇಕ ಮಂದಿ ಶೂರಶ್ರೇಷ್ಠರಿದ್ದು ಯುದ್ಧಗಳಲ್ಲಿ ಭಾಗವಹಿಸುತ್ತಿದ್ದ ಐತಿಹಾಸಿಕ ಸಂಗತಿಯನ್ನು ಸ್ಮರಿಸಿದರೆ ಅದಕ್ಕೆಂದಿಗೂ ಅವಕಾಶವೇ ಇರದು.

**ಇತರ ಪಾತ್ರಗಳು**

ಇತರ ಪಾತ್ರಗಳಲ್ಲಿ ನಲಿನಿಕೆಯ ಪಾತ್ರವು ಮುಖ್ಯವಾದುದು. ಅವಳು ತನ್ನ ಯೋಗ್ಯತೆಯಿಂದ ಕುರಂಗಿಯ ಪೂರ್ಣ ವಿಶ್ವಾಸಕ್ಕೆ ಪಾತ್ರಳಾಗಿದ್ದಾಳೆ. ಧಾತ್ರಿಗೆ ಹೇಳದಿರುವ ರಹಸ್ಯಗಳನ್ನು ಕೂಡ ಕುರಂಗಿಯು ಅವಳಿಗೆ ಹೇಳುತ್ತಾಳೆ. ಇತರ ಚೇಟಿಯರೆಲ್ಲರಿಗಿಂತ ಚೆನ್ನಾಗಿ ಕುರಂಗಿಯ ಹೃದಯವನ್ನರಿತಿರುವವಳು ನಲಿನಿಕೆಯೇ. ಅವಳು ಇಂಗಿತಜ್ಞೆಯೂ ರಸಿಕಳೂ ಆಗಿದ್ದಾಳೆ. ಅದಕ್ಕೆ ನಿದರ್ಶನಗಳನ್ನು

ಹಿಂದೆಯೇ ಸೂಚಿಸಿದ್ದೇವೆ. ಧಾತ್ರಿಯು ಕುರಂಗಿಯ ಹಿತವನ್ನು ಬಯುಸುವ ವೃದ್ಧೆ. ಕುಂತಿಭೋಜನು ಕರ್ತವ್ಯನಿಷ್ಠೆಯುಳ್ಳ ರಾಜ; ಮಗಳಲ್ಲಿ ತುಂಬ ಪ್ರೀತಿಯುಳ್ಳವನು; ಮತ್ತು ಪತ್ನಿಯಲ್ಲಿ ದಾಕ್ಷಿಣ್ಯಯುತನಾದ ಸದ್ಗೃಹಸ್ಥ. ಜಯವರ್ಮನಿಗೆ ಮಗಳನ್ನು ಕೊಟ್ಟು ವಿವಾಹಮಾಡಲು ತನಗೆ ಇಷ್ಟವಿದ್ದೂ, ಅವಿಮಾರಕನೇನಾದನೆಂಬುದು ತಿಳಿಯುವವರೆಗೂ ವಿವಾಹವನ್ನು ನೆರವೇರಿಸಕೂಡದೆಂದು ಹೇಳುವ ತನ್ನ ಪತ್ನಿಯ ಆಶೆಯನ್ನು ಅವನು ಸಲ್ಲಿಸುತ್ತಾನೆ. ಅವನೆಷ್ಟು ದಾಕ್ಷಿಣ್ಯ ಬದ್ಧನೆಂಬುದು ಅದರಿಂದ ಸೂಚಿತವಾಗುತ್ತದೆ. ವಿದೂಷಕನ ಉಂಗುರವನ್ನು ಕಸಿದುಕೊಂಡು ಹೋಗುವ ಚೇಟಿಯು ಚತುರೆ. ಉಳಿದ ಪಾತ್ರಗಳ ವಿಚಾರವಾಗಿ ನಾವು ಗಮನಿಸಬೇಕಾದುದು ಹೆಚ್ಚೇನೂ ಇಲ್ಲ.

**ಗಮನಾರ್ಹವಾದ ಕೆಲವು ವೈಶಿಷ್ಟ್ಯಗಳು:**— ಈ ರೂಪಕವು ಕವಿಯ ಆರಂಭಕೃತಿಯೆಂದು ತೋರಿದರೂ, ಕೆಲಕೆಲವು ಭಾಗಗಳು ಮಾತ್ರ ಬಹಳ ಚೆನ್ನಾಗಿವೆ. ಅವುಗಳಾವುವೆಂಬುದನ್ನು ಈ ಮೊದಲೇ ಸೂಚಿಸಿದ್ದೇವೆ. ಈ ರೂಪಕದಲ್ಲಿ ಗಮನಾರ್ಹವಾದ ಕೆಲವು ವೈಶಿಷ್ಟ್ಯಗಳಿವೆ. **ಮೊದಲನೆಯದು,** ಕವಿಯ ಹೃದಯ ವೈಶಾಲ್ಯ. ಸ್ಥಾಪನೆಯಲ್ಲಿ ಹೇಳಿರುವ ಅಂಶಗಳಿಂದಲೂ, ಕನ್ಯಾಪಿತೃತ್ವವು ವಂದನೀಯವೆಂದು ಕವಿಯು ಮಂತ್ರಿಯಿಂದ ಆಡಿಸಿರುವ ಮಾತುಗಳಿಂದಲೂ, ಅದು ವ್ಯಕ್ತವಾಗುತ್ತದೆ. ಸ್ತ್ರೀತ್ವದ ವಿಷಯದಲ್ಲಿ ಆತನಿಗೆಷ್ಟು ಗೌರವವೆಂಬುದನ್ನು ಇದರಿಂದ ನಾವು ಗ್ರಹಿಸಬಹುದು. ಕವಿಯ ಹೃದಯ ವೈಶಾಲ್ಯವನ್ನು ಸೂಚಿಸುವ ಮತ್ತೊಂದು ಅಂಶವು ಅಂತ್ಯಜರ ವಿಷಯವಾಗಿ ಅವನು ತೋರಿಸಿರುವ ಸಹಾನುಭೂತಿ. ಶಾಪದ ದೆಸೆಯಿಂದ ಅಂತ್ಯಜನಾಗಿ, ಅಂತ್ಯಜರ ಕೇರಿಯಲ್ಲಿ ವಾಸವಾಗಿರುವ ಸೌವೀರ ರಾಜನ ಮನೆಗೆ ವಿದೂಷಕನು ಹೋಗುವಂತೆ ಕವಿಯು ಚಿತ್ರಿಸಿದ್ದಾನೆ. ಅಲ್ಲದೆ ಕುಂತಿಭೋಜನೂ, ಬ್ರಾಹ್ಮಣರಾದ ಅವನ ಮಂತ್ರಿಗಳೂ ಸೌವೀರ ರಾಜನನ್ನು ಹುಡುಕಿಕೊಂಡು ಅಂತ್ಯಜರ ಕೇರಿಗೆ ಹೋದಂತೆಯೂ ಕವಿಯು ಸೂಚಿಸಿದ್ದಾನೆ. ಅಷ್ಟೇ ಅಲ್ಲ. ತಪಸ್ವಿಯಾದ ಚಂಡಭಾರ್ಗವನು

ಶಾಂತನಾಗಿರದೆ ಕೋಪವನ್ನು ಪ್ರದರ್ಶಿಸುವ ಕಾರಣ, ಆ ಕೋಪದ ಬೆಸೆಯಿಂದ ಅವನಲ್ಲಿ ಚಂಡಾಲತ್ವವನ್ನು ಆರೋಪಿಸಿ ಸೌವೀರ ರಾಜನಿಂದ ಕವಿಯು ಹೇಳಿಸಿರುವುದರಿಂದಲೂ ಕವಿಯ ಹೃದಯ ವೀಣೆಯು ನುಡಿಯುತ್ತಿರುವ ಜೀವಸ್ವರವಾವುದೆಂಬುದನ್ನು ನಾವು ಗ್ರಹಿಸಬಹುದಾಗಿದೆ. **ಎರಡನೆಯದು,** ತಿಳಿಯಾದ ಹಾಸ್ಯರಸದಿಂದ ಕೂಡಿದ ಹೊಳೆಯನ್ನೇ ಹರಿಸುವ ಸಾಮರ್ಥ್ಯ. ಈ ರೂಪಕದಲ್ಲಾಗಲಿ ಇತರ ರೂಪಕಗಳಲ್ಲಾಗಲಿ, ಕವಿಯು ಚಿತ್ರಿಸಿರುವ ಹಾಸ್ಯವು ಸರಳವಾಗಿ ಸೌಜನ್ಯತೆಯಿಂದ ಕೂಡಿದೆ. ವೈಯಕ್ತಿಕವಾಗಿ ಕಟುವಾಗಿಲ್ಲ. ಮೃಚ್ಛಕಟಿಕದಲ್ಲಿ ವಿದೂಷಕನು ಸ್ಥೂಲದೇಹವುಳ್ಳ ವಸಂತಸೇನೆಯ ತಾಯಿಯು ಒಂದು ಕೊಟಡಿಯಲ್ಲಿದ್ದುದನ್ನು ಕಂಡು ಅವಳ ಹೊಟ್ಟೆಯು ಎಷ್ಟು ದೊಡ್ಡದೆಂದು ಆಶ್ಚರ್ಯಪಟ್ಟು, "ಇವಳು ಇಲ್ಲಿರುವ ಬಗೆ ಹೇಗೆ ? ಓಹೋ, ಮಹಾದೇವನ ದೊಡ್ಡ ಪ್ರತಿಮೆಯಂತೆ ಮೊದಲೇ ಇವಳನ್ನು ಒಳಗೆ ಕೂರಿಸಿ ಆಮೇಲೆ ಗೋಡೆಗಳನ್ನು ನಿರ್ಮಿಸಿರಬೇಕು" ಎಂದು ಹೇಳುತ್ತಾನೆ. ಹೀಗೆ ವೈಯಕ್ತಿಕವಾಗಿ ಕಟುವಾಗಿರುವ ಹಾಸ್ಯವು ಪ್ರಸಕ್ತರೂಪಕಗಳಲ್ಲಿಲ್ಲ. **ಮೂರನೆಯದು,** ಹೃದಯಂಗಮವಾಗಿ ಅಂದವಾಗಿರುವ ಪ್ರೇಮಚಿತ್ರವಿನ್ಯಾಸ. ಕುರಂಗಿಯ ಮತ್ತು ಅವಿಮಾರಕನ ಅನುರಾಗವನ್ನು ಕವಿಯು ಮನೋಹರವಾಗಿ ಚಿತ್ರಿಸಿದ್ದಾನೆ. **ನಾಲ್ಕನೆಯದು,** ಡಾಕ್ಟರ್ ವಿಂಟರ್ನಿಟ್ಸ್ ಅವರ ಆಕ್ಷೇಪಣೆಯು ಸಾಧುವಲ್ಲವೆಂಬ ಅಂಶ. ಚಾರುದತ್ತ ರೂಪಕದಲ್ಲಿ ಕವಿಯು ಬ್ರಾಹ್ಮಣ ಪಕ್ಷಪಾತದಿಂದ ಬೌದ್ಧ ಭಿಕ್ಷುಗಳಲ್ಲಿ ಅಗೌರವವನ್ನು ತೋರಿಸಿದ್ದಾನೆಂಬುದೇ ಅವರ ಆಕ್ಷೇಪಣೆ. ಅದಕ್ಕೆ ಆಧಾರವಿಲ್ಲವೆಂಬ ಅಂಶವನ್ನು ಚಾರುದತ್ತ ರೂಪಕದ ವಿಮರ್ಶೆಯಲ್ಲಿ ತೋರಿಸಿದ್ದೇವೆ. ಕವಿಯು ವಿದೂಷಕನಿಂದ ಪರಿಹಾಸಾರ್ಥವಾಗಿ ಹೇಳಿಸಿರುವುದನ್ನು ಅವರು ಪರಮಾರ್ಥವೆಂದು ಭಾವಿಸಿದುದರಿಂದಲೂ, ಕವಿಯು ಬೌದ್ಧರಂತೆಯೇ ಬ್ರಾಹ್ಮಣರ ಮತ್ತು ಜೈನರ ವಿಷಯವಾಗಿ ಸಹ ವಿದೂಷಕನಿಂದ ಪರಿಹಾಸಮಾಡಿಸಿರುವುದನ್ನು ಅವರು ಗಮನಿಸದೆ ಹೋದುದರಿಂದಲೂ, ಅವರು ಆರೀತಿ ತಪ್ಪು ಅಭಿಪ್ರಾಯಪಡಲು ಕಾರಣವಾಯಿತೆಂದು ತೋರುತ್ತದೆ. ಎಲ್ಲಕ್ಕೂ

ಮಿಗಿಲಾಗಿ ಬೌದ್ಧಭಿಕ್ಷುವಿನ ವೇಷಧಾರಿಯು, "ಭಗವನ್" ಎಂದು ಸಂಬೋಧಿತನಾಗುವಂತೆಯೂ, ಬೌದ್ಧ ಭಿಕ್ಷುವಿಗೆ ಮಹಾಸೇನನ ಆಸ್ಥಾನ ದಲ್ಲಿ ಕೆಲಸ ದೊರೆಯಲು ಅವನ ಮತವು ಅಡ್ಡಿಯಾಗದಂತೆಯೂ ಕವಿಯು ಚಿತ್ರಿಸಿರುವುದನ್ನು ಅವರೇಕೆ ಗಮನಿಸಲಿಲ್ಲವೋ ತಿಳಿಯದು. ಅದೂ ಹಾಗಿರಲಿ. ಅವಿಮಾರಕ ರೂಪಕದಲ್ಲಿ ಚೇಟಿಯು ವಿದೂಷಕ ನಿಂದ ಉಂಗುರವನ್ನು ಕಸಿದುಕೊಂಡು ಹೋಗುವ ದೃಶ್ಯದಲ್ಲಿ ಬ್ರಾಹ್ಮ ಣನಾದ ಅವನ ವಿಷಯವಾಗಿ ಕವಿಯು ಕಟುವಾದ ಹಾಸ್ಯಪ್ರಕರಣ ವನ್ನು ತಂದಿದ್ದಾನೆ. ಅಲ್ಲದೆ ಬ್ರಾಹ್ಮಣನಾದ ವಿದೂಷಕನನ್ನು ನಲಿ ನಿಕೆಯಿಂದ, "ದುರ್ಬ್ರಾಹ್ಮಣ" ಎಂದು ಕರೆಯಿಸಿದ್ದಾನೆ. ಅಷ್ಟೇ ಅಲ್ಲ. ಬ್ರಾಹ್ಮಣನಾದ ವಿದೂಷಕನಿಂದ ಬ್ರಾಹ್ಮಣರನ್ನೂ, ದಿಗಂಬರ ಪಂಗಡದ ಜೈನರನ್ನೂ, ಬ್ರಾಹ್ಮಣ ಸಂನ್ಯಾಸಿಗಳ ಕಾವಿಯ ಬಟ್ಟೆ ಯನ್ನೂ ಅಪಹಾಸ್ಯ ಮಾಡಿಸಿದ್ದಾನೆ. ಎಲ್ಲಕ್ಕೂ ಮಿಗಿಲಾಗಿ, ಕವಿಯು ವಸುಮಿತ್ರೆಯೆಂಬ ಚೇಟಿಯಿಂದ, "ಈ ಜ್ಯೋತಿಷ್ಕರೆಂಬುವರೆಲ್ಲ ವಿಷಮ ಶೀಲರು. ಅವರಿಗೆ ನಕ್ಷತ್ರಾನುಕೂಲವು ಪ್ರಶಸ್ತವಾಗಿರುವ ವೇಳೆ ಯೊಂದೇ ಮುಖ್ಯವೇ ಹೊರತು, 'ಕರ್ಮಗೌರವ'ವೇ ಅವರಿಗೆ ತಿಳಿಯುವುದಿಲ್ಲ" ಎಂದು ಹೇಳಿಸಿ ಬ್ರಾಹ್ಮಣ ಪಂಗಡದ ಜ್ಯೋತಿಷ್ಕರ ನ್ನೆಲ್ಲ ಅಪಹಾಸ್ಯ ಮಾಡಿಸಿದ್ದಾನೆ. ಹೀಗಿರುವಲ್ಲಿ ಅವನು ಬ್ರಾಹ್ಮಣ ಪಕ್ಷಪಾತಿಯೆನ್ನುವುದು ಹೇಗೆ? "ಹೆಂಗಸಿನೊಡನೆ ಸಂಕೇತ ಮಾಡಿ ಕೊಂಡ ಬೌದ್ಧ ಭಿಕ್ಷುವಿನಂತೆ" ಎಂಬ ಉಪಮಾನದ ವಿಷಯಕ್ಕೆ ಡಾಕ್ಟರ್ ವಿಂಟರ್ನಿಟ್ಸ್ ಅವರ ಆಕ್ಷೇಪವಿದ್ದಲ್ಲಿ, ಭಿಕ್ಷು ಭಿಕ್ಷುಣಿಯರಲ್ಲಿ ಪತಿ ತರೂ ಇದ್ದುದು ಐತಿಹಾಸಿಕ ಸಂಗತಿ. ಅವರ ವಿಷಯಲಂಪಟತನವೂ ಬೌದ್ಧಮತದ ಕ್ಷೀಣದಶೆಗೊಂದು ಕಾರಣವಾಯಿತು. ಸಾವಿರ ವರ್ಷಗಳ ಕಾಲ ಬಾಳಬೇಕಾಗಿದ್ದ ಬೌದ್ಧಮತವು ಹೆಂಗಸರಿಗೆ ಭಿಕ್ಷುಣೀ ದೀಕ್ಷೆ ಕೊಟ್ಟುದರ ದೆಸೆಯಿಂದ ಐನೂರು ವರ್ಷಗಳ ಕಾಲ ಮಾತ್ರವೇ ಬಾಳು ವುದೆಂದು ಬುದ್ಧಗುರುವೇ ಅಪ್ಪಣೆ ಕೊಡಿಸಿದ್ದರು. ಕೆಟ್ಟ ಭಿಕ್ಷುಗಳ ವಿಚಾರವಾಗಿ ಕವಿಯು ವಿದೂಷಕನಿಂದ ಹಾಸ್ಯ ಮಾಡಿಸಿದ್ದಾನೆ; ಒಳ್ಳೆ ಯವರನ್ನು, "ಭಗವನ್!" ಎಂದು ಸಂಬೋಧಿಸುತ್ತಿದ್ದುದನ್ನೂ ಚಿತ್ರಿಸಿ

ದ್ದಾನೆ. ಹೀಗೆ ನಿಷ್ಪಕ್ಷಪಾತವನ್ನು ತೋರಿಸಿದ್ದೂ ಸಹ, ಬ್ರಾಹ್ಮಣ ಪಕ್ಷಪಾತವೆಂಬ ಆಕ್ಷೇಪವೆ? **ಐದನೆಯದು,** ಬಹಳ ರಸವತ್ತಾಗಿರುವ ವಾಣಿಗಳ ಗುಂಫನ. ಈ ರೂಪಕದಲ್ಲಿ ಬರುವ ಹಲವು ವಾಕ್ಯಗಳು ಬಹು ರಸವತ್ತಾಗಿ ರಮಣೀಯವಾಗಿವೆ. "ಸೂರ್ಯನನ್ನು ಅಂಗೈಯಲ್ಲಿ ಮರೆಮಾಡಲಾರಿಗೆ ಸಾಧ್ಯ?", "ಅನರ್ಥಗಳು ಒಟ್ಟಿಗೆ ಒದಗುತ್ತವೆ", "ಪ್ರೀತಿಯುಳ್ಳವರು ತಿಳಿಸುವ ಪ್ರಿಯವಾರ್ತೆಗಳು ಮತ್ತಷ್ಟು ಪ್ರಿಯಕರವಾಗಿರುತ್ತವೆ", "ರೂಪವಿದ್ದವರು ಅಲಂಕರಿಸಿಕೊಂಡರೆ ಅತಿ ರಮಣೀಯರಾಗುತ್ತಾರೆ", "ಅಲ್ಪಮೂಲವುಳ್ಳ ಮಹದನರ್ಥ" ಎಂಬಿವು * ಇದಕ್ಕೆ ಕೆಲವು ನಿದರ್ಶನಗಳು.



* "ಕಶ್ಶಕ್ತಃ ಸೂರ್ಯಂ ಹಸ್ತೇನಾಚ್ಛಾದಯಿತುಮ್"
"ಸಂಘಚಾರಿಣೋಽನರ್ಥಾಃ"
"ಪ್ರಿಯ ನಿವೇದ್ಯಮಾನಾನಿ ಪ್ರಿಯಾಣಿ ಪ್ರಿಯತರಾಣಿ ಭವನ್ತಿ"
"ಸ್ವಭಾವ ರಮಣೀಯಾನಿ ಮಂಡಿತಾನ್ಯತಿ ರಮಣೀಯಾನಿ ಭವನ್ತಿ"
"ಅಲ್ಪ ಮೂಲತ್ವಂ ಮಹತಾಂ ಚಾನರ್ಥಸ್ಯ"

# ಆರನೆಯ ತರಂಗ



## ಶ್ರೀ ಕೃಷ್ಣಲೀಲಾ ಸಂಬಂಧವಾದ ರೂಪಕ



## ಬಾಲಚರಿತ

# ಬಾಲಚರಿತ

—o—

## ೧. ಕಥಾಸಾರಾಂಶ

ಬಾಲಕೃಷ್ಣನ ಲೀಲಾವಿನೋದಗಳೂ ಕಂಸವಧೆಯೂ ಈ ರೂಪಕದ ಕಥಾವಸ್ತು. ಇವುಗಳು ಎಲ್ಲರಿಗೂ ತಿಳಿದಿರುವ ಅಂಶಗಳೇ. ಕವಿಯು ಮಾಡಿರುವ ಮಾರ್ಪಾಡುಗಳು ವಿಮರ್ಶಾಭಾಗದಲ್ಲಿ ಸೂಚಿತವಾಗುವುದೇ ಯುಕ್ತವಾಗಿದೆ. ಮೊದಲನೆಯ ಅಂಕದಲ್ಲಿ ವಸುದೇವನು ಶ್ರೀ ಕೃಷ್ಣನನ್ನು ಗೋಕುಲಕ್ಕೆ ಕರೆದೊಯ್ದು ನಂದಗೋಪನಿಗೆ ಒಪ್ಪಿಸಿ ಅವನ ಹೆಣ್ಣು ಮಗುವಿನ ಶವವನ್ನು ತೆಗೆದುಕೊಂಡು ಹಿಂತಿರುಗಲು ಹೊರಡುವನು. ಆ ಹೆಣ್ಣು ಮಗುವಿಗೆ ಅನಂತರ ಜೀವ ಕೂಡಿಕೊಂಡು ಅದು ಅಳುವುದು. ಆ ಮಗುವೇ ಕಾತ್ಯಾಯಿನಿ. ಎರಡನೆಯ ಅಂಕದಲ್ಲಿ ಕಂಸನು ಕಳವಳಪಡುತ್ತಿರುವನು. ಅವನು ಕಾತ್ಯಾಯಿನಿಯನ್ನು ಕೊಲ್ಲಲು ಪ್ರಯತ್ನಿಸಿದಾಗ ಘೋರ ರೂಪವನ್ನು ಕಾಣುವನು. ಮೂರನೆಯ ಅಂಕದಲ್ಲಿ ಶ್ರೀಕೃಷ್ಣನು ಧೇನುಕಾಸುರನನ್ನು ಕೊಲ್ಲುವ ದೃಶ್ಯವು ರಂಗಸ್ಥಳದಲ್ಲಿ ನಡೆಯುವುದು. ನಾಲ್ಕನೆಯ ಅಂಕದಲ್ಲಿ ಕಾಳಿಂಗ ಮರ್ದನವು ನೆರವೇರುವುದು. ಕಂಸನಿಂದ ಕೃಷ್ಣನಿಗೆ ಆಹ್ವಾನವು ಬರುವುದು. ಐದನೆಯ ಅಂಕದಲ್ಲಿ ಶ್ರೀಕೃಷ್ಣ ಬಲರಾಮರು ಮುಷ್ಟಿಕ ಚಾಣೂರರೊಡನೆ ಮಲ್ಲಯುದ್ಧ ಮಾಡುವರು. ಕಂಸವಧೆಯು ನಡೆದು, ಸೆರೆಯಾಳಾಗಿದ್ದ ಉಗ್ರಸೇನನಿಗೆ ಪಟ್ಟವಾಗುವುದು.

## ೨. ವಿಮರ್ಶೆ

**ಸಂವಿಧಾನ ಕೌಶಲ:—** ಈ ರೂಪಕವು, ಅಭಿಷೇಕ ನಾಟಕವೂ ಅವಿಮಾರಕವೂ ರಚಿತವಾದ ನಂತರ ಹುಟ್ಟಿರಬೇಕು. ಬಹುಶಃ ಅವಿಮಾರಕವೇ ಅಭಿಷೇಕ ನಾಟಕಕ್ಕಿಂತ ಮುಂಚಿತವಾಗಿ ರಚಿತವಾಗಿರಬೇಕು.

ಸ್ಥಾಪನೆಯಲ್ಲಿ ಸೂತ್ರಧಾರನು, "ಆವನು ಹಿಂದೆ ಕೃತಯುಗದಲ್ಲಿ ಶಂಖ ದಂತೆಯೂ ಕ್ಷೀರದಂತೆಯೂ ಇದ್ದ ತನುದ್ಯುತಿಯುಳ್ಳವನಾಗಿ ನಾರಾಯಣನೆಂಬ ಹೆಸರನ್ನು ಪಡೆದಿದ್ದನೋ, ಆವನು ತ್ರೇತಾಯುಗದಲ್ಲಿ ಮೂರು ಲೋಕಗಳನ್ನೂ ಮೂರು ಹೆಜ್ಜೆಗಳಿಂದ ಅಳೆದು ಸುವರ್ಣಪ್ರಭೆಯುಳ್ಳ ದೇಹಕಾಂತಿಯುಳ್ಳವನಾಗಿ ವಿಷ್ಣುವೆಂಬ ಹೆಸರನ್ನು ಪಡೆದಿದ್ದನೋ, ಆವನು ದ್ವಾಪರಯುಗದಲ್ಲಿ ದೂರ್ವಾಶ್ಯಾಮಸುಂದರನಾಗಿ ರಾಮನೆಂಬ ಹೆಸರನ್ನು ಪಡೆದು ರಾವಣನನ್ನು ವಧಿಸಿದನೋ, ಆವನು ಕಲಿಯುಗ ದಲ್ಲಿ ಅಂಜನ ಸನ್ನಿಭವಾದ ಮೈಬಣ್ಣದಿಂದ ಕೂಡಿರುವನೋ ಆ ದಾಮೋದರನು ನಿಮ್ಮನ್ನು ಕಾಪಾಡಲಿ" * ಎಂದು ಭಗವತ್ಪ್ರಾರ್ಥನೆ ಮಾಡುವನು. ಕವಿಯು ಕೃತಯುಗದ ಅವತಾರವನ್ನು ತ್ರೇತೆಗೂ, ತ್ರೇತಾಯುಗದ ಅವತಾರವನ್ನು ದ್ವಾಪರಕ್ಕೂ, ದ್ವಾಪರಯುಗದ ಅವತಾರವನ್ನು ಕಲಿಯುಗಕ್ಕೂ ತಳ್ಳಿರುವ ಮಾರ್ಪಾಡು ಇದರಿಂದ ವ್ಯಕ್ತವಾಗುತ್ತದೆ. ಕಲಿಯುಗದಲ್ಲಿ ಕೃಷ್ಣಾವತಾರವಾಯಿತೆಂದು ಸೂಚಿಸಿ ಈ ಯುಗದ ಗೌರವವನ್ನು ಹೆಚ್ಚಿಸಿದ್ದಾನೆ. ಕಲಿಯುಗವು ಕೀಳೆಂಬ ಭಾವನೆಯೇ ಅವನಿಗಿಲ್ಲ. ಇದರಿಂದಲೂ ಅವನ ಹೃದಯವೈಶಾಲ್ಯವು ವ್ಯಕ್ತವಾಗುತ್ತದೆ. ಪುಷ್ಪವೃಷ್ಟಿಯಾಗುತ್ತಿದ್ದುದನ್ನೂ, ದೇವಲೋಕದ ವಾದ್ಯಗಳು ಮೊಳಗುತ್ತಿದ್ದುದನ್ನೂ, ವೃಷ್ಣಿಕುಲದಲ್ಲಿ ಹುಟ್ಟಿದ ಶಿಶುವಾದ ಶ್ರೀಕೃಷ್ಣನನ್ನು ನೋಡಲು ನಾರದಮಹರ್ಷಿಗಳು ಬಿಜಯಮಾಡಿದುದನ್ನೂ ಸೂಚಿಸಿ ಸೂತ್ರಧಾರನು ಸ್ಥಾಪನೆಯನ್ನು ಮುಗಿಸುತ್ತಾನೆ.

**ಮೊದಲನೆಯ ಅಂಕದಲ್ಲಿ** ನಾರದ ಮಹರ್ಷಿಗಳು, "ನಾನು ಗಗನ ಸಂಚಾರಿ. ಮೂರು ಲೋಕಗಳಲ್ಲಿ ಸಹ ಪ್ರಖ್ಯಾತನಾದವನು.

---

* "ಶಙ್ಖ ಕ್ಷೀರವಪುಃ ಪುರಾ ಕೃತಯುಗೇ ನಾಮ್ನಾ ತು ನಾರಾಯಣ
ಸ್ತ್ರೇತಾಯಾಂ ತ್ರಿಪದಾರ್ಪಿತ ತ್ರಿಭುವನೋ ವಿಷ್ಣುಃ ಸುವರ್ಣಪ್ರಭಃ ।
ದೂರ್ವಾ ಶ್ಯಾಮನಿಭಃ ಸ ರಾವಣವಧೇ ರಾಮೋ ಯುಗೇ ದ್ವಾಪರೇ
ನಿತ್ಯಂ ಯೋಽಞ್ಜನ ಸನ್ನಿಭಃ ಕಲಿಯುಗೇ ವಃ ಪಾತು ದಾಮೋದರಃ ॥"

ಕಲಹಪ್ರಿಯನಾದ ನಾರದ. ನಾನು ಬ್ರಹ್ಮಲೋಕದಿಂದ ಬಂದಿದ್ದೇನೆ "* ಎಂದು ಹೇಳಿಕೊಳ್ಳುವಂತೆ ಬರೆದಿರುವುದು ಸರ್ವಥಾ ಅಯುಕ್ತವಾಗಿದೆ. ಅಲ್ಲದೆ ನಾರದಮಹರ್ಷಿಗಳು ಬ್ರಹ್ಮನ ಮಾತಿನಲ್ಲಿ ತಮಗೆ ಭಕ್ತಿಯುಂಟೆಂದೂ, ಸಮಸ್ತ ತಪೋವನಗಳಲ್ಲೂ ತಮಗೆ ಗೌರವವುಂಟೆಂದೂ, ವೀಣೆಯನ್ನು ಮಾಟಿ ನುಡಿಸುವುದೂ ವೈರಗಳೂ "ಭೀಮ ಕಠಿನವಾದ" ಕಲಹವೂ ತಮಗೆ ಪ್ರಿಯವೆಂದೂ ಹೇಳಿಕೊಳ್ಳುವಂತೆ ಬರೆದಿರುವುದಂತು ತೀರ ಅಸಮಂಜಸವಾಗಿದೆ. ಈ ಮಾತುಗಳು ನಾರದ ಮಹರ್ಷಿಗಳಂತಹ ಮಹನೀಯರಿಗೆಂದಿಗೂ ಒಪ್ಪವು. ಲೋಕಹಿತಾರ್ಥವಾಗಿಯೂ ಕಂಸವಧಾರ್ಥವಾಗಿಯೂ ಅವತರಿಸಿರುವ ನಾರಾಯಣನನ್ನು ನೋಡುವುದಕ್ಕಾಗಿ ತಾವು ಬಂದಿರುವುದಾಗಿ ನಾರದರು ಸೂಚಿಸಿ, ಭಗವಂತನು ಮಾಯೆಯಿಂದ ಶಿಶುವಾಗಿರುವುದಾಗಿ ಹೇಳಿ, "ಲೋಕಗಳಿಗೆ ಅಭಯಪ್ರದಾಯಕನೂ ಸುರರಿಗೆ ಗುರುವೂ ದೈತ್ಯ ವಿನಾಶಕನೂ ಆದ ಚಕ್ರಪಾಣಿಯನ್ನು ಶೋಕಾರ್ತೆಯೂ, ಶಶಿವದನೆಯೂ, ಪ್ರಶಾಂತಳೂ ಆದ ದೇವಕಿಯು ಈ ರಾತ್ರಿ ಮಂದರಗಿರಿಯಂತೆ ಎರಡು ತೋಳುಗಳಿಂದಲೂ ಎತ್ತಿಕೊಂಡಿದ್ದಾಳೆ" ಎಂದು † ಅಚ್ಚರಿಪಟ್ಟು, ಆತನನ್ನು ಸ್ತುತಿಸಿ ಹೊರಟುಹೋಗುವರು.

ಅನಂತರ ದೇವಕಿಯು ಮಗುವನ್ನೆತ್ತಿಕೊಂಡು ಪ್ರವೇಶಿಸಿ ವಸುದೇವನನ್ನು ಕಾಣುವಳು. ವಸುದೇವನು ಸಿಡಿಲುಗಳು ಬೀಳುತ್ತಿರುವುದನ್ನೂ, ಚಂಡಮಾರುತವು ಬೀಸುತ್ತಿರುವುದನ್ನೂ, ಭೂಕಂಪವಾಗುತ್ತಿರುವುದನ್ನೂ ವರ್ಣಿಸಿ, ಅಸುರರನ್ನು ಕೊಲ್ಲಲು ವಿಷ್ಣುವು ಅವತರಿಸಿ

---

* "ಅಹಂ ಗಗನ ಸಞ್ಚಾರೀ ತ್ರಿಷು ಲೋಕೇಷು ವಿಶ್ರುತಃ |
ಬ್ರಹ್ಮಲೋಕಾದಿಹ ಪ್ರಾಪ್ತೋ ನಾರದಃ ಕಲಹಪ್ರಿಯಃ ||"

† "ಲೋಕಾನಾಮಭಯಕರಂ ಗುರುಂ ಸುರಾಣಾಂ
ದೈತ್ಯಾನಾಂ ನಿಧನಕರಂ ರಥಾಙ್ಗ ಪಾಣಿಮ್ |
ಶೋಕಾರ್ತಾ ಶಶಿವದನಾ ನಿಶಿಪ್ರಶಾನ್ತಾ
ಬಾಹುಭ್ಯಾಂ ಗಿರಿಮಿವ ಮನ್ದರಂ ವಹನ್ತೀ ||"

ರುವನೆಂದು ಹೇಳುವನು. ಈ ಬಗೆಯ ಅನಿಮಿತ್ತಗಳು ಕವಿಯ ಕಲ್ಪನೆ. ಭಾಗವತದಲ್ಲಾಗಲಿ, ವಿಷ್ಣು ಪುರಾಣದಲ್ಲಾಗಲಿ, ಹರಿವಂಶದಲ್ಲಾಗಲಿ ಈ ಅಂಶವು ಸೂಚಿತವಾಗಿಲ್ಲ. ಈ ರೂಪಕದಲ್ಲಿ ಶ್ರೀಕೃಷ್ಣನು ಏಳನೆಯ ಮಗು; ಎಂಟನೆಯ ಮಗುವಲ್ಲ. ಹರಿವಂಶದಲ್ಲಿ ಹೇಳಿರುವಂತೆ ದೇವಕಿಯ ಏಳನೆಯ ಗರ್ಭವನ್ನು ವಸುದೇವನ ಮತ್ತೊಬ್ಬ ಪತ್ನಿಯಾದ ರೋಹಿಣಿಯ ಉದರಕ್ಕೆ ಸೇರಿಸುವುದೇ ಮುಂತಾದ ಪ್ರಕೃತಿ ಸಹಜವಲ್ಲದ ಅಂಶಗಳು ಈ ರೂಪಕದಲ್ಲಿಲ್ಲ. ಅಂತಹದೇನೂ ಇಲ್ಲದೆಯೇ ಬಲರಾಮನು ರೋಹಿಣಿಯ ಗರ್ಭದಲ್ಲಿ ಜನಿಸಿದಂತೆಯೇ ಕವಿಯ ಭಾವನೆ. ವಸುದೇವನು ಅರ್ಧರಾತ್ರಿಯ ಆ ನಿಶೀಥ ಸಮಯದಲ್ಲಿ-ಎಲ್ಲರೂ ಮಲಗಿ ನಿದ್ರಿಸುತ್ತಿದ್ದ ಆ ವೇಳೆಯಲ್ಲಿ-ತಾನು ಮಗುವನ್ನು ಮಧುರಾನಗರದಿಂದ ಮತ್ತೆಲ್ಲಿಗಾದರೂ ಕರೆದೊಯ್ದು ಸುರಕ್ಷಿತವಾಗಿಡುವುದಾಗಿ ಹೇಳಿ, ದೇವಕಿಯ ಕೈಯಲ್ಲಿದ್ದ ಮಗುವನ್ನು ತಾನು ಎತ್ತಿಕೊಳ್ಳುವನು. ಮಗುವು ಕಂಸನಿಂದ ಹತವಾಗದೆ ಉಳಿದಿರಲೆಂಬುದು ದಂಪತಿಗಳ ಆಶೆ. ಆರು ಮಕ್ಕಳನ್ನು ಬಲಿಕೊಟ್ಟು ದುಃಖಾರ್ತಳಾಗಿರುವ ದೇವಕಿಯ ಹೃದಯವು ಕಲಕಿ ಹೋಗಿರುವ ಬಗೆಯನ್ನು ಗಂಡಸರು ಊಹಿಸಿಕೊಳ್ಳುವುದು ಸಾಧ್ಯವೇ ಇಲ್ಲ. ಕಂಸನ ಕೈಗೆ ಸಿಕ್ಕದಂತೆ ಮಗುವನ್ನು ಎಲ್ಲಿಗೆ ಕರೆದುಕೊಂಡು ಹೋಗಬೇಕೆಂಬುದೇ ಗೊತ್ತಿಲ್ಲದೆ, ವಿಧಿಯು ಪ್ರೇರಿಸಿದೆಡೆಗೆ ಕರೆದೊಯ್ಯುವುದಾಗಿ ವಸುದೇವನು ಹೇಳುವುದು ಹೃದಯವೇಧಕವಾಗಿದೆ. ಅವನು ಮಗುವನ್ನು, "ಪದ್ಮಪತ್ರಾಯತಾಕ್ಷನಾದ ಈ ಮಗುವು ವಿಂಧ್ಯಮಂದರ ಸಾರನಾಗಿ ತೇಜಸ್ವಿಯಾಗಿದ್ದಾನೆ. ಇವನನ್ನು ಗರ್ಭದಲ್ಲಿ ಧರಿಸಿದ್ದ ಹೆಂಗಸಿನ ಧೈರ್ಯವೇ ಧೈರ್ಯ!" * ಎಂದು ವರ್ಣಿಸಿರುವುದು ಮನೋಹರವಾಗಿದೆ. ಮಗುವಿನ ಭೀಮ ಬಲವೂ, ವಸುದೇವನಿಗೆ ದೇವಕಿಯಲ್ಲಿರುವ ಗೌರವವೂ ಇದರಿಂದ ವ್ಯಕ್ತವಾಗುತ್ತವೆ. ಕವಿಯ ಪ್ರತಿಭೆಗೂ ಹೃದಯ ವೈಶಾಲ್ಯಕ್ಕೂ ಈ ಮಾತುಗಳು ಉತ್ತಮ ನಿದರ್ಶನಗಳಾಗಿವೆ.

---

* "ವಿಂಧ್ಯ ಮನ್ದರ ಸಾರೋಽಯಂ ಬಾಲಃ ಪದ್ಮದಲೇಕ್ಷಣಃ ।
ಗರ್ಭೇ ಯಯಾ ಧೃತಃ ಶ್ರೀಮಾನಹೋ ಧೈರ್ಯಂ ಹಿ ಯೋಷಿತಃ ॥"

ಮಧುರಾ ನಗರದಿಂದ ಹೊರಬಿದ್ದ ವಸುದೇವನಿಗೆ ಅಂದಿನ ಮೇಘಾವೃತವಾದ ಕಾಳರಾತ್ರಿಯ ಅಂಧಕಾರದಲ್ಲಿ ಕಣ್ಣುಗಳೇ ಕಾಣಿಸದೆ ಕಷ್ಟವಾಗುವುದು. ಅವನು ಮುಂದೆ ಹೋಗುವುದು ಸಾಧ್ಯವಿಲ್ಲದೆ ತಲ್ಲಣಿಸುವನು. ಆಗ ತಟಕ್ಕನೆ ಬೆಳಕುಬಿದ್ದು ದಾರಿಯು ಕಾಣಿಸುವುದು. ಆಗ ವಸುದೇವನು ಬೆಚ್ಚಿ, ಕಂಸನು ದೀವಟಿಗೆಗಳನ್ನು ಹಿಡಿಸಿಕೊಂಡು ತನ್ನನ್ನು ಅಟ್ಟಿಕೊಂಡು ಬರುತ್ತಿರಬಹುದೆಂದು ಶಂಕಿಸಿ, ಅವನ ದರ್ಪವನ್ನು ನಾಶಗೊಳಿಸುವುದಾಗಿ ಹೇಳಿಕೊಂಡು ಕತ್ತಿಯನ್ನು ಹಿರಿದು ಹಿಂತಿರುಗಿ ನೋಡುವನು. ಕಂಸನನ್ನಾಗಲಿ ಅವನ ಕಡೆಯವರಾಗಲಿ ಅಲ್ಲಿರದೆ, ಪ್ರಭಾವ ಶಾಲಿಯಾದ ತನ್ನ ಮಗುವು ತನಗೆ ದಾರಿಯು ಕಾಣಿಸುವಂತೆ ಪ್ರಭೆಯನ್ನು ಬೀರುತ್ತಿರುವ ಅಂಶವನ್ನು ವಸುದೇವನು ಅರಿತುಕೊಂಡು ಆನಂದಿಸುವನು. ಶ್ರೀ ಕೃಷ್ಣನು ಹೀಗೆ ಪ್ರಭೆಯನ್ನು ಬೀರಿ ವಸುದೇವನಿಗೆ ದಾರಿಯು ಕಾಣಿಸುವಂತೆ ಮಾಡಿದ ಅಂಶವು ಕವಿಯ ಕಲ್ಪನೆ.

ವಸುದೇವನು ಪೂರ್ಣಪ್ರವಾಹದಿಂದ ಕೂಡಿರುವ ಯಮುನಾ ನದಿಯ ತೀರದಲ್ಲಿ ತಾನಿರುವುದನ್ನು ಕಂಡು ತನ್ನ ಪ್ರಯತ್ನವೆಲ್ಲ ವ್ಯರ್ಥವಾಯಿತೆಂದುಕೊಂಡು ಯೋಚಿಸುತ್ತ ನಿಲ್ಲುವನು. ಕೊನೆಗೆ, ದೇಹದ ಮೇಲಣ ಆಶೆಯನ್ನೂ ತೊರೆದು ಈಜುತ್ತ, ಆ ಯಮುನಾ ನದಿಯನ್ನೇ ದಾಟ ಹೋಗುವುದಾಗಿಯೂ, ದೈವಚಿತ್ತವಿದ್ದಲ್ಲಿ ತನ್ನ ಪ್ರಯತ್ನವು ಸಫಲವಾಗಲೆಂದೂ ಅವನು ತನ್ನಲ್ಲಿ ತಾನು ಹೇಳಿಕೊಳ್ಳುವಷ್ಟರಲ್ಲಿ ಯಮುನಾ ನದಿಯು ತನಗೆ ದಾರಿಯನ್ನು ಬಿಟ್ಟುದನ್ನು ಕಂಡು ಅವನು ವಿಸ್ಮಿತನಾಗುವನು. ನದಿಯನ್ನು ದಾಟ ಹೋಗಿ ಗೋಕುಲವನ್ನು ಸೇರುವನು. ಅದು ಅವನ ಮಿತ್ರನಾದ ನಂದಗೋಪನು ಗೋಪ ಗೋಪಿಯರ ಕುಟುಂಬಗಳೊಡನೆ ವಾಸವಾಗಿರುವ ಸ್ಥಳ. ನಂದಗೋಪನು ಅಲ್ಲಿಗೆ ಒಡೆಯ. ವಸುದೇವನು ನಂದಗೋಪನನ್ನು ಸ್ಮರಿಸಿಕೊಂಡೊಡನೆಯೇ ತಾನು ಕಂಸನ ಆಜ್ಞೆಯಂತೆ ಅವನಿಗೆ ಕಶಾಪ್ರಹಾರ ಮಾಡಿಸಿ ಕಾಲಿಗೆ ಬೇಡಿಗಳನ್ನು ಹಾಕಿಸಿದ್ದುದರ ನೆನಪು ಬರುವುದು. ನಂದಗೋಪನು ಬೇಡಿಗಳನ್ನು ಕಾಲಿನಲ್ಲಿ ಧರಿಸಿಯೇ ಇನ್ನೂ ಸುತ್ತಾಡಬೇಕಾಗಿರುವುದು. ಮಿತ್ರ

ನಿಂದ ಮಿತ್ರನಿಗೇ ಹಿಂಸೆಯನ್ನು ತಂದೊಡ್ಡುವ ನಿರಂಕುಶಾಧಿಕಾರದ ಹೇಯತನವನ್ನು ಕವಿಯು ಈ ಮೂಲಕವಾಗಿ ಬಹು ಚೆನ್ನಾಗಿ ಸೂಚಿಸಿದ್ದಾನೆ. ಶತ್ರುಪಕ್ಷದವನಾದ ತಾನು ಆ ಸಮರಾತ್ರಿಯ ವೇಳೆಯಲ್ಲಿ ಗೋಕುಲವನ್ನು ಪ್ರವೇಶಿಸಿದರೆ ಗೋಪಾಲಕರೆಲ್ಲ ಬೆಚ್ಚುವರೆಂದು ಬಗೆದು ವಸುದೇವನು ಸಮೀಪದಲ್ಲಿದ್ದ ಆಲದಮರದ ಕೆಳಗೆ ಕುಳಿತು ರಾತ್ರಿಯನ್ನು ಕಳೆದು ಬೆಳಗಾದ ಮೇಲೆ ಗೋಕುಲಕ್ಕೆ ಪ್ರವೇಶ ಮಾಡುವುದಾಗಿ ನಿರ್ಧರಿಸಿಕೊಳ್ಳುವನು. ಅವನೆಷ್ಟು ಸುಸಂಸ್ಕೃತನೂ ವಿನಯಪರನೂ ಆಗಿದ್ದಾನೆಂಬುದು ಇದರಿಂದಲೇ ಗೊತ್ತಾಗುವುದು. ಹೀಗಿದ್ದೂ ಕಂಸನ ಆಜ್ಞೆಯಂತೆ ಅವನು ತನ್ನ ಮಿತ್ರನಾದ ನಂದಗೋಪನಿಗೇ ಹಿಂಸೆಯನ್ನು ತಂದಿಟ್ಟನೆಂದು ಸಂವಿಧಾನವನ್ನು ಕಲ್ಪಿಸಿ ಕಂಸನ ಪ್ರಭಾವವನ್ನು ಕವಿಯು ಪರೋಕ್ಷವಾಗಿ ಉತ್ತಮರೀತಿಯಲ್ಲಿ ಸೂಚಿಸಿದ್ದಾನೆ. ತಂಗಿಯ ಗಂಡನೇ ಹೀಗೆ ಕೀಲುಬೊಂಬೆಯಾಗಿ ತನಗೆ ಮನಸ್ಸಿಲ್ಲದ ಹೀನಕಾರ್ಯವನ್ನು ಮಾಡಬೇಕಾಯಿತು. ಇನ್ನು, ಕಂಸನ ದಾಂಧಲೆಯಲ್ಲಿ ಇತರರ ಪಾಡೇನು?

ವಸುದೇವನು ಆಲದ ಮರದ ಬುಡದಲ್ಲಿ ನಿಂತಿರುವಷ್ಟರಲ್ಲಿ ನಂದಗೋಪನು ಮೃತಶಿಶುವಿನ ಕಳೇಬರವನ್ನು ತೆಗೆದುಕೊಂಡು ದುಃಖಪರವಶನಾಗಿ, “ಮಗಳೇ, ಮಗಳೇ, ನನ್ನ ಮನೆಯ ಶೋಭೆಯನ್ನು ಬೆಳಗದೆ ನಮ್ಮ ಮನೆಯನ್ನು ಬಿಟ್ಟು ಹೋಗುವೆಯಾ?” ಎಂದು ಹೇಳಿಕೊಳ್ಳುತ್ತ ಅಲ್ಲಿಗೆ ಬರುವನು. ಆಗಿನ ಅಂಧಕಾರವನ್ನು ನೋಡಿ ನೂರಾರು ಎಮ್ಮೆಗಳು ಮಲಗಿರುವಂತೆ ಬಲವಾಗಿ ಕತ್ತಲೆ ಕವಿದಿದೆಯೆಂದು ಅವನು ಹೇಳುವನು. ಕಪ್ಪುಬಣ್ಣದ ಬಟ್ಟೆಯನ್ನು ಹೊದೆದು ಮುಸುಕಿಟ್ಟು ಮಲಗಿದ ಗೋಪಿಯಂತೆ ರಾತ್ರಿಯು ಅಂಧಕಾರಾವೃತವಾಗಿದೆಯೆಂದೂ ಅವನು ಬಣ್ಣಿಸುವನು. ಈ ಉಪಮಾನಗಳು ಗೋವಳನಾದ ಅವನ ಅನುಭವಕ್ಕನುಸಾರವಾಗಿರುವುದು ಗಮನಾರ್ಹವಾದ ಸಂಗತಿ. ನಂದಗೋಪನು ಆಡುವ, “ಈ ದಿನ ಅರ್ಧರಾತ್ರಿಯ ವೇಳೆಯಲ್ಲಿ ನನ್ನ ಗೃಹಿಣಿಯಾದ ಯಶೋದೆಯು ಹೆತ್ತ ಈ ಹೆಣ್ಣು ಮಗುವು ಹುಟ್ಟಿದೊಡನೆಯೆ ಮೃತವಾಯಿತು. ನಾಳೆ ನಮ್ಮ

ಗೋಕುಲದಲ್ಲಿ ಇಂದ್ರಯಜ್ಞವೆಂಬ ಹಬ್ಬ. ಗೋಪಜನರಿಗೆ ದುಃಖಾನು ಭವವಾಗದಿರಲೆಂದು ನಾನೊಬ್ಬನೇ ಕಾಲಿನಲ್ಲಿ ಬೇಡಿಗಳಿದ್ದೂ ಮಗಳ ದೇಹವನ್ನು ತೆಗೆದುಕೊಂಡು ಬಂದಿದ್ದೇನೆ ” ಎಂಬ ಮಾತುಗಳಿಂದ ನಂದಗೋಪನ ಹೃದಯವನ್ನೇ ಕವಿಯು ನಮ್ಮೆದುರಿಗೆ ಹಿಡಿದು ತೋರಿ ಸಿದ್ದಾನೆ. ಮಗುವು ಸತ್ತು ದುಃಖವಾಗಿರುವ ಆ ಸಮಯದಲ್ಲಿ ಕೂಡ ಅವನು ಮರುದಿನ ಆದರ ದೆಸೆಯಿಂದ ಗೋಕುಲದವರ ಉತ್ಸವ ಕಾಲದ ಸಂತೋಷಕ್ಕೆ ಭಂಗ ಬರಕೂಡದೆಂದು ಪರಹಿತವನ್ನು ಬಯಸಿ ಇತರರಿಗೆ ಗೋಚರವಾಗದಂತೆ ತಾನೊಬ್ಬನೇ ಮಗುವಿನ ಶವವನ್ನು ಹೊತ್ತು ತಂದಿರುವನು. ಅವನ ಸಂಸ್ಕಾರವೆಷ್ಟೆಂಬುದು ಇದರಿಂದ ಗೊತ್ತಾಗುವುದು. ಅಲ್ಲದೆ, ಅವನ ಮಗುವು ಮೃತಪಟ್ಟಿದು ತಿಳಿದಲ್ಲಿ ಒಟ್ಟು ಗೋಕುಲದ ಗೋವಳರೆಲ್ಲ ದುಃಖಪರವಶರಾಗುವರೆಂಬ ಅಂಶ ದಿಂದಲೇ, ನಂದಗೋಪನಲ್ಲಿ ಅವರೆಷ್ಟು ಗಾಢವಾದ ಪ್ರೀತಿಯನ್ನಿಟ್ಟು ಕೊಂಡಿರುವರೆಂಬ ಅಂಶವು ವ್ಯಕ್ತವಾಗುತ್ತದೆ. ಅಷ್ಟುಮಟ್ಟಿನ ಪ್ರೀತಿ ಯನ್ನು ಸಂಪಾದಿಸಿರುವುದರಿಂದ, ಅವನ ಸೌಜನ್ಯವೆಷ್ಟೆಂಬುದೂ ಗೊತ್ತಾ ಗುತ್ತದೆ. ಅವರೆಲ್ಲರ ಮನೆಗಳನ್ನೂ ದಾಟಿ ಊರಿನ ಹೊರಕ್ಕೆ ಬರುವ ವರೆಗೂ ಅವನು ಅತ್ತಿಲ್ಲವೆಂದೂ ಹೇಳಬಹುದಾಗಿದೆ.

ಆದುದರಿಂದ ಊರಿಗೆ ದೂರವಾದ ಪ್ರದೇಶಕ್ಕೆ ಬಂದ ಮೇಲೆ ಅವನಿಗೆ ದುಃಖವು ಉಕ್ಕಿಬರುವುದು. ಅವನ ರೋದನದ ಧ್ವನಿ ಯನ್ನು ಕೇಳಿ ವಸುದೇವನು ಕಂಠಸ್ವರದಿಂದ ಅವನನ್ನು ಗುರುತಿಸಿ, “ಮಿತ್ರ! ನಂದಗೋಪ! ಇಲ್ಲಿ, ಬಾ” ಎಂದು ತನ್ನ ಬಳಿಗೆ ಕರೆಯುವನು. ಆ ಸಮರಾತ್ರಿಯಲ್ಲಿ ತನ್ನನ್ನು ಹೆಸರು ಹಿಡಿದು ಕೂಗಿದವರಾರೆಂದು ನಂದಗೋಪನು ರಾಕ್ಷಸ ಪಿಶಾಚಗಳಿರಬಹುದೆ ಎಂದುಕೊಳ್ಳುವನು. ವಸು ದೇವನು ಮತ್ತೆ ಕರೆದಮೇಲೆ, ಅವನ ಕಂಠಸ್ವರದಿಂದ ನಂದಗೋಪನು ಅವನ ಗುರುತನ್ನು ಹಿಡಿದು, “ಕಂಠಸ್ವರವನ್ನು ನೋಡಿದರೆ ಒಡೆಯ ವಸುದೇವನೆಂದು ತೋರುತ್ತದೆ. ಅವನ ಬಳಿಗೆ ಹೋಗುವೆನು. ಅಥವಾ ಅಲ್ಲಿ ನನಗೇನು ಕೆಲಸ? ರಾಜನಾದ ಕಂಸನ ಮಾತುಗಳನ್ನು ಕೇಳಿ

ಇವನು ನನಗೆ ಕಶಾಪ್ರಹಾರ ಮಾಡಿಸಿ ಬೇಡಿಗಳನ್ನು ಹಾಕಿಸಿದ್ದಾನೆ. ಆದಕಾರಣ, ನಾನು ಹೋಗುವುದಿಲ್ಲ. ಕೂಡದು. ನನ್ನ ಈ ನೃಶಂಸ ಭಾವಕ್ಕೆ ಧಿಕ್ಕಾರವಿರಲಿ. ನನಗೆ ಸಹಸ್ರಾರು ಉಪಕಾರಗಳನ್ನು ಮಾಡಿ ದ್ದಾನೆ. ನನ್ನ ದುಃಖಗಳಿಗಾಗಿ ತಾನೂ ದುಃಖಿಸಿ, ನನ್ನ ಸುಖಕಾಲ ಗಳಲ್ಲಿ ತಾನೂ ಸಂತೋಷಿಸಿದ್ದಾನೆ. ರಾಜನ ಅಪ್ಪಣೆಯಿಂದ ಅವನು ನನ್ನನ್ನು ಬಂಧನಕ್ಕೊಳಗು ಮಾಡಿರಬೇಕು. ಅವನ ಬಳಿಗೆ ಹೋಗು ವೆನು" ಎಂದು ತನ್ನಲ್ಲಿ ತಾನು ಹೇಳಿಕೊಳ್ಳುವನು. ನಂದಗೋಪನ ಸ್ವಭಾವವೆಷ್ಟು ಒಳ್ಳೆಯದೆಂಬುದು ಈ ಮಾತುಗಳಿಂದ ಸ್ಪಷ್ಟವಾಗಿ ಗೊತ್ತಾಗುತ್ತದೆ.

ಮತ್ತೆ ಕೃಷ್ಣನಿಂದ ಬೆಳಕು ಬಂದು, ವಸುದೇವನು ಮಗುವ ನ್ನೆತ್ತಿಕೊಂಡು ನಿಂತಿರುವುದು ನಂದಗೋಪನಿಗೆ ಕಾಣಿಸುವುದು. ವಸು ದೇವನು ನಂದಗೋಪನೊಡನೆ ಕುಶಲಪ್ರಶ್ನೆ ಬಳೆಯಿಸಿದನಂತರ ಅವನು ತಂದಿರುವುದೇನೆಂದು ಕೇಳುವನು. ನಂದಗೋಪನು ಅದನ್ನು ತಿಳಿಸ ಲೊಲ್ಲದೆ, "ಸ್ವಾಮಿ! ಏನೂ ಇಲ್ಲ" ಎನ್ನುವನು. ತನ್ನ ದುಃಖವನ್ನು ಮಿತ್ರನೊಡನೆ ಹೇಳಿದರೆ ಅವನಿಗೆಲ್ಲಿ ದುಃಖವಾದೀತೋ ಎಂಬ ಭಾವನೆಯೇ ನಂದಗೋಪನು ಹಾಗೆನ್ನುವುದಕ್ಕೆ ಕಾರಣ. ತನ್ನ ದುಃಖವನ್ನು ತಾನೇ ಅನುಭವಿಸದೆ ಇತರರಿಗೆ ಹೇಳಿಕೊಳ್ಳಲೇಕೆಂಬುದು ಅವನ ಸಂಕೋಚಕ್ಕೆ ಕಾರಣ. ಅವನ ಸುಸ್ವಭಾವವು ಆದರಿಂದಲೂ ವ್ಯಕ್ತವಾಗುತ್ತದೆ. ವಸು ದೇವನು ತನ್ನ ಪ್ರಾಣದ ಆಣೆಯನ್ನಿಟ್ಟು ನಿಜವನ್ನು ಹೊರಡಿಸಿ ಕಾಷ್ಠ ದಂತಿರುವ ಮಗುವಿನ ಶವವನ್ನು ಕೆಳಗಿಡುವಂತೆ ಅವನಿಗೆ ಹೇಳಿ ಒಪ್ಪಿಸುವನು. ನಂದಗೋಪನು ಆ ರೀತಿ ಮಾಡಿ, "ಮಗಳೇ, ಮಗಳೇ" ಎಂದು ರೋದಿಸಲಾರಂಭಿಸಿದಾಗ ವಸುದೇವನು ಅವನಿಗೆ ಬಗೆಬಗೆಯಾಗಿ ಸಮಾಧಾನ ಹೇಳುವನು. ಆ ಬಳಿಕ ವಸುದೇವನು, "ಮಿತ್ರ! ನನ್ನ ಆರುಮಂದಿ ಪುತ್ರರನ್ನೂ ದುರಾತ್ಮನಾದ ಕಂಸನು ಕೊಂದುಹಾಕಿದ ನೆಂಬುದನ್ನು ನೀನೂ ಬಲ್ಲೆಯಲ್ಲವೆ?" ಎಂದು ಕೇಳುವನು. ನಂದ ಗೋಪನು, "ಬಲ್ಲೆ, ಸ್ವಾಮಿಯೆ, ಬಲ್ಲೆ" ಎಂದು ಉತ್ತರ ಹೇಳು

ವನು. ಆಗ ವಸುದೇವನು, "ಈ ಏಳನೆಯ ಮಗುವು ದೀರ್ಘಾಯು. ನನಗೆ ಪುತ್ರಭಾಗ್ಯವಿಲ್ಲ. ನಿನ್ನ ಪುಣ್ಯದಿಂದಲಾದರೂ ಬದುಕಿರಲಿ. ಈ ಮಗುವನ್ನು ಸ್ವೀಕರಿಸು" ಎಂದು ಹೇಳುವನು. ನಂದಗೋಪನು ಬೆಚ್ಚಿ, "ಭಯವಾಗುವುದು, ಸ್ವಾಮಿಯೆ, ಭಯವಾಗುವುದು. ವಸುದೇವನ ಮಗನು ನಂದಗೋಪನ ಕೈಯಲ್ಲಿ ನ್ಯಾಸವಾಗಿಡಲ್ಪಟ್ಟಿದ್ದಾನೆಂದು ರಾಜನಾದ ಕಂಸನೇನಾದರೂ ಕೇಳಿದರೆ, ಹೆಚ್ಚು ಹೇಳಲೇಕೆ, ನನ್ನ ತಲೆಯು ಹೊರಟೇ ಹೋಗುವುದು" ಎಂದು ಹೇಳುವನು.

ಆಗ ವಸುದೇವನು ತನ್ನಲ್ಲಿ ತಾನು, "ಅಯ್ಯೋ, ಕೆಲಸವು ಕೆಟ್ಟು ಹೋಯಿತು. ಕಾರ್ಯಸಾಧನೆಗಾಗಿ ಏನನ್ನು ಹೇಳಬೇಕೆಂಬುದನ್ನು ನೃಶಂಸರು ಬಲ್ಲರು. ಆದಕಾರಣ, ಹೀಗೆ ಹೇಳುತ್ತೇನೆ" ಎಂದು ಕೊಳ್ಳುತ್ತಾನೆ. ತಾನು ಹಿಂದೆ ನಂದಗೋಪನಿಗೆ ಮಾಡಿರುವ ಉಪಕಾರಗಳನ್ನು ಅವನ ನೆನಪಿಗೆ ತಂದು ಅವನು ಮಗುವನ್ನು ಸ್ವೀಕರಿಸಲು ಸಮ್ಮತಿಸುವಂತೆ ಮಾಡಬೇಕೆಂಬುದು ವಸುದೇವನ ಉದ್ದೇಶ. ತಾನು ಮಾಡಿದ ಉಪಕಾರಗಳ ವಿಚಾರವನ್ನು ಪ್ರಸ್ತಾವಿಸಿ ಅವಕ್ಕೆ ಪ್ರತ್ಯುಪಕಾರಗಳನ್ನು ಬಯಸಿ ಕಾರ್ಯ ಸಾಧನೆ ಮಾಡುವುದು ನೃಶಂಸರ ಕೆಲಸವೆಂದೂ ತಾನೊಬ್ಬ ನೃಶಂಸನೆಂದೂ ಅವನು ತನ್ನನ್ನು ತಾನೆ ನಿಂದಿಸಿಕೊಳ್ಳುತ್ತಾನೆ. ಕವಿಯು ಎಷ್ಟು ಕುಶಲತೆಯಿಂದ ಎಷ್ಟು ಸೂಕ್ಷ್ಮವಾಗಿ ಮೂರ್ತಿಗಳನ್ನು ಕಡೆದು ನಿಲ್ಲಿಸುವನೆಂಬುದಕ್ಕೆ ಇದೂ ಒಂದು ನಿದರ್ಶನ. ವಸುದೇವನು ತನ್ನನ್ನು ತಾನು ಆರೀತಿ ನಿಂದಿಸಿಕೊಂಡ ಬಳಿಕ ನಂದಗೋಪನನ್ನು ಕುರಿತು, "ಮಿತ್ರ, ನಂದಗೋಪ! ಹಿಂದೆ ನಾನೇನಾದರೂ ನಿನಗೆ ಸ್ವಲ್ಪಮಟ್ಟಿಗೆ ಉಪಕಾರ ಮಾಡಿದ್ದರೆ ಅದಕ್ಕೆ ಪ್ರತ್ಯುಪಕಾರಮಾಡಲು ಇದೀಗ ತಕ್ಕ ಸಮಯ" ಎಂದು ಹೇಳುವನು. ವಸುದೇವನಿಂದ ತಾನು ಪಡೆದ ಉಪಕಾರಗಳೆಲ್ಲ ನಂದಗೋಪನ ಸ್ಮರಣೆಗೆ ಬರುವುವೆಂದು ತೋರುತ್ತದೆ. ಅವನು ತಟಕ್ಕನೆ, "ಏನು, ಏನು, ಪ್ರತ್ಯುಪಕಾರವೆಂದೆ? ಆಗಲಿ. ಕಂಸನಾದರೂ ಆಗಲಿ, ಅವನ ತಂದೆ ಉಗ್ರಸೇನನಾದರೂ ಆಗಲಿ. ಸ್ವಾಮಿಯೆ, ಮಗುವನ್ನು ತಾ"

ಎನ್ನುವನು. ವಧೆಗೆ ಔತಣ ಹೇಳಿ ತಲೆಯನ್ನು ತೆರುವ ಆ ಭೀಕರ ಸನ್ನಿವೇಶದಲ್ಲಿ ಕೂಡ ನಿರ್ಭಯನಾಗಿ ಪ್ರತ್ಯುಪಕಾರಕ್ಕೆ ಸಿದ್ಧವಾಗುವ ನಂದಗೋಪನ ನಿಶ್ಚಯವು ರಮಣೀಯವಾಗಿದೆ. ವಸುದೇವನು ಸಂತೋಷದಿಂದ ಮಗುವನ್ನು ಕೊಡಹೋಗುವನು. ನಂದಗೋಪನು ಮಗುವನ್ನು ಎತ್ತಿಕೊಳ್ಳದೆ, "ಸ್ವಾಮಿಯೆ, ನಾನು ಮೃತಶಿಶುವನ್ನೆತ್ತಿಕೊಂಡು ಆಶೌಚ ಹೊಂದಿದ್ದೇನೆ. ಕೊಂಚಕಾಲ ಇಲ್ಲಿದ್ದರೆ, ಯಮುನೆಯಲ್ಲಿ ಸ್ನಾನಮಾಡಿ ಬಂದುಬಿಡುತ್ತೇನೆ" ಎಂದು ಹೇಳುವನು. ವಸುದೇವನು ಅದಕ್ಕೆ ಉತ್ತರವಾಗಿ, "ಗೋಕುಲದಲ್ಲಿರುವ ನೀನು ಸಹಜಸಿದ್ಧವಾಗಿ ಶುಚಿಯಾಗಿಯೇ ಇರುವೆ" ಎಂದು ಹೇಳುವನು. ಕವಿಯ ಹೃದಯದಲ್ಲಿ ಗೋವಿನ ವಿಚಾರವಾಗಿ ಎಂತಹ ಪವಿತ್ರಭಾವನೆಯಿದೆಯೆಂಬುದಕ್ಕೆ ಅವನು ಈ ಮಾತುಗಳನ್ನು ಹೇಳಿಸಿರುವುದೇ ನಿದರ್ಶನ. ನಂದಗೋಪನು ಅದಕ್ಕೊಪ್ಪದೆ, ಗೋಕುಲಕ್ಕುಚಿತವಾದ ರೀತಿಯಲ್ಲಿ ಗೋಧೂಳಿಯನ್ನು ಪೂಸಿಕೊಂಡಾದರೂ ಶುಚಿಯಾಗುತ್ತೇನೆ" ಎಂದು ಹೇಳಲು ವಸುದೇವನೂ ಅದಕ್ಕೆ ಸಮ್ಮತಿಸುವನು. ನಂದಗೋಪನು ತಾನು ನೆಲದ ಧೂಳನ್ನು ತೆಗೆದುಕೊಳ್ಳಲು ಪ್ರಯತ್ನಿಸಿದಾಗ, ಭೂಮಿಯನ್ನು ಭೇದಿಸಿಕೊಂಡು ನೊಗದ ಗಾತ್ರದ ಜಲಧಾರೆಯು ಉಕ್ಕಿದುದನ್ನು ಕಂಡು ಆಶ್ಚರ್ಯಪಡುವನು. ಇದು ಹರಿವಂಶ ಮುಂತಾದುವುಗಳಲ್ಲಿಲ್ಲದ ಅಂಶ. ಭಾಸನೇ ಇದನ್ನು ಸ್ವಂತವಾಗಿ ಕಲ್ಪಿಸಿದನೋ ಅಥವಾ ಅವನ ಕಾಲದ ಜನಶ್ರುತಿಯಲ್ಲಿ ಈ ಅಂಶವು ಪ್ರಚಾರದಲ್ಲಿದ್ದಿತೋ ತಿಳಿಯದೆಂದು ಕೆಲವರಿಗೆ ಸಂಶಯ ಬರಬಹುದು. ಒಂದುವೇಳೆ ಜನರು ಆಡಿಕೊಳ್ಳುತ್ತಿದ್ದರೂ ಅದನ್ನು ನೆನಪಿನಲ್ಲಿಟ್ಟುಕೊಂಡಿದ್ದು ಸರಿಯಾದ ಸ್ಥಳದಲ್ಲಿ ಉಪಯೋಗಿಸುವುದೂ ಒಂದು ಕೌಶಲವೇ. ಆದರೆ ಇತರ ರೂಪಕಗಳಲ್ಲಿರುವ ನಾನಾ ಸನ್ನಿವೇಶಗಳಲ್ಲಿ ಭಾಸನ ಕಲ್ಪನಾಸಾಮರ್ಥ್ಯವನ್ನು ಪರಿಶೀಲಿಸಿದರೆ ಇದು ಅವನ ಕಲ್ಪನೆಯೆಂದೇ ನಿರ್ಧರಿಸಲು ಅಡ್ಡಿಯಿಲ್ಲ. ವಸುದೇವನು, "ಇದು ಬಾಲಕನ ಪ್ರಭಾವ. ಸ್ನಾನಮಾಡು" ಎಂದು ಹೇಳುವನು. ನಂದಗೋಪನು ಸ್ನಾನಮಾಡಿ ಮಗುವನ್ನು ಎತ್ತಿಕೊಂಡು, "ಸ್ವಾಮಿಯೆ! ಮಂದರ ಸದೃಶನಾದ ಈ ಬಾಲಕನನ್ನು ವಹಿಸಲು

ದುರ್ಬಲವಾದ ನನ್ನ ತೋಳುಗಳಿಗೆ ಸಾಮರ್ಥ್ಯವಿಲ್ಲ'' ಎಂದು ಹೇಳು ವನು. ಭಾಸನ ಈ ಕಲ್ಪನೆಯು ಬಹು ಚೆನ್ನಾಗಿದೆ. ವಸುದೇವನು ಆಗ, "ಮಿತ್ರ! ನೀನು ಬಹಳ ಪರಾಕ್ರಮಶಾಲಿಯಲ್ಲವೆ?'' ಎಂದು ಹೇಳು ವನು. ನಂದಗೋಪನು, "ನನ್ನ ಬಲಪರಾಕ್ರಮಗಳನ್ನು ಸ್ವಾಮಿಯು ಕೇಳಬೇಕು. ತಿವಿಯುವುದಕ್ಕೆ ಬರುವ ವೃಷಭದ ಕೊಂಬುಗಳನ್ನು ಹಿಡಿದು ಕರೆದುಕೊಂಡು ಹೋಗುತ್ತೇನೆ. ಕೆಸರಿನಲ್ಲಿ ಹೂತುಕೊಂಡ ತುಂಬಿದ ಗಾಡಿಯ ಚಕ್ರಗಳನ್ನು ಮೀಟಿ ಎತ್ತಬಲ್ಲೆ. ಇಷ್ಟು ಬಲವಿದ್ದೂ ನಾನು ಈ ಬಾಲಕನನ್ನು ಎತ್ತಲು ಅಸಮರ್ಥನಾಗಿದ್ದೇನೆ" ಎಂದು ಹೇಳುವನು.

ಅನಂತರ ಗರುಡನೂ, ಚಕ್ರ, ಶಾರ್ಙ್ಗ, ಕೌಮೋದಕಿ, ಶಂಖ, ನಂದಕ ಇವುಗಳೂ ಪ್ರವೇಶಿಸಿ ತಮ್ಮತಮ್ಮ ಶಕ್ತಿಸಾಮರ್ಥ್ಯಗಳನ್ನು ಹೇಳಿಕೊಂಡು ತಾವೆಲ್ಲ ಗೋಕುಲದಲ್ಲಿ ಗೋಪಾಲಕರಂತೆ ಅವತರಿಸಿ ಶ್ರೀ ಕೃಷ್ಣನ ಸಂಗಡಿಗರಾಗಿ ಓಲೈಸುವುದಾಗಿ ಹೇಳಿಕೊಂಡು ಹೊರಟುಹೋಗುವ ದೃಶ್ಯ. ಮನುಷ್ಯರೇ ಆ ವೇಷಗಳನ್ನು ಧರಿಸಿ ರಂಗಸ್ಥಳಕ್ಕೆ ಬರುತ್ತಿದ್ದರೆಂದು ತೋರುವುದು. ಈ ದೃಶ್ಯವು ದೂತವಾಕ್ಯದಲ್ಲಿರುವಷ್ಟು ದೀರ್ಘವಾಗಿಲ್ಲ. ಅಲ್ಲದೆ, ದೂತವಾಕ್ಯ ರೂಪಕದಲ್ಲಿ ಭಾವಗಳ ಅಲೆಗಳು ಬಹಳ ಮೇಲೇರಿ ರುವ ಸಮಯದಲ್ಲಿ ಶ್ರೀಕೃಷ್ಣನ ಆಯುಧಗಳು ಬಂದು ಹೋಗುವ ದೀರ್ಘ ದೃಶ್ಯವಿರುವುದರಲ್ಲಿ ಔಚಿತ್ಯವೂ ಇಲ್ಲ. ಬಾಲಚರಿತದ ಈ ದೃಶ್ಯವನ್ನೇ ಮತ್ತಷ್ಟು ದೊಡ್ಡದುಮಾಡಿ ಮತ್ತಾರೋ ಆ ರೂಪಕದಲ್ಲಿ ಅದನ್ನು ಸೇರಿ ಸಿದ್ದರೂ|ಸೇರಿಸಿರಬಹುದು.

ನಂದಗೋಪನು ತನ್ನನ್ನು ವಸುದೇವನು ಬೀಳ್ಕೊಟ್ಟೊಡನೆಯೆ, ತನ್ನ ಕಾಲುಗಳಲ್ಲಿದ್ದ ನಿಗಡಬಂಧನದ ತೊಡರು ತಾನಾಗಿಯೇ ಕಳಚಿ ಬಿದ್ದುದನ್ನು ಕಂಡು ಆಶ್ಚರಿಪಡುವನು. ಇದೂ ಭಾಸನ ಕಲ್ಪನೆಯೇ. ಕಂಸನ ನಿರಂಕುಶಪ್ರಭುತ್ವವು ಶ್ರೀಕೃಷ್ಣನಿಂದ ಮುಂದೆ ನಾಶವಾಗುವು ದನ್ನೂ ಇದು ಸಾಂಕೇತಿಕವಾಗಿ ಸೂಚಿಸುತ್ತದೆ. ಆದಕಾರಣ, ಕಲಾದೃಷ್ಟಿ ಯಿಂದ ಇದು ರಮಣೀಯವಾಗಿದೆ. ನಂದಗೋಪನು ಶ್ರೀಕೃಷ್ಣನನ್ನು ಎತ್ತಿಕೊಂಡು ಹೋದ ಮೇಲೆ ಅವನು ಬಿಟ್ಟು ಹೋಗಿದ್ದ ಹೆಣ್ಣುಮಗುವಿಗೆ

ಜೀವ ಬಂದು ಅದು ಅಳತೊಡಗುವುದು. ಇದೂ ಭಾಸನ ಕಲ್ಪನೆಯೇ. ಸತ್ತ ಮಗುವಿಗೆ ಜೀವ ಕೂಡಿಕೊಳ್ಳುವ ಈ ಕಲ್ಪನೆಯು ಅಷ್ಟೇನೂ ವಿಹಿತ ವಾಗಿಲ್ಲ. ವಸುದೇವನು ಆ ಮಗುವನ್ನೆತ್ತಿಕೊಂಡು ಅದೇ ದೇವಕಿಯು ಹೆತ್ತ ಮಗುವೆಂದು ದುರಾತ್ಮ ಕಂಸನನ್ನು ವಂಚಿಸುವುದಾಗಿ ಹೇಳಿಕೊಂಡು, ದಾರಿಕೊಟ್ಟು ಸಿದ್ಧವಾಗಿದ್ದ ಯಮುನೆಯ ಪಾತ್ರವನ್ನು ದಾಟಿ ತನ್ನ ಸೌಧಕ್ಕೆ ಹೋಗುವನು.

ಎರಡನೆಯ ಅಂಕದಲ್ಲಿ ಕವಿಯು ಪ್ರದರ್ಶಿಸಿರುವ ಕಲ್ಪನಾಸಾಮರ್ಥ್ಯವು ಅದ್ಭುತವಾಗಿದೆ. ಈ ಅಂಕದಲ್ಲಿ ನಾವು ಕಂಸನ ಅಂತಃಪುರವನ್ನು ಕಾಣುವೆವು. ಚಂಡಾಲ ಯುವತಿಯರು ಕಂಸನನ್ನು ಕುರಿತು, "ಬಾ, ಸ್ವಾಮಿಯೆ. ಕನ್ಯೆಯರಾದ ನಮ್ಮನ್ನು ವರಿಸು" ಎಂದು ಕೇಳುವರು. ಕೋಪವು ಮನಸ್ಸಿನಲ್ಲಿರುವ ಋಷಿಯು ಚಂಡಾಲನೆಂದು ಧ್ವನಿ ಬರುವಂತೆ ಅವಿಮಾರಕ ರೂಪಕದಲ್ಲಿ ಸೌವೀರ ರಾಜನಿಂದ ಚಂಡಭಾರ್ಗವನಿಗೆ ಹೇಳಿಸುವುದೇ ಮುಂತಾದ ರೀತಿಗಳಲ್ಲಿ ಕವಿಯು ಅಂತ್ಯಜರಲ್ಲಿ ಸಹಾನುಭೂತಿಯನ್ನು ತೋರಿಸಿದ್ದಾನೆ. ಆದಕಾರಣ, ಚಂಡಾಲ ಯುವತಿಯರನ್ನು ಕಡೆಗಂಡು ಕವಿಯು ಇಲ್ಲಿ ಅವರನ್ನು ತಂದಿಲ್ಲ. ಕಂಸನು ತನ್ನ ಮನಸ್ಸಿನ ಕಳವಳದಿಂದ ತನ್ನ ಭಾವನೆಗಳಿಗನುಸಾರವಾಗಿ ಚಂಡಾಲ ಯುವತಿಯರನ್ನು ಕೀಳೆಂದೆಣಿಸಿರುವುದನ್ನು ಕವಿಯು ಚಿತ್ರಿಸಿದ್ದಾನೆ. ಅಲ್ಲದೆ ಭೂಕಂಪವಾಗಿ ತನ್ನ ಅರಮನೆಯ ಮಹಡಿಯೇ ನೆಲಕ್ಕುರುಳಿದಂತೆಯೂ ಕಂಸನು ಭಾವಿಸುತ್ತಾನೆ.[೫] ತಮ್ಮನ್ನು ಮದುವೆಯಾಗಬೇಕೆಂದು ಚಂಡಾಲ ಯುವತಿಯರು ಮತ್ತೆ ಅವನನ್ನು ಕೇಳುತ್ತಾರೆ. ಕಾವಲುಗಾರರೂ, ದೀಪಧಾರಿಣಿಯರಾದ ಚೇಟಿಯರೂ ಪ್ರಮಾದವಶದಿಂದ ಮೈಮರೆತು, "ನೀಲೋತ್ಪಲಾಂಜನ" ನಿಭೆಯರಾದ ಚಂಡಾಲ ಯುವತಿಯರು ತನ್ನ ಅಂತಃಪುರಕ್ಕೆ ಪ್ರವೇಶಿಸಲು ಅವಕಾಶ ಕೊಟ್ಟರೆಂದು ಕಂಸನು ಗರ್ಜಿಸುತ್ತಾನೆ. ತಮ್ಮನ್ನು ಮದುವೆಯಾಗಬೇಕೆಂದು ಮತ್ತೆ ತನ್ನನ್ನು ಕೇಳಿದ ಅವರೆಲ್ಲರಮೇಲೂ ಅವನು ಕೆರಳುತ್ತಾನೆ. ಅನಂತರ ಅಂತಃಪುರದೊಳಕ್ಕೆ ಪ್ರವೇಶಿಸಲು ಹೊರಟ ಕಂಸನೆದುರಿಗೆ ಮಧೂಕ ಮಹರ್ಷಿಯ ಶಾಪವು ಪುರುಷಾಕೃತಿಯನ್ನು ತಳೆದು

ಪ್ರವೇಶಿಸಿ ಅವನನ್ನು ತಡೆದು ನಿಲ್ಲಿಸುವ ಸಂವಿಧಾನವು ಮನೋಹರವಾಗಿದೆ. ಆ ಪುರುಷಾಕೃತಿಯ ಹೆಸರೇ ವಜ್ರಬಾಹು. ಅವನು ಕೈಯಲ್ಲಿ ಹಿಡಿದಿರುವುದು ಉಲ್ಕೆ. ಅವನದು ಭೀಮದಂಷ್ಟ್ರವದನ. ಹಾವಿನ ಕಣ್ಣುಗಳನ್ನು ಹೋಲುವ ಪಿಂಗಳ ವರ್ಣದ ಕಣ್ಣುಗಳು. ಕಂಸನೇ ವರ್ಣಿಸುವಂತೆ ಮಹೇಶ್ವರನ ಮುಖದಿಂದ ಭೂಮಿಗಿಳಿದು ಬಂದಿರುವ ಕೋಪವೋ ಎಂಬಂತಿದ್ದಾನೆ, ಆ ವಜ್ರಬಾಹು.

ವೀರನಾದ ಕಂಸನು ಆ ಭೀಕರಾಕೃತಿಯಿಂದಲೂ ಹೆದರದೆ, "ನೀನಾರು?" ಎಂದು ಕೇಳುವನು. ಆಗ ವಜ್ರಬಾಹುವು, "ಏನು, ನನ್ನನ್ನರಿಯೆಯಾ? ನಾನು ಮಧೂಕನೆಂಬ ಋಷಿಯ ಶಾಪ. ನನ್ನ ಹೆಸರು ವಜ್ರಬಾಹು. ಭಯಂಕರವಾದ ಚಂಡಾಲ ರೂಪವನ್ನು ಧರಿಸಿ ಕಪಾಲ ಮಾಲೆಯ ವಿಚಿತ್ರ ವೇಷದಿಂದ ಕೂಡಿ ರಾಜಾ ಕಂಸನ ಹೃದಯವನ್ನು ಪ್ರವೇಶಿಸಲು ಸ್ಮಶಾನದಿಂದ ಬಂದಿದ್ದೇನೆ" ಎಂದು ಹೇಳುವನು. ಅವನ ಒಂದೊಂದು ಮಾತೂ ಒಂದೊಂದು ವಜ್ರಘಾತದಂತೆ ಭಯಂಕರವಾಗಿದೆ. ಆದರೂ ಕಂಸನು ನಿರ್ಭಯನಾಗಿ ವಜ್ರಬಾಹುವಿನೆದುರಿಗೆ ನಿಂತು, ಅವನು ತನ್ನ ಹೃದಯವನ್ನು ಪ್ರವೇಶಿಸಬೇಕೆಂದು ಬಯಸುವುದು ಕಾಗೆಯ ಗರಿಯ ಗಾಳಿಯಿಂದ ಮೇರುಪರ್ವತವನ್ನು ನಡುಗಿಸುವ ಪ್ರಯತ್ನದಂತೆಯೂ, ಬೊಗಸೆಯಲ್ಲಿ ಮೊಗೆದು ಸಮುದ್ರದ ನೀರನ್ನೆಲ್ಲ ಕುಡಿಯುವ ಪ್ರಯತ್ನದಂತೆಯೂ ಹಾಸ್ಯಾಸ್ಪದವೆಂದು ಮೊರೆಯುವನು. ಶಾಪ ಪುರುಷನು, "ಯಥಾಕಾಲದಲ್ಲಿ ನಿನಗೇ ತಿಳಿಯುವುದು" ಎಂದು ಹೇಳಿ ಅದೃಶ್ಯವಾಗುವನು. ಕಂಸನು ಮಲಗಿ ಕಣ್ಣು ಮುಚ್ಚುವನು. ವಜ್ರಬಾಹುವು ಮತ್ತೆ ಪ್ರವೇಶಿಸಿ, "ಇದೋ ಮಲಗಿದನು. ಅಲಕ್ಷ್ಮಿ! ಖಲತಿ! ಕಾಲರಾತ್ರಿ! ಮಹಾನಿದ್ರೇ! ಪಿಂಗಲಾಕ್ಷಿ. ಬನ್ನಿ; ಇವನ ಹೃದಯದ ಒಳಕ್ಕೆ ಹೋಗೋಣ" ಎಂದು ಕೂಗುವನು. ಅವರೆಲ್ಲರೂ, "ಆಗಲಿ" ಎನ್ನುವರು. ರಾಜನು ಕರ್ತವ್ಯಭ್ರಷ್ಟನಾಗಿ ಕ್ರೂರಿಯಾದರೆ ಅಲಕ್ಷ್ಮಿಯ ಆವಾಸ ಸ್ಥಾನವಾಗುವನೆಂಬುದನ್ನು ಕವಿಯು ಈ ಮೂಲಕ ಮನೋಹರವಾಗಿ ಸೂಚಿಸಿದ್ದಾನೆ. ಅವರೊಬ್ಬರೂ ಒಳಕ್ಕೆ ಹೋಗಕೂಡದೆಂದು ರಾಜ

ಲಕ್ಷ್ಮಿಯು ತಡೆಯುವಳು. ಕಲಾದೃಷ್ಟಿಯಿಂದಲೂ, ರಂಗಸ್ಥಳವು ಕಳಕಳಿ ಸುವ ದೃಷ್ಟಿಯಿಂದಲೂ ಈ ಅಂಕದ ಘಟನೆಗಳೆಲ್ಲ ಬಹಳ ಸೊಗಸಾಗಿವೆ. ವಜ್ರಬಾಹುವು ರಾಜಲಕ್ಷ್ಮಿಯನ್ನು ಕುರಿತು, "ಪೂಜ್ಯಳೆ, ನೀನಾರು?" ಎಂದು ಕೇಳುವನು. ಆಕೆಯು, "ಏನು, ನಾನಾರೆಂಬುದು ತಿಳಿಯದೆ? ನಾನು ಇವನ ಲಕ್ಷ್ಮಿ" ಎಂದು ಹೇಳುವಳು. ಅಲ್ಲದೆ ಆ ರಾತ್ರಿಯ ವೇಳೆ ಯಲ್ಲಿ ತನ್ನಿಂದ ಪಾರಾಗಿ ಹೋಗುವುದು ಅವನಿಗೆ ಸಾಧ್ಯವಿಲ್ಲವೆಂದೂ ತಿಳಿಸುವಳು. ವಜ್ರಬಾಹುವು, "ಭಗವತಿ! ಪದ್ಮಾಲಯೆ! ಕಂಸ ಶರೀರ ವನ್ನು ಬಿಟ್ಟು ಹೊರಡು. ವಿಷ್ಣುವಿನ ಆಜ್ಞೆಯಾಗಿದೆ" ಎನ್ನುವನು. ವಿಷ್ಣುವಿನ ಆಜ್ಞೆಯೊಂದು ಕಡೆ, ಕಂಸನ ದುರ್ಗುಣಗಳು ತನ್ನನ್ನು ಸುಡು ತ್ತಿರುವುದೊಂದು ಕಡೆ—ಇವೆರಡರ ದೆಸೆಯಿಂದ ರಾಜಲಕ್ಷ್ಮಿಯು ಕಂಸಹೃದ ಯವನ್ನು ಆಗಂತುಕರಿಗೆ ಬಿಟ್ಟುಕೊಟ್ಟು, ಬಹು ಕಾಲ ತಾನು ವಾಸವಾ ಗಿದ್ದ ಕಂಸನ ಹೃದಯವನ್ನು ಬಿಡಲಾರದೆ ಬಿಟ್ಟು ಹೋಗುವಳು. ಆಗಂತು ಕರೆಲ್ಲರೂ ಕಂಸನನ್ನು ದ್ವೇಷಿಸಿ, "ಇಂದಿನಿಂದ ಧರ್ಮ ಚಾರಿತ್ರವಿಹೀನ ನಾಗು" ಎಂದು ಹೇಳುವರು. ಸಾಂಕೇತಿಕವಾಗಿ ಈ ದೃಶ್ಯವು ಅರ್ಥ ಗರ್ಭಿತವಾಗಿದೆ. ಕವಿಯು ಪ್ರದರ್ಶಿಸಿರುವ ಸಂವಿಧಾನವು ಸೊಗಸಾಗಿದೆ.

ಕಂಸನು ಪ್ರತಿಹಾರಿಯಾದ ಯಶೋಧರೆಯನ್ನು ಕುರಿತು, "ಯಶೋ ಧರೆ! ಚಂಡಾಲ ಯುವತಿಯರು ಬಂದುದನ್ನು ನೀನು ನೋಡಲಿಲ್ಲವೆ?" ಎಂದು ಕೇಳುವನು. ಅವಳು ಆಶ್ಚರ್ಯದಿಂದ, "ಹಂ! ಚಂಡಾಲ ಯುವತಿಯರೆ! ನಿರಂತರವೂ ಒಡೆಯನ ಪಾದಸೇವೆಯಲ್ಲಿ ನಿರತರಾಗಿ ರುವವರು ಈ ಅಂತಃಪುರಕ್ಕೆ ಬರುವುದೇ ದುರ್ಲಭ, ಹೀಗಿರುವಲ್ಲಿ ಚಂಡಾಲ ಹೆಂಗಸರು ಬರುವ ಮಾತನ್ನು ಇನ್ನು ಹೇಳಬೇಕೆ?" ಎನ್ನು ವಳು. ಕಂಸನು ಅದನ್ನು ಕೇಳಿ ತಾನು ಸ್ವಪ್ನವನ್ನು ಕಂಡಿರಬೇಕೆಂದು ಕೊಳ್ಳುವನು.

ದೇವಕಿಯು ಹೆಣ್ಣುಮಗುವನ್ನು ಹೆತ್ತಿರುವಳೆಂಬ ವಾರ್ತೆಯನ್ನು ಕೇಳಿ ಕಂಸನು ಮಗುವನ್ನು ತರಿಸಿಕೊಂಡು ಅದನ್ನು, "ಕಂಸಶಿಲೆ" ಎಂಬ ಬಂಡೆಯ ಮೇಲೆ ಒಗೆಯುವನು. ಆಗ ರೌದ್ರ ವೇಷದಿಂದ

ಕೂಡಿ, ಶೂಲಹಸ್ತೆಯಾಗಿ ಕಾಳರಾತ್ರಿಯಂತೆ ಕಾತ್ಯಾಯನಿಯು ವಿಜೃಂಭಿಸುತ್ತ ತನ್ನ ಪರಿವಾರದವರಾದ ಕುಂಡೋದರ, ಶೂಲ, ನೀಲ, ಮನೋಜವ ಮುಂತಾದವರೊಡನೆ ಪ್ರವೇಶಿಸುವಳು. ತನ್ನ ಮರಣಕಾಲವು ಸಮೀಪಿಸಿದಂತೆ ಭಾವಿಸಿ ಕಂಸನು ಕಳವಳ ಪಡುವನು. ಶುಂಭ ನಿಶುಂಭರನ್ನೂ ಮಹಿಷಾಸುರನನ್ನೂ ಮರ್ದಿಸಿ, ಕಂಸ ಕುಲಕ್ಷಯಕ್ಕಾಗಿ ವಸುದೇವ ವಂಶದಲ್ಲಿ ತಾನು ಹುಟ್ಟಿರುವುದಾಗಿ ಕಾತ್ಯಾಯಿನಿಯು ಹೇಳುವಳು. ಅನಂತರ ಕುಂಡೋದರ, ಶೂಲ, ನೀಲ, ಮನೋಜವರು ತಮ್ಮ ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಪ್ರಶಂಸಿಸಿಕೊಂಡ ಬಳಿಕ, ಕಾತ್ಯಾಯನಿಯು ವಿಷ್ಣುವಿನ ಬಾಲಚರಿತವನ್ನನುಭವಿಸಲು ತಾವೆಲ್ಲರೂ ಗೋಪಾಲ ವೇಷದಿಂದ ಗೋಕುಲಕ್ಕೆ ಹೋಗಬೇಕೆಂದು ಸೂಚಿಸಿ ಪರಿವಾರ ಸಮೇತಳಾಗಿ ಹೊರಟುಹೋಗುವಳು. ಅಷ್ಟರಲ್ಲಿ ಬೆಳಗಾಗುತ್ತಿರುವುದನ್ನು ಕಂಡು ಕಂಸನು, ತನ್ನ ಶಾಂತ್ಯರ್ಥವಾಗಿ ಶಾಂತಿಕರ್ಮಗಳನ್ನಾಚರಿಸುವುದಾಗಿ ಹೇಳಿ ತನ್ನವರೊಡನೆ ಹೊರಟು ಹೋಗುವನು.

ಮೂರನೆಯ ಅಂಕದ ಪ್ರವೇಶಕದಲ್ಲಿ ಗೋಪಾಲಕರು ಶ್ರೀಕೃಷ್ಣನ ಮಹಿಮೆಯನ್ನು ಕುರಿತು ಮಾಡನಾಡಿಕೊಳ್ಳುವರು. ಆ ಬಾಲಕನು ನಂದಗೋಪನ ಮನೆಯಲ್ಲಿ ಹುಟ್ಟಿದಾಗಿನಿಂದ ದನಕರುಗಳು ರೋಗಗಳ ಸುಳಿವೇ ಇಲ್ಲದೆ ಆರೋಗ್ಯವಾಗಿದ್ದುವೆಂದು ದಾಮಕನೆಂಬ ಗೋಪಾಲಕನು ಹೇಳುವನು. ವೃದ್ಧಗೋಪಾಲಕನು ಪೂತನಾ ಪ್ರಾಣಹರಣ, ಶಕಟವಧೆ ಮುಂತಾದ ಶ್ರೀ ಕೃಷ್ಣಲೀಲಾ ವಿನೋದಗಳನ್ನು ವರ್ಣಿಸುವನು. ಅಂದು ಗೋಪಿಕೆಯರೊಡನೆ, "ಹಲ್ಲೀಸಕ" ವೆಂಬ ಹೆಸರಿನ ನೃತ್ಯವನ್ನು ದಾಮೋದರನು ನಡೆಯಿಸುವನೆಂದು ದಾಮಕನು ಸೂಚಿಸುವನು. ಸಮಸ್ತ ಗೋಪಜನರಿಂದೊಡಗೂಡಿ ಅದನ್ನು ನೋಡಲು ತೆರಳುವುದಾಗಿ ವೃದ್ಧಗೋಪಾಲಕನು ಸೂಚಿಸುವನು. ಮೂರನೆಯ ಅಂಕದಲ್ಲಿ ದಾಮೋದರನು ಗೋಪಾಂಗನೆಯರೊಡನೆ ನೃತ್ಯವಾಡುವನು. ಈ ಸಂಬಂಧದಲ್ಲಿ, ವಿಷ್ಣುಭಕ್ತನಾದ ಭಾಸಕವಿಯು ಶುದ್ಧವಾದ ಭಾವನೆ

ಯಿಂದ ದೃಶ್ಯವನ್ನು ಚಿತ್ರಿಸಿದ್ದಾನೆ. ಅವರೆಲ್ಲರ ನೃತ್ಯವನ್ನು ನೋಡಿದ ವೃದ್ಧ ಗೋಪಾಲಕನು, "ಹ್ಹಿ ಹ್ಹೀ, ಚೆನ್ನಾಗಿ ಹಾಡುತ್ತಿದ್ದಾರೆ! ಚೆನ್ನಾಗಿ ವಾದ್ಯಗಳನ್ನು ನುಡಿಸುತ್ತಿದ್ದಾರೆ! ಚೆನ್ನಾಗಿ ಕುಣಿಯುತ್ತಿದ್ದಾರೆ! ನಾನೂ ಕುಣಿಯುತ್ತೇನೆ" ಎಂದು ಹೇಳಿ ಕುಣಿಯಲಾರಂಭಿಸುವುದು ವಿನೋದಾತ್ಮಕವಾಗಿದೆ.

ಅಷ್ಟರಲ್ಲಿ ಅರಿಷ್ಟರ್ಷಭನೆಂಬ ರಾಕ್ಷಸನು ಬರುವುದರಿಂದ ರಸಾಭಾಸವಾಗುವುದು. ಗೋಪಾಲಕನೊಬ್ಬನು, ಓಡಿಹೋಗಿ ಪ್ರಾಣವನ್ನುಳಿಸಿಕೊಳ್ಳುವಂತೆ ಬಾಲಕೃಷ್ಣನಿಗೆ ಹೇಳುವನು. ದಾಮೋದರನು ಹೆದರದೆ ಕಾಳಗಕ್ಕೆ ಅನುವಾಗುವನು. ರಾಕ್ಷಸನು, "ಬಲಯುತನಾದ ನನ್ನ ಉಗ್ರ ರೂಪವನ್ನೂ ಮಹಾನಾದವನ್ನೂ ನೋಡಿ ಭಯಪಡದೆ, ವಿಸ್ಮಿತನೂ ಆಗದೆ ಇರುವ ಈ ಬಾಲಕನು ಸತ್ತ್ವಶಾಲಿ" ಎನ್ನುವನು. ದಾಮೋದರನು, "ಈ ಭಯವೆಂಬುದೇನು? ಅದರ ವಿಚಾರವನ್ನು ಇಂದು ನಿನ್ನಿಂದಲೇ ನಾನು ಕೇಳಿದುದು" ಎಂದು ಉತ್ತರ ಹೇಳುವುದು ಮನೋಹರವಾಗಿದೆ. ಬಾಲಕನಾದ ದಾಮೋದರನು ಆ ರಾಕ್ಷಸನನ್ನು ಕೊಂದು, ಅನಂತರ ಕಾಲಿಯನನ್ನು (ಕಾಳಿಂಗನನ್ನು) ನೋಡಲು ಯಮುನೆಯ ತೀರಕ್ಕೆ ಹೋಗಿರುವ ಬಲರಾಮನ ಬಳಿಗೆ ತೆರಳುವನು.

ನಾಲ್ಕನೆಯ ಅಂಕದಲ್ಲಿ, ಕಾಲಿಯನನ್ನು ಕಂಡು ಬೆದರಿದ ಗೋಪಸ್ತ್ರೀಯರ ಅವಸ್ಥೆಯನ್ನು ದಾಮೋದರನು ವರ್ಣಿಸುವನು. ಭಯಾಕ್ರಾಂತೆಯರಾದ ಗೋಪಕನ್ಯೆಯರು ಪ್ರವೇಶಿಸಿ ಕಾಳಿಯನಿರುವ ಮಡುವಿನ ಬಳಿಗೆ ಹೋಗಕೂಡದೆಂದು ಅವನನ್ನು ತಡೆಯುವುದು ಮನೋಹರವಾಗಿದೆ. ದಾಮೋದರನು ಯಮುನೆಯ ಮಡುವಿನೊಳಕ್ಕೆ ಧುಮ್ಮಿಕ್ಕುವನು. ಕುಲಗಿರಿಗಳನ್ನು ಕೂಡ ಕರಗಿಸುವ ಆ ಘೋರ ಸರ್ಪದ ವಿಷಾಗ್ನಿಯು ದಾಮೋದರನ ತೋಳನ್ನೂ ಸುಡಲಾರದು. ಕೊನೆಗೆ ಕಾಲಿಯನು ಶರಣಾಗತನಾಗುವನು; ಅಲ್ಲದೆ ಯಮುನೆಯ ಮಡುವಿಗೆ ಅವನು ಬಂದುದೇಕೆಂದು ಕೇಳಿದ ದಾಮೋದರನನ್ನು ಕುರಿತು, ಕಾಲಿಯನು, "ಭಗವನ್! ನಿನ್ನ ಶ್ರೇಷ್ಠ ವಾಹನವಾದ ಗರುಡನಿಂದ ಭೀತ

ನಾಗಿ ಇಲ್ಲಿಗೆ ಬಂದೆನು. ಗರುಡನ ಭಯವಿಲ್ಲದಂತೆ ಅಭಯವನ್ನಿತ್ತು ಸ್ವಾಮಿಯು ಅನುಗ್ರಹಿಸಬೇಕು" ಎಂದು ಕೇಳಿಕೊಳ್ಳುವನು. ದಾಮೋದರನು, "ನಿನ್ನ ತಲೆಯಮೇಲಿರುವ ನನ್ನ ಪಾದ ಚಿಹ್ನೆಗಳನ್ನು ನೋಡಿ ಗರುಡನೇ ನಿನಗೆ ಅಭಯವನ್ನು ಕೊಡುತ್ತಾನೆ" ಎಂದು ತಿಳಿಸಿ ಇನ್ನು ಮುಂದೆ ಗೋಬ್ರಾಹ್ಮಣ ಮುಂತಾದವರಾರನ್ನೂ ಹಿಂಸಿಸಕೂಡದೆಂದು ಕಟ್ಟುಮಾಡುವನು. ಕಾಲಿಯನು, "ಭಗವನ್! ಯಮುನೆಯ ನೀರೆಲ್ಲ ನನ್ನ ವಿಷದಿಂದ ಕಲುಷಿತವಾಗಿದೆ. ಆ ವಿಷವನ್ನು ನಾನೇ ಸ್ವೀಕರಿಸಿ ಯಮುನೆಯನ್ನು ಬಿಟ್ಟು ಹೊರಟುಹೋಗುತ್ತೇನೆ" ಎಂದು ಹೇಳಿ ಆರೀತಿ ಮಾಡುವನು. ಬಲರಾಮನಿಗೂ ಗೋಪಾಲಕರಿಗೂ ಹರ್ಷ ವುಂಟಾಗುವುದು. ಅಷ್ಟರಲ್ಲಿ ಕಂಸನು ಮಧುರಾನಗರದಲ್ಲಿ ನಡೆಯಿಸುವ ಧನುರ್ಮಹವೆಂಬ ಹಬ್ಬಕ್ಕೆ ಬರಬೇಕೆಂದು ಆಹ್ವಾನವು ಬರುವುದು. ಬಲರಾಮನೂ ದಾಮೋದರನೂ ಕಂಸವಧೆಗಾಗಿ ಮಧುರೆಗೆ ಹೊರಡ ಲಿಚ್ಛಿಸುವರು.

ಐದನೆಯ ಅಂಕವು, ಗೋಕುಲದಲ್ಲಿರುವ ವಿಪುಲ ವಿಕ್ರಮ ವೀರ್ಯ ಸತ್ತ್ವನಾದ ದಾಮೋದರನನ್ನು ಮಲ್ಲಯುದ್ಧದಲ್ಲಿ ಕೊಲ್ಲಿಸುವುದಾಗಿ ಹೇಳಿಕೊಳ್ಳುತ್ತಿರುವ ಕಂಸನ ಮಾತುಗಳಿಂದ ಪ್ರಾರಂಭವಾಗುವುದು. ಮದವೇರಿದ ಉತ್ಪಲಾಪೀಡವೆಂಬ ಹೆಸರಿನ ಆನೆಯನ್ನು ಮಹಾ ಪ್ರಧಾನನು ಬಲರಾಮ ದಾಮೋದರರ ಮೇಲೆ ನುಗ್ಗಿಸಲು ಅವರು ಅದನ್ನೇ ಕೊಂದರೆಂದು ಭಟನೊಬ್ಬನು ಬಂದು ಹೇಳುವನು. ಕಂಸನು ಅಚ್ಚರಿಗೊಂಡು ಮತ್ತೆ ವಾರ್ತೆಯನ್ನು ತಿಳಿದುಬರುವಂತೆ ಅವನನ್ನು ಕಳುಹಿಸುವನು. ಭಟನು ಮತ್ತೆ ಪ್ರವೇಶಿಸಿ ದಾಮೋದರನು ಕುಬ್ಜೆಯಾಗಿದ್ದ ಮದನಿಕೆಯ ಗೂನನ್ನು ಸರಿಪಡಿಸಿ ಧನುಶ್ಶಾಲೆಗೆ ಹೋದನೆಂದು ಹೇಳುವನು. ಕಂಸನ ಕಳವಳವು ಹೆಚ್ಚುವುದು. ವಾರ್ತೆಯನ್ನು ತಿಳಿದುಬರುವಂತೆ ಅವನು ಮತ್ತೆ ಭಟನನ್ನು ಅಟ್ಟುವನು. ಭಟನು ಮತ್ತೆ ಹೋಗಿ ಬಂದು, ಧನುಶ್ಶಾಲೆಯ ರಕ್ಷಕನಾದ ಸಿಂಹಬಲನು ತಮ್ಮನ್ನು ತಡೆದುದರಿಂದ ಕುಪಿತನಾದ ದಾಮೋದರನು ಅವನನ್ನು ಕೊಂದನೆಂದೂ ಧನು

ಶ್ಶಾಲೆಗೆ ಹೋಗಿ ದೊಡ್ಡ ಧನುಸ್ಸನ್ನು ಸೀಳಿದನೆಂದೂ ಹೇಳುವನು;
ಕಂಸನ ಕಳವಳವು ಮತ್ತಷ್ಟು ಹೆಚ್ಚಾಗುವುದು.

ಚಾಣೂರ ಮುಷ್ಟಿಕರೊಡನೆ ಆ ಬಳಿಕ ಬಲರಾಮ ದಾಮೋದರರು ಮಲ್ಲಯುದ್ಧ ಮಾಡುವಂತೆ ಕಂಸನು ಹೇಳಿ ಕಳುಹಿಸಿ ತಾನೂ ಪ್ರೇಕ್ಷಕನಾಗಿ ಕುಳಿತುಕೊಳ್ಳುವನು. ಅವರೀರ್ವರೂ ಚಾಣೂರ ಮುಷ್ಟಿಕರನ್ನು ಕೊಂದ ಬಳಿಕ ಕಂಸನನ್ನೂ ಕೊಲ್ಲುವರು. ವಸುದೇವನು ಬಂದು ಶವಗಳನ್ನು ಹೊರಕ್ಕೆ ಸಾಗಿಸುವಂತೆ ಭಟರಿಗೆ ಆಜ್ಞೆ ಮಾಡುವನು. ದಾಮೋದರ ಬಲ ರಾಮರೊಡನೆ ಬಂದಿರುವ ಗೋಪಾಲಕರು ಕಂಸವಧೆಗಾಗಿ ಹಿಗ್ಗಿ, "ಹ್ಹಿ ಹ್ಹೀ! ಇನ್ನು ಗೋಪಾಲಕರ ರಾಜ್ಯ" ಎಂದು ಹೇಳಿ ಹರ್ಷಿಸುವರು. ಅವರಿಂದ ಹೀಗೆ ಹೇಳಿಸಿರುವ ಕವಿಯ ಸಂವಿಧಾನ ಕೌಶಲವನ್ನೆಷ್ಟು ಕೊಂಡಾಡಿದರೂ ಸಾಲದು. ಪಾತ್ರಗಳ ಹೃದಯಗತಿಯನ್ನೇ ಹಿಡಿದು ಭಾಸನು ರೂಪಕಗಳನ್ನು ಬರೆಯುತ್ತಿರುವನೆಂಬುದಕ್ಕೆ ಇದೂ ಒಂದು ಉತ್ತಮ ನಿದರ್ಶನವೆನ್ನಬಹುದು. ದಾಮೋದರನೂ ಬಲರಾಮನೂ ತನ್ನ ಪುತ್ರರೆಂದು ವಸುದೇವನು ಹೇಳುವನು. ಉಗ್ರಸೇನನು ಸೆರೆಮನೆ ಯಿಂದಲೂ ನಿಗಡಬಂಧನದಿಂದಲೂ ಬಿಡುಗಡೆ ಹೊಂದಿ, ಅಭಿಷಿಕ್ತ ನಾಗಿ ಪ್ರವೇಶಿಸುವನು. ನಾರದಮಹರ್ಷಿಗಳು ಬಂದು ದಾಮೋದರನನ್ನು ಕೊಂಡಾಡುವರು.

ಪಾತ್ರರಚನೆ:—ಈ ರೂಪಕದಲ್ಲಿ ನಾವು ಮುಖ್ಯವಾಗಿ ಗಮನಿಸ ಬೇಕಾದುದು ವಸುದೇವ, ನಂದಗೋಪ, ಕಂಸ—ಈ ಮೂರು ಪಾತ್ರ ಗಳ ವಿಚಾರವನ್ನು ಮಾತ್ರವೇ. ದಾಮೋದರನ ಪಾತ್ರವೂ ಮನೋಹರ ವಾಗಿದ್ದರೂ ಕೇವಲ ಮಹಿಮಾ ಪ್ರದರ್ಶನಗಳಿಂದ ತುಂಬಿರುವ ಆ ಪಾತ್ರವು ರೂಪಕ ರಚನೆಯ ದೃಷ್ಟಿಯಿಂದ ಪರಿಪುಷ್ಟವಾಗಿ ಬಳೆದು ಬಂದಿಲ್ಲ ವೆಂದೇ ಹೇಳಬೇಕಾಗಿದೆ. ದಾಮೋದರ ಬಲರಾಮರು ವೀರಾಗ್ರಣಿಗಳು; ದುಷ್ಟಶಿಕ್ಷಣ ಶಿಷ್ಟರಕ್ಷಣಾರ್ಥವಾಗಿ ಅವತರಿಸಿರತಕ್ಕವರು; ಅವರಲ್ಲಿ ಗೋಪಾಲಕರಿಗೆಲ್ಲ ಪೂರ್ಣವಿಶ್ವಾಸ.

ವಸುದೇವನು ಕರುಣಾಹೃದಯ; ತಾನು ಮಾಡಿದ ತಪ್ಪಿಗಾಗಿ ಬಹಳ ಪಶ್ಚಾತ್ತಾಪಪಡತಕ್ಕವನು. ತಾನು ಕಂಸನ ಆಜ್ಞೆಯಂತೆ ತನ್ನ ಮಿತ್ರನಾದ ನಂದಗೋಪನಿಗೆ ಕಶಾಪ್ರಹಾರ ಮಾಡಿಸಿ

**ವಸುದೇವ**

ನಿಗಡಬಂಧನ ಮಾಡಿಸಿದುದಕ್ಕಾಗಿ ಅವನು ಬಹಳ ಸಂಕಟ ಪಡುವನು. ಆದರೆ ಕಂಸನೇ ಹೇಳಿದ್ದರೂ ಆ ಕಾರ್ಯವನ್ನು ಮಾಡುವುದಿಲ್ಲವೆಂದು ಹೇಳುವಷ್ಟು ಸತ್ತ್ವವು ಅವನಲ್ಲಿಲ್ಲ. ಅವನು ಸದ್ಗೃಹಸ್ಥ. ದೇವಕಿಯಲ್ಲಿ ಅವನಿಗೆ ತುಂಬ ಪ್ರೇಮ. ಅವಳ ಸಂಕಟದಲ್ಲಿ ಅವನಿಗೆ ಬಹಳ ಅನುಕಂಪವುಂಟು. ತಾನು ನಂದಗೋಪನಿಗೆ ಮಾಡಿದ ಉಪಕಾರಗಳಿಗೆ ಪ್ರತ್ಯುಪಕಾರವನ್ನಪೇಕ್ಷಿಸುವ ಸ್ಥಿತಿಯೊದಗಿ ಅದನ್ನು ಕೇಳಬೇಕಾಗಿ ಬಂದುದಕ್ಕಾಗಿ ಅವನು ತಲ್ಲಣಗೊಳ್ಳುವನು. ಆದರೂ ಅವನು ಸನ್ಮಿತ್ರ. ಏಕೆಂದರೆ, ನಂದಗೋಪನೇ ಸೂಚಿಸುವಂತೆ, ವಸುದೇವನು ಅವನಿಗೆ ಅನೇಕ ಉಪಕಾರಗಳನ್ನು ಮಾಡಿದ್ದಾನೆ; ಅಲ್ಲದೆ ಅವನ ಸಂತೋಷಕಾಲದಲ್ಲಿ ತಾನೂ ಹರ್ಷಿಸಿ ಅವನ ದುಃಖದಲ್ಲಿ ತಾನೂ ಭಾಗಿಯಾಗಿದ್ದವನು.

ವಸುದೇವ ಪಾತ್ರದ ಚಿತ್ರದಲ್ಲಿ ಒಂದು ದೊಡ್ಡ ಮಸಿಯ ಬೊಟ್ಟನ್ನೂ ನಾವು ಕಾಣುತ್ತೇವೆ. ನಂದಗೋಪನ ಸತ್ತಮಗುವು ಜೀವಿಸಿದುದನ್ನು ಕಂಡು ವಸುದೇವನು ಅದನ್ನು ಎತ್ತಿಕೊಂಡು, ಅದನ್ನು ದೇವಕಿಯ ಕೈಯಲ್ಲಿಟ್ಟು, (ತಮ್ಮ ಮಗುವೆಂದು ಹೇಳಿ) ಕಂಸನನ್ನು ವಂಚಿಸುವುದಾಗಿ ನಿರ್ಧರಿಸುವನು. ಹೀಗೆ ಆ ಮಗುವನ್ನು ಸಾವಿಗೆ ಗುರಿಪಡಿಸುವ ಯೋಚನೆಯು ಆರು ಮಕ್ಕಳನ್ನು ಕಳೆದುಕೊಂಡಿರುವ ವಸುದೇವನಿಗೆ ಬಂದುದು ಸಹಜವೆಂದು ಹೇಳಿದರೂ ಹೇಳಬಹುದು. ಆದರೆ ಮೊದಲು ಅವನು ಆ ರೀತಿ ನಿರ್ಧರಿಸಿದ್ದರೂ ಆ ತರುವಾಯ ಅದಕ್ಕಾಗಿ ಬಹಳವಾಗಿ ಮನನೊಂದು ಮರುಗುವನು. ಆರು ಮಕ್ಕಳನ್ನು ಕಳೆದುಕೊಂಡ ದುಃಖದ ಜೊತೆಗೆ ಆ ದುಃಖವೂ ಸೇರಿ, ಅವನು ಕೃಶನಾಗುವನು. ಕಂಸನು ದೇವಕಿಯು ಹೆತ್ತ ಮಗುವು ಹೆಣ್ಣಲ್ಲವೆಂದು ಸಂಶಯಪಟ್ಟು, "ವಸುದೇವನು ಧರ್ಮಶೀಲನೆಂದೂ ಸತ್ಯವಾದಿಯೆಂದೂ ತನ್ನಲ್ಲಿ ತಾನು

ಹೇಳಿಕೊಂಡು ಅವನನ್ನು ಕರೆಯಿಸುವನು. ಅವನ ಸ್ವಭಾವವು ಇದ ರಿಂದಲೇ ಗೊತ್ತಾಗುವುದು. ದೇವಕಿಯು ಎಂತಹ ಮಗುವನ್ನು ಹೆತ್ತ ಳೆಂದು ಕಂಸನು ಕೇಳಿದಾಗ, ಸುಳ್ಳನ್ನು ಹೇಳಲಾರದೆ ಪರಿತಪಿಸಿ, "ನಾನೂ ಸುಳ್ಳನ್ನು ಹೇಳಬೇಕಾಗಿ ಬಂದಿದೆ. ಅಥವಾ ಕುಮಾರನನ್ನು ರಕ್ಷಿಸುವುದ ಕ್ಕಾಗಿ ಹೇಳಿದ ಸುಳ್ಳೂ ನಿಜವೆಂದೇ ನನ್ನ ಮನಸ್ಸಿಗೆ ತೋರುತ್ತಿದೆ. ಈಗೇನುಮಾಡಲಿ? ಆಗಲಿ. ಹೀಗೆ ಮಾಡುವೆನು" ಎಂದು ತನ್ನಲ್ಲಿ ತಾನು ಹೇಳಿಕೊಂಡು, "ಅವಳು ಹೆಣ್ಣು ಮಗುವನ್ನು ಹೆತ್ತಳು", ಎಂದು ಕಂಸನೊಡನೆ ಹೇಳುವನು. ಆದರೆ ವಧೆಗಾಗಿ ಆ ಮಗುವನ್ನು ಕಂಸನು ತರಿಸುವಾಗ್ಗೆ ಮಾತ್ರ ವಸುದೇವನ ಮನಸ್ಸು ಕ್ಷೋಭೆಹೊಂದುವುದು; ಅವನು, "ವಿವೇಕಶಾಲಿಯಾಗಿರಲು ಬಯಸುತ್ತಿದ್ದ ನಾನೂ ಕೂಡ ಹೆರವರ ಮಗುವನ್ನು ಕೊಲ್ಲಿಸಬೇಕಾಗಿಬಂದಿದೆ. ನನ್ನ ಕುಮಾರನನ್ನೇ ಕರೆದುತಂದು ಒಪ್ಪಿಸಲೆ?" ಎಂದು ಪರಿತಪಿಸುವನು. ಆದರೆ, "ಈ ಹೆಣ್ಣುಮಗುವು ಮೊದಲು ಮೃತಪಟ್ಟಿದ್ದು ಮತ್ತೆ ಬದುಕಿತು. ಆ ಬಾಲ ಕನ ಮಾಹಾತ್ಮ್ಯೆಯಿಂದ ಇದು ವಧೆಹೊಂದುವುದು ತಪ್ಪುತ್ತದೆ" ಎಂದು ತನ್ನಲ್ಲಿ ತಾನು ಹೇಳಿಕೊಳ್ಳುತ್ತಾನೆ. ಪುತ್ರೇಷಣವು ಎಂತಹ ಧರ್ಮ ಶೀಲನಿಗೂ ಸತ್ಯವಾದಿಗೂ ವಿವೇಕಿಗೂ ಮಂಕು ಕವಿಸುವುದೆಂಬುದನ್ನು ತೋರಿಸುವುದಕ್ಕಾಗಿಯೇ ಕವಿಯು ವಸುದೇವ ಪಾತ್ರವನ್ನು ಹೀಗೆ ಚಿತ್ರಿಸಿದ್ದಾನೋ ಏನೋ!

ನಂದಗೋಪ ಪಾತ್ರವು ಚಿತ್ತಾಕರ್ಷಕವಾಗಿದೆ. ಅವನ ಉಪಕಾರ ಸ್ಮರಣೆ, ಕ್ಷಮೆ, ಮುಂತಾದ ಸದ್ಗುಣಗಳಿಗೆ ನಾವು ಹಲವು ನಿದರ್ಶನ ಗಳನ್ನು ಆಗಲೇ ನೋಡಿದ್ದೇವೆ. ಗೋಕುಲದ

**ನಂದಗೋಪ** ಗೋಪಾಲಕರಿಗೆಲ್ಲ ಅವನು ಅಚ್ಚುಮೆಚ್ಚಾಗಿದ್ದಾನೆ. ತಮ್ಮ ಒಡೆಯನಾದ ಅವನಲ್ಲಿ ಅವರಿಗೂ ಆತ್ಮೀಯತೆ. ಅವರಲ್ಲಿ ಅವನ ಪ್ರೇಮವೂ ಅದೇರೀತಿಯಲ್ಲಿದೆ. ಉಪಕಾರಿಗಳ ಕಾರ್ಯ ಕ್ಕಾಗಿ ತನ್ನ ತಲೆಯನ್ನು ತೆರುವುದಕ್ಕೂ ಅವನು ಸಿದ್ಧವಾಗಿದ್ದಾನೆ. ವಸು ದೇವನು ಕುಮಾರನನ್ನು ಹೇಗೆ ನೋಡಿಕೊಳ್ಳುವೆಯೆಂದು ಕೇಳಿದಾಗ

ನಂದಗೋಪನು ಹೇಳುವ, "ಸ್ವಾಮಿಯು ಲಾಲಿಸಬೇಕು. ಇವನು ಒಂದು ಮನೆಗೆ ಹೋಗಿ ಹಾಲನ್ನು ಕುಡಿಯುತ್ತಾನೆ. ಇನ್ನೊಂದು ಮನೆಗೆ ಹೋಗಿ ಮೊಸರನ್ನು ಕುಡಿಯುತ್ತಾನೆ. ಮತ್ತೊಂದು ಮನೆಗೆ ಹೋಗಿ ಬೆಣ್ಣೆಯನ್ನು ಮೆಲ್ಲುತ್ತಾನೆ. ಮಗದೊಂದು ಮನೆಗೆ ಹೋಗಿ ಪಾಯಸವನ್ನು ಭಕ್ಷಿಸುತ್ತಾನೆ. ಇನ್ನೂ ಒಂದು ಮನೆಗೆ ಹೋಗಿ ಮೊಸರಿನ ಗಡಿಗೆಯನ್ನು ಹೊಂಚಿನೋಡುತ್ತಾನೆ. ಹೆಚ್ಚು ಹೇಳಲೇಕೆ? ನಮ್ಮ ಗೋಕುಲಕ್ಕೇ ಒಡೆಯನಾಗುತ್ತಾನೆ" ಎಂಬ ಮಾತುಗಳು ಸರಳ ಮನೋಹರವಾಗಿವೆ. ಆವನ ಒಡೆತನದಲ್ಲಿ ಗೋಕುಲವೆಲ್ಲ ಒಂದೇ ಕುಟುಂಬದಂತಿದ್ದ ಸರಳ ಜೀವನದ ಸೊಂಪನ್ನು ಸೂಚಿಸುತ್ತದೆ. ನಂದಗೋಪನ ಹೃದಯವೊಂದು ಪ್ರೇಮಖಂಡ. ಆದರಿಂದ ಸಂತತವೂ ಅಮೃತ ಪ್ರವಾಹವೇ ಉಕ್ಕಿ ಹರಿಯುತ್ತದೆ.

ಭಾಸಮಹಾಕವಿಯು ಮುಂದೆ ದುರ್ಯೋಧನ ಪಾತ್ರವನ್ನು ಸಹೃದಯರು ಮನಮೆಚ್ಚುವಂತೆ ಚಿತ್ರಿಸುವುದರ ಧೋರಣೆಯು ಕಂಸ ಪಾತ್ರವನ್ನು ಚಿತ್ರಿಸಿರುವ ರೀತಿಯಿಂದ ಗೊತ್ತಾಗುತ್ತದೆ.

**ಕಂಸ**

ವಸುದೇವನು ಹೇಳುವಂತೆ ಒಟ್ಟು ಪೃಥ್ವಿಯೇ ಆವನ "ಏಕಚ್ಛತ್ರಚ್ಛಾಯೆ"ಯಲ್ಲಿ ಪರಿಪಾಲಿತವಾಗುತ್ತಿದೆ. ಆದರೂ ಆವನಿಗಾಗಲಿ ಆವನ ಪ್ರಜೆಗಳಿಗಾಗಲಿ ಸುಖವಿಲ್ಲ. ತಂದೆ ಉಗ್ರಸೇನನನ್ನೇ ಸೆರೆಯಲ್ಲಿಟ್ಟಿರುವ ಕೇಡಿಗನು ಕಂಸಭೂಪತಿ. ಅವನು ದೇವಕಿಯ ಮಕ್ಕಳನ್ನೆಲ್ಲ ತನ್ನ ಪ್ರಾಣರಕ್ಷಣೆಯ ನಿಮಿತ್ತವಾಗಿ ಕೊಲ್ಲಿಸುತ್ತಿರುವನು. ಮಗುವಿನಂತೆ ಸರಳ ಹೃದಯನಾದ ನಂದಗೋಪನನ್ನು ಕಶೆಗಳಿಂದ ಹೊಡೆಯಿಸಿ ಕಾಲುಗಳಿಗೆ ಸಿಗಡಬಂಧನ ಮಾಡಿಸಿರುವ ಕ್ರೂರಿಯು ಕಂಸನು. ಆದರೂ ಪುರಾಣಗಳಲ್ಲಿ ಹೇಳಿರುವಂತೆ ಪೂರ್ತಿಯಾಗಿ ದುರ್ಗುಣಗಳಿಂದಲೇ ತುಂಬಿ ಅಸಹ್ಯಕರವಾಗಿರುವಂತೆ ಭಾಸನು ಕಂಸ ಪಾತ್ರವನ್ನು ಚಿತ್ರಿಸಿಲ್ಲ. ವಜ್ರಬಾಹುವಿನ ವಿಕಟರೂಪದಿಂದಲೂ ಬೆಚ್ಚದೆ, ಸೂರ್ಯಚಂದ್ರರೂ ಅಗ್ನಿಯೂ ತನ್ನ ವಶವರ್ತಿಗಳೆಂದೂ, ತಾನು ಯಮನಿಗೂ ಯಮಸ್ವರೂಪನೆಂದೂ ಆವನು ಹೇಳಿಕೊಳ್ಳುವುದನ್ನು

ಕಂಡ ಮನಸ್ಸು ಕ್ಷಣಕಾಲ ಮುಗ್ಧವಾಗಿ ಅವನ ದೋಷಗಳನ್ನೆಲ್ಲ ಮರೆತು, “ಭಲಾ!” ಎನ್ನುತ್ತದೆ. ಅವನು ಚಂಡಾಲ ಯುವತಿಯರನ್ನು ಕಾಣುವುದೂ, ತಾನು ತಪ್ಪುದಾರಿ ಹಿಡಿದಿದ್ದುದಕ್ಕಾಗಿ ಕೊರಗಿ ತನಗೊದಗಬಹುದಾದ ದುರ್ದಶೆಯನ್ನು ಕುರಿತು ಚಿಂತಿಸಿ ಚಿಂತಿಸಿ ಹಣ್ಣಾಗಿದ್ದುದರ ಫಲವೇ. ಅವನು, “ಹುಡುಗಿಯಾದರೂ ಆಗಿರಲಿ. ಹುಡುಗನಾದರೂ ಆಗಿರಲಿ. ನಾನು ಕೊಲ್ಲಲೇ ಬೇಕು. ನಾನು ನನ್ನ ಪುರುಷಕಾರದಿಂದ ದೈವವನ್ನೂ ವಂಚಿಸುವುದೇ ನಿಜ” * ಎಂದು ಹೇಳುವುದನ್ನು ಕೇಳಿದಾಗ ಅವನ ಕ್ರೌರ್ಯಕ್ಕಾಗಿ ಅವನಲ್ಲಿ ಅಸಹ್ಯವುಂಟಾದರೂ ಅವನು ವಿಧಿಯ ಕಟ್ಟಲೆಗೂ ವಿರೋಧಿಯಾಗಿ ನಿಂತು, ಆತ್ಮರಕ್ಷಣೆ ಮಾಡಿಕೊಳ್ಳುವುದಕ್ಕಾಗಿ ಪುರುಷಕಾರವನ್ನು ಮೆರೆಯುವ ಉದ್ಯಮವನ್ನು ಹೂಡಿರುವುದಕ್ಕಾಗಿ ಅವನನ್ನು ಮೆಚ್ಚೋಣವೆನ್ನಿಸುತ್ತದೆ.

ಕಂಸನಲ್ಲಿ ಆಸುರೀ ಪ್ರವೃತ್ತಿಯೇ ಹೆಚ್ಚಾಗಿದ್ದರೂ, ದೈವೀಸಂಪತ್ತಿನ ಪ್ರವೃತ್ತಿಯ ಒಂದೆರಡು ಮಿಂಚುಗಳೂ ಕ್ಷಣಮಾತ್ರ ಮಿನುಗಿ ಮಾಯವಾಗುವುದನ್ನೂ ನಾವು ಕಂಡು ಕವಿಯ ಕಲ್ಪನಾಸಾಮರ್ಥ್ಯವನ್ನು ಮೆಚ್ಚಿಕೊಳ್ಳುತ್ತೇವೆ. ದೇವಕಿಯು, “ಹೆಣ್ಣು ಮಗುವೆಂದು, ಬಾಲಿಕೆಯೆಂದು, ಇದರಲ್ಲಿ ಅನುಕ್ರೋಶವನ್ನು ತೋರಿಸು” ಎಂದು ಹೇಳಿಕಳುಹಿಸಿದಾಗ ಕಂಸನು, “ಯಶೋಧರೆ! ಈ ನಿರ್ಬಂಧವನ್ನು ಹೇಳುವುದು ಯುಕ್ತವಲ್ಲವೆಂದೂ, ಪ್ರಿಯತರವಾದ ಮತ್ತೊಂದನ್ನೆಸಗುವೆನೆಂದೂ ದೇವಕಿಗೆ ತಿಳಿಸು” ಎಂದು ಉತ್ತರವನ್ನು ಕಳುಹಿಸುತ್ತಾನೆ. ತಂಗಿಯ ದುರ್ಭರವಾದ ದುಃಖವನ್ನು ಅವನು ಅಲ್ಪ ಸ್ವಲ್ಪ ಮನಗಂಡು, ಅವಳಿಗೆ—ಅವನ ದೃಷ್ಟಿಯಲ್ಲಿ ಪ್ರಿಯತರವಾದುದು ಮತ್ತೊಂದನ್ನು—ನೆರವೇರಿಸುವುದಾಗಿ ಹೇಳಿಕಳುಹಿಸುವ ಮಟ್ಟಿನ ಪ್ರೀತಿಯು ಅವನಲ್ಲಿ ಇನ್ನೂ ಉಳಿದಿದೆ. ಅಲ್ಲದೆ ಮಗುವು ತನ್ನೆಡೆಗೆ ಬಂದಾಗ ಕಂಸನು, “ಆಶ್ಚರ್ಯ! ಈ ಹೆಣ್ಣುಮಗುವು ರಾಜರೂ ನೋಡಿ ಅಚ್ಚರಿಪಡುವಂತಿದೆ. ನಾನೂ ಸ್ತ್ರೀವಧೆಯ ಕರ್ತವ್ಯವನ್ನು ನೆರ

---

* “ದಾರಿಕಾ ವಾ ಕುಮಾರೋ ವಾ ಹನ್ತವ್ಯಃ ಸರ್ವಥಾ ಮಯಾ ।
ದೈವಂ ಪುರುಷಕಾರೇಣ ವಞ್ಚಯಿಷ್ಯಾಮ್ಯಹಂ ಧ್ರುವಮ್ ॥”

ವೇರಿಸಬೇಕಾಗಿ ಬಂದಿದೆಯಲ್ಲಾ ! ” ಎಂದುಕೊಳ್ಳುತ್ತಾನೆ. ಇದನ್ನು ಕೇಳಿದಾಗ ನಮ್ಮ ಹೃದಯಾಕಾಶದಲ್ಲಿ ಕಂಸನ ಮೆಚ್ಚಿಕೆಯ ಬೆಳುದೀವಿಗೆಯು ಕ್ಷಣಕಾಲ ಬೆಳಗಿ ಆರಿಹೋಗುವುದು. ಪ್ರಪಂಚದಲ್ಲೇ ವಿಖ್ಯಾತನಾದ ಷೇಕ್ಸ್‌ಪಿಯರ್ ಮಹಾಕವಿಯು ರಚಿಸಿರುವ ನಾಟಕ ರತ್ನಗಳಲ್ಲೊಂದಾದ ಮ್ಯಾಕ್‌ಬೆತ್ ನಾಟಕದ ಒಂದು ಸನ್ನಿವೇಶದಲ್ಲಿ ಸಹ ನಮ್ಮ ಮನಸ್ಸಿಗೆ ಹೀಗಾಗುವುದು. ಮ್ಯಾಕ್‌ಬೆತನ ಹೆಂಡತಿಯು ಡಂಕನನನ್ನು ಕೊಲ್ಲಲು ತನ್ನ ಪತಿಯನ್ನು ಪ್ರೇರೇಪಿಸಿದ ತರುವಾಯ, “ಅವನು ಮಾತ್ರ ಆಕೃತಿಯಲ್ಲಿ ನನ್ನ ತಂದೆಯನ್ನು ಹೋಲುತ್ತಿಲ್ಲದೆ ಹೋಗಿದ್ದ ಪಕ್ಷಕ್ಕೆ ಅವನು ನಿದ್ರಿಸುತ್ತಿರುವಾಗ ನಾನೇ ಆ ಕೃತ್ಯವನ್ನೆಸಗುತ್ತಿದ್ದೆ” (ಎಂದರೆ ನಾನೇ ಡಂಕನನನ್ನು ಕೊಲ್ಲುತ್ತಿದ್ದೆ) * ಎಂದು ಹೇಳುವುದೇ ಆ ಸನ್ನಿವೇಶ. ಕಂಸನು ಮತ್ತೊಮ್ಮೆ ನಮ್ಮ ಮನಸ್ಸನ್ನು ಸೆಳೆದು ಮೆಚ್ಚಿಗೆಯ ಕಾಣಿಕೆಯನ್ನು ಸ್ವೀಕರಿಸುವುದು, ಅವನು ತನ್ನ ಶತ್ರುಗಳಾದ ಕೃಷ್ಣಬಲರಾಮರನ್ನು ಕೊಂಡಾಡುವಾಗ: ಅವನು ಕೃಷ್ಣನನ್ನು, “ತೇಜಸ್ವಿ; ಮದಿಸಿದ ಆನೆಯಂತೆ ಧೀರವಿಲಾಸಗಾಮಿ. ಶ್ಯಾಮಲಕಾಯ. ಬಲವಾಗಿರುವ ಭುಜಗಳಿಂದಲೂ ತೋಳುಗಳಿಂದಲೂ ಕೂಡಿ ವಿಶಾಲವಕ್ಷಸ್ಥಳವುಳ್ಳವನು. ನಾನು ಇದುವರೆಗೆ ಇವನು ನಡೆಯಿಸಿದಂತೆ ಕೇಳಿದ್ದ ಸಾಹಸಕಾರ್ಯಗಳು (ನಡೆದುದು) ಆಶ್ಚರ್ಯವಲ್ಲ. ಮೂರು ಲೋಕಗಳನ್ನೂ ತಲೆಕೆಳಕು ಮಾಡಲು ಸಮರ್ಥನು ” ಎಂದೂ †, ಬಲರಾಮನನ್ನು, “ಲಲಿತ ಗಂಭೀರಾಕೃತಿಯುಳ್ಳ ಇವನು ಅವನ ಅಣ್ಣ ಬಲರಾಮನೆಂದು ಕೇಳಿದ್ದೇನೆ. ಇವನು ಹೊಸದಾಗಿ ಅರಳಿದ ಕಮಲದಂತಿರುವ ಕಣ್ಣು

---

* “...Had he not resembled
My father as he slept I had done't...”

—*Macbeth.*

† “ಶ್ರೀಮಾನ್ ಮದಾನ್ಧಗಜಧೀರ ವಿಲಾಸಗಾಮೀ
ಶ್ಯಾಮಃ ಸ್ಥಿರಾಂಸ ಭುಜಪೀನ ವಿಕೃಷ್ಟವಕ್ಷಾಃ ।
ಪೂರ್ವಂ ಶ್ರುತಾನಿ ಚರಿತಾನಿ ನ ಚಿತ್ರಮಸ್ಯ
ಲೋಕತ್ರಯಂ ಹಿ ಪರಿವರ್ತಯಿತುಂ ಸಮರ್ಥಃ ” ॥

ಗಳುಳ್ಳವನು ; ಚಂದ್ರನಿಭಕಾಯನಾಗಿ ನೀಲಾಂಬರವನ್ನು ಧರಿಸಿರುವವನು ; ಬೆಳ್ಳಿಯ ಮುಂಡಿಗೆಯಂತೆ ದುಂಡಾಗಿರುವ ತೋಳುಳ್ಳವನು ; ಅಲುಗುತ್ತಿರುವ ಕನ್ನೈದಿಲೆ ಪುಷ್ಪಹಾರವುಳ್ಳವನು '' ಎಂದೂ ‡ ವರ್ಣಿಸುವನು. ಈ ಬಗೆಯ ಗುಣ ಪಕ್ಷಪಾತವನ್ನು ಕಂಡು, ಅದಕ್ಕಾಗಿ ಮಾತ್ರ ಕಂಸನನ್ನು ಮೆಚ್ಚದವರಾರು ?

---o---

‡ " ಅಯಂ ನು ಲಲಿತ ಗಮ್ಭೀರಾಕೃತಿಃ ಪೂರ್ವಜೋಽಸ್ಯ ರಾಮ ಇತಿ ಶ್ರೂಯತೇ !

ಅಭಿನವ ಕಮಲಾಮಲಾಯತಾಕ್ಷಃ
ಶಶಿನಿಭ ಮೂರ್ತಿರುದಾರ ನೀಲವಾಸಾಃ ।
ರಜತ ಪರಿಘವೃತ್ತ ದೀರ್ಘಬಾಹು
ಶ್ಚಲದಸಿತೋತ್ಪಲ ಪತ್ರ ಚಿತ್ರಮಾಲಃ " ॥

# ಏಳನೆಯ ತರಂಗ

——:——

## ಉಳಿದ ಕೆಲವು ಅಂಶಗಳು

ರಚನಾವಿನ್ಯಾಸ

ಶೈಲಿ

ಭಾಸೋಪಜೀವಿತ್ವ

ವಾಲ್ಮೀಕ್ಯುಪಜೀವಿತ್ವ

ಉಪಜೀವಿತ್ವ ಸಿದ್ಧಾಂತ

ಪರಿಸಮಾಪ್ತಿ

# ಉಳಿದ ಕೆಲವು ಅಂಶಗಳು

---

**ರಚನಾವಿನ್ಯಾಸ:**— ಭಾಸಮಹಾಕವಿಯು ಎಂತಹ ಶ್ರೇಷ್ಠರೂಪಕ ಲೇಖಕನೆಂಬುದನ್ನು ಈ ಮೊದಲೇ ಸೂಚಿಸಿರುವ ಅಂಶಗಳೇ ವ್ಯಕ್ತ ಪಡಿಸುವುವು. ಅವನ ರೂಪಕಗಳ ರಚನಾವಿನ್ಯಾಸವು ರಮಣೀಯ ವಾಗಿದೆ. ಅವು ರಂಗಯೋಗ್ಯವೆನಿಸಿ ಹೃದಯಂಗಮವಾಗಿರುವುದಕ್ಕೆ ಅದೇ ಕಾರಣ. ನಾವು ಗಮನಿಸಬೇಕಾದ ಮುಖ್ಯಾಂಶಗಳಾವುವೆಂದರೆ, **ಮೊದಲನೆಯದು,** ರೂಪಕಗಳೆಲ್ಲ ಚಿಕ್ಕಚಿಕ್ಕವುಗಳಾಗಿ ರಂಗಸ್ಥಳದಲ್ಲಿ ಅಲ್ಪಕಾಲದಲ್ಲೇ ಅಭಿನಯಿಸಲು ಯೋಗ್ಯವಾಗಿರುವುದು. **ಎರಡ ನೆಯದು,** ಅವುಗಳ ಭಾಷಾಶೈಲಿಯು ಸರಳ ಮನೋಹರವಾಗಿ ದ್ರಾಕ್ಷಾ ಪಾಕವೆನಿಸುವಂತಿರುವ ಅಂಶ. ಭಾಷೆಯು ಹೀಗಿರುವುದರಿಂದ ರೂಪಕ ಗಳು ಪ್ರೇಕ್ಷಕರಿಗೆ ಅತಿ ಸುಲಭ ಗ್ರಾಹ್ಯವೆನಿಸಿ ರಸವತ್ತಾಗಿವೆ. **ಮೂರನೆ ಯದು,** ಸಂವಿಧಾನ ಕೌಶಲವೂ, ಸಂಭಾಷಣ ಕೌಶಲವೂ ಮನೋ ಹರವಾಗಿರುವ ಅಂಶ. **ನಾಲ್ಕನೆಯದು,** ರೂಪಕಾಭಿನಯವು ಚಿತ್ತಾ ಕರ್ಷಕವಾಗಿದ್ದು ಸುರಳಿಯನ್ನು ಬಿಚ್ಚಿದಂತೆ ಸರಸರನೆ ಅತಿ ಶೀಘ್ರವಾಗಿ ಮುಂದುವರಿಯುವ ಗುಣ. ಘಟನೆಗಳಂತು, "ನಾನು ಮುಂದು, ತಾನು ಮುಂದು" ಎಂದು ನಾಗಾಲೋಟದಲ್ಲಿ ಓಡುವಂತೆ ತೋರುತ್ತವೆ. ಈ ವಿಚಾರದಲ್ಲಿ ಕಾಳಿದಾಸನ ನಾಟಕಗಳನ್ನೂ ಈ ರೂಪಕಗಳು ಮೀರಿಸು ವಂತಿವೆ. (ಈ ಲಕ್ಷಣಗಳನ್ನೂ, ರಂಗಸ್ಥಳದಲ್ಲಿ ತೋರಿಸುವುದು ಶಕ್ಯ ವಿಲ್ಲದ ಯುದ್ಧ, ಯಜ್ಞಶಾಲೆಯ ಉರಿ ಮುಂತಾದ ಅಂಶಗಳನ್ನು ಭಟರು ಬ್ರಾಹ್ಮಣರು ಮುಂತಾದವರು ವರ್ಣಿಸುವಂತೆ ಮಾಡಿರುವ ರೀತಿಯನ್ನೂ ನೋಡಿದರೆ ಗ್ರೀಕರ ನಾಟಕಗಳ ನೆನಪು ತಟಕ್ಕನೆ ಬರುತ್ತದೆ. ಆದಾಗ್ಯೂ ಭಾರತೀಯರ ರೂಪಕ ರಚನೆಗೆ ಗ್ರೀಕರ ಅನುಕರಣವೇ ಮೂಲವೆಂಬ ವಾದಕ್ಕೇನೂ ಅವಕಾಶವಿಲ್ಲ. ಪರಸ್ಪರ ಸಾಮ್ಯವಿರುವ ಕಾರಣದಿಂದ ಷೇಕ್ಸ್‌ಪಿಯರ್ ಮಹಾಕವಿಯ ಕೃತಿಗಳು ಕಾಳಿದಾಸ ಮಹಾಕವಿಯ

ನಾಟಕಗಳ ಆಧಾರದಿಂದ ಹುಟ್ಟಿದುವೆಂದು ಹೇಳುವುದೆಷ್ಟು ಅಸಂಗತವೋ ಭಾರತೀಯರು ಗ್ರೀಕರನ್ನು ಅನುಕರಿಸಿ ರೂಪಕರಚನೆ ಮಾಡಿದರೆಂದು ಹೇಳುವುದೂ ಅಷ್ಟೇ ಅಸಂಗತ. ಭಾರತೀಯರು ಸ್ವತಂತ್ರವಾಗಿಯೇ ರೂಪಕರಚನೆ ಮಾಡಿದರೆಂಬ ವಿಷಯವು ಈಗ ನಿರ್ವಿವಾದವಾಗಿ ಸಿದ್ಧಾಂತ ವಾಗಿದೆಯೆನ್ನಲು ಕಾರಣಗಳಿವೆ). ಭಟರು ಮುಂತಾದವರಿಂದ ವರ್ಣನೆ ಗಳ ಶ್ಲೋಕಗಳನ್ನು ಹೇಳಿಸುವಲ್ಲಿ ಕೂಡ, ಒಂದು ಶ್ಲೋಕದ ಒಂದೊಂದು ಪಾದವನ್ನು ಅವರಲ್ಲಿ ಒಬ್ಬೊಬ್ಬರು ಹೇಳುವಂತೆ ಮಾಡಿರುವುದು ರಂಗ ಸ್ಥಳದ ಅಭಿನಯದೃಷ್ಟಿಯಿಂದ ಮೆಚ್ಚಬೇಕಾದ ಅಂಶ. ಒಬ್ಬನೇ ಹಾಡು ತ್ತಿರುವಾಗ ಉಳಿದವರು ಸುಮ್ಮನೆ ಕಂಬಗಳಂತೆ ನಿಂತಿರುವುದು ಇದ ರಿಂದ ತಪ್ಪುವುದು. **ಐದನೆಯದು,** ಪಾತ್ರರಚನಾಕೌಶಲ. ಪಾತ್ರರಚನೆ ಯಲ್ಲಿ ಭಾಸಮಹಾಕವಿಯು ನಿಸ್ಸೀಮನೆನಿಸಿದ್ದಾನೆ. ಪಾತ್ರಗಳ ಸಂಖ್ಯೆಯು ಆದಷ್ಟು ಕಡಮೆಯಾಗಿರಬೇಕೆಂಬುದೂ ಅವನ ಆಶಯ. ಅಪ್ರಕೃತ ವಾದ ಒಂದು ಪಾತ್ರವನ್ನೂ ಅವನು ರಂಗಸ್ಥಳಕ್ಕೆ ತಂದಿಲ್ಲ. ಕೆಲವು ಘಟನೆಗಳನ್ನು ಸೂಚಿಸುವಲ್ಲಿ ಒಂದೇಪಾತ್ರವೇ ರಂಗಕ್ಕೆ ಪ್ರವೇಶಿಸಿ, ಮತ್ತೊಂದು ಪಾತ್ರವು ದೂರದಲ್ಲಿ ಮಾತನಾಡುತ್ತಿರುವಂತೆ ತೋರ್ಪಡಿ ಸುತ್ತ, "ಏನೆಂದೆ! ಓಹೋ ಹೀಗೋ" ಎಂದು ಮುಂತಾಗಿ, "ಆಕಾಶ ಭಾಷಣ" ಮಾಡುವಂತೆ ಕವಿಯು ಚಿತ್ರಿಸಿರುವುದೂ ಅದಕ್ಕೊಂದು ನಿದ ರ್ಶನ. ಒಂದು ಪಾತ್ರವನ್ನು ಬಿಟ್ಟರೂ ನಾಟಕದ ಕೀಲೇ ತಪ್ಪಿಹೋಗು ವಂತಿದೆ. ರಂಗಸ್ಥಳವಂತು, ಪಾತ್ರಗಳಿಂದ ತುಂಬಿ ಕಳಕಳಿಸುತ್ತಿರುತ್ತದೆ. ಅವನು ಸೃಷ್ಟಿಸಿರತಕ್ಕ ಪಾತ್ರಗಳಲ್ಲಿ ಯಾವುದೊಂದನ್ನು ಸ್ವಲ್ಪ ಚಿವುಟಿ ದರೂ ಪಾತ್ರವೆಲ್ಲಿ, "ಹಾ" ಎನ್ನುವುದೋ ಎಂದು ತೋರುವಷ್ಟು ಮಟ್ಟಿನ ನಿಜತ್ವದ ಭ್ರಾಂತಿಯುಂಟಾಗುವುದು. ಇವೆಲ್ಲ ಕವಿಯ ರೂಪಕ ರಚನಾವಿನ್ಯಾಸವನ್ನು ವ್ಯಕ್ತಗೊಳಿಸುತ್ತವೆ. ಭಾಸನು ರಾಮಾಯಣ, ಮಹಾಭಾರತಾದಿ ಗ್ರಂಥಗಳಿಂದ ಕಥಾವಸ್ತುವನ್ನು ತೆಗೆದುಕೊಳ್ಳುವಾಗಲೂ ತನ್ನ ರೂಪಕಕ್ಕೆ ಸರಿಹೋಗುವಂತೆ ಅದನ್ನು ಮಾರ್ಪಡಿಸಿಕೊಂಡಿದ್ದಾನೆ. ಕೆಲವುವೇಳೆ ಪಾತ್ರಗಳ ಸ್ವಭಾವವನ್ನೇ ವ್ಯತ್ಯಾಸ ಮಾಡಿಬಿಟ್ಟಿದ್ದಾನೆ. (ಭಾರತದ ನೃಶಂಸ ದುರ್ಯೋಧನನು ಪಂಚರಾತ್ರದಲ್ಲಿ ಧರ್ಮವೀರ

ದುರ್ಯೋಧನನಾಗಿ ಪರಿಣಮಿಸಿರುವುದೇ ಮುಂತಾದ ಅಂಶಗಳನ್ನು ಇದಕ್ಕೆ ಉದಾಹರಣೆಯಾಗಿ ಹಿಂದೆಯೇ ತಿಳಿಸಿದ್ದೇವೆ). **ಆರನೆಯದು,** ಭಾಸನ ರೂಪಕಗಳಲ್ಲಿ ಸಾಮಾನ್ಯ ಜನರ ಜೀವನಚಿತ್ರಕ್ಕೂ ಬಹು ಹೆಚ್ಚಾಗಿ ಪ್ರವೇಶವಿರುವ ಅಂಶ. ಚಾರುದತ್ತ, ಮಧ್ಯಮವ್ಯಾಯೋಗ, ಬಾಲ ಚರಿತ, ಈ ಮೂರರಲ್ಲಿಯೂ ಇದನ್ನು ಕಾಣಬಹುದಾಗಿದೆ. ವೇಶ್ಯೆ, ವಿದೂಷಕ, ಚಾರುದತ್ತನೆಂಬ (ಧನಿಕನಾಗಿದ್ದು ಮಿತಿಮೀರಿದ ಧಾರಾಳ ಬುದ್ಧಿಯ ದೆಸೆಯಿಂದ ಬಡವನಾಗಿ ಪರಿಣಮಿಸಿದ) ಬ್ರಾಹ್ಮಣ, ಅವನ ಕುಟುಂಬದವರು, ಇವರ ಸಂಬಂಧವಾದ ಕಥೆಯು ಚಾರುದತ್ತದಲ್ಲಿದೆ. ಮಧ್ಯಮ ವ್ಯಾಯೋಗವಂತು ಕೇಶವದಾಸನೆಂಬ ಒಬ್ಬ ಬಡಬ್ರಾಹ್ಮಣನ ಸಂಸಾರದವರಿಗೆ ಸಂಬಂಧಪಟ್ಟ ಕಥೆ. ಬಾಲಚರಿತದಲ್ಲಿ ಸಾಮಾನ್ಯ ರಾದ ಗೊಲ್ಲರ ಜೀವನಚಿತ್ರವು ನಮ್ಮ ಕಣ್ಣೆದುರಿಗೆ ಬರುತ್ತದೆ. ಮೃಚ್ಛ ಕಟಿಕವನ್ನು ಬರೆದಿರುವ ಶೂದ್ರಕನೊಬ್ಬನೂ, ಭಾಸನೊಬ್ಬನೂ, ಈ ಇಬ್ಬರೇ ಹೀಗೆ ಸಾಮಾನ್ಯರ ಜೀವನವನ್ನು ರೂಪಕದಲ್ಲಿ ಹೆಚ್ಚಾಗಿ ಚಿತ್ರಿಸಿ ರುವ ಕವಿಗಳು. ಇತರ ಕವಿಗಳೂ ಈ ವಿಧದ ಪಾತ್ರಗಳನ್ನು ಸೇರಿ ಸಿದ್ದಾರೆ. ಶಾಕುಂತಲ ನಾಟಕದಲ್ಲಿ ಬೆಸ್ತನು ಪ್ರವೇಶಿಸಿ ಪ್ರೇಕ್ಷಕರನ್ನು ಸಂತೋಷಗೊಳಿಸುವ ವಿಷಯವನ್ನು ಇದಕ್ಕೆ ನಿದರ್ಶನವಾಗಿ ತಿಳಿಸ ಬಹುದಾಗಿದೆ. ಆದರೂ, ಭಾಸ ಶೂದ್ರಕರಷ್ಟುಮಟ್ಟಿಗೆ ಇತರ ಕವಿ ಗಳಾರೂ ಸಾಮಾನ್ಯರ ಜೀವನವನ್ನು ಚಿತ್ರಿಸುವುದಕ್ಕೆ ಗಮನಕೊಟ್ಟಿಲ್ಲ ವೆಂದು ಹೇಳಲೇಬೇಕಾಗಿದೆ. **ಏಳನೆಯದು,** ರಂಗಸ್ಥಳದಲ್ಲಿ ರೂಪಕಕ್ಕೆ ಸೊಬಗೇರುವ ರಂಗಪ್ರಸಾಧನ ಸಲಕರಣಗಳ ಜೋಡಣೆಯು ಭಾಸಮಹಾ ಕವಿಯ ರೂಪಕಗಳಲ್ಲಿ ಕಂಡುಬರುವ ರಚನಾವಿನ್ಯಾಸದ ಮತ್ತೊಂದು ಮುಖ್ಯಲಕ್ಷಣ. ಬಾಲಚರಿತ, ದೂತವಾಕ್ಯ, ಪಂಚರಾತ್ರ—ಈ ರೂಪಕ ಗಳಲ್ಲಿ ಶ್ರೀ ಕೃಷ್ಣನ ಆಯುಧಗಳೂ, ಆದಿಶಕ್ತಿಯಾದ ಕಾತ್ಯಾಯಿನಿಯ ಆಯುಧಗಳೂ ರಂಗಸ್ಥಳಕ್ಕೆ ಬಂದುಹೋಗುವುದು, ಗೊಲ್ಲರು ಹಾಡಿ ಕೊಂಡು ನರ್ತನಮಾಡುವುದು, ಮುಂತಾದ ಅಂಶಗಳನ್ನು ಇದಕ್ಕೆ ನಿದರ್ಶನವಾಗಿ ಸೂಚಿಸಬಹುದಾಗಿದೆ. ದೂತವಾಕ್ಯದಲ್ಲಿ ದುರ್ಯೋಧನನ ಕಣ್ಣಿಗೆ ಎಲ್ಲೆಲ್ಲಿ ನೋಡಿದರೂ ದಾಮೋದರನೇ ಕಾಣುವ ದೃಶ್ಯದಲ್ಲಿ

ದಾಮೋದರ ರೂಪದ ಅನೇಕ ಚಿತ್ರಪಟಗಳನ್ನೇನಾದರೂ ರಂಗಸ್ಥಳಕ್ಕೆ ಬಿಡುತ್ತಿದ್ದರೋ ಹೇಗೋ ತಿಳಿಯದು. ಪ್ರತಿಮಾನಾಟಕದಲ್ಲಿ ಸೂಚಿತವಾಗಿರುವ ಪ್ರತಿಮಾಗೃಹದಲ್ಲಿ ಶಿಲಾಪ್ರತಿಮೆಗಳಿರಬೇಕೆಂಬುದಂತು ಗೊತ್ತೇ ಇದೆ. ಅಲ್ಲದೆ ರಂಗಸ್ಥಳದಲ್ಲಿ ಉಪಯೋಗಿಸಿದುದು ಮುಗಿದ ಅಶೋಕದ ತಳಿರನ್ನು ತನಗೆ ಕೊಡಲಿಲ್ಲವೆಂದು ಚೇಟಿಯು ಸೀತೆಗೆ ಹೇಳುವಂತೆ ಬರೆದಿದೆ. ರೂಪಕದಲ್ಲೇ ಹೀಗೆ ಬರೆದಿರುವ ಕವಿಯು—ತನ್ನ ರೂಪಕವನ್ನಾಡಿಸುವಾಗ್ಗೆ—ಕಾಡು, ತಪೋವನ ಮುಂತಾದ ದೃಶ್ಯಗಳಲ್ಲಿ ಮರಗಳ ಕೊಂಬೆಗಳನ್ನೇ ರಂಗಸ್ಥಳದಲ್ಲಿ ನೆಡಿಸದೆ ಹೋಗಿರಲಾರನೆಂದೂ ಊಹಿಸಬಹುದಾಗಿದೆ. ಈ ರೀತಿ ದೃಶ್ಯಗಳನ್ನಳವಡಿಸುತ್ತಿದ್ದ ಕಾರಣ, ನಿಜತ್ವದ ಭ್ರಾಂತಿಯನ್ನುಂಟುಮಾಡುವ ಆಶಯವು ಫಲಿಸಿ ರೂಪಕಾಭಿನಯವು ಚಿತ್ತಾಕರ್ಷಕವಾಗುತ್ತಿದ್ದುದರಲ್ಲಿ ಸಂಶಯವೇ ಇಲ್ಲ.

**ಶೈಲಿ:**—ಭಾಸಮಹಾಕವಿಯ ಶೈಲಿಯು ಸರಳ ಮನೋಹರವಾದುದು. ಕ್ಲಿಷ್ಟಪದಗಳಾಗಲಿ, ದೊಡ್ಡ ದೊಡ್ಡ ಸಮಾಸಗಳಾಗಲಿ ಸಾಮಾನ್ಯವಾಗಿ ಅವನ ರೂಪಕಗಳಲ್ಲಿಲ್ಲ. ಆದಾಗ್ಗೂ ದೊಡ್ಡ ದೊಡ್ಡ ಸಮಾಸಗಳನ್ನು ಅವನು ಉಪಯೋಗಿಸಿರುವ ಕೆಲವು ನಿದರ್ಶನಗಳೂ ಇವೆ. (ಇದಕ್ಕೊಂದು ಉದಾಹರಣೆಯಾಗಿ, "ಕೋಮಲ ಲಲಿತ ಮಧುರಶರೀರ ಸ್ಪರ್ಶಕೃತಾರ್ಥಂ" ಎಂಬುದನ್ನು ಸೂಚಿಸಬಹುದಾಗಿದೆ.) ಆದರೆ ಅವುಗಳ ಸಂಖ್ಯೆಯು ತೀರ ಕಡಿಮೆ.

ಭಾಸಮಹಾಕವಿಯು ಸೊಂಪಿನ ಆಗರದಂತಿರುವ ಪದಗಳನ್ನು ಪ್ರಯೋಗಿಸಿ ಪ್ರದರ್ಶಿಸಿರುವ ವರ್ಣನಾಸಾಮರ್ಥ್ಯಕ್ಕೆ ಬೇಕಾದಷ್ಟು ನಿದರ್ಶನಗಳಿವೆ. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಆ ಆ ರೂಪಕದ ವಿಮರ್ಶೆಯಲ್ಲೇ ಕೊಟ್ಟಿದೆ. ಉಳಿದವುಗಳಲ್ಲಿ ಕೆಲವನ್ನು ಇಲ್ಲಿ ಸೂಚಿಸಬಹುದಾಗಿದೆ. ಬಾಲಚರಿತ ಮತ್ತು ಚಾರುದತ್ತ—ಇವೆರಡರಲ್ಲಿ ಸಹ, "ಕತ್ತಲೆಯು ಅಂಗಗಳಿಗೆಲ್ಲ ಮೆತ್ತಿಕೊಳ್ಳುವಂತಿದೆ. ಆಕಾಶವು ಅಂಜನದ ಮಳೆಯನ್ನು ಸುರಿಸುವಂತಿದೆ. ಅಸತ್ಪುರುಷ ಸೇವೆಯಂತೆ ದೃಷ್ಟಿಯು

ನಿಷ್ಫಲತೆ ಹೊಂದಿದೆ” * ಎಂದೂ, “ಗಹನವಾದ ಅರಣ್ಯವೂ ದಟ್ಟವಾದ ಕತ್ತಲೆಯೂ ಸುಲಭವಾಗಿ (ಇತರರಿಗೆ ಗೋಚರವಾಗದಂತೆ) ಆಶ್ರಯ ಕೊಡುವುದರಲ್ಲೂ ಭಯೋತ್ಪಾದಕವಾಗಿರುವುದರಲ್ಲೂ ಸಮಾನ. ಭಯಪಡಿಸುವವನನ್ನೂ ಭೀತನನ್ನೂ, ಇಬ್ಬರನ್ನೂ ಸಮಾನವಾಗಿಯೇ ಅಂಧಕಾರವು ರಕ್ಷಿಸುತ್ತದೆ” † ಎಂದೂ ಹೇಳಿರುವ ಅಂಧಕಾರದ ವರ್ಣನೆಯು ಬಹು ಚೆನ್ನಾಗಿದೆ. ಚಾರುದತ್ತ ರೂಪಕದ ವಿಟನು ಹೇಳುವ, “ನನ್ನ ಕಣ್ಣುಗಳು ವಿಶಾಲವಾಗಿ ತೆರೆದಿವೆ. ಆದರೂ ಎಲ್ಲವೂ ಕತ್ತಲೆಯಿಂದ ಮರೆಯಾಗಿ ಹೋಗಿದೆ. ಕಣ್ಣು ತೆರೆದುಕೊಂಡಿದ್ದರೂ, ಈ ಅಂಧಕಾರದ ದೆಸೆಯಿಂದ ಕಣ್ಣು ಮುಚ್ಚಿಕೊಂಡಿದ್ದ ಹಾಗೆಯೇ ತೋರುತ್ತಿದೆ” § ಎಂಬ ಮಾತುಗಳು ನಿಸರ್ಗ ರಮಣೀಯವೆನಿಸಿವೆ. ಅವಿಮಾರಕದಲ್ಲಿ ನಾಯಕನು ಅಂಧಕಾರ ನಿಬಿಡವಾದ ರಾತ್ರಿಯಲ್ಲಿ, “ಗರ್ಭದಲ್ಲಿರುವ ಮಕ್ಕಳಂತೆ ಸಮಸ್ತ ಪ್ರಜೆಗಳೂ ನಿದ್ರೆಯಿಂದ ಮೈಮರೆತಿದ್ದಾರೆ. ಸುಖನಿದ್ರೆ ಮಾಡುತ್ತ ನಿಶ್ಶಬ್ದವಾಗಿ ಮಲಗಿರುವ ಜನರಿಂದ ಕೂಡಿರುವ ಪ್ರಾಸಾದಗಳು ಧ್ಯಾನಮಗ್ನವಾಗಿದ್ದಂತಿವೆ. ಮರಗಳೆಲ್ಲ ಸಂಚಿತವಾದ ಅಂಧಕಾರದಿಂದ ಮುಚ್ಚಿಹೋಗಿರುವಂತೆ ತೋರುತ್ತ, ಸ್ಪರ್ಶಿಸಿ ಅನುಮೇಯಿಸಬೇಕಾದ ಸ್ಥಿತಿಯಲ್ಲಿವೆ. ಒಟ್ಟು ಜಗತ್ತೇ ಮರೆಯಾಗಿ ಹೋಗಿ ಅಂತರ್ಧಾನವಾದಂತೆ

---

* ಲಿಂಪತೀವ ತಮೋಽಙ್ಗಾನಿ ವರ್ಷತೀವಾಞ್ಜನಂ ನಭಃ ।
ಅಸತ್ಪುರುಷ ಸೇವೇವ ದೃಷ್ಟಿರ್ನಿಷ್ಫಲತಾಂ ಗತಾ॥ ”

† “ ಸುಲಭಶರಣ ಮಾಶ್ರಯೋ ಭಯಾನಾಂ
ವನಗಹನಂ ತಿಮಿರಂ ಚ ತುಲ್ಯಮೇವ ।
ಉಭಯಮಪಿ ಹಿ ರಕ್ಷತೇಽನ್ಧಕಾರೋ
ಜನಯತಿ ಯಶ್ಚ ಭಯಾನಿ ಯಶ್ಚ ಭೀತಃ॥ ”

§ “ ಆಲೋಕ ವಿಶಾಲಾ ಮೇ
ಸಹಸಾ ತಿಮಿರ ಪ್ರವೇಶ ಸಞ್ಛನ್ನಾ ।
ಉನ್ಮೀಲಿತಾಪಿ ದೃಷ್ಟಿ
ರ್ನಿಮೀಲಿತೇವಾನ್ಧಕಾರೇಣ ॥”

ತೋರುತ್ತಿದೆ" * ಎಂದು ಹೇಳಿ ನಗರದ ಸ್ಥಿತಿಯನ್ನು ವರ್ಣಿಸುವ ಸನ್ನಿ
ವೇಶವೂ ಮನೋಹರವಾಗಿದೆ. ಹೀಗೆ ಕತ್ತಲೆಯನ್ನು ವಿಧವಿಧವಾಗಿ
ವರ್ಣಿಸುವುದರಿಂದ ಕವಿಯು ತನ್ನ ವರ್ಣನಾವೈಖರಿಯನ್ನು ಮೆರೆದಿದ್ದಾನೆ.
ಸೀತಾದೇವಿಯು ಗಿಡಗಳಿಗೆ ನೀರೆರೆಯುತ್ತಿದ್ದಾಗಿನ ವರ್ಣನೆ (೮೮ನೆಯ
ಪುಟವನ್ನು ನೋಡಿ), ದುರ್ಯೋಧನನ ವರ್ಣನೆ (೩೦೩ನೆಯ ಪುಟ
ವನ್ನು ನೋಡಿ), ಮುಂತಾದುವುಗಳೆಲ್ಲ ಅತ್ಯಂತ ರಮಣೀಯವಾಗಿವೆ.
ಅವುಗಳ ಸ್ವಾರಸ್ಯವನ್ನೆಲ್ಲ ಆ ಆ ಸನ್ನಿವೇಶದಲ್ಲಿ ವಿವರಿಸಿದ್ದೇವೆ. ಸಣ್ಣ
ಪುಟ್ಟ ಹೂಗಳನ್ನೇ ಆರಿಸಿ, ಅವುಗಳನ್ನು ಅನನ್ಯಸುಲಭವಾದೊಂದು
ರೀತಿಯಲ್ಲಿ ಸೇರಿಸಿ, ರಸಿಕರಲ್ಲಿ ರಸಿಕರೂ ಕಣ್ಣುಗಳನ್ನರಳಿಸಿ ಕೈಚಾಚು
ವಂತೆ ಮಾಲೆಯನ್ನು ಕಟ್ಟಿರುವ ಕವಿಯೆಂದರೆ ಭಾಸನೇ ಸರಿ.

ಭಾಸನು ಅನುಸರಿಸಿರುವ ವರ್ಣನಾವಿಧಾನದ ವಿಚಾರದಲ್ಲಿ ಒಂದೆ
ರಡು ಅಂಶಗಳನ್ನು ಇಲ್ಲಿ ಸೂಚಿಸುವುದೂ ಅಪ್ರಕೃತವಾಗಲಾರದು.
ಕೊಂಕಣವನ್ನು ಸುತ್ತಿ ಮೈಲಾರಕ್ಕೆ ಹೋಗುವ ವರ್ತನೆಯನ್ನು ಭಾಸನು
ಅನುಸರಿಸಿಲ್ಲ. ಸರಳವಾಗಿ ಸುಂದರವಾಗಿ ನೆಟ್ಟಗೆ ಹೃದಯವನ್ನು ಹೊಗು
ವಂತಿರುವ ರೀತಿಯಲ್ಲಿ ವಿಷಯವನ್ನು ಪ್ರತಿಪಾದಿಸಿ ವರ್ಣಿಸುವುದರಲ್ಲಿ
ಭಾಸನು ನಿಸ್ಸೀಮನಾಗಿದ್ದಾನೆ. ಈ ಬಗೆಯ ಕಲಾಚಾತುರ್ಯಕ್ಕೆ ಕೆಲವು
ನಿದರ್ಶನಗಳನ್ನು ಸೂಚಿಸಬಹುದಾಗಿದೆ: ಊರುಭಂಗದಲ್ಲಿ ಧೃತ
ರಾಷ್ಟ್ರನು, "ಇಂದು ನನ್ನ ಮಗನು ಯುದ್ಧದಲ್ಲಿ ವಂಚನೆಯಿಂದ ಹತ
ನಾದನೆಂಬುದನ್ನು ಕೇಳಿ ಕಂಬನಿದುಂಬಿದ ಕಣ್ಣುಗಳಿಂದ ಕೂಡಿದ ನನ್ನ
ಮುಖವು ಮೊದಲೇ ಕುರುಡಾಗಿದ್ದುದು ಈಗ ಮತ್ತಷ್ಟು ಕುರುಡಾಯಿತು"†

---

* "ಗರ್ಭಸ್ಥಾ ಇವ ಮೋಹಮಭ್ಯುಪಗತಾಃ ಸರ್ವಾಃ ಪ್ರಜಾ ನಿದ್ರಯಾ
ಪ್ರಾಸಾದಾಃ ಸುಖಸುಪ್ತ ನೀರವ ಜನಾ ಧ್ಯಾನಂ ಪ್ರವಿಷ್ಟಾ ಇವ।
ಪ್ರಗ್ರಸ್ತಾ ಇವ ಸಞ್ಚಿತೇನ ತಮಸಾ ಸ್ಪರ್ಶಾನುಮೇಯಾ ನಗಾ
ಅನ್ತರ್ಧಾನಮಿವೋಪಯಾತಿ ಸಕಲಂ ಪ್ರಚ್ಛನ್ನರೂಪಂ ಜಗತ್॥"

† "ವಞ್ಚನಾ ನಿಹತಂ ಶ್ರುತ್ವಾ ಸುತಮದ್ಯಾಹವೇ ಮಮ।
ಮುಖಮನ್ತರ್ಗತಾಸ್ರಾಕ್ಷಸ್ಯ ಮನ್ಧತರಂ ಕೃತಮ್॥"

ಎಂಬ ತಾತ್ಪರ್ಯವುಳ್ಳ ಶ್ಲೋಕವನ್ನು ಓದಿ, ಭಾಸನ ಶೈಲಿಗೆ ತಲೆದೂಗದವರಾರು ? ಪ್ರತಿಮಾನಾಟಕದಲ್ಲಿ ಭರತನು, " ಎಲ್ಲಿ ಲಕ್ಷ್ಮಣಪ್ರಿಯನಾದ ರಾಮನಿರುವನೋ ಅಲ್ಲಿಗೆ ಹೋಗುತ್ತೇನೆ. ಅವನಿಲ್ಲದ ಅಯೋಧ್ಯೆಯು ಅಯೋಧ್ಯೆಯೇ ಅಲ್ಲ. ಎಲ್ಲಿ ರಾಘವನಿರುವನೋ ಅದೇ ಅಯೋಧ್ಯೆ " * ಎಂದು ತಾತ್ಪರ್ಯವಾಗುವಂತೆ ನುಡಿಯುವ ಮಾತುಗಳಿರುವ ಶ್ಲೋಕವನ್ನು ಓದಿ, " ಭಲಾ " ಎನ್ನದವರಾರು ? ಆ ಶ್ಲೋಕವನ್ನು ಓದುವಾಗ ವಾಲ್ಮೀಕಿ ಮುನಿಯು ಸುಮಿತ್ರಾದೇವಿಯಿಂದ ಲಕ್ಷ್ಮಣನಿಗೆ, " ರಾಮನನ್ನು ದಶರಥನೆಂದು ತಿಳಿ. ಸೀತೆಯೇ ನಾನೆಂದು ತಿಳಿ. ಅಡವಿಯೇ ಅಯೋಧ್ಯೆಯೆಂದು ತಿಳಿ. ಅಪ್ಪಾ ! ಯಥಾಸುಖವಾಗಿ ಹೋಗಿಬಾ " † ಎಂದು ಉಪದೇಶಮಾಡಿಸಿರುವುದನ್ನು ಜ್ಞಾಪಿಸಿಕೊಳ್ಳದಿರುವುದಾರಿಗೆ ಸಾಧ್ಯ ? ಕರ್ಣಭಾರದಲ್ಲಿ ಕರ್ಣನು, " ಕಲಿತ ವಿದ್ಯೆಯು ಕಾಲಕ್ರಮದಲ್ಲಿ (ಮುಪ್ಪಿನಿಂದಲೂ ಮರವಿನಿಂದಲೂ) ಕ್ಷಯಿಸಿಹೋಗುತ್ತದೆ. ಆಳವಾಗಿ ಬೇರುಬಿಟ್ಟಿರುವ ಮರಗಳು ಕೂಡ ಬಿದ್ದುಹೋಗುತ್ತವೆ. ಜಲಾಶಯದ ನೀರು ಕೂಡ ಶೋಷಿಸಿಹೋಗುತ್ತದೆ. ಹೋಮಮಾಡಿದುದೂ ದಾನಮಾಡಿದುದೂ (ಚ್ಯುತಿಯಿಲ್ಲದೆ) ಇದ್ದಂತೆಯೇ ಇರುತ್ತದೆ" ‡ ಎಂದು ತಾತ್ಪರ್ಯವಾಗುವಂತೆ ಹೇಳುವ ಶ್ಲೋಕವು ಒಂದು ಜೀವರತ್ನದಂತಿದೆ. ಅಭಿಷೇಕ ನಾಟಕದಲ್ಲಿ ಸೀತಾದೇವಿಯು ಅಗ್ನಿ ಪ್ರವೇಶಕ್ಕೆ ಚಿತಿಯನ್ನು ಸಿದ್ಧಪಡಿಸಬೇಕೆಂದು ತನಗೆ ರಾಮನು

---

* " ತತ್ರ ಯಾಸ್ಯಾಮಿ ಯತ್ರಾಸೌ ವರ್ತತೇ ಲಕ್ಷ್ಮಣಪ್ರಿಯಃ ।
ನಾಯೋಧ್ಯಾ ತಂ ವಿನಾಯೋಧ್ಯಾ ಸಾಯೋಧ್ಯಾ ಯತ್ರ ರಾಘವಃ ॥"

† " ರಾಮಂ ದಶರಥಂ ವಿದ್ಧಿ ಮಾಂ ವಿದ್ಧಿ ಜನಕಾತ್ಮಜಾಂ ।
ಅಯೋಧ್ಯಾಮಟವೀಂ ವಿದ್ಧಿ ಗಚ್ಛ ತಾತ ಯಥಾ ಸುಖಮ್ ॥"

‡ " ಶಿಕ್ಷಾ ಕ್ಷಯಂ ಗಚ್ಛತಿ ಕಾಲ ಪರ್ಯಯಾತ್
ಸುಬದ್ಧಮೂಲಾ ನಿಪತನ್ತಿ ಪಾದಪಾಃ ।
ಜಲಂ ಜಲಸ್ಥಾನಗತಂ ಚ ಶುಷ್ಯತಿ
ಹುತಂ ಚ ದತ್ತಂ ಚ ತಥೈವ ತಿಷ್ಠತಿ ॥"

ಅಪ್ಪಣೆಮಾಡಿದಾಗ ಲಕ್ಷ್ಮಣನು, "ಸೀತಾದೇವಿಯು ಪರಿಶುದ್ಧೆಯೆಂಬು ದನ್ನು ತಿಳಿದೂ ಆರ್ಯನ ಅಪ್ಪಣೆಯನ್ನು ಕೇಳಿಯೂ ಇರುವ ನನ್ನ ಮನಸ್ಸು ಧರ್ಮಸ್ನೇಹಗಳ ಮಧ್ಯದಲ್ಲಿ ತೂಗಾಡುತ್ತಿದೆ" * ಎಂದು ಹೇಳುವ ಶ್ಲೋಕವು ಹೃದಯವೇಧಕವಾಗಿದೆ. ಅವಿಮಾರಕದಲ್ಲಿ ನಾಯ ಕನು ತಾರುಣ್ಯವನ್ನು ಕುರಿತು, "ರಾಗವನ್ನು ಮೆರೆಯುತ್ತದೆ. ಪ್ರಮಾದ ವನ್ನವಲಂಬಿಸುತ್ತದೆ. ಕಷ್ಟಗಳನ್ನು ಕುರಿತು ಚಿಂತಿಸುವುದೇ ಇಲ್ಲ. ಸಾಹಸವನ್ನಾಶ್ರಯಿಸಿ ಸ್ವಚ್ಛಂದವಾಗಿ ಪ್ರವರ್ತಿಸುತ್ತದೆ. ನೀತಿಮಾರ್ಗ ವನ್ನು ಬಯಸುವುದಿಲ್ಲ. ವಿದ್ವಾಂಸರಾದ ಬುದ್ಧಿವಂತರ ವಿವೇಕಪೂರಿತ ವಾದ ಮನಸ್ಸನ್ನಂತು ಮೆಚ್ಚಿಸುವುದೇ ಇಲ್ಲ" § ಎಂದು ವರ್ಣಿಸಿರುವ ಶ್ಲೋಕವು ತಾರುಣ್ಯದ ಸಾಹಸ ಪ್ರೇಮವನ್ನೂ, ದುಡುಕುತನವನ್ನೂ, ಉತ್ಸಾಹವನ್ನೂ ಹೃದಯಂಗಮವಾಗಿ ಸೂಚಿಸುತ್ತದೆ. ಅಭಿಷೇಕ ನಾಟಕ ದಲ್ಲಿ ರಾವಣನು ರಾಮನಿಂದ ತನಗೆ ಅಪಾಯವು ಸಂಭವಿಸಲಾರದೆಂಬು ದನ್ನು ಸೂಚಿಸುವುದಕ್ಕಾಗಿ, "ದೀರ್ಘಕೇಸರವುಳ್ಳ ಸಿಂಹವು ಜಿಂಕೆಯಿಂದ ಕೊಲ್ಲಲ್ಪಡುವ ಬಗೆ ಹೇಗೆ? ಮದಿಸಿದ ದೊಡ್ಡ ಆನೆಯು ನರಿಯಿಂದ ಕೊಲ್ಲಲ್ಪಡುವ ಬಗೆ ಹೇಗೆ? ‡ ಎಂದು ಕೇಳುವುದು ಬಂಧುರವಾಗಿದೆ. ಮೇಲಿನಿಂದ ಭೂಲೋಕಕ್ಕೆ ಇಳಿದು ಬರುತ್ತಿರುವ ವಿದ್ಯಾಧರನು ತನ್ನ ಮನಸ್ಸಿಗೆ ಆಗಿನ ದೃಶ್ಯವು ಹೇಗೆ ಕಂಡಿತೆಂಬುದನ್ನು ಕುರಿತು, ತನ್ನ ಪತ್ನಿ ಯೊಡನೆ, "ಸೌದಾಮಿನಿ, ನೋಡು ನೋಡು : (ನಾವಿಬ್ಬರೂ) ಇಳಿಯು

---

* "ವಿಜ್ಞಾಯ ದೇವ್ಯಾಃ ಶೌಚಂ ಚ ಶ್ರುತ್ವಾ ಚಾರ್ಯಸ್ಯ ಶಾಸನಂ ।
ಧರ್ಮ ಸ್ನೇಹಾಂತರೇ ನ್ಯಸ್ತಾ ಬುದ್ಧಿರ್ದೋಲಾಯತೇ ಮಮ ॥"

§ "ರಾಗಂ ವಿಜೃಮ್ಭಯತಿ ಸಂಶ್ರಯತೇ ಪ್ರಮಾದಂ
ದೋಷಾನ್ ನ ಚಿಂತಯತಿ ಸಾಹಸಮಭ್ಯುಪೈತಿ ।
ಸ್ವಚ್ಛನ್ದತೋ ವ್ರಜತಿ ನೇಚ್ಛತಿ ನೀತಿಮಾರ್ಗಂ
ಬುದ್ಧಿಂ ಶುಭಾಂ ಸುವಿದುಷಾಮವಶೀ ಕರೋತಿ॥"

‡ "ಕಥಂ ಲಮ್ಬಸಟಃ ಸಿಂಹೋ ಮೃಗೇಣ ವಿನಿಪಾತ್ಯತೇ ।
ಗಜೋ ವಾ ಸುಮಹಾನ್ ಮತ್ತಃ ಸೃಗಾಲೇನ ನಿಹನ್ಯತೇ ॥"

ತ್ತಿರುವ ವೇಗದ ದೆಸೆಯಿಂದ ಮೋಡಗಳೇ ಚದುರಿ ಹಾರಿಹೋಗುತ್ತಿರುವಂತೆಯೂ ಸಮುದ್ರ ಮುದ್ರಿತವಾದ ಭೂಮಿಯು ನಮ್ಮ ಕಡೆಗೆ ಮೇಲಕ್ಕೇರಿ ಬರುತ್ತಿರುವಂತೆಯೂ ಇದೆ. ಈ ಬೆಟ್ಟಗಳು ವರ್ಷಾಕಾಲದ ಮೋಡಗಳಂತೆ ಮೆರೆಯುತ್ತಿವೆ" * ಎಂದು ವರ್ಣಿಸಿರುವ ಶ್ಲೋಕವೂ ಮನೋಹರವಾಗಿದೆ.

ಅಲಂಕಾರಗಳನ್ನು ಹಿತವಾಗಿಯೂ ಮಿತವಾಗಿಯೂ ಹದವರಿತು ಉಪಯೋಗಿಸಿರುವುದು ಭಾಸಮಹಾಕವಿಯ ಶೈಲಿಯ ಮತ್ತೊಂದು ಅಮೋಘ ಗುಣ. ಇದಕ್ಕೂ ಹಲವು ನಿದರ್ಶನಗಳಿದ್ದರೂ, ಸ್ಥಳಸಂಕೋಚದಿಂದ ಅವುಗಳನ್ನು ಇಲ್ಲಿ ಸೂಚಿಸಲು ಅವಕಾಶವಿಲ್ಲ. ಕವಿಯು ಎಷ್ಟು ಸೊಗಸಾಗಿ ಉಪಮಾನಗಳನ್ನು ಕೊಡಬಲ್ಲನೆಂಬುದಕ್ಕೆ ಪ್ರಾಸಂಗಿಕವಾಗಿ ಒಂದೆರಡು ನಿದರ್ಶನಗಳನ್ನು ಕೊಡುವಷ್ಟರಿಂದಲೇ ತೃಪ್ತಿ ಹೊಂದಬೇಕಾಗಿದೆ. ದುರ್ಯೋಧನನ ಗದಾಘಾತದಿಂದ ಭೀಮನು, ವಜ್ರಾಘಾತದಿಂದ ಹೇಮಕೂಟವು ಕೆಳಕ್ಕುರುಳಿದಂತೆ ನೆಲಕ್ಕೆ ಬಿದ್ದನೆಂದು ಊರುಭಂಗದಲ್ಲಿ ಹೇಳಿದೆ. ಅಭೀತರಾಗಿ ಯುದ್ಧದಲ್ಲಿ ಮಡಿದಿದ್ದ ವೀರರ ಮುಖಗಳು ಅಲುಗದ ನೆಲದಾವರೆಯ ಹೂಗಳಂತಿದ್ದುವೆಂಬ ಉಪಮಾನವೂ ಮನೋಹರವಾಗಿದೆ. ಗದಾಘಾತದಿಂದ ತೊಡೆಗಳು ಮುರಿದು ಕೆಳಗೆ ಬಿದ್ದ ದುರ್ಯೋಧನನು ದೇಹವನ್ನು ಅತಿ ಕಷ್ಟದಿಂದ ಎಳೆದುಕೊಂಡು ತೆವಳಿ ಬರುತ್ತಿದ್ದ ಸನ್ನಿವೇಶವನ್ನು ಅಮೃತ ಮಂಥನವಾದಮೇಲೆ ಮಂದರಗಿರಿಯಿಂದ ತೆಗೆದು ಸಮುದ್ರಕ್ಕೆ ಬಿಟ್ಟ ಶ್ರಾಂತನಾದ ವಾಸುಕಿಯು ಹೆಡೆಯನ್ನೆತ್ತಿಕೊಂಡು ಕಷ್ಟದಿಂದ ಈಜಿಬರುತ್ತಿದ್ದ ಸನ್ನಿವೇಶಕ್ಕೆ ಹೋಲಿಸಿರುವುದರ ಔಚಿತ್ಯವನ್ನು ಎಷ್ಟು ಕೊಂಡಾಡಿದರೂ ಸಾಲದು. ಚಾರುದತ್ತನು, " ಮನುಷ್ಯನ ಶಕ್ತಿಯನ್ನು ಅಡಗುಮೆಟ್ಟ ಪರ್ಧಷ್ಣುವಾಗುವ

---

* " ಜಲದವ ಗಾಹನ ಮುಜ್ಝತೀವ ವೇಗಾ
ದಭಿಪತತೀವ ಮಹೀ ಸಮುದ್ರ ಮುದ್ರಾ ।
ಜಲದ ಸಮಯ ತೋಯದಾ ಇವಾಮೀ
ಭೃಶಮಭಿಭಾನ್ತಿ ನಗಾ ವಿಜೃಂಭಮಾಣಾಃ ॥"

ಮುಪ್ಪಿನಂತೆ ಈ ನಿದ್ರೆಯು ಹಣೆಯಿಂದ ಕಣ್ಣಿಗಿಳಿದು ನನ್ನ ಮೈಯನ್ನು ಆಕ್ರಮಿಸಿದಂತೆ ತೋರುತ್ತಿದೆ" * ಎಂದು ಹೇಳಿ ನಿದ್ರೆಯನ್ನು ವರ್ಣಿಸಿರುವ ಉಪಮಾನವು ಬಹು ಚೆನ್ನಾಗಿದೆ. ಶಾಪದಿಂದ ಅಂತ್ಯಜನಾಗಿದ್ದ ಸೌವೀರ ರಾಜನು, "ಮೇಘಾಂತರ್ಗತ ರವಿಯಂತೆ ಪ್ರಭಾನುಮೇಯ"ನಾಗಿದ್ದನೆಂದೂ, "ಮಲ್ಲರು ವಿಜಯ ಪತಾಕೆಯನ್ನು ಆಶೆಯಿಂದಲೂ ಉತ್ಸಾಹದಿಂದಲೂ ಬಯಸುವಂತೆ ಸಮಸ್ತ ರಾಜರೂ ನರೇಂದ್ರ ಕನ್ಯೆಯನ್ನು ಬಯಸುವರು" ಎಂದೂ ಕೊಟ್ಟಿರುವ ಹೋಲಿಕೆಗಳೂ ಮನೋರಂಜಕವಾಗಿವೆ. ಉರಿಯುತ್ತಿರುವ ಮರದ ಪೊಟರೆಗಳಿಂದ ಪ್ರಾಣಗಳು ದೇಹದಿಂದ ಹಾರಿಹೋಗುವಂತೆ ಪಕ್ಷಿಗಳು ಹಾರಿಹೋದುವೆಂದು (ಪಂಚರಾತ್ರದ ಮೊದಲನೆಯ ಅಂಕದಲ್ಲಿ) ಕೊಟ್ಟಿರುವ ಉಪಮಾನವು ಮನೋಹರವಾಗಿದೆ. ಚಾರಿತ್ರಹೀನನಾದ ಪುರುಷನಿಂದ ಕುಲವು ಉರಿದು ಹೋಗುವಂತೆ ಪುಷ್ಪಭರಿತವಾದ ಮರಗಳಿರುವ ವನವು ಒಂದು ಒಣ ಮರದ ದೆಸೆಯಿಂದ ಉರಿದುಹೋಗುತ್ತದೆಂಬ ಉಪಮಾನವೂ ಚೆನ್ನಾಗಿದೆ. ಉಪಮಾಲಂಕಾರಕ್ಕೂ ಇತರ ಅಲಂಕಾರಗಳಿಗೂ ಭಾಸನ ಕೃತಿಗಳಿಂದ ಉತ್ತಮೋತ್ತಮವಾದ ಎಷ್ಟು ನಿದರ್ಶನಗಳನ್ನು ಬೇಕಾದರೂ ಕೊಡಬಹುದಾಗಿದೆ.

ಭಾಸನ ಶೈಲಿಯ ಇತರ ಒಂದೆರಡು ಗುಣಗಳನ್ನೂ ಸಂಕ್ಷೇಪವಾಗಿ ಸೂಚಿಸಬಹುದಾಗಿದೆ. ಭಾವಕ್ಕೆ ತಕ್ಕ ಶಬ್ದ ಜೋಡಣೆಯಲ್ಲಿ ಕೂಡ ಅವನು ಪ್ರವೀಣನಾಗಿದ್ದಾನೆ. ತನ್ನ ಮಕ್ಕಳನ್ನು ಕಂಸನು ಕೊಂದುದರಿಂದ ದುಃಖಪೂರಿತೆಯಾಗಿ ಶಿಶುವಾದ ಶ್ರೀಕೃಷ್ಣನನ್ನು ಎತ್ತಿಕೊಂಡಿದ್ದಾಗ ದೇವಕಿಯು ಹೇಗಿದ್ದಳೆಂಬುದನ್ನು ನಾರದನು, "....ಶೋಕಾರ್ತಾ ಶಶಿವದನಾ ನಿಶಿ ಪ್ರಶಾಂತಾ" ಎಂದು ವರ್ಣಿಸುವಲ್ಲಿ ಪದಗಳೇ "ಉಶ್

---

* "ಇಯಂ ಹಿ ನಿದ್ರಾ ನಯನಾವಲಂಬಿನೀ
ಲಲಾಟ ದೇಶಾದುಪ ಸರ್ಪತೀವ ಮಾಮ್ ।
ಅದೃಶ್ಯಮಾನಾ ಚಪಲಾ ಜರೇವ ಯಾ
ಮನಸ್ಯ ವೀರ್ಯಂ ಪರಿಭೂಯ ವರ್ಧತೇ॥"

ಉಶ್" ಎಂದು ನಿಟ್ಟುಸಿರು ಬಿಡುವಂತಿವೆ. ಶರಶತ ಕಠಿನಹಸ್ತವೆಂದು (ಪಂಚರಾತ್ರದಲ್ಲಿರುವ) ದ್ರೋಣನ ಹಸ್ತದ ವರ್ಣನೆಯಲ್ಲಿ ಭಾವಕ್ಕೆ ತಕ್ಕ ಪೆಡಸಿನ ಭಾಷೆಯಿಂದ ವೀರನಾದ ಕ್ಷತ್ರಾಚಾರ್ಯರ ಕಠಿನಹಸ್ತವೇ ನಮ್ಮೆದುರಿಗೆ ನಿಂತಂತಾಗುತ್ತದೆ. "ಸಜಲಜಲದ ಗಾತ್ರಃ", "ಪ್ರವೇಷ್ಟುಮರ್ಹತಿ ಪದ್ಮನಾಭಃ", "ವಿಹಗವಾಹನಮಾತ್ರ ವಿಸ್ಮಿತೋ ದೂತಃ", "ತನಯ ಶತ ನಯ ಶೂನ್ಯೇ", ಎಂದು ಮುಂತಾಗಿ ಪದಪ್ರಯೋಗ ಮಾಡಿ, ಕವಿತಾಮಾನಿನಿಯ ನೂಪುರ ಧ್ವನಿಯಾಗುವಂತೆ ಅವಕಾಶವನ್ನು ಕಲ್ಪಿಸಲು ಭಾಸಮಹಾಕವಿಗೆ ಬಹಳ ಇಷ್ಟ. ಮೃದು ಮಧುರವಾದ ಶಬ್ದಗಳಿಂದ ತುಂಬಿರುವುದರ ಜೊತೆಗೆ ಅರ್ಥಸಂಪತ್ತಿಯಿಂದಲೂ ಶೋಭಿಸುವ ಹಲವು ಶ್ಲೋಕಗಳನ್ನೂ ಭಾಸನು ಬರೆದಿದ್ದಾನೆ. ನಾರದನು ಶ್ರೀಕೃಷ್ಣನನ್ನು, "ನರಲೋಕ ಪರಾಯಣನಾದ ನಾರಾಯಣನಿಗೆ, ಕಮಲಾಮಲ ಲೋಚನನಾದ ಲೋಕಾನನನಿಗೆ, ರಾವಣ ವಿರೋಚನರನ್ನು ಕೆಡುಹಿದ ರಾಮನಿಗೆ, ವೀರ್ಯನಿಲಯನಾದ ವೀರನಿಗೆ, ಶ್ರೇಷ್ಠನಿಗೆ ನಮಸ್ಕಾರ"* ಎಂದು ವರ್ಣಿಸಿರುವ ಶ್ಲೋಕವನ್ನು ಇದಕ್ಕೊಂದು ನಿದರ್ಶನವಾಗಿ ಸೂಚಿಸಬಹುದಾಗಿದೆ. ಈ ವರ್ಣನೆಯಲ್ಲಿ ಲಕಾರ, ನಕಾರ, ಮಕಾರ, ರಕಾರಗಳಿಂದ ಕೂಡಿದ ಮೃದು ಮಧುರ ಶಬ್ದಗಳೇ ತುಂಬಿವೆ. ನರಲೋಕ ಪರಾಯಣ, ಲೋಕಾನನ, ವೀರ್ಯನಿಲಯ ಎಂಬ ಪದಗಳಲ್ಲಿ ಅಮೋಘ ಭಾವನೆಗಳ ಒಂದು ಭಂಡಾರವೇ ಅಡಕವಾಗಿದೆ.

'ಭಾಸೋಪಜೀವಿತ್ವ':-ಕಾಳಿದಾಸನು ಭಾಸೋಪಜೀವಿಯೆಂದು ಅರ್ಥವಾಗುವಂತೆ ಸೂಚಿಸಿ, ದಿವಂಗತರಾದ ಡಾಕ್ಟರ್ ಟಿ. ಗಣಪತಿಶಾಸ್ತ್ರಿಗಳು ಕೆಲವು ನಿದರ್ಶನಗಳನ್ನು ಕೊಟ್ಟಿದ್ದಾರೆ. ಕಾಳಿದಾಸೋಕ್ತಿಗಳಿಗೂ ಭಾಸೋಕ್ತಿಗಳಿಗೂ ಕೆಲವು ಸಂದರ್ಭಗಳಲ್ಲಿ ಹೋಲಿಕೆಯಿರುವುದು ನಿಜವಾದರೂ,

---

* "ನಾರಾಯಣಾಯ ನರಲೋಕ ಪರಾಯಣಾಯ
ಲೋಕಾನನಾಯ ಕಮಲಾಮಲ ಲೋಚನಾಯ ।
ರಾಮಾಯ ರಾವಣ ವಿರೋಚನ ಶಾತನಾಯ
ವೀರಾಯ ವೀರ್ಯನಿಲಯಾಯ ನಮೋ ವರಾಯ ॥"

ಕಾಳಿದಾಸನ ತಲೆಗೆ "ಭಾಸೋಪಜೀವಿತ್ವ" ವನ್ನು ಕಟ್ಟುವುದು ಉಚಿತವಲ್ಲ. ಏಕೆಂದರೆ, ಕಾಳಿದಾಸನು ಭಾಸನಿಂದ ಉಪಕೃತನಾಗಿರುವಂತೆ ತೋರುವ ಸಂದರ್ಭಗಳಲ್ಲಿ ಕೂಡ, ಕಾಳಿದಾಸನು ತನ್ನ ಪ್ರತಿಭೆಯನ್ನು ಬೀರಿ ತನ್ನ ಕಲ್ಪನಾಸಾಮರ್ಥ್ಯವನ್ನು ಬಹು ಚೆನ್ನಾಗಿ ವ್ಯಕ್ತಪಡಿಸಿಕೊಂಡಿದ್ದಾನೆ. ಶಾಕುಂತಲ ನಾಟಕದಲ್ಲಿ ದೂರ್ವಾಸ ಶಾಪ ವಿಚಾರಕ್ಕೆ ಅವಿಮಾರಕದ ಚಂಡಭಾರ್ಗವ ಶಾಪವೇ ಆಧಾರವೆಂದೂ ಅದರ ಅನುಕರಣದಿಂದ ಕಾಳಿದಾಸನು ಆ ಸನ್ನಿವೇಶವನ್ನು ಕಲ್ಪಿಸಿದನೆಂದೂ ಗಣಪತಿಶಾಸ್ತ್ರಿಗಳು ಸೂಚಿಸಿದ್ದಾರೆ. ಆದರೆ ದೂರ್ವಾಸ ಶಾಪದ ಪರಿಣಾಮವು ಶಾಕುಂತಲದ ಕಥೆಯ ಬಳೆವಣಿಗೆಗೆ ಸಹಾಯಕರವಾಗಿರುವಷ್ಟು ಮಟ್ಟಿಗೆ ಚಂಡಭಾರ್ಗವ ಶಾಪದ ಪರಿಣಾಮವು ಅವಿಮಾರಕದ ಕಥೆಯ ಬಳೆವಣಿಗೆಗೆ ಸಹಾಯಕವಾಗಿಲ್ಲ. ಅವಿಮಾರಕದಲ್ಲಿ ಶಾಪ ವೃತ್ತಾಂತವು ನಮಗೆ ತಿಳಿಯುವುದು ಕೂಡ ಕಡೆಯ ದೃಶ್ಯದಲ್ಲಿ. ಭಾಸನು ಅದನ್ನು ಕಥಾವಸ್ತುವಿಗೆ ಸೇರಿಸಿರುವುದರಲ್ಲಿ ಹೆಚ್ಚು ಕೌಶಲವನ್ನು ಪ್ರದರ್ಶಿಸಿಲ್ಲ ; ತೇಪೆಯು ಎದ್ದು ಕಾಣುತ್ತಿದೆ. ಅವಿಮಾರಕದ ಕಡೆಯ ದೃಶ್ಯದಲ್ಲಿ ನಾರದನು ಎಲ್ಲರಿಗೂ ಸಮಾಧಾನ ಹೇಳಿ ತೊಡಕನ್ನು ಬಿಡಿಸಿರುವುದರ ಅನುಕರಣದಿಂದ ಕಾಳಿದಾಸನು ಶಾಕುಂತಲ ನಾಟಕದಲ್ಲಿ ಮಾರೀಚಾಶ್ರಮದ ಕಥಾಭಾಗವನ್ನು ಕಲ್ಪಿಸಿದನೆಂಬುದಂತು ತೀರ ಅಸಂಗತವಾದ ಅಂಶ. ಕೇವಲ ಪೂರ್ವವೃತ್ತಾಂತಗಳ ಕಗ್ಗವನ್ನು ಓದುವುದಕ್ಕಾಗಿ ನಾರದನ ಪಾತ್ರವನ್ನು ತಂದಿರುವ ಅವಿಮಾರಕದ ಕೊನೆಯ ದೃಶ್ಯಕ್ಕೂ, ಶಾಕುಂತಲ ನಾಟಕದಲ್ಲಿ ಕಲೆಯ ತನಿರಸವೇ ತುಂಬಿ ತುಳುಕುವಂತೆ ರಚಿತವಾಗಿರುವ ಮಾರೀಚಾಶ್ರಮದ ದೃಶ್ಯಕ್ಕೂ ಅಜಗಜಾಂತರವಾದ ವ್ಯತ್ಯಾಸ. ಇಷ್ಟಕ್ಕೂ ಭಾಸಮಹಾಕವಿಯ ಆರಂಭಕೃತಿಯಂತಿರುವ ಅವಿಮಾರಕ ರೂಪಕದ ಸನ್ನಿವೇಶಗಳನ್ನು ಕಾಳಿದಾಸನ ಆರಂಭಕೃತಿಯಲ್ಲದ ಶಾಕುಂತಲ ನಾಟಕದ ಸನ್ನಿವೇಶಗಳಿಗೆ ಹೋಲಿಸುವುದು ಉಚಿತವೂ ಅಲ್ಲ.

ಸ್ವಪ್ನವಾಸವದತ್ತದಲ್ಲಿ ಉದಯನನಿಗೆ ಘೋಷವತಿಯೆಂಬ ವೀಣೆಯು ಸಿಕ್ಕಿದಾಗ ಅವನು ವಾಸವದತ್ತೆಯನ್ನು ಸ್ಮರಿಸಿಕೊಂಡು ದುಃಖಿಸುವುದು ಸರಿಯಷ್ಟೆ. ಶಾಕುಂತಲದ ಉಂಗುರದ ವಿಚಾರವನ್ನು ಇದರ ಅನುಕರಣ

ದಿಂದ ಕಾಳಿದಾಸನು ಕಲ್ಪಿಸಿರುವನೆಂದು ದಿವಂಗತರಾದ ಡಾಕ್ಟರ್ ಗಣಪತಿ ಶಾಸ್ತ್ರಿಗಳು ಅಭಿಪ್ರಾಯಪಟ್ಟಿದ್ದಾರೆ. ಒಂದು ವೇಳೆ ಕಾಳಿದಾಸನು ಸ್ವಪ್ನ ವಾಸವದತ್ತದ ಸನ್ನಿವೇಶವನ್ನೇ ಅನುಕರಿಸಿರಬಹುದಾದರೂ, ತಾನು ಕಲ್ಪಿಸಿದ ಸನ್ನಿವೇಶವನ್ನು ಮೂಲಕ್ಕಿಂತ ಹೆಚ್ಚು ರಸವತ್ತಾಗಿ ಮಾಡಿ ತನ್ಮೂಲಕ ತನ್ನ ಪ್ರತಿಭೆಯನ್ನು ಮೆರೆದಿದ್ದಾನೆ. ಕಲಾದೃಷ್ಟಿಯಿಂದ ಕೂಡ ಶಾಕುಂತಲ ನಾಟಕದ ಸನ್ನಿವೇಶವೇ ಹೆಚ್ಚು ರಮಣೀಯವಾಗಿದೆ. ಸ್ವಪ್ನ ವಾಸವದತ್ತದಲ್ಲಿ ಬರುವ, "ಈ ಜಗತ್ತಿನ (ಸನ್ನಿವೇಶದಲ್ಲಿ) ಪರಿವರ್ತನ ಹೊಂದುತ್ತಲೇ ಇರುವ ಭಾಗ್ಯಪಙ್ಕ್ತಿಯು ಕಾಲಕ್ರಮದಿಂದ ಚಕ್ರಾರ ಪಙ್ಕ್ತಿಯಂತೆ (ಮೇಲಿನಿಂದ ಕೆಳಕ್ಕೂ ಕೆಳಗಿನಿಂದ ಮೇಲಕ್ಕೂ) ಹೋಗುತ್ತದೆ" * ಎಂಬುದರ ಆಧಾರದಿಂದ ಮೇಘಸಂದೇಶದಲ್ಲಿ ಕಾಳಿದಾಸನು, "ಅವಿಚ್ಛಿನ್ನವಾದ ಕೇವಲ ಸುಖವೇ ಆಗಲಿ ಕೊನೆಯಿಲ್ಲದ ಕೇವಲ ದುಃಖವೇ ಆಗಲಿ ಯಾರಿಗೆ ತಾನೆ ಬಂದಿದೆ? ಭಾಗ್ಯದಶೆಯು ಕೆಳಗಿನಿಂದ ಮೇಲಕ್ಕೆ ಚಕ್ರನೇಮಿ ಕ್ರಮದಲ್ಲಿ ಹೋಗುತ್ತದೆ" § ಎಂಬುದನ್ನು ಬರೆದಿದ್ದಾನೆಂದು ಡಾಕ್ಟರ್ ಟಿ. ಗಣಪತಿಶಾಸ್ತ್ರಿಗಳು ಅಭಿಪ್ರಾಯಪಟ್ಟಿದ್ದಾರೆ. ಇದು ನಿಜವೇ ಇರಬಹುದು. ಇದೇ ರೀತಿ ಕಾಳಿದಾಸನ ಉಮಾವರ್ಣನೆಯ ಆಧಾರದ ಮೇಲೆ ಭವಭೂತಿಯೂ ಸೀತಾದೇವಿಯ ಗುಣಗಾನದ ವಾಕ್ಯಗಳನ್ನಳವಡಿಸಿಕೊಂಡಿದ್ದಾನೆ. ಆದಾಗ್ಗೂ ಭವಭೂತಿಯನ್ನು "ಕಾಲಿದಾಸೋಪಜೀವಿ" ಎಂದು ಕರೆಯುವುದು ತೀರ ಅಸಂಗತ. ಸ್ವಪ್ನವಾಸವದತ್ತದಲ್ಲಿ ಬರುವ, "ದುಃಖಂ ತ್ಯಕ್ತುಂ ಬದ್ಧಮೂಲೋಽನುರಾಗಃ" ಎಂಬ ಭಾಸೋಕ್ತಿಯ ಪಡಿಯಚ್ಚಿನಂತಿರುವ ಮಾತುಗಳಿಂದ ರಾಮನ ಪ್ರಲಾಪವನ್ನು ಭವಭೂತಿಯು ಚಿತ್ರಿಸಿದ್ದಾನೆ. ಭಾಸನ ಬಾಲಚರಿತದಲ್ಲಿ, "ನೋ ಗೇಹಲಕ್ಷ್ಮ್ಯಂ...." ಎಂದಿದ್ದರೆ ಭವಭೂತಿಯು

---

* "ಕಾಲಕ್ರಮೇಣ ಜಗತಃ ಪರಿವರ್ತಮಾನಾ ಚಕ್ರಾರಪಙ್ಕ್ತಿರಿವ ಗಚ್ಛತಿ ಭಾಗ್ಯಪಙ್ಕ್ತಿಃ ।"

§ "ಕಸ್ಯಾತ್ಯನ್ತಂ ಸುಖಮುಪನತಂ ದುಃಖಮೇಕಾನ್ತತೋ ವಾ
ನೀಚೈರ್ಗಚ್ಛತ್ಯುಪರಿ ಚ ದಶಾ ಚಕ್ರನೇಮಿಕ್ರಮೇಣ ॥"

ಉತ್ತರ ರಾಮಚರಿತದಲ್ಲಿ, "ಇಯಂ ಗೇಹೇಲಕ್ಷ್ಮೀಃ...." ಎಂದಿದೆ. ಭಾಸನ ಬಾಲಚರಿತದಲ್ಲಿ ಯಮನಿಗೂ ಯಮಸ್ವರೂಪನಾದ ಧೈರ್ಯ ಶಾಲಿಯೆಂಬ ಅರ್ಥದಲ್ಲಿ, "ಯಮಸ್ಯ ಚ ಯಮೋ...." ಎಂದಿದ್ದರೆ ಭಟ್ಟನಾರಾಯಣನ ವೇಣೀ ಸಂಹಾರದಲ್ಲಿ ಅದೇ ಅರ್ಥದಲ್ಲಿ, "ಅನ್ತಕಸ್ಯಾನ್ತಕೋಽಹಮ್" ಎಂದಿದೆ. ಅದಮಾತ್ರವೇ ಭವಭೂತಿಯನ್ನೂ ಭಟ್ಟನಾರಾಯಣನನ್ನೂ, "ಭಾಸೋಪಜೀವಿ" ಗಳೆಂದು ನಾವು ಕರೆಯ ಬಹುದೆ? ಪುರ್ವಕವಿಗಳಿಂದ ಸಹಾಯವನ್ನು ಪಡೆದಿರುವ ಸಂದರ್ಭ ಗಳಲ್ಲಿ ಕೂಡ ತಮ್ಮ ಪ್ರತಿಭೆಯನ್ನು ಬೀರದೆ ಕಾಳಿದಾಸ ಭವಭೂತಿಗ ಳಾಗಲಿ, ಇತರ ಕವಿಗಳಾಗಲಿ ಕೇವಲ ಉಪಜೀವಿಗಳಾಗಿಲ್ಲ.

ದಿವಂಗತರಾದ ಡಾಕ್ಟರ್ ಟಿ. ಗಣಪತಿಶಾಸ್ತ್ರಿಗಳವರು ಕಾಳಿದಾಸನ "ಭಾಸೋಪಜೀವಿತ್ವ"ಕ್ಕೆ ಕೊಟ್ಟಿರುವ ಇತರ ಕೆಲವು ಮುಖ್ಯ ನಿದರ್ಶನ ಗಳನ್ನೂ ಇಲ್ಲಿ ಸೂಚಿಸಬಹುದಾಗಿದೆ. ಪ್ರತಿಮಾನಾಟಕದಲ್ಲಿ ಸೀತಾ ದೇವಿಯ ರೂಪವನ್ನು ವರ್ಣಿಸಿರುವ ಒಂದು ವಾಕ್ಯದ * ಆಧಾರದ ಮೇಲೆ ಶಾಕುಂತಲ ನಾಟಕದಲ್ಲಿ ಶಕುಂತಲೆಯನ್ನು ವರ್ಣಿಸಿರುವ ಒಂದು ಶ್ಲೋಕವು ‡ ಹುಟ್ಟಿತೆಂದು ಅವರ ಅಭಿಪ್ರಾಯ. ಅದೇ ರೀತಿಯಲ್ಲಿ ಪ್ರತಿಮಾ ನಾಟಕದಲ್ಲಿ ರಾಮನು ಸೀತೆಯನ್ನು ಕುರಿತು, ಅವಳು ತನ್ನ ಮಕ್ಕಳಂತೆ ಭಾವಿಸಿದ್ದ ಜಿಂಕೆಗಳನ್ನೂ ಮರಗಳನ್ನೂ ತನ್ನ ಸಖಿಯ ರಂತೆ ಭಾವಿಸಿದ್ದ ಲತೆಗಳನ್ನೂ ಬೀಳ್ಕೊಳ್ಳಬೇಕೆಂದು ಕೇಳಿದ ಶ್ಲೋಕವೇ † ಶಾಕುಂತಲ ನಾಟಕದಲ್ಲಿ ಕಾಳಿದಾಸನು ಶಕುಂತಲೆಯ ಪ್ರಕೃತಿಪ್ರೇಮ

---

* "ಸವ್ವ ಸೋಹಣೀಅಂ ಸುರೂವಂ ಣಾಮ।"

‡ "ಸರಸಿಜಮನುವಿದ್ಧಂ ಶೈವಲೇನಾಪಿ ರಮ್ಯಂ
ಮಲಿನಮಪಿ ಹಿಮಾಂಶೋರ್ಲಕ್ಷ್ಮ ಲಕ್ಷ್ಮೀಂ ತನೋತಿ।
ಇಯಮಧಿಕ ಮನೋಜ್ಞಾ ವಲ್ಕಲೇನಾಪಿ ತನ್ವೀ
ಕಿಮಿವ ಹಿ ಮಧುರಾಣಾಂ ಮಣ್ಡನಂ ನಾಕೃತೀನಾಮ್॥"

† "ಅಪೃಚ್ಛ ಪುತ್ರಕೃತಕಾನ್ ಹರಿಣಾನ್ ದ್ರುಮಾಂಶ್ಚ
ವಿಂಧ್ಯಂ ವನಂ ತವ ಸಖೀರ್ದಯಿತಾ ಲತಾಶ್ಚ॥"

ವನ್ನು ಚಿತ್ರಿಸಲು ಆಧಾರವಾಗಿದೆಯೆಂದೂ ಅವರು ಅಭಿಪ್ರಾಯಪಟ್ಟಿದ್ದಾರೆ. ಕಾಳಿದಾಸನ "ಭಾಸೋಪಜೀವಿತ್ವ"ವನ್ನು ಸಮರ್ಥಿಸುವುದಕ್ಕಾಗಿ ಅವರು ಇನ್ನು ಕೆಲವು ನಿದರ್ಶನಗಳನ್ನೂ ಸೂಚಿಸಿದ್ದಾರೆ. ಈ ಸಂದರ್ಭಗಳಲ್ಲಿ ಕಾಳಿದಾಸನು ಭಾಸನ ಕೃತಿಗಳಿಂದ ಅಲ್ಪ ಸ್ವಲ್ಪ ಸಹಾಯವನ್ನು ಪಡೆದಿದ್ದರೂ, ತನ್ನ ಪ್ರತಿಭೆಯಿಂದಲೂ ಕಲ್ಪನಾಸಾಮರ್ಥ್ಯದಿಂದಲೂ ಅದನ್ನು ಅದ್ಭುತರೀತಿಯಲ್ಲಿ ಪರಿಣಾಮಗೊಳಿಸಿ ಪರಿಪುಷ್ಟಿ ಹೊಂದಿಸಿದ್ದಾನೆ. ಆದಕಾರಣ, ಅವನನ್ನು ಭಾಸೋಪಜೀವಿಯೆಂದು ಕರೆಯುವುದು ಸರ್ವಥಾ ನ್ಯಾಯವಲ್ಲ.

**ವಾಲ್ಮೀಕ್ಯುಪಜೀವಿತ್ವ:**—ಕಾಳಿದಾಸೋಕ್ತಿಗಳಲ್ಲಿ ಕೆಲವು, ಭಾಸೋಕ್ತಿಗಳನ್ನು ಹೋಲುವುದನ್ನು ತೋರಿಸಿಕೊಟ್ಟು ಕಾಳಿದಾಸನು ಭಾಸೋಪಜೀವಿಯೆಂದು ಕರೆದ ಡಾಕ್ಟರ್ ಗಣಪತಿಶಾಸ್ತ್ರಿಗಳು ಭಾಸನನ್ನೇಕೆ ವಾಲ್ಮೀಕ್ಯುಪಜೀವಿಯೆಂದು ಕರೆಯಲಿಲ್ಲವೋ ತಿಳಿಯದು. ವಾಲ್ಮೀಕಿ ರಾಮಾಯಣದ ಹಲವು ವಾಕ್ಯಗಳ ಛಾಯೆಯೇ ಭಾಸನ ಪ್ರತಿಮಾನಾಟಕ ಮೊದಲಾದುವುಗಳಲ್ಲಿರುವುದನ್ನು ಅವರೇಕೆ ಗಮನಿಸಲಿಲ್ಲವೋ ಗೊತ್ತಿಲ್ಲ. ಅವರು ಹೂಡಿರುವ ವಾದದಂತೆ ಕಾಳಿದಾಸನನ್ನು ಭಾಸೋಪಜೀವಿಯೆನ್ನುವುದಾದರೆ, ಭಾಸನನ್ನು ವಾಲ್ಮೀಕ್ಯುಪಜೀವಿಯೆನ್ನಬೇಕಾಗುವುದು. ಪ್ರತಿಮಾ ನಾಟಕದಲ್ಲಿ, ರಾಮನು ವನಕ್ಕೆ ತೆರಳಿದ ಮೇಲೆ ಅವನನ್ನೇ ನೆನೆದು ದುಃಖಿಸುತ್ತ ದಶರಥನು, "ನಾನು ರಾಮನನ್ನೊಮ್ಮೆ ಮುಟ್ಟಿದುದೇ ಆದರೆ, ನಾನು ರಾಮನನ್ನೊಮ್ಮೆ ನೋಡಿದುದೇ ಆದರೆ, ಆಯುಸ್ಸು ಕ್ಷಯಿಸಿದವನು ಅಮೃತದಿಂದ (ಬದುಕುವಂತೆ) ನಾನು ಬದುಕುವೆನೆಂದು ನನ್ನ ಬುದ್ಧಿಗೆ ತೋರುತ್ತಿದೆ" * ಎಂದು ಹೇಳುವನು. ಈ ಮಾತುಗಳನ್ನು ನಾವು ಕೇಳಿದಾಗ, ರಾಮಾಯಣದ ದಶರಥನು, "ರಾಮನು ನನ್ನನ್ನೊಮ್ಮೆ ಮುಟ್ಟಿದರೆ, ರಾಮನು ನನ್ನನ್ನೊಮ್ಮೆ

* "ಸಕೃತ್ ಸ್ಪೃಶಾಮಿ ವಾ ರಾಮಂ ಸಕೃತ್ ಪಶ್ಯಾಮಿ ವಾ ಪುನಃ ।
ಗತಾಯುರಮೃತೇನೇವ ಜೀವಾಮೀತಿ ಮತಿರ್ಮಮ ॥"

—ಪ್ರತಿಮಾ ನಾಟಕ.

ನೋಡಿದರೆ, ನಾನು ಮೃತಿಯನ್ನೈದುವುದಿಲ್ಲ" * ಎಂಬ ಅರ್ಥದಲ್ಲಿ ಹಂಬಲಿಸುವುದು ತಟಕ್ಕನೆ ನೆನಪಿಗೆ ಬರುವುದು. ಪ್ರತಿಮಾನಾಟಕದಲ್ಲಿ "ಭರ್ತೃನಾಥಾ ಹಿ ನಾರ್ಯಃ" ಎಂದಿದ್ದರೆ, ರಾಮಾಯಣದಲ್ಲಿ, "ಭರ್ತೃನಾಥಾಶ್ಚರಂತಿ ಯಾಃ" ಎಂದು ಹೇಳಿದೆ. ರಾಮಾಯಣದಿಂದ "ಭರ್ತೃನಾಥಾಃ" ಎಂಬ ಪದವನ್ನು ಭಾಸನು ತೆಗೆದುಕೊಂಡು ಬೇರೆ ಅರ್ಥದಲ್ಲಿ ಪ್ರಯೋಗಿಸಿದ್ದಾನೆ. ರಾಮನು ಅಯೋಧ್ಯೆಯಲ್ಲಿಲ್ಲದ ಕಾರಣ, ಶೋಭಾವಿಹೀನವಾಗಿ ಅಡವಿಯಂತಿರುವ ಅಯೋಧ್ಯೆಗೆ ಹೋಗಲೊಲ್ಲೆನೆಂದು ಮುಂತಾಗಿ ರಾಮಾಯಣದಲ್ಲಿ ಭರತನು ಹೇಳುವ ಮಾತುಗಳ ಪರಿಪಾಟಿಯೇ ಪ್ರತಿಮಾನಾಟಕದ ಭರತನ ಪ್ರಲಾಪದಲ್ಲಿ ಸಹ ಬಹುಮಟ್ಟಿಗೆ ಕಂಡುಬರುತ್ತದೆ. ರಾಮಾಯಣದಲ್ಲಿ ದಶರಥನು ಕೌಸಲ್ಯಾದೇವಿಯನ್ನು ಕುರಿತು, "ರಾಮನನ್ನು ಅನುಸರಿಸಿ ಹೋದ ನನ್ನ ದೃಷ್ಟಿಯು ಇನ್ನೂ ಹಿಂತಿರುಗಿ ಬಂದಿಲ್ಲ. ಕೌಸಲ್ಯೆ! ನಾನು ನಿನ್ನನ್ನು ನೋಡಲಾರದವನಾಗಿದ್ದೇನೆ. ನನ್ನನ್ನು ಕೈಯಿಂದ ಚೆನ್ನಾಗಿ ಸ್ಪರ್ಶಿಸು ಕಣ್ಣಿನಿಂದ ನಿನ್ನನ್ನು ನೋಡಲಾರದವನಾಗಿದ್ದೇನೆ. ನನ್ನ ಸ್ಮೃತಿಯು ನಾಶವಾಗಿದೆ" ‡ ಎಂದು ಹೇಳುವನು. ಪ್ರತಿಮಾನಾಟಕದಲ್ಲಿ ದಶರಥನು, "ಕೌಸಲ್ಯೆ! ನಾನು ನಿನ್ನನ್ನು ಕಣ್ಣಿನಿಂದ ನೋಡಲಾರದವನಾಗಿದ್ದೇನೆ. ನನ್ನ ದೇಹವನ್ನು ಸ್ಪರ್ಶಿಸು. ರಾಮನೊಡನೆ ಹೋದ ನನ್ನ ಬುದ್ಧಿಯು ಇನ್ನೂ ಹಿಂತಿರುಗಿ ಬಂದಿಲ್ಲ" † ಎಂದು ಹೇಳುವನು.

---

* "ಯದಿ ಮಾಂ ಸಂಸ್ಪೃಶೇದ್ರಾಮಸ್ಸಕೃದದ್ಯ ಲಭೇತ ವಾ ।
ಯಮಕ್ಷಯಮನುಪ್ರಾಪ್ತಾಃ ದ್ರಕ್ಷ್ಯನ್ತಿ ನ ಹಿ ಮಾನವಾಃ ॥"
— ರಾಮಾಯಣ.

‡ "ರಾಮಂ ಮೇಽನುಗತಾ ದೃಷ್ಟಿರದ್ಯಾಪಿ ನ ನಿವರ್ತತೇ ।
ನ ತ್ವಾ ಪಶ್ಯಾಮಿ ಕೌಸಲ್ಯೇ ಸಾಧು ಮಾಂ ಪಾಣಿನಾ ಸ್ಪೃಶ ॥"
"ಚಕ್ಷುಷಾ ತ್ವಾಂ ನ ಪಶ್ಯಾಮಿ ಸ್ಮೃತಿರ್ಮಮ ವಿಲುಪ್ಯತೇ ।"
— ರಾಮಾಯಣ

† "ಅಂಗಂ ಮೇ ಸ್ಪೃಶ ಕೌಸಲ್ಯೇ ನ ತ್ವಾಂ ಪಶ್ಯಾಮಿ ಚಕ್ಷುಷಾ ।
ರಾಮಂ ಪ್ರತಿಗತಾ ಬುದ್ಧಿರದ್ಯಾಪಿ ನ ನಿವರ್ತತೇ ॥"
— ಪ್ರತಿಮಾನಾಟಕ.

ರಾಮಾಯಣದಲ್ಲಿ, "ಸರ್ವಕಾಲದಲ್ಲಿ ಸಹ ಮಂಗಳಕರವಾಗಿ ಕಾಡುಗಳಲ್ಲಿ ಬೀಸುವ ಸುಖಾವಹವಾದ ಗಾಳಿಯು ಯುಕ್ತ ಶೀತೋಷ್ಣದಿಂದ ಕೂಡಿ ರಾಮನನ್ನು ಸೇವಿಸುತ್ತದೆ"* ಎಂದಿದ್ದರೆ, ಪ್ರತಿಮಾನಾಟಕದಲ್ಲಿ, "ತಟಾಕಗಳ (ನೀರಿನ) ಮೇಲೆ ಬಳಸಿ ಬಂದು, ಕಾಡಿನಲ್ಲಿ ಸಂಚರಿಸುತ್ತಿರುವ ರಾಮನನ್ನು ಸುಖಾವಹವಾಗಿರುವಂತೆ ಸ್ಪರ್ಶಿಸುವ ತಂಗಾಳಿಗಳೇ ಧನ್ಯತೆಯುಳ್ಳವು" ‡ ಎಂದು ಹೇಳಿದೆ. ವಾಲ್ಮೀಕಿ ರಾಮಾಯಣದಲ್ಲಿರುವ, "ಮುಂದೆ ರಾಮನು ನಡೆದನು. ಮಧ್ಯದಲ್ಲಿ ಸುಮಧ್ಯಮಳಾದ ಸೀತೆಯು (ನಡೆದಳು). ಉತ್ತಮವಾದ ಧನುಸ್ಸನ್ನು ಕೈಯ್ಯಲ್ಲಿ ಹಿಡಿದು ಅವಳ ಹಿಂದೆ ಲಕ್ಷ್ಮಣನು ಹೋದನು" § ಎಂಬ ಭಾವವನ್ನೇ ತಿರುಗಿಸಿ ಭಾಸನು ಪ್ರತಿಮಾ ನಾಟಕದಲ್ಲಿ ದಶರಥನಿಂದ, "ಇಲ್ಲಿ ಕೂಡ ರಾಮಲಕ್ಷ್ಮಣರ ಮಧ್ಯದಲ್ಲಿ ಮೈಥಿಲಿಯಿರಲಿ. ಅರಣ್ಯಗಳು ಬಹುದೋಷಾವಹವಾದುವು. (ಆದಕಾರಣ, ಆರೀತಿ ಇದ್ದಲ್ಲಿ ಅವಳು) ಸುರಕ್ಷಿತೆಯಾಗಿರುವಳು" † ಎಂದು ಹೇಳಿಸಿದ್ದಾನೆ. ವಾಲ್ಮೀಕಿ ರಾಮಾಯಣದಲ್ಲಿ, "ನೀರಿಲ್ಲದ ನದಿಗಳು ಹೇಗೋ, ಹುಲ್ಲು ಬೆಳೆದಿಲ್ಲದ ವನಗಳು ಹೇಗೋ, ಗೋವಳ

---

* "ಶಿವಸ್ಸರ್ವೇಷು ಕಾಲೇಷು ಕಾನನೇಭ್ಯೋ ವಿನಿಸ್ಸೃತಃ ।
ರಾಘವಂ ಯುಕ್ತ ಶೀತೋಷ್ಣ ಸ್ಸೇವಿಷ್ಯತಿ ಸುಖೋಽನಿಲಃ ॥"

—ವಾಲ್ಮೀಕಿ ರಾಮಾಯಣ.

‡ "ಧನ್ಯಾಃ ಖಲು ವನೇ ವಾತಾಃ ತಟಾಕ ಪರಿವರ್ತಿನಃ ।
ವಿಚರಂತಂ ವನೇ ರಾಮಂ ಯೇ ಸ್ಪೃಶನ್ತಿ ಯಥಾ ಸುಖಮ್ ॥"

—ಪ್ರತಿಮಾನಾಟಕ.

§ "ಅಗ್ರತಃ ಪ್ರಯಯೌ ರಾಮ ಸ್ಸೀತಾ ಮಧ್ಯೇ ಸುಮಧ್ಯಮಾ ।
ಪೃಷ್ಠತಸ್ಸುಧನುಷ್ಪಾಣಿರ್ಲಕ್ಷ್ಮಣೋಽನುಜಗಾಮಹ ॥"

—ರಾಮಾಯಣ.

† "ರಾಮ ಲಕ್ಷ್ಮಣಯೋರ್ಮಧ್ಯೇ ತಿಷ್ಠತ್ವತ್ರಾಪಿ ಮೈಥಿಲೀ ।
ಬಹು ದೋಷಾಣ್ಯರಣ್ಯಾನಿ ಸನಾಥೈಷಾ ಭವಿಷ್ಯತಿ ॥"

—ಪ್ರತಿಮಾನಾಟಕ.

ನಿಲ್ಲದ ಗೋವುಗಳು ಹೇಗೋ, ರಾಜನಿಲ್ಲದ ರಾಷ್ಟ್ರವೂ ಹಾಗೆ" * ಎಂದು ಹೇಳಿದ್ದರೆ, ಪ್ರತಿಮಾನಾಟಕದಲ್ಲಿ, "ಗೋವಳನಿಲ್ಲದ ಗೋವುಗಳು ಹೇಗೆ ರಕ್ಷಣೆಯಿಲ್ಲದೆ ನಾಶಹೊಂದುವುವೋ ಹಾಗೆ ರಾಜನಿಲ್ಲದ ಪ್ರಜೆಗಳು ನಾಶಹೊಂದುತ್ತಾರೆ" ‡ ಎಂದು ಹೇಳಿದೆ. ಸ್ವಪ್ನವಾಸವದತ್ತದಲ್ಲಿ ಉದಯನನು ವಾಸವದತ್ತೆಯ ವಿಚಾರವಾಗಿ ಕನವರಿಸುವ ಸಮುದ್ರಗೃಹದ ದೃಶ್ಯಕ್ಕೆ ಸುಂದರಕಾಂಡದ ಕೆಲವು ಶ್ಲೋಕಗಳು ಸ್ವಲ್ಪ ಮಟ್ಟಿಗೆ ಚೋದಕವಾಗಿದ್ದಂತೆ ತೋರುತ್ತದೆ. ರಾಮಾಯಣದಿಂದ ಭಾಸನು ಈ ರೀತಿ ಉಪಕೃತನಾಗಿ ವಾಲ್ಮೀಕ್ಯುಪಜೀವಿಯೋ ಎಂದು ತೋರುವಂತಿರುವ ಸನ್ನಿವೇಶಗಳು ಇನ್ನೂ ಅನೇಕವಾಗಿವೆ. § ಭಾಸನು ವ್ಯಾಸರ

---

* "ಯಥಾಹ್ಯನುದಕಾ ನದ್ಯಃ ಯಥಾ ವಾಪ್ಯತೃಣಂ ವನಂ ।
ಅಗೋಪಾಲಾ ಯಥಾ ಗಾವಃ ತಥಾ ರಾಷ್ಟ್ರಮರಾಜಕಮ್ ॥"
—ರಾಮಾಯಣ.

‡ "ಗೋಪಹೀನಾ ಯಥಾ ಗಾವೋ ವಿಲಯಂ ಯಾಂತ್ಯಪಾಲಿತಾಂ ।
ಏವಂ ನೃಪತಿಹೀನಾ ಹಿ ವಿಲಯಂ ಯಾನ್ತಿ ವೈ ಪ್ರಜಾಃ ॥"
—ಪ್ರತಿಮಾನಾಟಕ.

§ ಇದಕ್ಕೆ ಅಭಿಷೇಕ ನಾಟಕದಲ್ಲಿ ಸಹ, ಹಲವು ನಿದರ್ಶನಗಳಿವೆ. ಅವುಗಳಲ್ಲೊಂದನ್ನು ಇಲ್ಲಿ ಸೂಚಿಸಬಹುದಾಗಿದೆ. ಈ ಕೆಳಗೆ ಕೊಟ್ಟಿರುವ ವಾಲ್ಮೀಕಿ ರಾಮಾಯಣದ ಮೂರು ಶ್ಲೋಕಗಳಲ್ಲಿ ಸುಗ್ರೀವನು ರಾಮನಿಗೆ ಹೇಳಿದ ಮಾತುಗಳಿವೆ:-

"ಶಕ್ಯಂ ಖಲು ಭವೇದ್ರಾಮ ಸಹಾಯೇನ ತ್ವಯಾನಘ ।
ಸುರ ರಾಜ್ಯಮಪಿ ಪ್ರಾಪ್ತುಂ ಸ್ವರಾಜ್ಯಂ ಕಿಂ ಪುನಃ ಪ್ರಭೋ ॥"
"ಸೇಂದ್ರಾನಪಿ ಸುರಾನ್ಸರ್ವಾಂಸ್ತ್ವಂ ಬಾಣೈಃ ಪುರಷರ್ಷಭ ।
ಸಮರ್ಥಸ್ಸಮರೇ ಹಂತುಂ ಕಿಂ ಪುನರ್ವಾಲಿನಂ ಪ್ರಭೋ ॥
ಯೇನ ಸಪ್ತ ಮಹಾ ಸಾಲಾ ಗಿರಿರ್ಭೂಮಿಶ್ಚ ದಾರಿತಾಃ ।
ಬಾಣೇನೈಕೇನ ಕಾಕುತ್ಸ್ಥ ಸ್ಥಾತಾ ತೇ ಕೋ ರಣಾಗ್ರತಃ ॥"
-ರಾಮಾಯಣ.

ವಾಲ್ಮೀಕಿರಾಮಾಯಣದಲ್ಲಿ ಸುಗ್ರೀವನು ರಾಮನೊಡನೆ ಹೇಳಿರುವ ಮಾತುಗಳ ಛಾಯೆಯೇ ಅಭಿಷೇಕ ನಾಟಕದ ಸುಗ್ರೀವನ ನುಡಿಗಳಲ್ಲಿ ಕಂಡುಬರುತ್ತದೆ:-

ಮಹಾಭಾರತದಿಂದ ಕೂಡ ಇದೇ ರೀತಿ ಉಪಕೃತನಾಗಿರುವ ಸಂದರ್ಭಗಳೂ ಇವೆ. ಹಲವು ಮಂದಿ ಪೌರ್ವಾತ್ಯ ಪಾಶ್ಚಿಮಾತ್ಯ ಪಂಡಿತಶ್ರೇಷ್ಠರು ಕೊಂಡಾಡಿರುವ ರಾಮಾಯಣ, ಮಹಾಭಾರತಗಳಂತಹ ಕಾವ್ಯಗಳಿಂದ ಇತರ ಕವಿಗಳು ಉಪಕೃತರಾಗಿರುವುದು ಹೆಮ್ಮೆಯ ಸಂಗತಿಯೇ ಹೊರತು ಅದಕ್ಕಾಗಿ ಯಾರೂ ತಲೆತಗ್ಗಿಸಬೇಕಾದುದೇನೂ ಇಲ್ಲ. ವಾಲ್ಮೀಕಿ ರಾಮಾಯಣವನ್ನು ಸರ್ ಮಾನಿಯರ್ ವಿಲಿಯಂಸ್ ಅವರೇ ಮುಂತಾದವರು ಮನಸಾರೆ ಕೊಂಡಾಡಿದ್ದಾರೆ. ವಾಲ್ಮೀಕಿ ರಾಮಾಯಣದಿಂದ ಕ್ರೈಸ್ತ ಜನಾಂಗಗಳವರು ಗ್ರಹಿಸಿ ಪ್ರಯೋಜನಹೊಂದಬಹುದಾದ ಅಂಶಗಳು ಅಸಂಖ್ಯಾತವಾಗಿವೆಯೆಂದು ಸರ್ ಮಾನಿಯರ್ ವಿಲಿಯಂಸ್ ಅವರು ಅಭಿಪ್ರಾಯಪಟ್ಟಿದ್ದಾರೆ. ಮಹಾಭಾರತದ ವಿಚಾರದಲ್ಲಿ ದೊಡ್ಡ ವಿದ್ವಾಂಸರೊಬ್ಬರ ಅಭಿಪ್ರಾಯವೇನೆಂಬುದನ್ನು ಹಿಂದೆಯೇ ತಿಳಿಸಲಾಗಿದೆ. (೩೪೪ ರಿಂದ ೩೪೮ ರ ವರೆಗಿನ ಪುಟಗಳನ್ನು ನೋಡಿ). ಡಾಕ್ಟರ್ ಸಿಲ್ವಿಯರ್ ಲೆವಿ ಎಂಬ ಉದ್ದಾಮ ಪಂಡಿತರು ಮಹಾಭಾರತದ ವಿಚಾರವಾಗಿ, "ಮಹಾಭಾರತದ ಯಶಸ್ವಿಯಾದ ಕವಿತೆಯಲ್ಲಿ ಉಜ್ಜ್ವಲವಾದ ನೀತಿಬೋಧೆಯೂ ಅಡಗಿದೆ; ಮಹಾಭಾರತವು ಶೌರ್ಯಪ್ರಧಾನವಾದ ಪುರಾಣ ಕಾವ್ಯಗಳಲ್ಲೆಲ್ಲ ಅತ್ಯಂತ ದೊಡ್ಡದಾಗಿರುವುದು ಮಾತ್ರವೇ ಅಲ್ಲದೆ, ಅತ್ಯಂತ ಭವ್ಯವಾದುದಾಗಿಯೂ ಇದೆ" ಎಂದು ತಾತ್ಪರ್ಯವಾಗುವಂತೆ ತಮ್ಮ ಅಭಿಪ್ರಾಯವನ್ನು * ಸೂಚಿಸಿದ್ದಾರೆ. ಆದಕಾರಣ

---

* ದೇವ! ಅಹಂ ಖಲ್ವಾರ್ಯಸ್ಯ ಪ್ರಸಾದಾತ್ ದೇವಾನಾಮಪಿ
ರಾಜ್ಯಮಾಶಙ್ಕೇ, ಕಿಂ ಪುನರ್ವಾನರರಾಜ್ಯಾನಾಮ್ । ಕುತಃ,
ಮುಕ್ತೋ ದೇವ! ತವಾದ್ಯ ವಾಲಿಹೃದಯಂ ಭೇತ್ತುಂ ನ ಮೇ ಸಂಶಯಃ
ಸಾಲಾನ್ ಸಪ್ತ ಮಹಾವನೇ ಹಿಮಗಿರೇಃ ಶೃಙ್ಗೋಪಮಾಞ್ಛ್ರೀಧರ ।
ಭಿತ್ತ್ವಾ ವೇಗವಶಾತ್ ಪ್ರವಿಶ್ಯ ಧರಣೀಂ ಗತ್ವಾ ಚ ನಾಗಾಲಯಂ
ಮಜ್ಜನ್ ವೀರ ಪಯೋನಿಧೌ ಪುನರಯಂ ಸಂಪ್ರಾಪ್ತವಾನ್ ಸಾಯಕಃ॥"

* The *Mahabharata* is not only the largest but also the grandest of all epics as it contains throughout a lively teaching of morals under a glorious garment of poetry."

—DR. SYLVIAN LEVI.

ಭಾಸಕಾಳಿದಾಸರು ವಿದೇಶೀಯ ವಿದ್ವಾಂಸರುಗಳೂ ಹೀಗೆ ಕೊಂಡಾಡಿ ರುವ ವ್ಯಾಸ ವಾಲ್ಮೀಕಿಗಳಿಂದ ಉಪಕೃತರಾಗಿರುವುದು ಯುಕ್ತವಾದ ಅಂಶವೇ ಹೊರತು, ಆದರಲ್ಲಿ ಅವರ ದೊಡ್ಡ ಹೆಸರಿಗೆ ಕಳಂಕವನ್ನು ತರು ವಂತಹದೇನೂ ಇಲ್ಲ.

**ಉಪಜೀವಿತ್ವ ಸಂಬಂಧದ ಸಿದ್ಧಾಂತ**:— ಮೇಲೆ ಹೇಳಿದಂತೆ ಭಾಸಮಹಾಕವಿಯು ರಾಮಾಯಣದಿಂದಲೂ ಮಹಾಭಾರತದಿಂದಲೂ ಉಪಕೃತನಾಗಿದ್ದರೂ ತನ್ನ ಕಲ್ಪನಾ ಸಾಮರ್ಥ್ಯವನ್ನೂ ಪ್ರತಿಭೆಯನ್ನೂ ಅದ್ಭುತರೀತಿಯಲ್ಲಿ ಪ್ರದರ್ಶಿಸಿದ್ದಾನೆ. ಪ್ರತಿಮಾಗೃಹ ಮುಂತಾದವುಗಳ ಕಲ್ಪನೆಯೂ ಇತರ ಭಾರಿ ಭಾರಿ ಮಾರ್ಪಾಡುಗಳೂ ಇದಕ್ಕೆ ನಿದರ್ಶನ. ಆದಕಾರಣ, ಅವನನ್ನು ವ್ಯಾಸೋಪಜೀವಿಯೆಂದಾಗಲಿ, ವಾಲ್ಮೀಕ್ಯುಪ ಜೀವಿಯೆಂದಾಗಲಿ ಕರೆಯುವುದು ಸರ್ವಥಾ ಯುಕ್ತವಲ್ಲ. ಭಾಸವಿರಚಿತ ವೆಂಬ ರೂಪಕಗಳ ಕೆಲಕೆಲವು ಭಾಗಗಳಿಗೂ ಕಾಳಿದಾಸಕವಿಯ ಕೃತಿ ಗಳ ಕೆಲಕೆಲವು ಭಾಗಗಳಿಗೂ ಸಾದೃಶ್ಯವಿರುವ ಕಾರಣಕ್ಕಾಗಿ ಅವನನ್ನು ಭಾಸೋಪಜೀವಿಯೆಂದು ಡಾಕ್ಟರ್ ಗಣಪತಿ ಶಾಸ್ತ್ರಿಗಳು ಕರೆದಿರುವುದೂ ಯುಕ್ತವಾಗಿಲ್ಲ. ಏಕೆಂದರೆ, ಈ ರೀತಿ ಸಾದೃಶ್ಯವಿರುವ ಸನ್ನಿವೇಶಗಳಲ್ಲಿ ಕೂಡ, ಕಾಳಿದಾಸನು ತನ್ನ ಪ್ರತಿಭೆಯಿಂದಲೂ ಕಲ್ಪನಾಸಾಮರ್ಥ್ಯ ದಿಂದಲೂ ಅವುಗಳನ್ನು ಬೇರೆ ರೀತಿಯಲ್ಲಿ ಎರಕಹೊಯ್ದು ಒಪ್ಪವಿಟ್ಟಿ ದ್ದಾನೆ. ಇಷ್ಟಕ್ಕೂ, ಕಾಳಿದಾಸನಿಗೆ "ಭಾಸೋಪಜೀವಿತ್ವ" ವನ್ನಾರೋಪಿಸಿ ಭಾಸನಿಗೆ ಮಾತ್ರ ವಾಲ್ಮೀಕ್ಯುಪಜೀವಿತ್ವವನ್ನಾರೋಪಿಸಿ ಸೂಚಿಸದೆ ಮಹಾ ಮಹೋಪಾಧ್ಯಾಯ ಡಾಕ್ಟರ್ ಗಣಪತಿ ಶಾಸ್ತ್ರಿಗಳೇಕೆ ತಟಸ್ಥರಾದರೋ ತಿಳಿಯದು. ಹೀಗೆಂದ ಮಾತ್ರವೇ, ಯಾವ ನಾಡಿನವರು-ಯಾವ ಕಾಲ ದವರು-ಬೇಕಾದರೂ ಹೆಮ್ಮೆ ಪಡುವಂತಿರುವ ಹದಿಮೂರು ರೂಪಕಗಳು ನಮಗೆ ದೊರೆಯುವಂತೆ ಮಾಡಿಕೊಟ್ಟ ಅವರ ಮಹೋಪಕಾರದ ವಿಷ ಯದಲ್ಲಿ ನಮ್ಮ ಕೃತಜ್ಞತೆಯು ಲೇಶಮಾತ್ರವೂ ಕಡಮೆಯಾಗಿದೆಯೆಂ ದೇನೂ ಅರ್ಥವಲ್ಲ.

——o——

# ಪರಿಸಮಾಪ್ತಿ

---

ಈ ಗ್ರಂಥದಲ್ಲಿ ನಾವು ವಿಮರ್ಶಿಸಿರುವ ಹದಿಮೂರು ರೂಪಕಗಳನ್ನೂ ರಚಿಸಿದ ಕವಿಯು ಭಾಸನಿರಬಹುದೇ ಎಂಬ ವಿಚಾರದಲ್ಲೇನೊ ಇನ್ನೂ ವಾದವಿವಾದಗಳು ನಡೆಯುತ್ತಿವೆ. ಆದಾಗ್ಯೂ, ಅವು ಭಾಸವಿರಚಿತವಲ್ಲವೆಂಬುದಕ್ಕಿರುವ ಕಾರಣಗಳಿಗಿಂತ ಹೆಚ್ಚಿನ ಕಾರಣಗಳು ಅವು ಭಾಸಕೃತವೆಂಬುದಕ್ಕಿವೆ. ಎಲ್ಲಕ್ಕೂ ಮಿಗಿಲಾಗಿ, ಈ ರೂಪಕಗಳ ಸ್ವಾರಸ್ಯವನ್ನೂ ಸೊಬಗನ್ನೂ ಪಾತ್ರರಚನಾ ಕೌಶಲವನ್ನೂ ಸಂವಿಧಾನಕೌಶಲವನ್ನೂ ಶೈಲಿಯನ್ನೂ ನೋಡಿದರೂ ಅವು ಭಾಸಮಹಾಕವಿಯಂತಹ ಕವಿಪುಂಗವನಿಂದ ರಚಿತವಾಗಿರುವ ರೂಪಕಗಳೆಂದೇ ಹೇಳಬಹುದಾದಷ್ಟು ಮಟ್ಟಿಗೆ, ಗುಣದಲ್ಲ ಮೇಲಾಗಿವೆ. ರಂಗಸ್ಥಳದಲ್ಲಿ ಪ್ರದರ್ಶಿಸುವುದಕ್ಕೆ ಯೋಗ್ಯವಾಗಿರುವ ವಿಚಾರದಲ್ಲಂತು, ಸಂಸ್ಕೃತ ಭಾಷೆಯಲ್ಲಿರುವ ಮತ್ತಾವ ರೂಪಕಗಳೂ ಅವುಗಳನ್ನು ಮೀರಿಸಿಲ್ಲ. ಕವಿಯ ಹೃದಯ ವೈಶಾಲ್ಯಕ್ಕೆ ನಾವು ಹಿಂದೆಯೇ ಸೂಚಿಸಿರುವ ನಿದರ್ಶನಗಳು ಅನುಕಂಪಾಮೃದುವಾದ ಅವನ ಸಾತ್ವಿಕತೆಗೆ ರನ್ನಗನ್ನಡಿಗಳಾಗಿವೆ. ಸ್ತ್ರೀತ್ವದಲ್ಲಿ ಗೌರವ, ಮಾತಾಪಿತೃಭಕ್ತಿ, ಕಿರಿಯವರಲ್ಲ ವಾತ್ಸಲ್ಯ, ಪಾತಿವ್ರತ್ಯ, ಅನ್ಯಮತ ಸಹಿಷ್ಣುತೆ, ಸತ್ಯಪ್ರಿಯತೆ, ಧರ್ಮಾಭಿಮಾನ, ಲಲಿತಕಲಾಪ್ರೇಮ, ಅತಿಥಿಸತ್ಕಾರ ಮುಂತಾದ ವಿಚಾರಗಳಲ್ಲಂತು ಈ ರೂಪಕಗಳು ಆರ್ಯ ಸಂಸ್ಕೃತಿಯ ಸಲ್ಲಕ್ಷಣಗಳ ಸಿರಿಬೀಡಿನಂತಿವೆ. ಬ್ರಾಹ್ಮಣರು ವೃದ್ಧಾಪ್ಯದಲ್ಲಿ ಸಹ, "ಅಭಿವರ್ಧಮಾನ" ನಿಯಮವುಳ್ಳವರಾಗಿ ಶೀಲವಿಭವದಿಂದ ಕೂಡಿ ವಿದ್ಯಾವ್ಯಾಸಂಗಮಾಡುತ್ತ ಸರಳಜೀವಿಗಳಾಗಿರಬೇಕೆಂಬುದು ಕವಿಯ ಆಶಯ. ರಾಜರು ನಿತ್ಯಾನಿತ್ಯ ವಿವೇಕಪೂರ್ವಕವಾದ ತತ್ತ್ವಚಿಂತೆಯಿಂದ ಆತ್ಮದಮನಮಾಡಿ, ಕ್ಷಾತ್ರ ತೇಜಸ್ಸಿನಿಂದ ಶತ್ರುನಿಗ್ರಹವನ್ನು ಕೈಕೊಂಡು, ಪ್ರಜಾವತ್ಸಲರೂ, ದಯಾಶೀಲರೂ ಆಗಿರಬೇಕೆಂ

ಬುದೂ ಕವಿಯ ಆಶಯ. * ರಾಜರು ಧರ್ಮಾತ್ಮರಾಗಿದ್ದು, ಮಂತ್ರಿಗಳ ಮನೋಗತವನ್ನೂ, ಪ್ರಜೆಗಳ ಮನೋವೃತ್ತಿಯನ್ನೂ ಅರಿತು ಸ್ವಸಾಮರ್ಥ್ಯದಿಂದ ರಾಜ್ಯಭಾರ ಮಾಡುತ್ತ, ಯುದ್ಧಮುಖದಲ್ಲಿ ದೇಹವನ್ನೊಪ್ಪಿಸುವುದಕ್ಕೂ ಸಿದ್ಧವಾಗಿರಬೇಕೆಂಬುದು ಕವಿಯ ಸಂದೇಶ.

ಈ ಅಂಶಗಳನ್ನೆಲ್ಲ ಕವಿಯು ತನ್ನ ಕಾಲದ ಸಮಾಜದಿಂದಲೇ ಸಂಗ್ರಹಿಸಿ ತನ್ನ ರೂಪಕದಲ್ಲಿ ಚಿತ್ರಿಸಿದ್ದಾನೆಂಬುದರಲ್ಲಿ ಸಂಶಯವಿಲ್ಲ. ಜೀರ್ಣವೃದ್ಧರಾದ ಬ್ರಾಹ್ಮಣರು ಕೂಡ ವ್ಯಾಸಂಗರತರಾಗಿ ಸರಳಜೀವಿಗಳಾಗಿದ್ದುದಕ್ಕೆ, ಭರತಖಂಡದ ಇತಿಹಾಸದಲ್ಲಿ ಹಲವು ನಿದರ್ಶನಗಳಿವೆ. ಆದುದರಿಂದ ಪಂಚರಾತ್ರದಲ್ಲಿ ಚಿತ್ರಿಸಿರುವ, "ವಯಃ ಪ್ರಕರ್ಷಶಿಥಿಲ"ರಾದ ಅಧ್ಯಯನ ಸಂಪನ್ನರ ಸರಳಜೀವನದ ಸೊಂಪನ್ನು ಕವಿಯು ತನ್ನ ಕಾಲದ ಸಮಾಜವನ್ನು ನೋಡಿಯೇ ಚಿತ್ರಿಸಿದ್ದಾನೆ. ಪ್ರತಿಜ್ಞಾಯೌಗಂಧರಾಯಣದಲ್ಲಿ ಸೂಚಿತವಾಗಿರುವಂತೆ ಮಹಾಸೇನನ ಆಸ್ಥಾನದಲ್ಲಿ ಶ್ರಮಣಕನಿಗೆ ದೊಡ್ಡ ಹುದ್ದೆಯು ದೊರೆತಿದ್ದುದನ್ನು ಕಂಡು ನಾವು ಅದನ್ನು ನಂಬದೆ ಹೋಗಲು ಕಾರಣವಿಲ್ಲ ಭಾರತೀಯರಷ್ಟು ಮಟ್ಟಿಗೆ ಪರಮತ ಸಹಿಷ್ಣುಗಳಾಗಿದ್ದ ಜನಾಂಗಗಳೇ ಈ ಪ್ರಪಂಚದಲ್ಲಿ ಮತ್ತಾ

---

* ಪ್ರತಿಮಾನಾಟಕದಲ್ಲಿ ಪಾದುಕೆಗಳನ್ನು ಬೇಡಲು ತನ್ನ ಬಳಿಗೆ ಬಂದ ಭರತನನ್ನು ಆಶ್ರಮದಲ್ಲಿ ಹೆಚ್ಚುಕಾಲ ನಿಲ್ಲಿಸಿಕೊಳ್ಳಲು ಇಷ್ಟವಿದ್ದರೂ ಶ್ರೀರಾಮನು, "ರಾಜ್ಯಾಡಳಿತವು ಕ್ಷಣಕಾಲವೂ ಉಪೇಕ್ಷಿಸಲ್ಪಡತಕ್ಕುದಲ್ಲ" ("ರಾಜ್ಯಂನಾಮ ಮುಹೂರ್ತಮಪಿ ನೋಪೇಕ್ಷಣೀಯಮ್") ಎಂದು ಹೇಳಿ ಅವನನ್ನು ಬೀಳ್ಕೊಡುವ ಸನ್ನಿವೇಶದಿಂದಲೂ, ಕವಿಕಲ್ಪಿತವಾದ ಕಥಾವಸ್ತುವುಳ್ಳ ಅವಿಮಾರಕದಲ್ಲಿರುವ, "ಯಜ್ಞೇನ ಭೋಜಯ ಮಹೀಂ ಜಯ ವಿಕ್ರಮೇಣ। ರೋಷಂ ಪರಿತ್ಯಜ ಭವ ಸ್ವಜನೇ ದಯಾವಾನ್ ॥" ("ಯಜ್ಞದಿಂದ ಪ್ರಜೆಗಳಿಗೆ ಭೋಜನ ಮಾಡಿಸು. ಪರಾಕ್ರಮದಿಂದ ಭೂಮಿಯನ್ನು ಜಯಿಸು. ರೋಷವನ್ನು ಬಿಡು. ಸ್ವಜನರಲ್ಲಿ ದಯಾವಂತನಾಗಿರು") ಮತ್ತು "ಕ್ಷಮಯಾ ಜಯ ವಿಪ್ರೇಂದ್ರಾನ್ ದಯಯಾ ಜಯ ಸಂಶ್ರಿತಾನ್। ತತ್ತ್ವಚಿಂತ್ಯಾ ಜಯಾತ್ಮಾನಂ ತೇಜಸಾ ಜಯ ಪಾರ್ಥಿವಾನ್ ॥" ("ವಿಪ್ರರನ್ನು ಕ್ಷಮೆಯಿಂದ ಜಯಿಸು. ಆಶ್ರಿತರನ್ನು ದಯೆಯಿಂದ ಜಯಿಸು. ತತ್ತ್ವಚಿಂತೆಯಿಂದ ಆತ್ಮದಮನಮಾಡು. ಕ್ಷಾತ್ರತೇಜದಿಂದ ರಾಜರನ್ನು ಜಯಿಸು") ಎಂಬಿವೇ ಮುಂತಾದ ಶ್ಲೋಕಗಳಿಂದಲೂ ಇವು ವ್ಯಕ್ತವಾಗುತ್ತವೆ.

ವೂ ಇರಲಿಲ್ಲವೆಂಬುದು ಹಲವು ವಿದೇಶೀಯರ್ ಹೇಳಿಕೆ. ರಾಜರುಗಳ ಆಸ್ಥಾನಗಳಲ್ಲಿ ದೊಡ್ಡ ದೊಡ್ಡ ಹುದ್ದೆಗಳು ಅನ್ಯಮತೀಯರಿಗೂ ದೊರೆಯುತ್ತಿದ್ದುದು ಇತಿಹಾಸ ಪ್ರಸಿದ್ಧವಾದ ಅಂಶ. ಇದೇನೂ ಸಾಮಾನ್ಯ ವಿಚಾರವಲ್ಲ. ಏಕೆಂದರೆ ನಾಗರಿಕತೆಯ ಬೀಡೆಂದು ಹೇಳಿಕೊಳ್ಳುತ್ತಿರುವ ಹಲವು ಕ್ರೈಸ್ತ ರಾಜ್ಯಗಳಲ್ಲಿ ಕೂಡ, ತೀರ ಈಚಿನವರೆಗೂ ಅನ್ಯಮತೀಯರಿಗೆ ಅಧಿಕಾರಗಳು ದೊರೆಯುತ್ತಿರಲಿಲ್ಲ. ಕ್ರಿಸ್ತಪೂರ್ವ ಒಂದನೆಯ ಶತಮಾನದ ವೇಳೆಗೇ ಭಾರತೀಯರ ಶಿಲ್ಪಕಲೆಯ ಕ್ರಿಯಾ ಮಾಧುರ್ಯವು ವಿಸ್ಮಯಕರವಾದ ರೀತಿಯಲ್ಲಿ ವೃದ್ಧಿಯಾಗಿದ್ದಿತೆಂಬುದು ಶ್ರೀಮಾನ್ ಇ. ಬಿ. ಹ್ಯಾವೆಲ್, ಶ್ರೀಮಾನ್ ಫರ್ಗುಸನ್, * ಮುಂತಾದ ವಿದ್ವಾಂಸರ ಅಭಿಪ್ರಾಯ. ಆಗ್ಗೆ ಭರತಖಂಡವು ಶಿಲ್ಪಕಲೆ, ಚಿತ್ರಕಲೆ, ಸಾಹಿತ್ಯ, ಶೃಂಗಾರಿಕೆಗಳು, ವಾಣಿಜ್ಯ, ಇವುಗಳಲ್ಲೆಲ್ಲ ಪ್ರಖ್ಯಾತವಾಗಿದ್ದಿತು. ಶಿಲ್ಪಕಲೆಯ ವಿಚಾರವಾಗಿ ಪ್ರತಿಮಾನಾಟಕದಿಂದಲೂ, ಚಿತ್ರಲೇಖನ ಕೌಶಲದ ವಿಚಾರವಾಗಿ ದೂತವಾಕ್ಯ ಚಾರುದತ್ತ ರೂಪಕಗಳಿಂದಲೂ ಸೂಚಿತವಾಗಿರುವ ಅಂಶಗಳು, ತನ್ನ ಕಾಲದಲ್ಲಿ ಕವಿಯು ಕಂಡ ನಿದರ್ಶನಗಳ ಆಧಾರದ ಮೇಲೆ ಹೊರಬಿದ್ದವುಗಳೇ ಹೊರತು ಅವು ಕೇವಲ ಊಹೆಯಿಂದ ಕವಿಯು ಕಲ್ಪಿಸಿದ ಜಳ್ಳುಸಂಗತಿಗಳಲ್ಲ.

ಒಟ್ಟಿನಲ್ಲಿ ನೋಡಿದರೆ, ಪ್ರಸಕ್ತರೂಪಕಗಳನ್ನು ರಚಿಸಿದ ಕವಿಯು ಉದ್ದಾಮ ಪಾಂಡಿತ್ಯ ಪ್ರತಿಭೆಗಳುಳ್ಳವನು ; ಮೂಲ ಕಥಾವಸ್ತುವನ್ನು ರೂಪಕ ಲೇಖನಕ್ಕೆ ಹೊಂದುವಂತೆ ಕಲಾಸಂಪನ್ನತೆಯಿಂದ ಮಾರ್ಪ

---

* "The most varied and difficult movements of the human figure are drawn and modelled with great freedom and skill" —E. B. HAVELL.

"The age was one of the culmination of the art of sculpture in India" —J. FERGUSSON.

[ "The fabrication, conveyance and erection of monoliths of such enormous size,—heaviest weighing fifty tons—are proofs that the engineers and stone cutters of Asoka's age were not inferior in skill and resource to those of any time or country." —VINCENT A. SMITH.]

ಡಿಸಿಕೊಳ್ಳುವುದರಲ್ಲಿ ಪ್ರಪಂಚದ ಸಾಹಿತ್ಯ ಚರಿತ್ರೆಯಲ್ಲಿ ಶಾಶ್ವತ ಕೀರ್ತಿ ಯನ್ನು ಗಳಿಸಿ ಅಮರರಾಗಿರುವ ಷೇಕ್ಸ್‌ಪಿಯರ್ ಮಹಾಕವಿಯೇ ಮುಂತಾದ ಪ್ರತಿಭಾಶಾಲಿಗಳನ್ನು ಹೋಲತಕ್ಕವನು ; ಪಾತ್ರಗಳ ಹೃದಯ ಗತಿಯನ್ನೇ ಅನುಸರಿಸಿ ರೂಪಕರಚನೆ ಮಾಡುವ ಅದ್ಭುತ ಸಾಮರ್ಥ್ಯ ವುಳ್ಳವನು ; ಸರಳ ಸುಂದರವಾದ ಮತ್ತು ಮಧುರ ಗಂಭೀರವಾದ ಶೈಲಿಯಿಂದ ಸಹೃದಯರ ಹೃದಯವನ್ನು ಕುಣಿಸಿ ಉಲ್ಲಾಸಗೊಳಿಸುವ ಶಕ್ತಿಯುಳ್ಳವನು. ಭಾವೋನ್ನತಿ, ಕವಿತಾಪ್ರೌಢಿಮೆ, ಪ್ರತಿಭಾ ಸಂಪತ್ತಿ ಮುಂತಾದ ಗುಣಗಳಲ್ಲಿ ಅವನು ಷೇಕ್ಸ್‌ಪಿಯರ್ ಮಹಾಕವಿಗಾಗಲಿ ಅಥವಾ ಕಾಳಿದಾಸ ಮಹಾಕವಿ ಮುಂತಾದವರಿಗಾಗಲಿ ಸರಿದೂಗದಿರಬಹುದು. ಆದಾಗ್ಯೂ, ರಂಗಯೋಗ್ಯವೆನಿಸಿ ಸಹೃದಯರ ಚಿತ್ತವನ್ನಾಕರ್ಷಿಸುವ ವಿಷಯ ದಲ್ಲಿಪ್ರಪಂಚದಲ್ಲೇ ಸರ್ವಶ್ರೇಷ್ಠವೆಂದು ತೀರ್ಮಾನವಾಗಿರುವ ನಾಟಕಗಳ ಗುಂಪಿಗೆ ಸೇರುವುದಕ್ಕೆ ಅವನ ಹದಿಮೂರು ರೂಪಕಗಳಲ್ಲಿ ಕೆಲವಕ್ಕಾ ದರೂ ಅರ್ಹತೆಯುಂಟೆಂದು ಧಾರಾಳವಾಗಿ ಹೇಳಬಹುದು. ಆ ಹದಿ ಮೂರು ರೂಪಕಗಳನ್ನೂ ರಚಿಸಿದವನು ಭಾಸಮಹಾಕವಿಯೆಂದು ಕೆಲವರು ವಿದ್ವಾಂಸರೂ, ಅವನು ಭಾಸಮಹಾಕವಿಯಲ್ಲವೆಂದು ಮತ್ತೆ ಕೆಲವರು ವಿದ್ವಾಂಸರೂ ಅಭಿಪ್ರಾಯಪಟ್ಟಿದ್ದಾರೆ. ಅವನು ಭಾಸಮಹಾಕವಿಯಾಗಿರ ಬಹುದೆಂಬ ಅನುಮಾನಕ್ಕೇ ಹೆಚ್ಚಿನ ಆಧಾರಗಳಿರುವುದನ್ನು ನಾವು ಹಿಂದೆ ಯೇ ಸೂಚಿಸಿದ್ದೇವೆ. ರೂಪಕಗಳ ಶ್ರೇಷ್ಠತೆಯನ್ನು ಪರಿಗಣಿಸಿದರೂ ಅದೇ ಅನುಮಾನವೇ ಮತ್ತಷ್ಟು ದೃಢಪಡುತ್ತದೆ. ಸಂಸ್ಕೃತ ಸಾಹಿತ್ಯ ಮಾಲೆಯಲ್ಲಿ ತೊಳಗುವ ಜೀವರತ್ನಗಳ ಗುಂಪಿಗೆ ಸೇರಲು ಪ್ರಸಕ್ತ ರೂಪಕಗಳಿಗೂ ಅರ್ಹ ತೆಯುಂಟು. ಆದಕಾರಣ, ಅವುಗಳನ್ನು ಬರೆದವನು ಭಾಸಮಹಾಕವಿಯಲ್ಲ ವೆಂದು ನಿರ್ವಿವಾದವಾಗಿ ಸಿದ್ಧಾಂತವಾಗಲು ನಿರ್ಧಾರಕವಾದಪ್ರಮಾಣಗಳು ದೊರೆಯುವವರೆಗಾದರೂ, ಭಾಸಮಹಾಕವಿಯೇ ಅವುಗಳನ್ನು ರಚಿಸಿದ ನೆಂದು ನಂಬಿ ಆ ಮಹನೀಯನಿಗೆ ನಾವು ಪುಷ್ಪಾಂಜಲಿಯನ್ನು ಸಮರ್ಪಿ ಸಲು ಅಡ್ಡಿಯುಂಟೆ?

—: **ಸಂಪೂರ್ಣ** :—